(ಇ) ಕಿವಿಗೊಟ್ಟು ಕೇಳಿ ಮನಸ್ಸಿಟ್ಟು ಮಾಡು ಮಗುವೇ:-

೨೦೦೫ರಲ್ಲಿ ಪ್ರಸಾದ ಪ್ರಕಾಶನದಿಂದ ಪ್ರಕಟವಾದ ಈ ಕೃತಿ ೩೫ 'ಗದ್ಯ ಕವನಗಳ' ಸಂಕಲನ. ಪ್ರೊ. ಲಲತಾಂಬಾ ಅವರ ೭೫ನೆಯ ಹುಟ್ಟುಹಬ್ಬದ ಸವಿ ನೆನಪಿಗಾಗಿ ಮಕ್ಕಳಿಗೆ, ತಾಯಂದಿರಿಗೆ ಉಚಿತ ಕೊಡುಗೆಯಾಗಿ ಬೆಳಕು ಕಂಡ ಪ್ರಸ್ತುತ ಕೃತಿಯಲ್ಲಿ, ತಾವು ಬದುಕಿನಲ್ಲಿ ಸಾಧಿಸಿಕೊಂಡ ಉನ್ನತ ಆದರ್ಶಗಳನ್ನು ನಾಳಿನ ಜನಾಂಗದಲ್ಲಿ ಕಾಣುವ ಉತ್ಕೃಷ್ಟ ಹಂಬಲ ವ್ಯಕ್ತವಾಗಿದೆ. ಅಪಾಯಕಾರಿ ಹಂತ ತಲುಪುತ್ತಿರುವ ಇಂದಿನ ಅಸ್ತವ್ಯಸ್ತ ಜೀವನಕ್ಕೆ, ವಿಧಾನಕ್ಕೆ ನೈತಿಕ ಶಿಕ್ಷಣದ ಕೊರತೆಯೇ ಕಾರಣ ಎಂದು ಮನಗಂಡಿರುವ ಪ್ರೊ. ಲಲಿತಾಂಬಾ ಅವರು ಪ್ರಾಥಮಿಕ ಹಂತದಲ್ಲಿಯೆ ನೀತಿಬೋಧಕ ವಿಚಾರಗಳನ್ನು ಬೋಧಿಸಲು, ಮಕ್ಕಳಿಗೆ ಕಂಠಪಾಠ ಮಾಡಿಸಲು ಅನುಕೂಲವಾಗುವಂತೆ ಚಿಕ್ಕ, ಚಿಕ್ಕ ಪದ್ಯಗಳ ಮೂಲಕ ಮೌಲಿಕ ಅಂಶಗಳನ್ನು ಬಿತ್ತರಿಸಿದ್ದಾರೆ. ಜೀವನ, ಶಿಸ್ತು, ಗುರಿ, ನಿಯಮ-ನಂಬುಗೆ, ಕರ್ತವ್ಯ, ಧೈರ್ಯ, ಮಾತು ಹಣ, ನಿನ್ನದು-ಅನ್ಯರದು, ಹಿತವಚನ-ಹೀಗೆ ಹಲವಾರು ವಿಷಯಗಳ ಮಹತ್ವವನ್ನು ಚಿಕ್ಕ ಚಿಕ್ಕ ಪಾಠಗಳಲ್ಲಿ ಅಳವಡಿಸಿದ್ದಾರೆ.

"ನುಡಿಯಲ್ಲಿ ನಯ ನಡೆಯಲಿ ವಿನಯವಿರಬೇಕು ಮಗುವೆ"
"ನಮ್ಮ ದೇವರು ನಿಮ್ಮ ದೇವರು ಎಂಬ ಭೇದ ಭಾವ ಬೇಡ".

ಜಗದೊಡೆಯ ಒಬ್ಬನೇ ಎಂಬ ಸತ್ಯವರಿತು ನಡೆದಾಗ ಆ ದೇವನೊಲಿವನು ಮಗುವೆ"

ಹೀಗೆ ಪದ್ಯರೂಪದಲ್ಲಿರುವ ಗದ್ಯಭಾಗ ಮಕ್ಕಳ ಅರ್ಥಗ್ರಹಿಕೆಗೆ ಸುಲಭವೆನಿಸಿದರೆ,

"ಧೈರ್ಯಂ ಸರ್ವತ್ರ ಸಾಧನಂ", "ದುಷ್ಕಾರ್ಯ ಮಾಡಿದರೆ ದುಷ್ಫಲ ಅನುಭವಿಸದೆ ವಿಧಿಯಿಲ್ಲ ಮಗುವೆ" – ಇಂತಹ ಉದ್ಧರಣೆಗಳು ಮಕ್ಕಳ ದೃಷ್ಟಿಯಿಂದ ಕಠಿಣವೆನಿಸುತ್ತವೆ. ಅಲ್ಲಲ್ಲಿ ಗಾದೆಯ ಮಾತುಗಳನ್ನು ಬಳಸಲಾಗಿದೆ. ಪ್ರಾಥಮಿಕ ಹಂತದ ಮಕ್ಕಳಿಗಾಗಿ, ಬರೆದ ಈ ಪುಸ್ತಕದ ಅಕ್ಷರ ವಿನ್ಯಾಸ ಸ್ಫುಟವಾಗಿದೆ.

'ನಿನ್ನ ನೀತಿ-ಪ್ರೀತಿಯ ನಡತೆ
ನೀಡುವುದೆಲ್ಲರಿಗೆ ಶಾಂತಿ-ಸಮಾಧಾನ,
ಅಶಾಂತಿಯ ಭ್ರಾಂತಿಯ ಭಯ ತೊರೆದು ಬಾಳಲು ಸಾಧ್ಯ ಮಗುವೆ"

ಇದು ಅವರ ಮುಖ್ಯ ಆಶಯ. ಇಂದಿನ ಮಕ್ಕಳು ನೈತಿಕ ಮೌಲ್ಯಗಳನ್ನು ಅಳವಡಿಸಿಕೊಳ್ಳುತ್ತಲೇ ಶಿಕ್ಷಣವೇತ್ತರಾಗಿ ನಾಳಿನ ಸತ್ಪ್ರಜೆಗಳಾಗಬೇಕು. ಎಂಬ ಲೇಖಕಿಯ ತೀವ್ರ ಕಳಕಳಿ ಇಲ್ಲಿ ಅಭಿವ್ಯಕ್ತವಾಗಿದೆ.

ಮುಗಿಸುವ ಮುನ್ನ ಚಿಂತನಾಂಜಲಿ ಎಂಬ ಈ ಸಂಪುಟದಲ್ಲಿ, ಪ್ರೊ. ಲಲಿತಾಂಬ ಮುಖ್ಯವಾಗಿ ಜೀವನದಲ್ಲಿ ಶಿಕ್ಷಣದ ಮಹತ್ವ, ಮೌಲಿಕ ಜೀವನದ ಆದರ್ಶಗಳು, ಅವುಗಳನ್ನು ಪಾಲಕರು-ಶಿಕ್ಷಕರು ಸಮಾಜ ನಡೆದು ನುಡಿದು ಕಲಿಸಬೇಕು, ಮಕ್ಕಳೂ ಸತತ ಪ್ರಯತ್ನಶೀಲರಾಗಬೇಕೆಂಬ ವಿವಿಧ ರೂಪಗಳು – ಇಲ್ಲಿನ ಬರಹಗಳಲ್ಲಿ ಕಾಣಸಿಗುತ್ತದೆ. ಇಂತಹ ಸರಳಶೈಲಿಯ ನೇರಮಾತಿನ, ಲಲಿತ ಬರವಣಿಗೆಯ ಪುಸ್ತಕಗಳು ಎಲ್ಲ ಮಕ್ಕಳ ಕೈಲಾಡುವಂತಾದರೆ, ಶಿಕ್ಷಕರೆಲ್ಲ ತಾವೂ ಓದಿ, ಮಕ್ಕಳಿಗೂ ಬೋಧಿಸಿ, ಪಾಲಕರಿಗೆ ತಿಳಿಸಿ, ಸಮಾಜಕ್ಕೆ ಎಚ್ಚರಿಕೆ ನೀಡುವುದಾದರೆ, ನಮ್ಮ ಸಮಾಜ, ರಾಷ್ಟ್ರ, ರಾಜ್ಯ ಅತ್ಯಂತ ಸುಸಂಸ್ಕೃತ ಪ್ರಜೆಗಳನ್ನು ಕಾಣುವುದರಲ್ಲಿ ಸಂಶಯವಿಲ್ಲ. ಈ ಸದಾಶಯದ ಈ ರಚನೆಗಳಲ್ಲಿ ಜೀನವ ಮೌಲ್ಯಗಳ ರಸಪಾಕವೇ ಇದೆ. ಲಿಂಗೈಕ್ಯ ಪ್ರೊ. ಲಲಿತಾಂಬ ವೃಷಭೇಂದ್ರಸ್ವಾಮಿಯವರ ಆದರ್ಶ ಜೀವನದ ಜೀವಂತ ಸ್ಮಾರಕಗಳಾಗಿ, ಮಕ್ಕಳ ಮನೆ-ಮನಗಳನ್ನು ನಿತ್ಯ ಬೆಳಗುವುದರಲ್ಲಿ ಸಂಶಯವಿಲ್ಲ. ಆದರೆ, ಅದೆಷ್ಟು ಜನ ಇತ್ತ ಗಮನ ಹರಿಸುವರು?

ಸಾಮಾಜಿಕ ಜೀವನ, ಶಾಂತಿ-ಸಮನ್ವಯತೆಯಿಂದ ಕೂಡಿ ಸಮೃದ್ಧವಾಗಬೇಕು ಎಂಬ ಪ್ರೊ. ಲಲಿತಾಂಬಾ ಅವರ ತೀವ್ರ ಕಾಳಜಿ, ಚಿಂತನಪರ ಪ್ರಬಂಧ, ಆತ್ಮೀಯ ಪತ್ರ, ಸರಳ ಪದ್ಯ ಮಾಧ್ಯಮದ ಮೂಲಕ ಮೂರು ಶೈಕ್ಷಣಿಕ ಮಹತ್ವದ ಸಾಹಿತ್ಯ ಕೃತಿಗಳ ರೂಪದಲ್ಲಿ ಹೊರಹೊಮ್ಮಿದೆ. ಆಧುನಿಕ ಸಂದರ್ಭದಲ್ಲಿ ಮಹಿಳಾ ಸಾಹಿತ್ಯ ಸಶಕ್ತವಾಗಿ ಪ್ರಕಟವಾಗುತ್ತಿದ್ದು ಎಲ್ಲ ಪ್ರಕಾರಗಳಲ್ಲಿ ಮಹಿಳೆಯರು ಕೃಷಿಮಾಡುತ್ತಿದ್ದರೂ ಮಕ್ಕಳ ಶಿಕ್ಷಣಕ್ಕೆ ಸಂಬಂಧಿಸಿದಂತೆ ವೈಚಾರಿಕ ಕೃತಿ ರಚಿಸಿದವರು ವಿರಳ. ಆ ಕೊರತೆಯನ್ನು ತುಂಬಿಕೊಡಲು ಪ್ರಯತ್ನಿಸಿದ ಲಿಂಗೈಕ್ಯ ಪ್ರೊ. ಲಲಿತಾಂಬಾ ವೃಷಭೇಂದ್ರಸ್ವಮಿಯವರ ಸಾಧನೆ ಅನನ್ಯವಾದುದು.

ಪ್ರೊ. ಹಸನಬಿ ಬೀಳಗಿ

■

## ಪ್ರಕಾಶನದ – 'ಬಿನ್ನಹ'

ಮಾನ್ಯರೇ,

ನಮ್ಮ ತಂದೆ–ತಾಯಿ (ಪ್ರೊ. ವೃಷಭೇಂದ್ರಸ್ವಾಮಿ ಮತ್ತು ಪ್ರೊ. ಲಲಿತಾಂಬ) ತಮ್ಮ ಸ್ವ ಸಂತೋಷಕ್ಕಾಗಿ ಪ್ರಾರಂಭಿಸಿದ 'ಪ್ರಸಾದ ಪ್ರಕಾಶನ'ದ ಮೂಲಕ, ಈಗ ಪ್ರೊ. ಲಲಿತಾಂಬ ಅವರ ಸಮಗ್ರ ಕೃತಿ ಸಂಪುಟಗಳನ್ನು–ಪುಣ್ಯಸ್ಮರಣೆಯಾಗಿ ಪ್ರಕಟಿಸುವುದು ನನಗೆ ಪ್ರೀತಿಯ ಕಾಯಕ ಹಾಗೂ ಕರ್ತವ್ಯ, ಈ ಸಂಪುಟಗಳನ್ನು ಸಂಪಾದಿಸಿ – ಮುನ್ನುಡಿ – ಹಿನ್ನುಡಿಗಳನ್ನು ಅಭ್ಯಾಸಪೂರ್ಣವಾಗಿ ಬರೆದು, ಕರಡಚ್ಚುಗಳನ್ನು ಶ್ರಮ ವಹಿಸಿ ತಿದ್ದಿ–ತೀಡಿ. ಪ್ರಕಟಣೆಗೆ ಅನುವು ಮಾಡಿಕೊಟ್ಟ, ನಮ್ಮ ಮನೆತನದ ಹಿತೈಷಿಗಳಾದ ಪ್ರೊ. ಶಾಂತಾ ಇಮ್ರಾಪುರ ಮತ್ತು ಪ್ರೊ. ಹಸನ್‌ಬಿ. ಬೀಳಗಿ ಹಾಗೂ ಮೂಲ ಸಾಮಗ್ರಿಗಳನ್ನು ದೊರಕೊಳಿಸಿದ ನಮ್ಮ ತಂದೆ, ಹಾಗೂ ಬಂಧು ಮಿತ್ರರ ನೆರವನ್ನು ಕೃತಜ್ಞತೆಯಿಂದ ಸ್ಮರಿಸುತ್ತೇವೆ.

ಈ ಸಂಪುಟದ ಸುಂದರ ಮುಖಚಿತ್ರ, ಅಂದವಾದ ಮುದ್ರಣ ಮಾಡಿದ ಅಭಿಮಾನೀ ಮಿತ್ರ ಶ್ರೀ ಜಿ. ಬಿ. ಪಾಟೀಲ, ಮಾಲೀಕರು ಪ್ರಿಂಟ್ ಪಾರ್ಕ್, ಬೆಂಗಳೂರು ಮತ್ತು ಅವರ ಕ್ರಿಯಾಶೀಲ ಸಿಬ್ಬಂದಿಗೆ ನಮ್ಮ ವಂದನೆಗಳು, ಈ ಕೃತಿಗಳ ಲೋಕಾರ್ಪಣೆ ಮಾಡಿದ ಅಭಿಮಾನೀ ಹಿರಿಯರಿಗೆ, ಸಾಹಿತಿ ಮಾನ್ಯರಿಗೆ ಕೃತಜ್ಞತೆಗಳು.

ನಮ್ಮ ತಾಯಿ–ತಂದೆಯರ ಅಭಿಮಾನಿಗಳೂ, ಪ್ರಖ್ಯಾತ ಉದ್ದಿಮೆದಾರರೂ ಆದ, ಶ್ರೀ ಪ್ರಭುಲಿಂಗೇಶ್ವರ ಸಕ್ಕರೆ ಕಾರ್ಖಾನೆಯ ಸಂಸ್ಥಾಪಕ ಎಂ.ಡಿ.ಯಾಗಿರುವ ಶ್ರೀ ಜಗದೀಶ ಗುಡಗುಂಟಿ ಅವರು ತಮ್ಮ ಪೂಜ್ಯ ತಂದೆ ತಾಯಿಯರಾದ ಡಾ॥ ಎಸ್. ವ್ಹಿ. ಗುಡಗುಂಟಿಮಠ ಮತ್ತು ಪುಷ್ಪಾತಾಯಿ ಅವರ ಸ್ಮರಣಾರ್ಥ – ಪ್ರಥಮ ಸಂಪುಟದ ಪ್ರಕಟಣೆಗೆ ವಿಶೇಷ 'ಕಾಣಿಕೆ'ಸಲ್ಲಿಸಿರುವ ಅವರ ಉದಾರತೆಗೆ–ಶಿಕ್ಷಣ–ಸಂಸ್ಕೃತಿ ಪ್ರೇಮಕ್ಕೆ ನನ್ನ ವಂದನೆಗಳು.

ತಮಗೆಲ್ಲ ತಿಳಿದಿರುವಂತೆ 'ಪ್ರಸಾದ ಪ್ರಕಾಶನ'ದ ಗುರಿ ಹಣಸಂಪಾದನೆಯಲ್ಲ–ಕಾಯಕ–ಶಿಕ್ಷಣ ದಾಸೋಹ. ಪ್ರಕೃತ ಈ ಮೂರು ಸಂಪುಟಗಳನ್ನು ಖರೀದಿಸಿ, ಶಿಕ್ಷಣಸಂಸ್ಥೆಗಳಿಗೆ ದಾನ ಮಾಡುವ 'ಉದಾರಹೃದಯಿ'ಗಳಿಗೆ, ಸ್ವಾಗತ.

ಈ 'ಪ್ರೀತಿಯಕಾಯಕ'ದಿಂದ ಬರುವ ವರಮಾನವೆನ್ನೆಲ್ಲ ಬಡಮಕ್ಕಳ ಶಿಕ್ಷಣ ನೆರವಿಗೆ ಮೀಸಲಾಗಿರಸಲು ನಿರ್ಧರಿಸಿದ್ದೇವೆ. ನಮ್ಮ ಮಾತಾ-ಪಿತೃಗಳ-ಅಭಿಮಾನೀ ಬಂಧುಗಳ "ಸದಾಶಯ"ದ ಮುಂದುವರಿಕೆ ನಮ್ಮ ಈ ಪ್ರಕಾಶನದ ಗುರಿ. ಎಲ್ಲರ ನೆರವನ್ನು ಕೃತಜ್ಞತೆಯಿಂದ ಸ್ಮರಿಸಿ, ಸಮಾನರೀತಿಯ ಸಹಕಾರವನ್ನು ನಿರೀಕ್ಷಿಸುತ್ತಿದ್ದೇನೆ.

ಕೊನೆಯದಾಗಿ, ನಮ್ಮ ಈ ಪ್ರಯತ್ನದಿಂದ ಪ್ರೀತಿಯ 'ಅಮ್ಮ'ನ ಆತ್ಮಕ್ಕೆ ಶಾಂತಿ – ಸಮಾಧಾನ – ತೃಪ್ತಿ ದೊರೆಯಲೆಂದು ಹಾರೈಸುತ್ತೇನೆ. ಅಮ್ಮನ ಪ್ರೀತಿಯ ಸೊಸೆ ಶ್ರೀಮತಿ ಅನುಪಮಾ, ಮುದ್ದಿನ ಏಕಮಾತ್ರ ಮೊಮ್ಮಗಳು ಕು॥ ಶರ್ವಾಣಿ ಮತ್ತು ನಮ್ಮ ಎಲ್ಲ ಬಂಧು-ಮಿತ್ರ-ಅಭಿಮಾನಿಗಳಿಗೆ ಹೃದಯಪೂರ್ವಕ ವಂದನೆಗಳು.

ಧಾರವಾಡ ಡಾ. ಎಸ್. ಎಮ್. ಶಿವಪ್ರಸಾದ
೧೩-೦೮-೨೦೦೮

■

## ಪರಿವಿಡಿ



## ಅನುಬಂಧ



■

## ಶ್ರೀವಾಣಿ

ಮಹಾ ಶಿವಶರಣೆ ಸಜ್ಜಲಗುಡ್ಡದ ಶರಣಮ್ಮನವರು ಆಧ್ಯಾತ್ಮ ಶಕ್ತಿಯ ತೇಜೋಮೂರ್ತಿ. ವ್ಯಕ್ತಿತ್ವ ವಿಕಾಸ ಮಾಡಿಕೊಂಡು, ಶರಣ ಜೀವನವನ್ನು ನಿಷ್ಠೆಯಿಂದ ನಡೆಯಿಸಿ, ಆಚಾರ ವಿಚಾರ ಸಂಪನ್ನರಾಗಿ, ಸಕಲರಿಗೆ ಲೇಸನೇ ಬಯಸುತ್ತಿದ್ದ ದಿವ್ಯ ಶಕ್ತಿಯಾಗಿದ್ದರು. ಭಕ್ತಿ, ಜ್ಞಾನ ವೈರಾಗ್ಯಗಳ ತ್ರಿವೇಣೀ ಸಂಗಮವಾಗಿದ್ದರು. ಗುರು-ಲಿಂಗ-ಜಂಗಮ ಪ್ರೇಮಿಗಳಾಗಿದ್ದರು. ಅವರು ನೂರು ವರ್ಷಗಳ ಬದುಕು ಬೆಳಕಿನ ಬದುಕಾಗಿದ್ದಿತು. ಅವರ ದೃಷ್ಟಿಯು ವಿಶಾಲವಾಗಿದ್ದು, ದರ್ಶನಕ್ಕೆ ಬಂದವೆಲ್ಲರನ್ನು ಅಂತಃಕರಣದಿಂದ ಹರಸಿ ಕಳಿಸುತ್ತಿದ್ದರು. ಸತ್ಯ ಶರಣತ್ವವನ್ನು ಸಾಧಿಸಿದ ೨೦ನೆಯ ಶತಮಾನದ ಶಿವಶರಣೆಯಾಗಿದ್ದರು. ಅಭಿನವ ಅಕ್ಕಮಹಾದೇವಿಯಾಗಿದ್ದರು. ಚೊಕ್ಕ ಚಿನ್ನದಂತೆ ಅವರ ಜೀವನವಾಗಿತ್ತು. ಶರಣಮ್ಮನವರ ತಪಃ ಪ್ರಭಾವದ ಬೆಳಕಿನಲ್ಲಿ ಸಜ್ಜಲಗುಡ್ಡ ಕಂಬಳೀಹಾಳುಗಳು ತಪೋಭೂಮಿಯಾಗಿ ಪರಿಣಮಿಸಿವೆ. ಸದ್ಭಕ್ತರ ಶ್ರದ್ಧೆಯ ಮಂದಿರಗಳಾಗಿವೆ. ಧರ್ಮ ಪುಷ್ಪ ಪರಿಮಳವನ್ನು ನಾಡಿಗೆ ನೀಡಿದ ಮಹಾ ಚೇತನ. "ಸರಣ ಸತಿ ಲಿಂಗಪತಿ" ಈ ಉಕ್ತಿಯಂತೆ ನಡೆದು ತೋರಿಸಿದ ಮಹತಾಯಿ.

ಜೀರ್ಣ ದೇಹದಲ್ಲಿ ಶಿವಯೋಗದ ಕಾಂತಿಯನ್ನು ತುಳುಕಿಸುತ್ತಿದ್ದ ಚಿನ್ಮಯ ಮೂರ್ತಿಯಾಗಿದ್ದರು.

ಸಜ್ಜನಗುಡ್ಡದ ಶರಣಮ್ಮನವರು ನಮ್ಮ ಮೇಲೆ ಚಿಕ್ಕಂದಿನಿಂದಲೂ ಅಪಾ ಮಮತೆ, ವಾತ್ಸಲ್ಯ. ಆ ಅಂತಃ ಕರುಣಿಯ ಮಮತೆ ಇಂದು ನೆನಪಿಸಿಕೊಂಡಾಗ, ಒಂದು ದೈವೀ ಶಕ್ತಿಯನ್ನು ಕಳೆದುಕೊಂಡಂತೆ ಭಾಸವಾಗುತ್ತದೆ.

ಪೂಜ್ಯ ಶ್ರೀ ಮೂ.ಜ.ಗಂ. ಮೂರುಸಾವಿರಮಠ. ಹುಬ್ಬಳ್ಳಿ

■

## ಪೀಠಿಕೆ

ಮಹಾತ್ಮರು ತಮ್ಮ ಜೀವನದ ಸಾರ್ಥಕತೆಯನ್ನು ದೀನ–ದಲಿತರ, ಅಸಹಾಯಕರ, ದುಃಖಿಗಳ, ಅಸುಖಿಗಳ ಕಷ್ಟ ನಿವಾರಣೆಯಲ್ಲಿ ಪಡೆದುಕೊಳ್ಳುತ್ತಾರೆ; ಅನವರತವೂ ಮಾನವ ಕೋಟಿಯನ್ನು ಕಷ್ಟ–ಕೊಟಲೆಗಳಿಂದ ಉದ್ಧರಿಸಲು ಹೆಣಗುತ್ತಾರೆ. ಅವರಿಗೆ ತಮ್ಮದೆನ್ನುವುದರ ಭಾವನೆಯಾಗಲೀ ಕಲ್ಪನೆಯಾಗಲೀ ಇರುವುದೇ ಇಲ್ಲ. ಅವರಿಗೆ ದೀನರನ್ನು ಕಂಡರೆ ಮಮತೆ, ದುಃಖಿಗಳನ್ನು ಕಂಡರೆ ಕರುಣೆ, ತಪ್ಪಿತಸ್ಥರನ್ನು ಕಂಡರೆ ಮರುಕ, ಅನಾಥರನ್ನು ಕಂಡರೆ ದುಃಖ! ಮಾನವತೆಗೆ ನೆಮ್ಮದಿಯನ್ನು ಉಂಟು ಮಾಡುವುದೇ ಅವರ ಜೀವನದ ಗುರಿ. ಅದಕ್ಕಾಘಿ ತಮ್ಮ ಜೀವನವನ್ನೇ ಪವಿತ್ರವಾಗಿಟ್ಟು, ಸಾಧನೆಯಿಂದ ಸಿದ್ಧಿಯನ್ನು ಪಡೆದು, ಆ ಸಿದ್ಧಿಯ ಫಲವನ್ನು ಮಾನವನ ಉದ್ಧಾರಕ್ಕಾಗಿ ವಿನಿಯೋಗಿಸುತ್ತಾರೆ. ಇಂತಹ ರೀತಿಯನ್ನು ನಾವು ಭಗವಾನ ಬುದ್ಧ, ಏಸುಕ್ರಿಸ್ತ, ಭಕ್ತಿಭಂಡಾರಿ ಬಸವಣ್ಣ, ಅಲ್ಲಮಪ್ರಭು, ಮಹಾತ್ಮಾಗಾಂಧಿ, ಪರಮಹಂಸ, ವಿವೇಕಾನಂದ, ಮುಂತಾದ ಮಹಿಮಾನ್ವಿತ ವ್ಯಕ್ತಿಗಳ ಜೀವನದಲ್ಲಿ ಕಾಣಬಹುದಾಗಿದೆ. ಅಂತಹ ಮಹಾತ್ಮರ ಮಾಲೆಯಲ್ಲಿ ಪೋಣಿಸಬಹುದಾದ ಮತ್ತೊಂದು 'ಜೀವ' ಎಂದರೆ ಸಜ್ಜಲಗುಡ್ಡದ ಶರಣಮ್ಮನವರು.

'ಇವರ ಬದುಕು ಶಿವಯೋಗ' ಎಂದು ಒಬ್ಬರೆಂದರೆ, ಮತ್ತೊಬ್ಬರು 'ಶಿವಯೋಗದ ಸತ್ವವೇ ಸಾಕಾರಗೊಂಡಿರುವ ರೂಪು' ಎಂದಿದ್ದಾರೆ. ಮಗುದೊಬ್ಬರು 'ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ ಮತ್ತು ಭೃತ್ಯಾಚಾರಗಳ ಭದ್ರೆಯಾಗಿ, ಕ್ರಿಯಾಶಕ್ತಿ, ಜ್ಞಾನಶಕ್ತಿ, ಇಚ್ಛಾಶಕ್ತಿ, ಪರಾಶಕ್ತಿ, ಆದಿಶಕ್ತಿ, ಚಿತ್‌ಶಕ್ತಿಗಳ ಅಧಿದೇವತೆಯಾಗಿದ್ದಾರೆ' ಎಂದಿದ್ದಾರೆ; ಕಾಮಧೇನು, ಕಲ್ಪವೃಕ್ಷಗಳಿಗೆ ಹೋಲಿಸಿದ್ದಾರೆ. ಈ ತಾಯಿಯ ಬಗೆಗೆ ಎಲ್ಲರೂ ಗೌರವ, ಭಕ್ತಿಗಳನ್ನು ಎಂದಿನಿಂದಲೂ ತೋರಿಸುತ್ತಾ ಬಂದಿದ್ದಾರೆ. ಈ ಬಗ್ಗೆ, ಎರಡೆಂಬ ಸೊಲ್ಲು, ಎಂದೆಂದಿಗೂ, ಎಲ್ಲೆಲ್ಲಿಯೂ ಕೇಳಿಬಂದಿಲ್ಲ. ಬಡವನಿಂದ, ಬಲ್ಲಿದವನವರೆಗೆ, ಹಳ್ಳಿಗರಿಂದ ಪಟ್ಟಣಿಗನವರೆಗೆ, ಕಲಿಯದ ಮೂಢನಿಂದ ಪ್ರಕಾಂಡ ಪಂಡಿತನವರೆಗೆ ಎಲ್ಲರೂ 'ತಾಯಿ'ಯವರ ಬಗೆಗೆ ಒಂದೇ ತೆರನಾದ ಅಭಿಪ್ರಾಯ. ಅವರ ದೈವೀ ಶಕ್ತಿಯ ಬಗೆಗೆ, ಸರಳ, ಸೌಜನ್ಯ ನಡೆಯ ಬಗೆಗೆ, ಸಾಧನೆ ಸಿದ್ಧಿಗಳ ಬಗೆಗೆ, ಉತ್ತುಂಗ ವ್ಯಕ್ತಿತ್ವದ ಬಗೆಗೆ

ಒಡಕು ಸೊಲ್ಲು ಎಂದೆಂದೂ ಕೇಳಿ ಬಂದಿಲ್ಲ. ಎಲ್ಲರ ಅಭಿಪ್ರಾಯವೂ ಒಂದೇ ತೆರ. ಅವರು ಒಬ್ಬ ಅಲೌಕಿಕವನ್ನು ಮೆರೆದ, ಮಹಾನ್ ಶರಣೆ ಎಂಬುದು ನಿರ್ವಿವಾದವಾದ; ಖಚಿತವಾದ ಸಂಗತಿ. ಎಷ್ಟೋ ಜನರು ಪವಾಡಪುರುಷರೆಂಬಂತೆ, ಮಹಾತ್ಮರೆಂಬಂತೆ, ಸಾಧಕರೆಂಬಂತೆ, ತೋರಿಸಿಕೊಳ್ಳಲು ಪ್ರಯತ್ನಪಟ್ಟರೂ, ಅನುಯಾಯಿಗಳು ಶ್ರಮವಹಿಸಿದರೂ, ಒಬ್ಬರು ಒಪ್ಪಿದರೆ ಮತ್ತೊಬ್ಬರು ಒಡಕು ನುಡಿಯುತ್ತಾರೆ. ಆದರೆ ಸಜ್ಜಲ ಗುಡ್ಡದ ಶರಣಮ್ಮನವರ ಬಗೆಗೆ ಎರಡು ಅಭಿಪ್ರಾಯದ ಸೊಲ್ಲೇ ಎಲ್ಲಿಯೂ ಇಲ್ಲ ಎನ್ನುವುದೇ ಅವರ ಶ್ರೇಷ್ಠತೆಯನ್ನು ಮತ್ತಷ್ಟು ಮೇಲಕ್ಕೆ ಒಯ್ದಿದೆ.

**ಪೂಜ್ಯರ ಬಾಳಿನ ಹಿನ್ನೆಲೆ**

ಅನೇಕ ಮಹಾತ್ಮರ ಲೌಕಿಕ ಜೀವನ ಇತಿಹಾಸ ಅಸ್ಪಷ್ಟ ವಾಗಿರುತ್ತದೆ. ಅವರೂ ಸಾಮಾನ್ಯರಂತೆ ಹುಟ್ಟಿ ಬರುತ್ತಾರೆ. ತಮ್ಮ ಸಾಧನೆಯಿಂದ ತಮ್ಮ ಮಹತ್ವವನ್ನು ಮೆರೆಯುತ್ತಾರೆ. ಅಂತೆಯೇ ಪೂಜ್ಯ ಶರಣಮ್ಮನವರು ಸುಮಾರು ಹತ್ತೊಂಬತ್ತನೆಯ ಶತಮಾನದ ಕೊನೆಯಲ್ಲಿ ಎಂದರೆ ೧೮೮೦ರ ಸುಮಾರಿನಲ್ಲಿ ಜನ್ಮತಳೆದಂತೆ ತೋರುತ್ತದೆ. (ಅವರ ಜನ್ಮದಿನಾಂಕವೂ ಖಚಿತವಾಗಿ ತಿಳಿದು ಬಂದಿಲ್ಲ) ವೀರಶೈವ ಧರ್ಮದ ತತ್ತ್ವಗಳನ್ನೆಲ್ಲಾ ಅರಗಿಸಿ ಮೈಗೂಡಿಸಿಕೊಂಡು ಮಹಾಶಿವಶರಣರ ಮಟ್ಟಕ್ಕೆ ಏರಿದ ಇವರು ಜನ್ಮತಳೆದುದು 'ಹಾಲುಮತ'ದ (ಕುರುಬರ) ಕುಟುಂಬದಲ್ಲಿ, ಹುಟ್ಟಿನಿಂದ ಕುರುಬರಾದ ಈ ತಾಯಿ ಬದುಕಿನಿಂದ ವೀರಶೈವ ಶಿವಶರಣೆಯಾದರು. ಮನುಷ್ಯನ ಕುಲ ಅಥವಾ ಜಾತಿ ಅವನ ಹುಟ್ಟಿನಿಂದ ಬರುವುದಲ್ಲ; ಅದು ಅವನವನ ಬದುಕಿನಿಂದ ನಿರ್ಧಾರಿತವಾಗುತ್ತದೆಯೆಂಬ ಶರಣರ ತತ್ತ್ವವನ್ನು ಇಪ್ಪತ್ತನೆಯ ಶತಮಾನದಲ್ಲೆ ತಾಯಿಯವರು ಬದುಕಿ ಸಾಧಿಸಿ ತೋರಿಸಿದ್ದಾರೆ. ಅನೇಕ ವೀರಶೈವ ಮಹಾಸ್ವಾಮಿಗಳು, ಶ್ರೀಗಳು, ಗುರುಗಳು ಜಂಗಮರು ತಾಯಿಯವರ ಕುಟೀರಕ್ಕೆ ದಯಮಾಡಿಸಿ ಪೂಜೆಗೈದಿದ್ದಾರೆ. ತಾಯಿಯವರಲ್ಲಿ ಪೂಜ್ಯ ಗುಣವನ್ನು ಕಂಡಿರುವರು.

ಶತಾಯುಷಿ ಶರಣರಾದ ಶ್ರೀ ಅಲ್ಲಿಪುರದ ತಾತನವರು ತಾಯಿಯವರಲ್ಲಿಗೆ ದಯಮಾಡಿಸಿದಾಗ, 'ನಿನ್ನ ದರ್ಶನವೇ ಶಿವಾರ್ಚನೆಯಾದಂತಾಯಿತು. ಮತ್ತೆ ಬೇರೆ ಶಿವಾರ್ಚನೆ ಏಕೆ' ಎಂದರಂತೆ. ಅಂತಹ ದಿವ್ಯ ಬಾಳನ್ನು ಬಾಳಿದ ಶರಣೆ ಅವರು. ಒಮ್ಮೆ ಒಬ್ಬ ಶ್ರೀಗಳು ತಾಯಿಯವರನ್ನು ನೋಡಿ, 'ಸಾಕ್ಷಾತ್ ಪಾರ್ವತಿಯನ್ನು ನೋಡಿದಂತಾಯ್ತು' ಎಂದರೆ, ವಿನಯಶಾಲಿ ಅಮ್ಮನವರು 'ತಮ್ಮನ್ನು ನೋಡಿ ಶಿವಪೂಜೆ ಮಾಡಿದಂತಾಯ್ತು' ಎಂದರಂತೆ!

ಸಜ್ಜಲ ಗುಡ್ಡದ ತಾಯಿಯರು ಜನ್ಮತಳೆದದ್ದು ರಾಯಚೂರು ಜಿಲ್ಲೆಯ ಕುಷ್ಟಗಿ ತಾಲ್ಲೂಕಿನ ಮುದೇನೂರು ಎಂಬ ಒಂದುಸಣ್ಣ ಗ್ರಾಮದಲ್ಲಿ. ಅವರದು ಬಡಕುಟುಂಬ. ತಾಯಿ ಲಿಂಗಮ್ಮ ಬಡ ಮಹಿಳೆ. ಐದಾರು ಕೂರಿಗಿ ಜಮೀನು, ಒಂದು ಮನೆ ಇವಿಷ್ಟೇ ಆಸ್ತಿ. ಲಿಂಗಮ್ಮಗೆ ಇಬ್ಬರು ಮಕ್ಕಳು ಒಬ್ಬ ಮಗ ಮತ್ತು ಒಬ್ಬ ಮಗಳು. ಈ ಲಿಂಗಮ್ಮನ ಮಗಳು ಯುಮುನವ್ವ, ಇಂದಿನ ಸಜ್ಜಲ ಗುಡ್ಡದ ಮಹಾಶಿವಶರಣೆ ಶರಣಮ್ಮ. ಚಿಕ್ಕ ಮಕ್ಕಳನ್ನು ಕಟ್ಟಿಕೊಂಡು ಲಿಂಗಮ್ಮನಿಗೆ ಸ್ವಂತ ಉಳುಮೆ ಮಾಡಲಾಗದ್ದರಿಂದ ಹೊಲವನ್ನು ಬೇರೆಯವರಿಗೆ ಮಾಡಲು ಕೊಟ್ಟಳು. ಅದರಿಂದ ಬರುತ್ತಿದ್ದ ಕಾಳಿನಿಂದ ಜೀವನ ಸಾಗಿಸುವುದು ಕಷ್ಟವಾಗುತ್ತಿತ್ತು. ಇಷ್ಟೇ ಸಾಲದೆಂಬಂತೆ ೧೯೪೦ ರ ಸುಮಾರಿಗೆ 'ಬರ' ಬೇರೆ ಬಂತು. ದೊಡ್ಡ ಜಮೀನ್‌ದಾರರಿಗೆ ಸಹ ಬರದ ಬಿಸಿ ತಗುಲಿತು. ಅಂತಹ ಪರಿಸ್ಥಿತಿಯಲ್ಲಿ ಲಿಂಗಮ್ಮನು ಬರದ ಬಿಸಿಗೆ ಒಳಗಾಗಬೇಕಾಯಿತು. ಜೊತೆಗೆ ದಿಕ್ಕಿಲ್ಲದೆ, ಲಿಂಗಮ್ಮನ ಅಸಹಾಯ ಕತೆಯ ದುರ್ಲಾಭ ಪಡೆದು ಹೊಲ ಉಳುತ್ತಿದ್ದವರು, ಹೊಲವನ್ನೇ ನುಂಗಿಹಾಕಿದರು. ಮಕ್ಕಳು ತುತ್ತು ಕೂಳಿಲ್ಲದೆ ಉಪವಾಸ ಬೀಳಬೇಕಯಿತು. ದಾರಿಕಾಣದೆ ತಾಯಿ ಲಿಂಗಮ್ಮ ಮಕ್ಕಳೆರಢನ್ನೂ ಕಟ್ಟಿಕೊಂಡು 'ಹಳೇ ಮಾಗಣಿ'ಯಾದ ಕಂಪ್ಲಿಗೆ ಗುಳೇ ಹೋದಳು.

ಕುರುಬರ, ಹಳ್ಳಿಯ, ಬಡ ಹೆಣ್ಣು ಮಗಳಾದ ಲಿಂಗಮ್ಮ ಸಂಸ್ಕಾರವಿಲ್ಲದ, ಹೊಟ್ಟೆಪಾಡೇ ಗುರಿಯಾದ ಇತರೆ ಸಾಮಾನ್ಯ ಮಹಿಳೆಯರಂತಿರಲಿಲ್ಲ. ಧರ್ಮ, ತತ್ತ್ವ, ಆಧ್ಯಾತ್ಮದ ಹೃದಯ ಆಕೆಯಲ್ಲಿತ್ತು. ನಿಜಗುಣರ ಷಟ್‌ಶಾಸ್ತ್ರಗಳನ್ನು ತಿಳಿದುಕೊಂಡು, ಅವುಗಳನ್ನು ತನ್ನ ಜೀವನದಲ್ಲಿ ಅಳವಡಿಸಿಕೊಂಡ ಧರ್ಮಜೀವಿಯಾಗಿದ್ದಳು. 'ಕೈವಲ್ಯ' ವನ್ನು ಕರಗತಮಾಡಿಕೊಂಡಿದ್ದಳು. ನಿಜಗುಣರ ಕೈವಲ್ಯವನ್ನು 'ಓದಿಸಿ, ಅರ್ಥೈಸಿ, ಅನುಭವಿಸಿ, ಆನಂದಪರವಶಳಾಗುತ್ತಿದ್ದಳು. ಧಾರ್ಮಿಕ ವಿಚಾರಗಳನ್ನು ಆಸಕ್ತಿಯಿಂದ ತಿಳಿದುಕೊಂಡು ಶ್ರದ್ಧೆಯಿಂದ ಆಚರಿಸುತ್ತಿದ್ದಳು. ಇಷ್ಟರಿಂದಲೇ ತೃಪ್ತಳಾಗದೆ, ಸ್ವಾಮಿಗಳಿಂದ ಮಂತ್ರೋಪದೇಶ ಪಡೆದು 'ಗುರುವಿವ ಮಗಳೂ' ಆಗಿದ್ದಳು.

ಧಾರ್ಮಿಕ ಪ್ರವೃತ್ತಿಯ ಲಿಂಗಮ್ಮನಿಗೆ ಕಂಪ್ಲಿಯ ವಾತಾವರಣ ಸರಿಹೊಂದಲಿಲ್ಲ. ಆದುದರಿಂದ ಬೇರೆ ಊರಿಗೆ ಹೋಗಬೇಕೆಂಧುಕೊಂಡಳು. ತಮ್ಮ ಸ್ವಂತ ಊರನ್ನು ಬಿಟ್ಟು ಬಂದಮೇಲೆ ಈ ಊರಾದರೇನು? ಬೇರೆ ಊರಾದರೇನು? ಬೇರೊಂದು ಊರಿಗೆ ಹೋಗುವ ಯೋಚನೆಯನ್ನು ಮಗನ ಮುಂದಿಟ್ಟಳು. ಆದರೆ ಮಗನು ಕಂಪ್ಲಿ ಬಿಡಲು ಒಪ್ಪಲಿಲ್ಲವಾಗಿ, ಮಗಳು ಯಮುನವ್ವನನ್ನು ಮಾತ್ರ ಕರೆದುಕೊಂಡು ಲಿಂಗಸೂರಿಗೆ ಬಂದಳು.

ಯಮುನವ್ವ ಎಲ್ಲ ಮಕ್ಕಳಂತಿರಲಿಲ್ಲ. ತನ್ನ ವಯಸ್ಸಿನ ಮಕ್ಕಳೊಡನೆ ಕೂಡಿಯಾಡುತ್ತಿರಲಿಲ್ಲ. ತಾನೇ ಒಂಟಿಯಾಗಿ ಇರಬಯಸುತ್ತಿದ್ದಳು. ಹೊಲಕ್ಕೆ ಕೆಲಸಕ್ಕೆ ಹೋದಾಗಲೂ ಎಲ್ಲರೂ ಒಂದು ಕಡೆ ಇದ್ದರೆ ಇವಳೊಬ್ಬಳೇ ಬೇರೊಂದು ಕಡೆಗೆ ಹೋಗುತ್ತಿದ್ದಳು. ಊಟಕ್ಕೆ ಎಲ್ಲರೂ ಕೂತಾಗಲೂ ಸಹ ತಾನೇ ಬೇರೆಯಾಗಿ ಹೋಗಿ ಉಂಡು ಬರುತ್ತಿದ್ದಳೂ. ಮನೆಯಲ್ಲಿ ಮಲಗುವಾಗಲೂ ಸಹ, ತಾಯಿಯೊಡನೆ ಸಹ ಮಲಗದೆ ತಾನೇ ಪ್ರತ್ಯೇಕವಾಗಿ ಮಲಗುತ್ತಿದ್ದಳು. ಹೀಗೆ ಮಗುವಿನಿಂದಲೇ ಎಲ್ಲರಿಗಿರುವಂತಹ ಸಾಮಾನ್ಯ ಸ್ವಭಾವಗಳಿಂದ ಭಿನ್ನವಾಗಿದ್ದಳು. ಲೋಕದ ದಾರಿಯೇ ಒಂದಾದರೆ ಈಕೆಯ ಮಾರ್ಗವೇ ಬೇರಾಗಿತ್ತು. ತಾಯಿ ಲಿಂಗಸೂರಿಗೆ ಪ್ರಯಾಣ ಬೆಳಸಿದ್ದು, ಮಗಳು ಯಮುನವ್ವಳಿಗೆ ಮುಂದೆ ತಾನು ಏರಲಿರುವ ಮೆಟ್ಟಲುಗಳ ಮೊದಲ ಪಾವಟಗೆ ದೊರೆಯಿತೆಂದೇ ಹೇಳಬೇಕು. ಏಕೆಂದರೆ ಊರಿನ ಹೊರಗಿದ್ದ ತೋಂಟದ ಸಿದ್ಧಲಿಂಗೇಶ್ವರಮಠ ಅನಾಥರ ಆಶ್ರಯ ಸ್ಥಾನವೂ ಆಗಿತ್ತು. ಆ ಮಠದಲ್ಲೇ ಈ ತಾಯಿ-ಮಕ್ಕಳು ಎಂಟುದಿನಗಳ ಕಾಲ ಉಳಿದುಕೊಂಡಿದ್ದರು. ತಾಯಿಗೂ ಅಂತಹ ವಾತಾವರಣ ಅಪ್ಯಾಯಮಾನ. ಮಗಳಂತೂ ಬಾಲ್ಯದಿಂದಲೇ ಅಂತರ್ಮುಖಿಯಾಗಿ ಚಿಂತನೆಯಲ್ಲಿರುತ್ತಿದ್ದಳು. ಆ ಮಠದಲ್ಲಿ ಆಗ ಅಮೀನಗಡದ ಪ್ರಭುಸ್ವಾಮಿಗಳಿದ್ದರು. ಲಿಂಗಮ್ಮ 'ಅನುಗ್ರಹ' ನೀಡಲು ಸ್ವಾಮಿಗಳನ್ನು ವಿನಂತಿಸಿಕೊಂಡಳು. ಸ್ವಾಮಿಗಳು ತಾಯಿಗೆ ಆನಂದದಿಂದ ಅನುಗ್ರಹ ನೀಡಿ ರುದ್ರಾಕ್ಷಿಯನ್ನು ಆಶೀರ್ವದಿಸಿದರು. ಅಲ್ಲದೆ, ಮೊಳಕೆಯ್ಲಲಿಯೇ ಮುಂದಿನ ಬೆಳೆಯ ಸಿರಿಯನ್ನು ಕಂಡು, ಪುಟ್ಟ ಯಮುನಬ್ಬನ ಮಸ್ತಕದ ಮೇಲೊಂದು ಪತ್ರೆ ದಳವನ್ನಿರಿಸಿ, ಒಂದು ರುದ್ರಾಕ್ಷಿಯನ್ನು ಆಶೀರ್ವದಿಸಿದರು. ಜೊತೆಗೆ ಮುಂದೆ ಈಕೆಯು ಸಿದ್ಧಿಯನ್ನು ಪಡೆದು ಪ್ರಸಿದ್ಧವಾಗುವುದನ್ನು ಕಂಡು ಕೊಂಡರೋ ಎಂಬಂತೆ ಯಮುನವ್ವನಿಗೆ ಸಿದ್ದಮ್ಮನೆಂದು ನಾಮಕರಣ ಮಾಡಿದರು. ಇವರು ಲಿಂಗಸೂರಿನಲ್ಲಿದ್ದಾಗಲೇ ಕಂಪ್ಲಿಯಲ್ಲಿದ್ದ ಲಿಂಗಮ್ಮನ ಮಗ ಪ್ಲೇಗಿಗೆ ತುತ್ತಾಗಿ ಇಹಲೋಕ ತ್ಯಜಿಸಿದನು. ಈಗ ಉಳಿದವರು ತಾಯಿ ಮಕ್ಕಳಿಬ್ಬರೆ. ಲಿಂಗಸುಗೂರಿನಲ್ಲೂ ಅವರಿಗೆ ಜೀವನ ನಿರ್ವಹಣೆ ಕಷ್ಟವಾಗಿತ್ತು. ಆದರೂ ಲಿಂಗಮ್ಮ ಸಜ್ಜನರ ಸಂಗ, ಸದ್ ಭಕ್ತರ ಒಡನಾಟ, ಶಿವಾನುಭವಗೋಷ್ಠಿಗಳ ಸಂಪರ್ಕಗಳಲ್ಲಿ ಬಹಳಷ್ಟು ಸಮಯ ಕಳೆಯುತ್ತಿದ್ದು ತನ್ನ ಹೃದಯವನ್ನು ಸಂಸ್ಕರಿಸಿಕೊಳ್ಳುತ್ತಿದ್ದಳು. ಇದರ ಪರಿಣಾಮ ಮೊಳೆಯುತ್ತಿದ್ದ ಸಿದ್ದಮ್ಮನ ಮೇಲೂ ಸಾಕಷ್ಟಾಗುತ್ತಿತ್ತು. ಹೀಗಾಗಿ ಆಕೆಗೆ ತಾಯಿ ಲಿಂಗಮ್ಮನೇ ಮೊದಲ ಆಧ್ಯಾತ್ಮ ಗುರುವಾಗಿದ್ದಳು. ತಾಯಿಯ ಮುಖಾಂತರವೇ ನಿಜಗುಣರ ಷಟ್‌ಸ್ಥಲಶಾಸ್ತ್ರಗಳನ್ನು ಅರಗಿಸಿ ಮೈಗೂಡಿಸಿ

ಕೊಂಡಿದ್ದಳು. ಇನ್ನು ಹೆಚ್ಚಿನ ಆಧ್ಯಾತ್ಮಜ್ಞಾನ ಅವರುಗಳಿಗೆ ದೊರೆಯುವಂತೆ ಮಾಡಲೋಸುಗವೋ ಏನೋ ದಿವ್ಯಶಕ್ತಿಯೊಂದು ಜೀವನ ನಿರ್ವಹಣೆಯ ನೆಪದಲ್ಲಿ ಅವರನ್ನು ಮಾವಿನಭಾವಿಗೆ ಹೋಗುವಂತೆ ಮಾಡಿತು. ಮಾವಿನ ಭಾವಿಯಲ್ಲಿ ತಾಯಿ ಮಕ್ಕಳು ಮುಂದಿನ ಕೆಲ ದಿನ ವಾಸ್ತವ್ಯ ಮಾಢಿದರು. ಯಾರೇ ಆಗಲಿ, ಎಲ್ಲಿಗೇ ಹೋದರೂ ಆಚಾರ–ವಿಚಾರದಲ್ಲಿ, ನಡೆ–ನುಡಿಗಳಲ್ಲಿ, ಆಸಕ್ತಿ–ಆಚರಣೆಗಳ್ಲಲಿ ತಮ್ಮಂತಿರುವವರನ್ನೇ ಆರಿಸಿಕೊಳ್ಳುತ್ತಾರೆ; ಅಂತಹವರಲ್ಲೇ ಸ್ನೇಹವೂ ಉಂಟಾಗುತ್ತದೆ. ಈ ಸಣ್ಣ ಹಳ್ಳಿಯಲ್ಲಿ ಗುಲಾಮಸಾಬನೆಂದು ಓರ್ವ ಶಿಕ್ಷಕನಿದ್ದನು. ಆತನಿಗೂ ಧರ್ಮ ವಿಷಯಗಳಲ್ಲಿ ಬಹು ಆಸಕ್ತಿ. ಓದುಬಾರದ ಲಿಂಗಮ್ಮ ಆ ಶಿಕ್ಷಕನಿಂದ ನಿಜಗುಣರ ಜ್ಞಾನಸಿಂಧು, 'ಅನುಭವಸಾರ' ಇವುಗಳನ್ನು ಓದಿಸಿಕೊಳ್ಳುತ್ತಿದ್ದಳು. ಅದರ ಪ್ರಭಾವ, ಬೆಳೆಯುತ್ತಿದ್ದ ಸಿದ್ಧಮ್ಮನ ಮೇಲೆಯೂ ಆಗುತ್ತಿತ್ತು. ಆ ಶಿಕ್ಷಕ ಈ ಚುರುಕು ಹುಡುಗಿಯನ್ನು ಕಂಡು, ವಿದ್ಯೆ ಕಲಿಸಿದರೆ ಈಕೆ ಶಿಕ್ಷಕಿಯಾಗಿ ಅನೇಕರಿಗೆ ಮಾರ್ಗದರ್ಶನವೀಯಬಲ್ಲಳು ಎಂಬುದನ್ನು ಕಂಡುಕೊಂಡು 'ತಂಗೀ ಪಾಠ ಕಲಿಸುತ್ತೇನೆ, ಬಹಳಷ್ಟು ಕಲಿತು ಮಾಸ್ತರ್ತಿ ಆಗುವಂತೆ' ಎಂದರೆ, ಈ ಹುಡುಗಿ, "ಈ ವಿದ್ಯೆಗಳೆಲ್ಲಾ ಹೊಟ್ಟೆಪಾಡಿನ ವಿದ್ಯೆ, ಇಂತಹ ವಿದ್ಯೆ ನನಗೆ ಬೇಡ. ನನಗೆ ಬೇಕಾದ್ದು 'ಅನುಭವಸಾರ'ವನ್ನು ತಿಳಿಯುವ ವಿದ್ಯೆಬೇಕು. ಅದನ್ನು ತಿಳಿಯಲು ನೀನು ಕಲಿಸುವ ವಿದ್ಯೆ ಸಹಾಯಕವಾದರೆ ಮಾತ್ರ ಕಲಿಯುತ್ತೇನೆ" ಎಂದು ಹೇಳಿದಳಂತೆ. ಆಗಲೇ ಈ ಮಗುವಿನ ದೃಷ್ಟಿ, ಆಸಕ್ತಿ, ಗುರಿ ಎತ್ತಕಡೆ ಹೋಗುತ್ತದೆ ಎಂಬುದನ್ನು ಕಂಡುಕೊಳ್ಳಬಹುದಾಗಿತ್ತು. ತಾಯಿ ಲಿಂಗಮ್ಮ ಚಿಕ್ಕ ವಯಸ್ಸಿನಿಂದಲೇ ಜೀವನದ ನಿಸ್ಸಾರತೆಯನ್ನು ಅರಿತವಳು. ಬಡತನ, ಜೊತೆಗೆ ಮಗನ ಸಾವು. ಉಪಜೀವನಕ್ಕೆ ಪರದಾಟ, ಇವೆಲ್ಲವೂ ಮೊದಲೇ ಈಶ್ವರನ ಕಡೆಗೆ ಮುಖಮಾಡಿದ್ದ ಲಿಂಗಮ್ಮನಿಗೆ ಜೀವನದ ವಶ್ವರತೆಯನ್ನು ಇನ್ನೂ ಸ್ಪಷ್ಟಪಡಿಸುತ್ತಿದ್ದವು. ಹಾಗಾಗಿ ಆಕೆ ಆಧ್ಯಾತ್ಮ ಗ್ರಂಥಗಳ ಪಠಣೆಯನ್ನು ಕೇಳುವುದರಲ್ಲಿ, ಧಾರ್ಮಿಕ ಜೀವನ ನಡೆಸುವಲ್ಲಿ ಪಾರಮಾರ್ಥಿಕ ಬಾಳನ್ನು ಬಾಳುವುದರಲ್ಲಿ ಮಗ್ನಳಾಗಿದ್ದಳು. ಈ ಪರಿಸ್ಥಿತಿಗಳು ಸಿದ್ಧಮ್ಮನನ್ನು ಬಾಲ್ಯದಿಂದಲೇ ಪರಮಾರ್ಥದ ಕಡೆಗೆ, ಪರಮಾತ್ಮನ ಎಡೆಗೆ ಮನ ತಿರುಗುವಂತೆ ಮಾಡಿದವು.

ಮಾವಿನಭಾವಿಯಲ್ಲಿದ್ದಾಗ ತಮ್ಮ ಸ್ವಂತ ಊರಿಂದ ಮುದೇನೂರು ಸಿದ್ಧಯ್ಯನವರ ಸಲಹೆ, ಸಹಕಾರಗಳ ಮೂಲಕ ಸಜ್ಜಲಗುಡ್ಡಕ್ಕೆ ಬಂದರು. ವಿಧಿ ಲಿಂಗಮ್ಮನನ್ನು ಎಲ್ಲೆಡೆ ಸುತ್ತಾಡಿಸುವ ಮೂಲಕ ಸಿದ್ಧಮ್ಮನಿಗೆ ಮುಂದಿನ ತಪೋ ಜೀವನಕ್ಕೆ ಬೇಕಾದ ಮನೋಭೂಮಿಕೆಯನ್ನು ರೂಪಿಸಲು ಸಹಾಯ ಮಾಡಿಸಿತು. ಸಜ್ಜಲಗುಡ್ಡಕ್ಕೆ ಬಂದುದು ತಾಯಿಯೇ ಮಗಳಿಗೆ ಸೂಕ್ತ ತಪೋಭೂಮಿಯನ್ನು ಹುಡುಕಿ ತಂದು ಬಿಟ್ಟಂತಾಯ್ತು. ಇದು ತಾಯಿ–ಮಗಳು ಬಂದು ನೆಲಸಿದ

ಕಡೆಯ ಊರು. ಮುಂದೆ ಅವರು ಸ್ಥಳ ಬಸಲಾಯಿಸಲಿಲ್ಲ. ಇಲ್ಲಿಯೇ ಸಿದ್ಧಮ್ಮನು ಶರಣಮ್ಮನವರಾದರು. ಸಜ್ಜಲಗುಡ್ಡವೇ ತಾಯಿಯವರ ತಪೋಭೂಮಿಯಾಯ್ತು. ತಾಯಿಯವರ ವಾಸ್ತವ್ಯದಿಂದ, ಬದುಕಿನಿಂದ, ತಪದಿಂದ ಪೂಜೆಯಿಂದ ಜಾಗೃತ ಸ್ಥಾನವಾಯ್ತು. ಇಹದ ಬಾಳನ್ನೆಲ್ಲ ತಾಯಿಯವರು ಈ ಪರಿಸರದಲ್ಲಿಯೇ ಕಳೆದರು.

## ಶುದ್ಧ ಭಕ್ತಿಯ ಗುರುಪುತ್ರಿ

ಆಗಿನ ಕಾಲದಲ್ಲಿ ಗುಡದೂರ ಅಜ್ಜಾ ಅವರದು ಬಹು ದೊಡ್ಡ ಹೆಸರು. ಅವರು ಸಂಸಾರಿಗಳಾದ ಮಹಾಶರಣರು; ದಿವ್ಯ ಚೇತನ. ಅವರ ಮಹಿಮೆ ಸರ್ವ ವ್ಯಾಪ್ತಿಯಾಗಿ, ಭಕ್ತರ ಅವರು ಕೃಪಾಶೀರ್ವಾದದಿಂದ ತಮ್ಮ ಜೀವನ ಪಾವನಗೊಳಿಸಿಕೊಳ್ಳುತ್ತಿದ್ದರು. ಅಂತಹ ಮಹಾಪುರುಷರಾದ ಗುಡದೂರ ದೊಡ್ಡ ಬಸವಾರ್ಯರು, ಸಜ್ಜಲಗುಡ್ಡದಿಂದ ಕೇವಲ ಒಂದು ಕಿಲೋಮೀಟರಿನ ದೂರದಲ್ಲಿರುವ ಕಂಬಳಿಹಾಳಕ್ಕೆ ದಯ ಮಾಡಿಸುತ್ತಿದ್ದರು. ಅಲ್ಲಿ ಅನೇಕ ಪರಮಭಕ್ತರಿದ್ದರು. ಅವರು ಮೇಲಿಂದ ಮೇಲೆ ಅಜ್ಜಾವರನ್ನು ಕರೆಸಿಕೊಳ್ಳುತ್ತಿದ್ದರು. ಇವರ ಮಹಿಮೆಯ ಪ್ರಭಾವ ಸುತ್ತಮುತ್ತಲೆಲ್ಲ ಪಸರಿಸಿತ್ತು.

ಸಜ್ಜಲಗುಡ್ಡದಲ್ಲಿರುವ ಲಿಂಗಮ್ಮನಿಗೆ ಗುಡದೂರ ದೊಡ್ಡ ಬಸವಾರ್ಯರು. ಕಂಬಳಿಹಾಳಕ್ಕೆ ಬಂದ ವಿಚಾರ ತಿಳಿದು ಅತೀವ ಆನಂದವಾಯ್ತು. ಆಕೆ ಮುದೇನೂರಲ್ಲಿದ್ದಾಗಲೇ ಅಜ್ಜಾ ಅವರ ಮಹಿಮೆಯಿಂದ ಆಕರ್ಷಿತಳಾಗಿ ಅನೇಕ ಸಲ ಗುಡದೂರಿಗೆ ಹೋಗಿ ಅಜ್ಜಾ ಅವರ ದರ್ಶನಾಶೀರ್ವಾದ ಪಡೆದು ಬಂದಿದ್ದಳು. ಈಗಂತೂ ಆಕೆ ಜೀವನ ಜಂಜಾಟದಲ್ಲಿ ಬೆಂದು, ನೊಂದು 'ಇಹ'ದ ಬಗ್ಗೆ ಜಿಗುಪ್ಸೆ ಬಂದಿತ್ತು. ಆಕೆಯ ಮನಸ್ಸೆಲ್ಲಾ 'ಪರ'ದ ಕಡೆಗೆ ತಿರುಗಿ 'ಪರಮಾರ್ಥ' ಚಿಂತೆಯಲ್ಲಿತ್ತು. ಇರುವ ಒಬ್ಬ ಮಗಳೂ ಸಹ ಇಹದ ಜಂಜಾಟದಲ್ಲೆ ಸಿಲುಕಿ ತೊಳಲಬಾರದೆಂಬುದು ಆಕೆಯ ಇಚ್ಛೆಯಾಗಿತ್ತು. ಈ ಸಂಸಾರಿಕ ಜೀವನ, ದುಃಖಮಯವಾದುದು; ಹೇಯವಾದುದು; ಅರ್ಥವಿಲ್ಲದ್ದು ಎನಿಸಿದ ಆಕೆಗೆ. ತನ್ನ ಪ್ರೀತಿಯ ಮಗಳು ಸುಖದ ಮರೀಚಿಕೆಯಾದ ಸಂಸಾರ ಬಂಧನದಲ್ಲಿ ಸಿಲುಕಿಕೊಳ್ಳುವುದು ಬೇಡವಾಗಿತ್ತು. ಶಾಶ್ವತ ಸುಖದ ತಾಣವಾದ 'ಪರದ' ಕಡೆಗೆ ಮನಸ್ಸಿಟ್ಟು 'ಗುರುವಿನ ಮಗಳಾಗಿ' ಶಾಶ್ವತ ಸುಖವನ್ನು ಪಡೆಯಲ್ಲಿ ಎಂಬ ಹಂಬಲವಿತ್ತು. ಈ ರೀತಿ ಮಗಳಿಗೆ ಪರಮಾರ್ಥದ ದಾರಿಯನ್ನು ತೋರಿಸುವ ಒಬ್ಬ ಸಮರ್ಥ ಗುರುವಿನ ದಾರಿ ನೋಡುತ್ತಿದ್ದಳಾಕೆ. ಅಂತಹ ಸಮಯದಲ್ಲಿ ತಮ್ಮ ಸಮೀಪದ ಹಳ್ಳಿಗೆ ಮಹಿಮಾನ್ವಿತರಾದ ಗುಡದೂರ ಅಜ್ಜ ಅವರು ಬಂದ ಸುದ್ದಿ ಕೇಳಿ ಆಕೆಯ ಸಂತೋಷಕ್ಕೆ ಪಾರವಿಲ್ಲದಾಯಿತು. ಅಜ್ಜಾ ಅವರು ಕಂಬಳಿಹಾಳಕ್ಕೆ ದಯಮಾಡಿಸಿದಾಗಲೆಲ್ಲ ಮಗಳೊಡನೆ ಹೋಗಿ ಶಿವಾನುಭವದಮೃತವನ್ನು ಸವಿದು

ಬರುತ್ತಿದ್ದಳು. ತಾಯಿಯೊಡನೆ ಬರುತ್ತಿದ್ದ ಈ ಹುಡುಗಿಯನ್ನು ಅಜ್ಜಾ ಅವರು ಗಮನಿಸುತ್ತಲೇ ಇದ್ದರು. ಆಕೆಯಲ್ಲಿದ್ದ ಶರಣ ತೇಜಸ್ಸನ್ನು ಆಗಲೇ ಗುರುತಿಸಿದ್ದರು. "ಈ ಮಗಳು ಸಮಾಜಕ್ಕೇ ತಾಯಿಯಾಗಬಲ್ಲವಳು" ಎಂದು ಅರಿತಿದ್ದರು. ತಮ್ಮ ಸನಿಹದ ಭಕ್ತರೊಡನೆ, "ಈ ಮಗು ಶರಣಮ್ಮ ಆಗ್ತದೆ ನೋಡ್ರೋ. ಅದು ಬಾಳ ದೊಡ್ಡ ರತ್ನ, ಆದರ ಬಾಳ ಹುಷಾರದಿಂದ ಜ್ವಾಪಾನ ಆಗಬೇಕು" ಎಂದು ಹೇಳುತ್ತಿದ್ದರಂತೆ.

ಕಂಬಳಿಹಾಳದಲ್ಲಿ ಪ್ರವಚನ ಕೇಳಲು ಹೋಗುತ್ತಿದ್ದ ಲಿಂಗಮ್ಮ ಒಮ್ಮೆ ಗುರುಗಳಿಗೆ 'ಯಪ್ಪಾ, ನನ್ನ ಮಗಳಿಗೂ ಒಂದಿಷ್ಟು ಶಿವಾನುಭವ ತಿಳಿಸಿ, ಗುರುವಿನ ಮಗಳನ್ನಾಗಿ ಮಾಡಿ ಕೊಳ್ರಿಪ್ಪಾ' ಎಂದು ಬಿನ್ನವಿಸಿಕೊಂಡಳಂತೆ. ಮೊದಲೆ ಹುಡುಗಿಯ ಲಕ್ಷಣವನ್ನು ಗುರುತಿಸಿದ್ದ ಗುರುಗಳಿಗೆ ಇದು ಸಂತೋಷದ ವಿಷಯವೇ ಆಯ್ತು. ಮಗಳನ್ನು ಗುಡದೂರಿಗೆ ಕರೆದುಕೊಂಡು ಬರಬೇಕಾಗಿಯೂ ಅಲ್ಲಿ ಅಖಂಡೇಶ್ವರ ವಚನಗಳನ್ನು ಬೋಧಿಸುವದಾಗಿಯೂ ಆಶ್ವಾಸನವಿತ್ತರು.

ಗುರುಗಳ ಅಪ್ಪಣೆಯ ಮೇರೆಗೆ ಲಿಂಗಮ್ಮನು ಮಗಳನ್ನು ಗುರುಕರುಣೆಗಾಗಿ ಗುಡುದೂರಿಗೆ ಕರೆದುಕೊಂಡು ಹೋದಳು. ಇಲ್ಲಿ ತಾಯಿಯ ಸಂಸ್ಕಾರವನ್ನೂ, ಮಗಳ ಆಧ್ಯಾತ್ಮ ಸಾಧನೆಯಲ್ಲಿ ತಾಯಿಗಿದ್ದ ಹಂಬಲವನ್ನೂ ಗಮನಿಸಬೇಕು. ಸಾಮಾನ್ಯವಾಗಿ ತಾಯಂದಿರು ತಮ್ಮ ಮಕ್ಕಳು ಮದುವೆಯಾಗಿ, ಮಕ್ಕಳನ್ನು ಪಡೆದು, ಸಂಸಾರವಂದಿಗಳಾಗಿ ಬಾಳಬೇಕೆಂದು ಇಚ್ಛಿಸುತ್ತಾರೆ. ಮಗಳಾಗಲೀ, ಮಗನಾಗಲಿ ಸನ್ಯಾಸವನ್ನು ಸ್ವೀಕರಿಸಲಿ; ಬ್ರಹ್ಮಚಾರಿಯಾಗಿ ಬದುಕಲಿ ಎಂದು ಹೆಚ್ಚಾಗಿ ಯಾರೂ ಬಯಸುವುದಿಲ್ಲ. ಶ್ರೀಮಾನ್ ಶಂಕರಾಚಾರ್ಯರ ತಾಯಿ ಸಹ ಅನಿವಾರ್ಯ ಪ್ರಸಂಗ ಬರುವವರೆಗೆ ಸನ್ಯಾಸ ಸ್ವೀಕರಿಸಲು ಒಪ್ಪಿಗೆ ಕೊಟ್ಟಿರಲಿಲ್ಲ. ಆದರೆ ಲಿಂಗಮ್ಮ ಸ್ವಪ್ರೇರಣೆಯಿಂದ, ಮಗಳನ್ನು ಈ ಭವದ ಬಂಧನದಲ್ಲಿ ಸಿಕ್ಕಿಸಬಾರದೆಂದು ನಿರ್ಧರಿಸಿದ್ದಳು. ಅದಕ್ಕೆ ಬೇಕಾದ ಜ್ಞಾನ, ಅವಕಾಶ, ಪರಿಸರಗಳನ್ನು ಮೊದಲಿಂದಲೂ ಒದಗಿಸುತ್ತಾ ಬಂದುದು ಒಂದು ವೈಶಿಷ್ಟ್ಯ. ಈ ಅಪೂರ್ವವಾದ ರತ್ನ, ಅಸಾಮಾನ್ಯ ಅನರ್ಘ್ಯ ಖಣಿಯಲ್ಲಿಯೇ ದೊರೆಯಬೇಕಲ್ಲವೆ? ಲಿಂಗಮ್ಮನಿಗೆ ಗುರುಪಥದ ಮೂಲಕ ಶಿವಪಥಕ್ಕೆ ಹೋಗುವಾಸೆ. ತನಗಂತೂ ಸಾಧ್ಯವಾಗಲಿಲ್ಲ. ತನ್ನ ಮಗಳಿಗಾದರೂ ಅದು ಸಾಧಿಸಲಿ ಎಂಬ ಉತ್ಕಟೇಚ್ಛೆಯಿಂದ ಗುಡುದೂರಿಗೆ ಬಂದು ಮಗಳನ್ನು ಬಸವಾರ್ಯರ ಪಾದಕ್ಕೆ ನಮಿಸಿ, "ಇನ್ನು ಮ್ಯಾಗೆ ನೀನೇ ಇದರ ತಂದೆ-ತಾಯಿ; ಬಂಧು-ಬಳಗ; ಇದರ ಆರಾ-ಭಾರಾ ಎಲ್ಲಾ ನಿನ್ನೇ ಕೂಡೈತೆ" ಎಂದು ಅರ್ಪಿಸಿದಳು.

ಗುರುಗಳು ಸಿದ್ಧಮ್ಮನಿಗೆ ಸ್ವಲ್ಪ ಓದು–ಬರೆಯಲು ಬರುತ್ತದೆಯೆಂಬುದನ್ನು ತಿಳಿದು, ಅಖಂಡೇಶ್ವರ ಗ್ರಂಥವನ್ನು ತೆಗೆದು ಒಂದು ವಚನವನ್ನು ತಾವು ಸ್ನಾನಮಾಡಿ ಬರುವುದರೊಳಗೆ ಕಲಿತು ಒಪ್ಪಿಸಬೇಕೆಂದು ಹೇಳಿ ಹೋದರು. ಸುಮ್ಮನೆ ಪುಸ್ತಕ ತೆರೆದರೆ, ಆಗ ಬಂದ ವಚನ 'ಗುರುಕರುಣ ಸ್ಥಲ' ಅದರಲ್ಲೂ ಗುರುವಿನ ಘನತೆಯನ್ನು ತಿಳಿಸುವ ವಚನ. ಸಿದ್ಧಮ್ಮ ಕಲಿತ ಮೊದಲ ಅಖಂಡೇಶ್ವರ ವಚನ ಇದು–

ಗುರುವೆ ಪರತತ್ವವು ತಾನೆ ನೋಡ
ಗುರುವೆ ಪರವಸ್ತುವು ತಾನೆ ನೋಡ
ಗುರುವೆ ಪರಬ್ರಹ್ಮವು ತಾನೆ ನೋಡ
ಗುರುವೆ ಶಿವನು ತಾನೆ ನೋಡ
ಗುರುವಿನಿಂದೆ ಪರವಿಲ್ಲವೆಂದು ಸಕಲ ಕೃತಿಗಳು
ಹೊಗಳುತಿಪ್ಪವು ನೋಡ
ಇಂತಪ್ಪ ಗುರುವಿಂಗೆ ನಮೋ ನಮೋ ಎಂಬೆನಯ್ಯ
ಅಖಂಡೇಶ್ರ್ವರ.

ಯೋಗಾಯೋಗದಿಂದ ಮೊದಲೆ ಸಿಕ್ಕಿದ ವಚನ ನೋಡಿಯೇ ಅಜ್ಜಾ ಅವರು ಈ ವ್ಯಕ್ತಿ ದೊಡ್ಡ ಶಕ್ತಿಯಾಗುವುದೆಂಬುದನ್ನು ಖಚಿತ ಮಾಡಿಕೊಂಡರು. ಶರಣಮ್ಮನವರು ಸಹ ತಾವು ಕಲಿತ ಮೊದಲ ವಚನದ ತತ್ವದಂತೆ ಜೀವನಾದ್ಯಂತ, ಅನವರತವೂ ಬದುಕಿ ಬಾಳಿದರು. ಸರ್ವರನ್ನೂ ಗುರುವಿನ ಪಾದಲ್ಲಿ ಅರ್ಪಿಸುತ್ತಿದ್ದರು. ಅವರಲ್ಲಿ ತನ್ನದೆಂಬುದೇನೂ ಉಳಿದಿರಲಿಲ್ಲ. 'ತಾನು' ಎನ್ನುವ ಸೊಲ್ಲನ್ನು ಸಹ ಅವರೆಂದು ಉಚ್ಚರಿಸುತ್ತಿರಲಿಲ್ಲ. ತಮ್ಮ ಬಗ್ಗೆ ಅವರು ಏನನ್ನಾದರೂ ಹೇಳಿಕೊಳ್ಳಬೇಕಾದರೆ, 'ನಾನು' ಎನ್ನದೆ 'ಇದು, ಈ ಮೂಳ' ಎಂದು ಹೇಳುತ್ತಿದ್ದರಂತೆ. ಈ ಅಂಶ ಅವರಲ್ಲಿ ಸಂಪೂರ್ಣವಾಗಿ ಅಳಿದ ಮಮಕಾರವನ್ನು ಎತ್ತಿ ತೋರಿಸುತ್ತದೆ.

ಮೇಲಿನ ವಚನಗವನ್ನು ಕಲಿಯಲು ಹೇಳಿ ಗುರುಗಳು ಸ್ನಾನಕ್ಕೆ ಹೋದರು. ಅವರು ಸ್ನಾನ, ಶಿವಪೂಜೆ, ಪ್ರಸಾದ ಮುಗಿಸಿ ಬರುವಷ್ಟರಲ್ಲಿ ಸಿದ್ಧಮ್ಮ ವಚನವನ್ನು ಬಾಯಿಪಾಠ ಮಾಡಿ ಅತ್ಯಂತ ಉತ್ಸಾಹದಿಂದಲೂ, ಭಕ್ತಿಯಿಂದಲೂ ಒಪ್ಪಿಸಿದಳು. ಆಗಲೇ ಪೂಜ್ಯರು 'ಲಿಂಗಮ್ಮ ಇನ್ನು ಈ ವಸ್ತು ನಮ್ಮದು; ಇದರ ಸಮಸ್ತ ಭಾರವೂ ನಮ್ಮದು. ಅದು ಎಲ್ಲಿಗೆ ಬಂದು ಸೇರಬೇಕಾಗಿತ್ತೋ ಅಲ್ಲಿಗೆ ಬಂದು ಸೇರೈತೆ, ಅದು ಏನಾಗಬೇಕೋ ಅದು ಆಗ್ತೈತೆ. ಅದಕ್ಕಾಘಿಯೇ ಅದು ಹುಟ್ಟಿಬಂದಂತೈತೆ, ನೀನೂ, ನಾನೂ ನಿಮಿತ್ತಮಾತ್ರ, ನೀನಿನ್ನು ಇದರ ಬಗ್ಗೆ

ಕಾಳಜಿ ಮಾಡಬೇಕು ಎಂದರು. ಈ ಮಾತನ್ನು ಕೇಳಿದ ಲಿಂಗಮ್ಮನ ಆನಂದಕ್ಕೆ ಪಾರವಿಲ್ಲದಾಯ್ತು. ಆನಂದಾಶ್ರುಗಳು ಆಕೆಯ ಕಣ್ಣಿನಿಂದ ಜಾರಿದವು. ತನ್ನ ಉದ್ದೇಶ ಸಫಲವಾದ ತೃಪ್ತಿಯಿಂದ ಮಗಳನ್ನು ಗುರು ಪಾದಕ್ಕೆ ಅರ್ಪಿಸಿ, ಗುರುವಿಗೆ ಅಡ್ಡಬಿದ್ದು ಹೋದಳು. ಅದೇ ತಾಯಿ–ಮಗಳ ಕೊನೆಯ ಭೆಟ್ಟಿ! ಮಗಳನ್ನು ಗುರುವಿನ ಮಗಳನ್ನಾಗಿ ಅರ್ಪಿಸಿದ ಲಿಂಗಮ್ಮ ಪುನಃ ಆಕೆಯೆಡೆಗೆ ಬರಲಿಲ್ಲ. ಮಗಳನ್ನೆಂದು ಕಾಣಲಿಲ್ಲ. ಗುರುವಿನ ಕರುಣೆಯಿಂದ ಯಮುನವ್ವ ಸಿದ್ಧಮ್ಮನೆನ್ನಿಸಿದಳು. ಗುರು ದೊಡ್ಡ ಬಸವಾರ್ಯರ ಕೃಪಾಕಟಾಕ್ಷದಿಂದ ಶರಣಮ್ಮನಾದಳು. ಗುರುಗಳ ಅಪ್ಪಣೆಯಂತೆ ಎಲ್ಲರೂ 'ಶರಣಮ್ಮ'ನೆಂದೇ ಕರೆಯತೊಡಗಿದರು. ಆಗ ಹುಡುಗಿಯ ವಯಸ್ಸು ಸುಮಾರು ಹದಿನಾಲ್ಕು ಇರಬೇಕು!

ಅಂದಿನಿಂದಲೇ ಗುರುಗಳು ಶರಣಮ್ಮನಿಗೆ ಶಿವಾನುಭವ ಬೋಧೆ ಪ್ರಾರಂಭಿಸಿದರು. ದಿನವೂ ಸಂಜೆಯವರೆಗೆ ಅಭ್ಯಾಸದಲ್ಲಿ ನಿರತಳಾಗಬೇಕೆಂದು ಅಪ್ಪಣೆ ಮಾಡಿದರು. ಈ ಗುರುಕರುಣೆ ಶರಣಮ್ಮನವರ ಶರಣ ಜೀವನಕ್ಕೆ ನಾಂದಿಯಾಯಿತು. ಇದು ಅವರ ಗುರಿಯ ಸಾಧನೆಗೆ ಮುಖ್ಯ ತಿರುವಾಯಿತು.

### ಸಾಧನೆಯ ಹಾದಿಯಲ್ಲಿ

ಗುರು ಗುಡದೂರ ಅಜ್ಜಾ ಅವರು ಶರಣಮ್ಮನವರಿಗೆ ಸಾಧನೆಯ ಮೊದಲ ಹಂತವಾಗಿ ಅಖಂಡೇಶ್ವರ ವಚನಗಳನ್ನು ಬೋಧಿಸಿದರು. ತಾಯಿಯವರು ಹುಟ್ಟಿನಿಂದ 'ಭವಿ' ಯಾಗಿದ್ದರಿಂದ ಅವರಿಗೆ ಲಿಂಗಧಾರಣ ಮಾಡುವಂತಿರಲಿಲ್ಲ. ಪ್ರಥಮ ಹಂತವಾಗಿ ಅಜ್ಜಾವರು "ಭಸ್ಮಲಿಂಗವನ್ನು" ಆಶೀರ್ವದಿಸಿ, ಆ ಲಿಂಗವನ್ನೇ ಪೂಜಿಸಲು ಆಣತಿ ಇತ್ತರು. "ಶರಣಮ್ಮ"ನವರು ಭಸ್ಮಲಿಂಗವನ್ನು ಇಷ್ಟಲಿಂಗದಂತೆಯೇ ಭಕ್ತಿಯಿಂದ ಒಂದು ವರ್ಷಕಾಲ ಪೂಜಿಸಿದರು. ಅಖಂಡೇಶ್ವರ ವಚನಗಳನ್ನು ಆಳವಾಗಿ ಮೂರುವರ್ಷಗಳ ಕಾಲ ಸತತವಾಗಿ ಅಭ್ಯಸಿಸಬೇಕೆಂದೂ, ಈ ಸಮಯದಲ್ಲಿ ಬೇರಾವ ಪುಸ್ತಕವನ್ನು "ಓದುವುದಿರಲಿ ಕಣ್ಣೆತ್ತಿ ಸಹ ನೋಡಬಾರದೆಂದೂ, ನಿಯಮ ಮೀರಿ" ಓದಿದರೆ ಪರ ಪುರುಷನನ್ನು ಮೋಹಿಸಿದಂತಹ ಪಾಪಕ್ಕೆ ಗುರುಯಾಗಬೇಕಾಗುತ್ತದೆಯೆಂದೂ ಕಟ್ಟಪ್ಪಣೆ ಮಾಡಿದರು. ತಾಯಿಯವರು ಗುರುಗಳ ಆಜ್ಞೆಯನ್ನು ಶಿರಸಾವಹಿಸಿ ಚಾಚೂ ತಪ್ಪದಂತೆ ಭಕ್ತಿ ಶ್ರದ್ಧೆಗಳಿಂದ ಪಾಲಿಸಿ ಅಖಂಡೇಶ್ವರ ವಚನಗಳ ಬಗ್ಗೆ ಆಳವಾದ ಜ್ಞಾನವನ್ನು, ಅನುಭವವನ್ನೂ ಪಡೆದರು. ಈ ಅಭ್ಯಾಸ ಶರಣಮ್ಮನವರಿಗೆ ಒಂದು ದಿವ್ಯವಾದ ತೇಜಸ್ಸನ್ನು ಆಳವಾದ ಜ್ಞಾನವನ್ನು ತಂದುಕೊಟ್ಟಿತು. "ತಾಯಿಯವರ ತನುವಿನಲ್ಲಿ ಗುರುತನವನ್ನೂ, ಮನದಲ್ಲಿ ಗುರುಕಳೆಯನ್ನೂ ತಂದುಕೊಟ್ಟಿತೆಂದು ಹೇಳಬಹುದಾದಂತಹ ಪರಿವರ್ತನೆ ಅವರ ವ್ಯಕ್ತಿತ್ವದಲ್ಲಿ ಕಾಣಿಸುತ್ತಿತ್ತು. ಅಖಂಡೇಶ್ವರ

ವಚನಗಳ ಮೂರು ವರ್ಷಗಳ ಅಭ್ಯಾಸದ ನಂತರ ಸರ್ಪಭೂಷಣರ ಕೈವಲ್ಯ ಗ್ರಂಥವನ್ನು, ನಿಜಗುಣ ಶಿವಯೋಗಿಗಳ ವಿವೇಕ ಚಿಂತಾಮಣಿಯನ್ನು ಅಭ್ಯಾಸ ಮಾಡಿ ಅರಗಿಸಿಕೊಂಡರು.

**ಗುರುವಿನ ಕಟ್ಟಪ್ಪಣೆ**

ಪೂಜ್ಯ ಗುಡದೂರ ಅಜ್ಜಾವರು ತಾಯಿಯವರಗೆ ಕಟ್ಟು ನಿಟ್ಟಾದ ನಿಯಮಗಳನ್ನು ಸೂಚಿಸಿದ್ದರು. ಮೂರು ವರ್ಷ ಹಂಚಿನಾಳದ ವಾಸ್ತವ್ಯದ ನಂತರ ಕಂಬಳಿಹಾಳಿಗೆ ಕರೆದುಕೋಂಡು ಬಂದು ಅಲ್ಲಿ ವಾಸ್ತವ್ಯಕ್ಕೆ ಏರ್ಪಾಟು ಮಾಡಿದರು. ಪ್ರಸಾದಕ್ಕಾಗಿ ಪ್ರತಿನಿತ್ಯವೂ ಭಕ್ತರ ಮನೆಗೆ ಹೋಗಿ ಅಮ್ಮಾ, ಅಮ್ಮಾ, ಅಮ್ಮಾ ಎಂದು ಮೂರು ಸಲ ಕರೆಯಬೇಕೆಂದೂ, ಪ್ರತಿಯೊಂದು ಮನೆಯಲ್ಲೂ ಅರ್ಧರೊಟ್ಟಿ ಮಾತ್ರ ತೆಗೆದುಕೊಂಡು ಹಾಗೆ ದೊರೆತ ಎರಡೂವರೆ ರೊಟ್ಟಿಯನ್ನು ಮಾತ್ರ ದಿನಕ್ಕೆ ಒಂದು ಬಾರಿ ಸೇವಿಸಬೇಕೆಂದು ತಿಳಿಸಿದರು. ಇದನ್ನು ಸಹ ತಾಯಿಯವರು ತಮ್ಮ ಸಾಧನೆಯ ಪೂರ್ತಿ ಅವಧಿಯಲ್ಲಿ ನಡೆಸಿದರು. ಮುಂದೆ ಕಂಬಳಿಹಾಳದ ಜನರ ಆರಾಧ್ಯ ದೇವತೆಯಾದ ಮೇಲೆ ಭಕ್ತರೆಲ್ಲಾ 'ತಾಯೀ ತಾವು ಈ ಭಿಕ್ಷೆಯ ಕಾಯಕವನ್ನು ಬಿಡಬೇಕು. ನಿಮ್ಮ ಮಕ್ಕಳಾದ ನಾವೇ ನಿಮಗೆ ಎಡೆತಂದುಕೊಡುತ್ತೇವೆ' ಎಂದು ಪ್ರೀತಿಯಿಂದ ಆಗ್ರಹದಿಂದ ಬೇಡಿಕೊಂಡಾಗ, ಗುರುವಿನ ಅಪ್ಪಣೆ ಪಡೆದು ಮಕ್ಕಳ ಮಮತೆಗೆ ಮಣಿದು ಭಕ್ತರ ತಂದುಕೊಟ್ಟ "ಎಡೆಯನ್ನು ಸ್ವೀಕರಿಸಲು ಪ್ರಾರಂಭಿಸಿದರು. ಗುರುಗಳು ತಾಯಿಯವರಿಗೆ ಮಾಡಿದ ಮತ್ತೊಂದು ಕಟ್ಟಪ್ಪಣೆ ಎಂದರೆ, ಕಂಬಳಿಹಾಳ-ಸಜ್ಜಲಗುಡ್ಡಗಳನ್ನು ಬಿಟ್ಟು ಮತ್ತೆಲ್ಲಿಯೂ ಹೋಗಬಾರದು. ಅದನ್ನು ತಮ್ಮ ತಪೋಭೂಮಿಯನ್ನಾಗಿ ಮಾಡಿಕೊಳ್ಳಬೇಕೆಂದು ಆಣತಿ ಇತ್ತಿದ್ದರು. ಬಹಳ ವರ್ಷಗಳ ಅನಂತರ ಬಾಗಿಲುಕೋಟೆಯಲ್ಲಿ ಸಹಸ್ರ ಗಣಾಧೀಶರ ಮಂಟಪ ಪೂಜೆ ನೆರವೇರಿಸಿದರು. ಆಗ ಕಿರೀಟ ಮಠದ ಮೃತ್ಯುಂಜಯ ಸ್ವಾಮಿಗಳು ತಾಯಿಯವರನ್ನು ಪೂಜಾ ಸಮಯದಲ್ಲಿ ಬಾಗಿಲುಕೋಟೆಗೆ ದಯಮಾಡಿಸಬೇಕೆಂದು ಪರಿಪರಿಯಿಂದ ಕೇಳಿದರು. ಆದರೆ ತಾಯಿಯವರು ಮುತ್ಯಾನ ಆಜ್ಞೆಯನ್ನು ಮೀರುವವರಲ್ಲ. ಆದರೆ ಸ್ವಾಮಿಗಳ ಮಮತೆಯನ್ನು ಆಹ್ವಾನವನ್ನು ಕಡೆಗಣಿಸಲು ಮನಸ್ಸು ಒಪ್ಪದು. "ಪೂಜಾದಿಂದ ಬಾಗಿಲು ಕೋಟೆಯಲ್ಲಿ ಇದರ ಆಯ್ತಿಲ್ಲೊ" ಎಂದು ಹೇಳಿ ಕಳಿಸಿ, ಆ ದಿನವಿಡೀ ಕಂಬಳಿ ಹಾಳದಲ್ಲೇ ಲಿಂಗಾರ್ಚನೆಗೆ ಕುಳಿತುಬಿಟ್ಟಿದ್ದರಂತೆ ! ಎಂದರೆ ಕಾಯಕವನ್ನು ಕಂಬಳಿಹಾಳದಲ್ಲಿಟ್ಟು, ತಾವು ಮಾನಸಿಕವಾಗಿ ಅಲ್ಲಿಗೆ ಹೋಗಿದ್ದರೆಂದು ಕಾಣಿಸುತ್ತದೆ. ಅಲ್ಲದೆ, ಯಾರೇ ಶ್ರೀಗಳು ಬಂದರೂ ಅವರಿಗೆ ದೂರದಿಂದಲೇ ನಮಸ್ಕರಿಸಬೇಕೆಂದೂ, ಅವರ ಪಾದ ನೋಡಬೇಕೆ ಹೊರತು ಮುಖವನ್ನೆಂದೂ

ನೋಡಬಾರದೆಂದು ವಿಧಿಸಿದ್ದರು. ಅಮ್ಮನವರು ನಿಯಮವನ್ನು ಎಷ್ಟರಮಟ್ಟಿಗೆ ಚಾಚೂ ತಪ್ಪದೆ ಪಾಸಿದ್ದರೆಂದರೆ ಸ್ವತಃ ಮಾರ್ಗದರ್ಶಕ ಆರಾಧ್ಯ ದೇವತೆಯಾಗಿದ್ದ ಗುಡದೂರ ಅಜ್ಜಾವರ ಮುಖವನ್ನೇ ಸಂಪೂರ್ಣವಾಗಿ ಕಣ್ಣು ತುಂಬಾ ನೋಡಿರಲಿಲ್ಲವಂತೆ!!

ತಾಯಿಯವರಿಗೆ ಹಣವನ್ನು ಕೈಯಲ್ಲಿ ಹಿಡಿಯಬಾರದೆಂದು ಗುರುಗಳು ಹೇಳಿದ್ದರು. ಅದು ಚೇಳು, ಹಾವಿನ ಸ್ವರೂಪ; ಅದರಿಂದ ಕೆಡಕು ಖಂಡಿತ. ಚೇಳು, ಹಾವುಗಳು ಮುಟ್ಟಿದಾಗ ಒಮ್ಮೆ ಕಡಿಯುವಂತೆ, ವಿಷಬಿಡುವಂತೆ, ಕಾಂಚನ ಎಂತಹ ಮನೋನಿಗ್ರಹ ಮಾಡಿದವರನ್ನೂ ಅಡ್ಡ ದಾರಿಗೆ ಎಳೆದು ಬಿಡುತ್ತದೆ. ಆದ್ದರಿಂದ ಹಣವನ್ನು ಎಂದಿಗೂ ಕೈಯಲ್ಲಿ ಹಿಡಿಯಲೇಬಾರದೆಂದು ಕಟ್ಟಪ್ಪಣೆ ಮಾಡಿದ್ದರು. ಹೀಗಾಗಿ ಯಾರಾದರೂ ಭಕ್ತರು ದುಡ್ಡು ಇಟ್ಟು ಹೋದರೆ, ತಾಯಿಯವರು ಅಲ್ಲಿ ಸೇವೆಯಲ್ಲಿಯುತ್ತಿದ್ದವರಿಗೆ ಕಣ್ಣೆತ್ತಿಯೂ ನೋಡದೆ 'ಅಲ್ಲಿ ಚೇಳು ಇದಾವ ನೋಡ್ರಪ್ಪಾ ಎನ್ನುತ್ತಿದ್ದರಂತೆ. ಆದರೆ ತಾಯಿಯವರ ದರ್ಶನಕ್ಕಾಗಿ ಬಂದ ಹುನಗುಂದದ ಬಸವಾರ್ಯರು ಈ ಹಣವನ್ನು ಭಕ್ತರು ಸತ್ಪಾತ್ರಕ್ಕಾಗಿ ಸಲ್ಲಿಸಲು ಕೊಟ್ಟಿರುತ್ತಾರೆ. ತಮ್ಮ ಕೃಪಾದೃಷ್ಟಿಯಿಂದ ಕಾಂಚನ ತನ್ನ ಚೇಷ್ಟೆಗಳನ್ನೆಲ್ಲ ಕಳೆದುಕೊಂಡು ಹಲ್ಲು ಮುರಿದ ಹಾವಿನಂತಾಗುತ್ತದೆ. ಆ ಹಣವನ್ನು ಗುರು-ಲಿಂಗ-ಜಂಗಮ ಸೇವೆಗೆ, ಕವಿ, ಗಮಕಿ, ಸಾಹಿತಿ, ಸಂಗೀತಗಾರ ಇವರ ಪ್ರೋತ್ಸಾಹಕ್ಕೆ ಆಶೀರ್ವದಿಸಿದರೆ ತಮಗೆ ಹಣದ ಬಾಧೆ ತಟ್ಟದು. ಜನತೆಗೆ ಕಲ್ಯಾಣವಾಗುತ್ತದೆ" ಎಂದು ಪರಿ ಪರಿಯಿಂದ ಬೇಡಿಕೊಂಡಾಗ ಹಣದ ಮೇಲೆ ತೀರ್ಥ ಪ್ರೋಕ್ಷಿಸಿ, ಅದರ ಮೋಹಕ ಶಕ್ತಿಯನ್ನು ಕಳೆದು ಸ್ವೀಕರಿಸುತ್ತಿದ್ದರಂತೆ. ಆದರೆ ಅವರ ಬಗ್ಗೆ ವ್ಯಾಮೋಹವನ್ನೆಂದೂ ಬೆಳೆಸಿಕೊಳ್ಳದೆ ಸತ್ಪಾತ್ರಕ್ಕೆ ಉಪಯೋಗಿಸಲು ಪ್ರಾರಂಭಿಸಿದರಂತೆ.

ತಾಯಿಯವರು ಒಮ್ಮೆ ಕಂಬಳಿಹಾಳದಿಂದ ಗುಡದೂರಿಗೆ ಹೋಗುವಾಗ ಮುದೇನೂರಿನಲ್ಲಿ ದೊಡ್ಡಾಟ ನಡೆದಿತ್ತು. ಅದನ್ನು ನೋಡಿದರು. ಮೊದಲಿಂದಲೂ ಚಿಕ್ಕ ಹುಡುಗಿಯಾಗಿದ್ದಾಗಲೂ ಆಟ-ನಾಟಕಗಳನ್ನು ನೋಡಿದವರಲ್ಲ. ಈ ಸಾಧನೆಯ ಸಮಯದಲ್ಲಿ ಸಹಜವಾಗಿ ಒಮ್ಮೆ ನೋಡಿಬಿಟ್ಟರು. ಈ ವಿಷಯ ತಿಳಿದ ಅಜ್ಜಾವರು ಇನ್ನೆಂದೂ ಹೀಗೆ ಮಡಬಾರದೆಂದು, ಆಟ ನಾಟಕಗಳು ಸನ್ಯಾಸಿಗಳಿಗೆ-ಶರಣರಿಗೆ ಅಲ್ಲವೆಂದೂ, ಲಿಂಗನಿಷ್ಠೆ, ಲಿಂಗಯ್ಯನೊಡನಾಡುವುದೇ ಶರಣರಿಗೆ ಮನರಂಜನೆಯಾಗಬೇಕೆಂದು ಬೋಧಿಸಿದರು. ಅವರು ಜೀವನದಲ್ಲಿ ನೋಡಿದ ನಾಟಕ ಅದೇ ಮೊದಲು ಅದೇ ಕೊನೆ! ತಾಯಿಯವರು ಸಾಧನೆ ಪ್ರಾರಂಭಿಸುತ್ತಿದ್ದಾಗ ಹರೆಯದಲ್ಲಿ ಕಾಲಿಡುತ್ತಿದ್ದರು. ಈ ಯೌವ್ವನ, ರೂಪ ಅವರ ಸಾಧನೆಗೆ

ತೊಡಕಾಗಬಾರದು, ಜೀವನದಲ್ಲಿ ಸಮಸ್ಯೆಗೆ ಒಳಗಾಗಿ ಸಾಧನೆಯ ಹಾದಿಯಲ್ಲಿ ಕಲ್ಲು-ಮುಳ್ಳುಗಳ ದಾರಿಯಲ್ಲಿ ಗುರಿಮುಟ್ಟುವುದು ತಡವಾಗಬಾರದೆಂದು ಅಜ್ಜಾವರು, ಅವರಿಗೆ ತಮ್ಮ ತಪಸ್ಸಿನ ಕೋಣೆಯಲ್ಲೇ ಹೆಚ್ಚು ಸಮಯ ಕಳೆಯುವಂತೆಯೂ, ಕಂಬಳಿಹಾಳ ಸಜ್ಜಲಗುಡ್ಡ ಮುಖ್ಯವಾಗಿಟ್ಟುಕೊಂಡು ಅನವಶ್ಯಕವಾಗಿ ಎಲ್ಲೂ ಹೋಗಬಾರದೆಂದೂ, ಆಜ್ಞಾಪಿಸಿದರು. ತಾಯಿಯವರು ಸಾಧನೆ ಸಂಪೂರ್ಣ ಮುಗಿಯುವರಿಗೆ ಹೆಚ್ಚಾಗಿ ತಮ್ಮ ಪೂಜಾ ಕೋಣೆಯಿಂದಲೇ ಹೊರಬರುತ್ತಿರಲಿಲ್ಲ. ಜನರಿಗೆ ದರ್ಶನ ಕೊಡುವುದನ್ನು, ಜನಸಂಪರ್ಕವನ್ನು ತಮಗೆ ನಾಲ್ವತ್ತು ನಾಲ್ವತ್ತೈದು ವರ್ಷಗಳಾದ ಮೇಲೆಯೇ ಪ್ರಾರಂಭಿಸಿದರು. ಅಷ್ಟರಲ್ಲಿ ರಾಗ, ದ್ವೇಷ, ಮೋಹ, ಮದ, ಮಾತ್ಸರ್ಯಗಳಿಂದ ತಾಯಿಯವರು ಮುಕ್ತರಾಗಿದ್ದರು. ಎಂತಹ ಸನ್ನಿವೇಶವೂ ಅದರನ್ನು ಯಾವುದೇ ರೀತಿಯಾಗಿಯೂ ವಿಚಲಿತವಾಗಿಡಲಾರದಂತಹ ಘಟ್ಟ ಮುಟ್ಟಿದ್ದರು. ಎಲ್ಲವನ್ನೂ ನಿರ್ವಿಕಾರ ಮನೋಭಾವದಿಂದ, ನಿಶ್ಚಲ ಹೃದಯದಿಂದ, ಹಗತ್ತಿನ ಶ್ರೇಯಸ್ಸನ್ನು ಬಯಸುವ ಹೃದಯ ವೈಶಾಲ್ಯದಿಂದ ಸ್ವೀಕರಿಸುವಂತಹ ದಿವ್ಯಶಕ್ತಿಯನ್ನು ಗಳಿಸಿಕೊಂಡಿದ್ದರು. ಅವರಲ್ಲಿ ಅಂಗಗುಣವಳಿದು ಲಿಂಗಗುಣಗಳು ತುಂಬಿದ್ದವು. ಆತ್ಮ ಪರಮಾತ್ಮವಾಗಿತ್ತು.

ಅಂದು ಗುರುಗಳು ಆದೇಶಿಸಿದ ಪ್ರತಿಯೊಂದು ಆಜ್ಞೆಯನ್ನು ಸ್ವಲ್ಪವೂ ಕುಂದಿಲ್ಲದಂತೆ ಅವರು ಜೀವನ ಪರ್ಯಂತ ಆಚರಿಸಿದರು. ಅವರು ಭಿಕ್ಷೆ ಮಾಡಿ ಪ್ರಸಾದ ತೆಗೆದುಕೊಳ್ಳಬೇಕೆಂಬುದನ್ನು ಭಕ್ತರಮನೆಯ ಪ್ರಸಾದವನ್ನೇ 'ಎಡೆಯ' ರೂಪದಲ್ಲಿ ತೆಗೆದುಕೊಳ್ಳಲು ಪ್ರಾರಂಭಿಸಿದರು. ಎಷ್ಟೋ ಜನ ಮನೆಗಳಲ್ಲಿ 'ಪಕ್ಕಾ ಮಡಿ' ಆಗಿರುವುದಿಲ್ಲ ಇನ್ನು ಮೇಲೆ ಆಶ್ರಮದಲ್ಲೇ ಮಡಿಯಿಂದ ಪ್ರಸಾದ ತಯಾರಿಸಬೇಕೆಂದಾಗ ತಾಯಿಯವರು 'ಭಕ್ತರ ಮನೆಯಲ್ಲಿ ಮಾಡಿದ ಪ್ರಸಾದ, ಮಕ್ಕಳು ರುಚಿನೋಡಿದರೂ ಅದು ಶಿವನ ಎಂಜಲು, ಗುಡದೂರಪ್ಪ ಈ ನೇಮ ಹೇಳಿ ಹೋಗ್ಯಾನ ಪಕ್ಕಾಮಡಿ ಆದೀತೂ- ಇಲ್ಲ ಅನ್ನೂದು ಅವಗ ಗೊತ್ತಿದ್ದು ಹೇಳ್ಯಾನ ಅಂದಾಗ ನಾನೇನೂ ಫರಕ ಮಾಡೋಕ ಬರೋದಿಲ್ಲ ನಮ್ಮಪ್ಪಗ ಕೊಟ್ಟ ವಚನ ಮುರಿಯಾಕ ಆಗೋದಿಲ್ಲ ಎಂದರಂತೆ. ಮುಂದೆ ಮುಪ್ಪಾದ ಮೇಲೂ ಬರೀ ಹಾಲು-ಹಣ್ಣು ತೆಗೆದುಕೊಳ್ಳುವ ಪ್ರಸಂಗ ಬಂದಾಗಲೂ ಮೊದಲು 'ಎಡೆ'ಯಾಗಿ ಬಂದ ಪ್ರಸಾದವನ್ನು ಒಂದು ತುತ್ತು ತೆಗೆದುಕೊಂಡು ನಂತರ. ಹಾಲು-ಹಣ್ಣು ಸ್ವೀಕರಿಸುತ್ತಿದ್ದರಂತೆ.

ಪೂಜ್ಯ ಗುರುಗಳು ತಾಯಿಯವರನ್ನು ಸೂಕ್ಷ್ಮವಾಗಿ ಅವಲೋಕಿಸುತ್ತಲೇ ಇದ್ದರು. ಸಾಧನೆಯಲ್ಲಿ ಅಡರ ತೀವ್ರಪ್ರಗತಿಯನ್ನು ಗಮನಿಸಿ ಒಳಗೊಳಗೇ ಆನಂದಿಸುತ್ತಿದ್ದರು. ಅನೇಕ ಶಾಸ್ತ್ರ, ಆಚಾರ, ವಿಚಾರಗಳನ್ನು ತಿಳಿಸಿದರು. ಅಷ್ಟೂ

ಸಾಲದೆಂದು ಆಗಿನ ಕಾಲದಲ್ಲಿ ಪ್ರಕಾಂಡ ಪಂಡಿತರೆನಿಸಿಕೊಂಡಿದ್ದ ಕಂದಗಲ್ಲ ಪರ್ವತಶಾಸ್ತ್ರಿಗಳ ಬಳಿಗೆ ಅದೇಅಮ್ಮನವರನ್ನು ಕಳಿಸಿಕೊಟ್ಟು ಶಾಸ್ತ್ರಾಭ್ಯಸವನ್ನು ಮಾಡಿಸಿದರು. ತಾಯವರಿಗೆ ಇಷ್ಟಲಿಂಗಧಾರಣ ಸಂಸ್ಕಾರವನ್ನು ಮಾಡಿಸಬೇಕೆಂದು ಗುರುಗಳಿಗೆ ಆಸೆ. ಆದರೆ ಆಗಿನ ಸಾಮಾಜಿಕ ಪರಿಸ್ಥಿತಿಯಲ್ಲಿ ಇದು ಸುಲಭದ ಮತಾಗಿರಲಿಲ್ಲ. ವೀರಶೈವ ಧರ್ಮದಲ್ಲಿ ಲಿಂಗಧಾರಣೆಯ ತತ್ತ್ವ ಅಡಗಿದ್ದರೂ, ಬಸವಾದಿ ಪ್ರಮಥರು ಹನ್ನೆರಡನೆಯ ಶತಮಾನದಲ್ಲಿ ಆಚರಣೆಗೆ ತಂದಿದ್ದರೂ, ಈ ಮಡಿವಂತಿಕೆಯ ಕಾಲದಲ್ಲಿ ಸಮಾಜವನ್ನು ಎದುರಿಸಿ, ಕಾರ್ಯರೂಪಕ್ಕೆ ತರುವುದು ಕಠಿಣವಾಗಿತ್ತು. ಲಿಂಗದೀಕ್ಷೆಯನ್ನು ಪಟ್ಟಾಧಿಕಾರಿಗಳಿಂದಲೇ ಮಾಡಿಸಬೇಕೆಂಬುದು ನಿಯಮ. ಆದರೆ ಹುಟ್ಟು ಭವಿಗೆ ಲಿಂಗದೀಕ್ಷೆ ಮಾಡಲು ಮುಂದೆ ಬರಲು ಯಾವ ಸ್ವಾಮಿಗಳೂ ಸಿದ್ಧರಿರಲಿಲ್ಲ. ಏಕೆಂದರೆ ಹಾಗೆ ಮಾಡಿದ್ದರೆ ಅಂತಹ ಸ್ವಾಮಿಗಳನ್ನು ಸಮಾಜ ಬಹಿಷ್ಕರಿಸುತ್ತಿತ್ತು. ಆದರೆ ಪೂಜ್ಯ ಗುಡದೂರ ಅಜ್ಜಾವರಿಗೆ ಶರಣಮ್ಮನವರಿಗೆ ಲಿಂಗದೀಕ್ಷೆ ಮಾಡಿಸದೆ ಸಮಾಧಾನವಾಗುವಂತಿರಲಿಲ್ಲ. ತಾಯಿಯವರು ತಮ್ಮ ಶಾಸ್ತ್ರಾಭ್ಯಾಸದಿಂದಲೂ ಮೇಲ್ಮಟ್ಟಕ್ಕೆ ಏರಿದ್ದರು. ಅಷ್ಟಾವರಣ, ಷಟ್‌ಸ್ಥಲ, ಪಂಚಾಚಾರಗಳು ಅದರಲ್ಲಿ ಮೈಗೂಡಿಹೋಗಿದ್ದವು. ಆದರೆ ಕ್ರಿಯಾನುಸಾರ ಲಿಂಗದೀಕ್ಷೆಯಾಗದೆ ಲಿಂಗಪ್ರಾಣಿಯಾಗಲು ಸಾಧ್ಯವಿಲ್ಲದುದರಿಂದ ತಾಯಿಗೆ ಲಿಂಗದೀಕ್ಷೆ ಕೊಡಿಸುವ ತನಕ ಗುರುಗಳಿಗೆ ನೆಮ್ಮದಿಯಾಗುವಂತಿರಲಿಲ್ಲ. ಹೇಗಾದರೂ ಮಾಡಿ ತಾಯಿಯವರಿಗೆ ಲಿಂಗದೀಕ್ಷೆ ಕೊಡಿಸಬೇಕೆಂದು ಸಂಕಲ್ಪಿಸಿದರು. ಅನೇಕ ಜಗದ್ಗುರುಗಳೂ ಸ್ವಾಮಿಗಳೂ, ಹರ-ಗುರುಚರಮೂರ್ತಿಗಳೂ ಗುಡದೂರ ಅಜ್ಜಾವರಿಗೆ ಬಹಿಷ್ಕಾರದ ಭಯವನ್ನು ಹಾಕಿದರೂ ಭಯಪಡದೆ ಪೂಜ್ಯರು ತಮ್ಮ ಸಂಕಲ್ಪವನ್ನು ನೆರವೇರಿಸಿಯೇ ಬಿಟ್ಟರು. ಯಾರಿಗೂ ಅಂಜಲಿಲ್ಲ, ಅಳುಕಲಿಲ್ಲ. ತಾವೇ ಮುಂದಾಗಿ ಶರಣಮ್ಮನವರಿಗೆ ಶಾಸ್ತ್ರೋಕ್ತವಾಗಿ ಕ್ರಿಯಾ ದೀಕ್ಷೆಯನ್ನು ಮಾಡಿ, ಮಂತ್ರೋಪದೇಶ ಮಾಡಿದರು. ಈ ನೆಪದಲ್ಲಿ ತಮ್ಮ ಸಮಸ್ತ ತಪೋಬಲವನ್ನು ತಾಯಿಯವರಿಗೆ ಧಾರೆಯೆರೆದರು. ಗುರು ದೊಡ್ಡ ಬಸವಾರಾಧ್ಯರು ಜಗತ್ತಿಗೆ ಸಂಸಾರಿಗಳಾಗಿದ್ದರೂ, ಅಂತರಂಗದಲ್ಲಿ ಅವರು ವಿರಕ್ತರಾಗಿದ್ದರು. ಸನ್ಯಾಸಿಗಳಿಗೂ ಮೀರಿದ ವಿರಕ್ತಿ ಅವರಲ್ಲಿತ್ತು. ಹಾಗಾಗಿ ಅವರು ಲಿಂಗದೀಕ್ಷೆ ಕೊಡಲು ಅತ್ಯಂತ ಸಮರ್ಥ ಗುರುಗಳಾಗಿದ್ದರು. ತಾಯಿಯವರು ತಾವು ಲಿಂಗವನ್ನು ಎದೆಯಮೇಲೆ ಕಟ್ಟಿಕೊಂಡರೆ ಉಳಿದವರೆಲ್ಲ ತನ್ನ ಗುರುಗಳಿಗೆ ತೊಂದರೆಯನ್ನುಂಟು ಮಾಡುವರೋ ಎಂದು, ಯಾರಿಗೂ ಕಾಣದಂತೆ ತಮ್ಮ ಜಡೆಯಲ್ಲಿ ಅಡಗಿಸಿಟ್ಟುಕೊಂಡಿದ್ದರು. ಗುರುಗಳೂ, ಇಷ್ಟಲಿಂಗವು ಎದೆಯಮೇಲೆಯೇ ಇರಬೇಕು. ಯಾವ ಪ್ರತಿಯೋಧ ಬಂದರೂ ತಾವು ಎದುರಿಸುತ್ತೇವೆಂದರೂ, ತಾಯಿಯವರು ಗುರುಗಳಿಗೆ ನಾನಾ ವಿಧವಾಗಿ ಹೇಳಿ, ಗೌಪ್ಯವಾಗಿ ಕೂದಲಲ್ಲಿ ಲಿಂಗವನ್ನು

ಇಟ್ಟುಕೊಳ್ಳಲು ಒಪ್ಪಿಗೆ ಪಡೆದರು. ಈ ವಿಷಯ ಪಂಡಿತ ಕಂದಗಲ್ಲ ಪರ್ವತಶಾಸ್ತ್ರಿಗಳಿಗೆ ತಿಳಿದು ಬಂದಿತು. ಆಗ 'ಈ ಚೊಕ್ಕ ಚಿನ್ನಕ್ಕೆ ಭವಿ' ಎನ್ನುವವರಿಗೆ ನಾನು ಉತ್ತರಿಸಬಲ್ಲೆ. ವಿರೋಧಿಸಿದವರಿಗೆ ಶಾಸ್ತ್ರದ ಆಧಾರ ಕೊಟ್ಟು ವಿವರಿಸಬಲ್ಲೆ. ಜನ್ಮದ ಬಲದಿಂದ ಶಿವಯೋಗದ ಬದುಕಿನಿಂದ ಚಿದ್ಘನ ರೂಪವಾಗಿದ್ದಾಳೆ. ಇಂಥವಳಿಗೆ ಲಿಂಗ ದೀಕ್ಷೆಯನ್ನು ಕೊಟ್ಟುದನ್ನು ಪ್ರಶ್ನಿಸುವ ಅಧಿಕಾರ ಯಾರಿಗೂ ಇಲ್ಲ. 'ವಾದಕ್ಕಿಳಿದವರನ್ನೂ ಸಮರ್ಥವಾಗಿ ಸೋಲಿಸಬಲ್ಲೆ' ಎಂದು ದೀಕ್ಷಾವಿಧಿಗೆ ಬೆಂಬಲವಾಗಿ ನಿಂತರು. ಅಂದಿನಿಂದ ತಾಯಿಯವರು ಎದೆಯ ಮೇಲೆ ಲಿಂಗಧರಿಸಲು ಪ್ರಾರಂಭಿಸಿದರು.

## ಲಿಂಗಪ್ರೇಮಿ ಶರಣಮ್ಮ

ಲಿಂಗದೀಕ್ಷೆಯಾದಮೇಲೆ ತಾಯಿಯವರು ಹೆಚ್ಚಾಗಿ ಕಂಬಳಿಹಾಳ ಸಜ್ಜಲಗುಡ್ಡದಲ್ಲಿಯೇ ಇರಹತ್ತಿದರು. ಮೊದಲು ಗುರುಗಳೊಡನೆ ಹಂಚಿನಹಾಳ, ಗುಡದೂರು, ಸಾಸ್ವಿಹಾಳ, ನಾಗರಹಾಳಗಳಿಗೂ ಹೋಗಿ ವಾಸ್ತವ್ಯ ಮಾಡುತ್ತಿದ್ದರು. ಮುಂದೆ ಗುರುಗಳಾಣತಿಯಂತೆ ಕಂಬಳಿಹಾಳ-ಸಜ್ಜಲಗುಡ್ಡಗಳಲ್ಲಯೇ ಇರುತ್ತಿದ್ದರು. ಗುಡದೂರಿಗೆ ಮಾತ್ರ ಪ್ರತಿವರ್ಷವೂ ಶಿವರಾತ್ರಿಯ ದಿನ ದಯಮಾಡಿಸಿ ಅಲ್ಲಿ ಗುಡದೂರ ಅಜ್ಜಾವರ ಕರ್ತೃಗದ್ದುಗೆಯ ದರ್ಶನ ಪಡೆಯುತ್ತಿದ್ದರು. ಅಲ್ಲದೆ ಜಂಗಮರಾಧನೆಯನ್ನು ಮಾಡಿಸುತ್ತಿದ್ದರು ಅಜ್ಜಾವರು ಲಿಂಗೈಕ್ಯರಾಗುವ ಮುನ್ನ ತಾಯಿಯವರಿಗೆ ಗುಡದೂರಲ್ಲಿ ಐದು ಜನ ಜಂಗಮರಿಗೆ ಆರಾಧನೆ ಮಾಡಿಸಬೇಕೆಂದು ಅಪ್ಪಣೆ ಮಾಡಿದರು. ಆರಾಧನೆಯನ್ನು ತಾಯಿಯವರು ಹೇಗೆ ಮಾಡಬೇಕು? ತಮಗೆ ಬೇಕಾದ ಪ್ರಸಾದವನ್ನೇ ಭಿಕ್ಷೆ ಬೇಡಿ ಪಡೆಯಬೇಕು. ಜಂಗಮಾರಾಧನೆಗೆ ಹಣ ಎಲ್ಲಿಂದ ತರುವುದು, ಅಜ್ಜಾವರನ್ನೇ 'ಯಪ್ಪಾ' ಜಂಗಮಾರಾಧನೆಯನ್ನು ಮಾಡಲು ಅಪ್ಪಣೆ ಕೊಡಿಸಿದ್ದೀರಿ. ನನ್ನಲ್ಲಿ ಏನಿದೆ? ನಾನು ಯಾವುದರಲ್ಲಿ ಮಾಡಲಿ? ಹೇಗೆ ಮಾಡಲಿ' ಎಂದರಂತೆ. 'ಅಮ್ಮಾ ಐದು ಜನರಲ್ಲಿ, ಜಂಗಮಾರಾಧನೆಗೆಂದು ಹೇಳಿ ಭಿಕ್ಷೆಕೇಳು. ಬಂದ ಭಿಕ್ಷೆಯಿಂದ ಮಾಡು' ಎಂದು ಪೂಜ್ಯರು ಅಪ್ಪಣೆ ಕೊಡಿಸಿದರಂತೆ. ಅದರಂತೆ ಐದು ಮನೆಯ ಭಿಕ್ಷೆ ಎತ್ತಿ ಅದನ್ನು ತಲೆಯ ಮೇಲೆ ಹೊತ್ತು ಕೊಂಡು ಇಪ್ಪತ್ತೈದು ಮೈಲು ದೂರದ ಗುಡದೂರಿಗೆ ಕಾಲ್ನಡಿಗೆಯಲ್ಲಿ ಹೋಗಿ ಆರಾಧನೆ ಮಾಡಿ ಬಂದರಂತೆ. ಅಂದಿನಿಂದ ಪ್ರಾರಂಭವಾದ ಜಂಗಮಾರಾಧನೆ ಪ್ರತಿವರ್ಷವೂ ನಡೆಯುತ್ತಾ ಬಂದಿದೆ. ಆದರೆ ಮರುವರ್ಷದಿಂದ ಭಕ್ತನೊಬ್ಬನು ತಾಯಿಯವರನ್ನು ಚಕ್ಕಡಿಯಲ್ಲಿ ಕೂಡಿಸಿಕೊಂಡು ಕರೆದುಕೊಂಡುಹೋಗಲು ಪ್ರಾರಂಭಿಸಿದನು. ಐದು ಜನ ಜಂಗಮರಿಂದ ಪ್ರಾರಂಭವಾದ ಆರಾಧನೆ ಈಗ ಭಕ್ತಾದಿಗಳ ನೆರವಿನಿಂದ ಸಹಸ್ರಾರು ಜನರಿಗೆ ಪ್ರಸಾದ ವಿನಿಯೋಗವಾಗುತ್ತದೆ. ಅಜ್ಜಾವರ ಜಾತ್ರೆಯೇ ಎನ್ನಬೇಕೋ ತಾಯಿಯವರ ಪ್ರಭಾವವೆನ್ನಬೇಕೋ ಭಕ್ತರೇ ನಿರ್ಧರಿಸಬೇಕು.

## ಮಹಾತ್ಮರ ಕರುಣೆಯಲ್ಲಿ

ಆಗಿನ ಕಾಲದಲ್ಲಿ ಲಿಂ. ಹಾಲಕೆರೆ ಅನ್ನದಾನ ಮಹಾಸ್ವಾಮಿಗಳು ಮಹಾ ತಪಸ್ವಿಗಳಾಗಿದ್ದರು. ಅವರ ದರ್ಶನದಿಂದ ತಮ್ಮ ಜನ್ಮ ಪುನೀತವಾಗುವುದೆಂದು ಜನ ಭಾವಿಸುವಷ್ಟು ಮಹಿಮಾನ್ವಿತರಾಗಿದ್ದರು. ತಾಯಿಯವರೂ ಅವರ ಬಗ್ಗೆ ಬಹಳಷ್ಟು ಕೇಳಿದ್ದರು. ಅವರ ದರ್ಶನದ ಆಸೆ ಬಹಳಿತ್ತು. ಒಮ್ಮೆ ಹಾಲಕೆರೆ ಶ್ರೀಗಳು ಪಕ್ಕದ ನಾಗರಹಾಳಿಗೆ ಬರುವ ವಿಚಾರ ತಿಳಿದು ದರ್ಶನಕ್ಕಾಗಿ ತಾಯಿಯವರು ಅಲ್ಲಿಗೆ ಹೋಗಿ ಶ್ರೀಗಳವರಿಗೂ ಸಹ ಯಾವುದೋ ಒಂದು ಅವ್ಯಕ್ತ ಶಕ್ತಿ ತಮ್ಮನ್ನು ಅವರತ್ತ ಎಳೆದಂತೆ ಅನ್ನಿಸುತ್ತಿತ್ತು. ನಾಗರಹಾಳದ ಕಡೆಗೆ ಹೋಗಬೇಕೆನ್ನಿಸುತ್ತಿತ್ತು. ಏಕೆ ಎಂದು ಅವರಿಗೇ ಗೊತ್ತಿರಲಿಲ್ಲ. ಆಗ ನಂದವಾಡಗಿಯಿಂದ ಬಂದ ಭಕ್ತನೊಬ್ಬ ತಾಯಿಯವರು ಶ್ರೀಗಳವರಲ್ಲಿ ಅವರಿಟ್ಟಿರುವ ಭಕ್ತಿಯನ್ನು ತಿಳಿಸಿ, ಅವರ ದರ್ಶನಕ್ಕಾಗಿ ಅವರಿಗಿರುವ ಹಂಬಲವನ್ನು ಬಿನ್ನವಿಸಿದನಂತೆ. ಆ ತಾಯಿಯ ಇಚ್ಛೆಯೇ ನಮ್ಮನ್ನು ಆ ಕಡೆಗೆ ಎಳೆಯುತ್ತಿದೆ. 'ನಾನೇ ತಾಯಿಯವರ ದರ್ಶನಕ್ಕೆ ಬರುತ್ತೇವೆ' ಎಂದು ಅಪ್ಪಣೆಕೊಡಿಸಿ ಕಂಬಳಿಹಾಳಕ್ಕೆ ದಯಮಾಡಿಸಿದರಂತೆ. ಶ್ರೀಗಳದು ಎಂತಹ ಮಹಾ ಕರುಣೆ! ತಾವು ಒಂದು ದರ್ಶನಕೊಡುತ್ತೇವೆನ್ನಲಿಲ್ಲ. ಆಶೀರ್ವಾದ ಮಾಡುತ್ತೇವೆನ್ನಲಿಲ್ಲ. ತಾಯಿಯ ದರ್ಶನಕ್ಕೆ ತಾವೇ ಬರುತ್ತೇವೆ ಎಂದು ಹೇಳಿದ್ದರು. ಮಹಾ ತಪಸ್ವಿಗಳಾದ ಹಾಲಕೆರೆ ಶ್ರೀಗಳಂತವರೂ ಸಹ ತಾಯಿಯವರ ದರ್ಶನಕ್ಕೆ ಬರುತ್ತೇವೆ ಎಂದು ಹೇಳಿದರೆ ತಾಯಿಯವರ ಹಿರಿತನದ ಅರಿವಾಗುತ್ತದೆ. ತಾವೇ ಅಂತಹ ಘನಮಹಿಮಾವಂತರಾಗಿ ತಮ್ಮನ್ನು ಕಿರಿದು ಎಂದು ತಿಳಿದು ತಾಯಿಯವರನ್ನು ತಮಗಿಂತ ಹಿರಿಯ ಸ್ಥಾನದಲ್ಲಿಟ್ಟ ಶ್ರೀಗಳವರನ್ನು ದಿವ್ಯಭಾವ ಅದೆಂಥದು. ಇಲ್ಲಿ ಇಬ್ಬರೂ ಮಹೋನ್ನತ ವ್ಯಕ್ತಿತ್ವ ಪಡೆದವರು ಎಂಬ ಅಂಶ ಎದ್ದು ಕಾಣುತ್ತದೆ. 'ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ' ಎಂಬ ಬಸವವಾಣಿಯ ಆಚರಣೆಗೆ ಇದೊಂದು ವಿಶೇಷ ನಿದರ್ಶನ.

ಮುಂದೆ ಹಾಲಕೆರೆ ಶ್ರೀಗಳು ತಾಯಿಯವರಿಗೆ ಗುಡದೂರ ಅಜ್ಜಾ ಅವರ ಸ್ಥಾನದಲ್ಲಿ ನಿಂತು ಬೆಂಬಲಕೊಟ್ಟರು. ಅಜ್ಜಾ ಅವರು ಲಿಂಗೈಕ್ಯರಾದ ನಂತರ ಪುನಃ ತಾಯಿಯವರ ಲಿಂಗದೀಕ್ಷಾ ಪ್ರಶ್ನೆ ಉದ್ಭವಿಸಿತು. ಅನೇಕರು ತಾಯಿಯವರಿಗೆ ಭಯ ಬುದ್ಧಿ ಪಟ್ಟಾಧಿಕಾರಿಗಳಿಂದಲೇ ಲಿಂಗ ದೀಕ್ಷೆಯಾಗಬೇಕೆಂದು ಪಟ್ಟುಹಿಡಿದರು. ಆದರೆ, 'ಲಿಂಗ ಧರಿಸುವುದು ಒಂದೇ ಸಲ' ಗುರು ಮಂತ್ರೋಪದೇಶವಾಗುವುದು ಒಂದೇ ಸಲ. ದೊಡ್ಡ ಬಸವಾರ್ಯರು ಲಿಂಗಯ್ಯನಿಗೆ ತಮ್ಮನಾಗಲೇ ಅರ್ಪಿಸಿದ್ದಾರೆ. ಒಮ್ಮೆ ಅರ್ಪಿಸಿಕೊಂಡ ಮೇಲೆ ಪುನಃ ಅರ್ಪಿಸಿಕೊಳ್ಳುವುದು ಅರ್ಥವಿಲ್ಲದ ಮಾತು

ಎಂಬುದು ತಾಯಿಯವರ ನಿಲುವು. ಅದಕ್ಕೆ ಅವರು ಬದ್ಧರಾಗಿದ್ದರು. 'ಯಾರೇ ಎಷ್ಟು ಕಿರುಕುಳ ಕೊಟ್ಟರೂ ಅವರು ತಮ್ಮ ನಿಲುವನ್ನು ಬದಲಾಯಿಸಲು ಸಿದ್ಧರಿರಲಿಲ್ಲ. ದೀಕ್ಷೆಯ ವಿಷಯದ ಭಿನ್ನಾಭಿಪ್ರಾಯಗಳು ಹಾಲಕೆರೆಯ ಶ್ರೀಗಳವರ ಕಿವಿಗೆ ಬಿದ್ದು ಅವರು ತಾಯಿಯವರ ಬೆಂಬಲಕ್ಕೆ ನಿಂತರು. ಶರಣಮ್ಮನವರಿಗೆ 'ನೀನು ಪರಿಪೂರ್ಣಳಿದ್ದಿ. ನಿನಗೆ ಯಾವ ಗುರುವಿನ ಮಾರ್ಗದರ್ಶನದ ಅವಶ್ಯಕತೆಯೂ ಈಗ ಇಲ್ಲ. ನೀನೇ ಗುರುರೂಪವಾಗಿದ್ದಿ. ಗುರು ಕೊಟ್ಟ ಇಷ್ಟ ಲಿಂಗವೇ ನಿನ್ನ ಮಾರ್ಗದರ್ಶನಕ್ಕಿದೆ. ನಿನಗೆ ಯಾರ ಭಯವೂ ಬೇಡ. ಯಾರಾದರೂ ಆ ಬಗ್ಗೆ ಪ್ರಶ್ನಿಸಿದರೆ ನಾನು ಸಮರ್ಪಕ ಉತ್ತರ ಕೊಡುತ್ತೇನೆ' ಎಂದರಂತೆ. ಹಾಲಕೆರೆ ಶ್ರೀಗಳ ಈ ನಿಲುವು ಎದೆಗಾರಿಕೆ ಯಾರಲ್ಲೂ ಇರಲಿಲ್ಲ. ಉಂಟಾಗಿದ್ದ ಒಡಕು ಧ್ವನಿಗಳೂ ಅಲ್ಲಲ್ಲೇ ಅಡಗಿ ಹೋದವು. ಮತ್ತೆ ಈ ಪ್ರಶ್ನೆ ಏಳಲೇ ಇಲ್ಲ. ಶರಣಮ್ಮ ಲಿಂಗಭಕ್ತಳಾಗಿಯೇ ಬಾಳಿ, ಷಟ್‌ಸ್ಥಲ ಸಾಧನೆಗೈದು, ಪರಮ ಪಾವನೆಯಾಗಿ ಬಾಳಿದರು.

### ಬಂಥನಾಳ ಶ್ರೀಗಳ ಗುರುಕರುಣೆ

ತಾಯಿಯವರ ದಿವ್ಯ ದೃಷ್ಟಿ ಕೂರ್ಮನ ಶಿಶುವಿನ ಸ್ನೇಹದಂತೆ (ತಾಯಿ– ಮಕ್ಕಳ ಸಂಬಂಧ, ಗುರು– ಶಿಷ್ಯರ ಸಂಬಂಧ) ಮಹತ್ತರವಾಗಿತ್ತು. ಒಮ್ಮೆ ಬಂಥನಾಳ ಶ್ರೀಗಳು ಬಾಗಿಲುಕೋಟೆಗೆ ಶ್ರಾವಣಮಾಸದಲ್ಲಿ ಪುರಾಣ ಪ್ರವಚನಕ್ಕಾಗಿ ದಯ ಮಾಡಿಸಿದ್ದರು. ತಾಯಿಯವರಿಗೆ ಅವರ ಪಾದದರ್ಶನ ಮಾಡಬೇಕೆಂದು ಉತ್ಕಟೇಚ್ಛೆಯಾಯಿತು. ನಾಗರಾಳದ ಭಕ್ತರೊಬ್ಬರನ್ನು ಕರೆಯಿಸಿಕೊಂಡು ಬಂಥನಾಳ ಶ್ರೀಗಳನ್ನು ತಮ್ಮ ಆಶ್ರಮಕ್ಕೆ ಕರೆದುಕೊಂಡು ಬರಲು ಹೇಳಿದರು. ಆ ಭಕ್ತರಿಗೆ ಏನು ಮಾಡಬೇಕೋ ತೋರಲಿಲ್ಲ. ಆಗಿನ ಕಾಲದಲ್ಲಿ ಈಗಿನಂತೆ ವಾಹನ ಸೌಕರ್ಯಗಳಿರಲಿಲ್ಲ. ಶ್ರೀಗಳನ್ನು ಕರೆದುಕೊಂಡು ಬಂದರೆ ಅಂದೇ ಸಂಜೆ ಪ್ರವಚನದ ಹೊತ್ತಿನೊಳಗಾಗಿ ವಾಪಸ್ಸು ಅವರನ್ನು ದೂರದ ಬಾಗಿಲುಕೋಟೆಗೆ ಮುಟ್ಟಿಸಬೇಕಿತ್ತು. ಒಂದೇ ಹಗಲಿನಲ್ಲಿ ಕರೆದುಕೊಂಡು ಬಂದು ಪುನಃ ಕಳಿಸಿಕೊಡುವುದು ಕಷ್ಟಸಾಧ್ಯವಾಗಿತ್ತು. ಶ್ರೀಗಳೂ ಸಹ ಇಂತಹ ಪರಿಸ್ಥಿತಿಯಲ್ಲಿ ದಯಮಡಿಸುತ್ತಾರೋ ಇಲ್ಲವೋ ಎಂಬ ಸಂಶಯವೂ ಇತ್ತು. ಆದುದರಿಂದ ಆ ಭಕ್ತರು ಶ್ರಾವಣಮಾಸದ ಪ್ರವಚನ ಮುಗಿದ ಮೇಲೆ ಕರೆದುಕೊಂಡು ಬರಲು ತಾಯಿಯವರನ್ನು ಒಪ್ಪಿಸಲು ಪ್ರಯತ್ನಿಸಿದರು. ಆದರೆ ತಾಯಿಯವರು. 'ಅಪ್ಪನ ಪಾದದರ್ಶನ ಈಗಲೆ ಪಡೆಯಬೇಕೆಂದು ಬಿಟ್ಟರು.' ಆ ಪ್ರಾಂತದಲ್ಲಿ ತಾಯಿಯವರ ಮಾತನ್ನು ಮೀರುವ ಧೈರ್ಯ ಯಾರಿಗೂ ಇರಲಿಲ್ಲ. ನಿರ್ವಾಹವಿಲ್ಲದೆ ಆ ಭಕ್ತರು ಬಾಗಿಲುಕೋಟೆಗೆ ಹೋಗಬೇಕೆಂದು ಹುನಗುಂದಕ್ಕೆ ಹೋದರು. ಅಲ್ಲಿ ಮಠ ಮಾಸ್ತರರಲ್ಲಿ ಈ

ಸಂಗತಿ ತಿಳಿಸಬೇಕೆಂದು ಹೋದರೆ, ಅಲ್ಲಿಗೆ ಬಂಥನಾಳ ಶ್ರೀಗಳು ದಯ ಮಾಡಿಸಿದ್ದರು. ಅವರು 'ಇಲ್ಲಿಗೆ ಸಮೀಪದ ಸಜ್ಜಲಗುಡ್ಡದಲ್ಲಿ ಯಾರೋ ಶರಣರು ಇದ್ದಾರಂತಪ್ಪ ಅವರ ದರ್ಶನ ಮಾಡಬೇಕು ಎಂದು ಬಂದಿದ್ದೇನೆ' ಎಂದರಂತೆ. ಆ ಭಕ್ತರಿಗೆ ಎಲ್ಲಿಲ್ಲದ ಆನಂದವಾಯ್ತು. ಶ್ರೀಗಳ ಈ ಇಚ್ಛೆಯನ್ನು ದಿವ್ಯದೃಷ್ಟಿಯಿಂದ ಮನಗಂಡ ತಾಯಿಯವರು ತಾವೇ ಅವರ ದರ್ಶನ ಮಾಡಬೇಕೆಂದು ಹೇಳಿ ಕಳುಹಿಸಿದ್ದರು. 'ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ' ಎಂಬ ಶರಣ ತತ್ತ್ವವನ್ನು ಉಭಯ ಮಹಿಮಾನ್ವಿತರೂ ಆಚರಿಸಿ ತೋರಿಸಿದುದಕ್ಕೆ ಇದು ದ್ವಿತೀಯ ನಿದರ್ಶನ.

**ಹುಬ್ಬಳ್ಳಿ ಮೂರುಸಾವಿರ ಮಠದ ಶ್ರೀ ಜಗದ್ಗುರುಗಳಲ್ಲಿ ಅಪಾರ ಶ್ರದ್ಧೆ**

ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು ಮೂರುಸಾವಿರ ಮಠ ಹುಬ್ಬಳ್ಳಿ ಅವರ ಮೇಲೆ ಅಮ್ಮನವರ ಮಮತೆ ಅಪಾರವಿತ್ತು. ಹುಬ್ಬಳ್ಳಿ ಮೂರುಸಾವಿರ ಮಠದ ಶ್ರೀ ಜಗದ್ಗುರುಗಳು ಇಲಕಲ್ಲ ವಿಜಯ ಮಹಾಂತೇಶ್ವರ ಸಂಸ್ಥಾನಮಠಧ ಉತ್ತರಾಧಿಕಾರಿಯಾಗಿದ್ದ ಕಾಲದಿಂದಲೂ, ಅಮ್ಮನವರ ಒಡನಾಟ ಇದ್ದುದು ಕೊನೆಯವರೆಗೂ ಬೆಳೆದುಬಂದಿತ್ತು.

ಪೂಜ್ಯ ಶ್ರೀ ಜಗದ್ಗುರುಗಳು ಪ್ರಪ್ರಥಮವಾಗಿ ಜಾಗತಿಕ ಶಾಂತಿ ಹಾಗೂ ಧರ್ಮ ಸಮ್ಮೇಳನದಲ್ಲಿ ಭಾರತದ ಪ್ರತಿನಿಧಿಯಾಗಿ ಜಪಾನ ಹಾಗೂ ಯುರೋಪ ರಾಷ್ಟ್ರಗಳ ಸಂಚಾರವನ್ನು ಕೈಕೊಳ್ಳುವ ಪೂರ್ವದಲ್ಲಿ ಅಮ್ಮನವರು ಪೂಜ್ಯ ಜಗದ್ಗುರುಗಳನ್ನು ತಮ್ಮಲ್ಲಿಗೆ ಕರೆಯಿಸಿಕೊಂಡು ಅಪಾರ ಅಭಿಮಾನದಿಂದ, "ಯಪಾ ತಾವು ಬರುವವರೆಗೆ ನಾನು ತಮ್ಮ ಸುಖ ಪ್ರಯಾಣಕ್ಕಾಗಿ ಲಿಂಗಯ್ಯನ ಮೇಲೆ ಪತ್ರಿ ಧರಿಸುತ್ತ ನಿಮ್ಮ ಕಾರ್ಯವು ಯಶಸ್ವಿಯಾಗಲೆಂದು ಪೂಜೆ ಕೈಕೊಳ್ಳುತ್ತೇನ್ರೆಪಾ, ಅಪ್ಪನ ಬೆಳಕು ಜಗತ್ತುಂಬ ಹರಡಲ್ರೆಪಾ, ಯಪಾ ನೀವೂ ಆಕಾಶದ ಮೇಲೆ ಹಾರಾಡಿ ಬಂದ ಮ್ಯಾಲೆ ನಮಗ ದರ್ಶನ ಕೊಡಬೇಕ್ರಪಾ, ನೀವು ಹೋಗಿ ತಿರುಗಿ ಬಂದ ಮ್ಯಾಲೆ ನಾನು ಕೊಟ್ಟ ಈ ಎರಡು ಉತ್ತತ್ತಿ ನನಗೆ ಕೊಟ್ಟು ಆಶೀರ್ವಾದ ಮಾಡಬೇಕ್ರಪಾ ತಮಗೆ ಏನೂ ಆಗುದಿಲ್ರಪಾ, ಗುರುಸಿದ್ಧೇಶ್ವರ ವಿಜಯ ಮಹಾಂತೇಶ ಕುಮಾರೇಶ ನಿಮ್ಮನ್ನು ಕಾಯ್ತಾನ್ರಪಾ, ಈ ಕೂಸು, ಈಗ ಜಗದ್ಗುರುವೆ ಆಗ್ಯಾರ್ರಪಾ, ಬೆಳಕಾಗಲ್ರೆಪಾ, ಹೃದಯ ತುಂಬಿ ಬಂದ ಈ ಮಾತುಗಳೊಂದಿಗೆ ಪೂಜ್ಯ ಜಗದ್ಗುರುಗಳ ಶ್ರೀಪಾದಕ್ಕೆ ಆರತಿ ಬೆಳಗಿ, ಹರ್ಷಚಿತ್ತರಾಗಿ ಹಾಡಿ, ಹರಿಸಿ ಕಳಿಸಿದ ಈ ಘಟನೆಯನ್ನು ಪೂಜ್ಯ ಶ್ರೀ ಜಗದ್ಗುರುಗಳು ಸ್ಮರಿಸುತ್ತಿರುತ್ತಾರೆ.

ತಂದೆ-ತಾಯಿಗಳನ್ನು ಆನೆಯ ವಯಸ್ಸಿನ ಬಾಲ್ಯದಲ್ಲಿಯೇ ಕಳೆದುಕೊಂಡ ಪೂಜ್ಯ ಶ್ರೀ ಜಗದ್ಗುರುಗಳು ಅಮ್ಮನವರನ್ನು ತಾಯಿಯೋಪಾದಿಯಲ್ಲಿ ಈಗಲೂ ಕಾಣುತ್ತಿರುವದು ಅವರಿಬ್ಬರ ಅನ್ಯೋನ್ಯವಾದ ಧಾರ್ಮಿಕ ಸಂಬಂಧಕ್ಕೆ ಇದು ಸಾಕ್ಷಿಯಾಗಿದೆ.

ಶ್ರೀ ಜಗದ್ಗುರುಗಳು ವಿದೇಶ ಪ್ರವಾಸವನ್ನು ಯಶಸ್ವಿಗೊಳಿಸಿ, ಮರಳಿ ಭಾರತಕ್ಕೆ ಆಗಮಿಸಿದ ನಂತರ, ಅವರ ಇಚ್ಛೆಯಂತೆ, ಅವರು ನೀಡಿದ ಉತ್ತತ್ತಿಗಳನ್ನು, ಸಜ್ಜಲಗುಡ್ಡಕ್ಕೆ ದಯಮಾಡಿಸಿ, ಕೊಟ್ಟ ನಂತರ ಅಮ್ಮವರ ಆನಂದಕ್ಕೆ ಎಣೆಯೇ ಇಲ್ಲದಂತಾಗಿತ್ತು. ತಾಯಿ ಮಕ್ಕಳ ವಾತ್ಸಲ್ಯದಂತೆ ಆ ದೃಶ್ಯ ಕಂಡುಬರುವಂತಿತ್ತು. ಶರಣಮ್ಮನವರು ಶ್ರೀ ಜಗದ್ಗುರುಗಳವರ ಸಾಮಾಜಿಕ ಹಾಗೂ ಧಾರ್ಮಿಕ, ಶೈಕ್ಷಣಿಕ ಕಾರ್ಯವು ಅಡೆತಡೆಯಿಲ್ಲದೆ ಬೆಳೆದು ಬೆಳಗಲೆಂದು ಚಿಂತಿಸುತ್ತಿದ್ದರಲ್ಲದೆ, ದೇವರಲ್ಲಿ ಪ್ರಾರ್ಥನೆ ಮಾಡುತ್ತಿದ್ದರು ಅವರ ಇಚ್ಛಾಶಕ್ತಿ ಅಪೂರ್ವವಾಗಿತ್ತು.

## ಭಕ್ತರ ಕಾಮಧೇನು

ಹೀಗೆ ತಾಯಿಯವರು ಕಠಿಣವಾದ ವ್ರತ, ತಪಗಳಿಂದ, ಭಕ್ತ ಪೂಜೆಗಳಿಂದ, ಶುದ್ಧಾಚರಣೆಗಳಿಂದ ಇಚ್ಛಾಶಕ್ತಿಯನ್ನು ವಾಕ್ಸಿದ್ಧಿಯನ್ನು ದಿವ್ಯದೃಷ್ಟಿಯನ್ನು ಪಡೆದಿದ್ದರು. ಆದರೆ ಅವರೆಂದೂ ಇಂತಹ ಸಾಧನೆಯನ್ನು ಮಾಡಿಕೊಂಡಿದ್ದೇವೆಂಬಂತೆ ಯಾರಿಗೂ ತೋರಿಸಿಕೊಳ್ಳುತ್ತಿರಲಿಲ್ಲ. ಸಾಧನೆಯ ಮಾರ್ಗದಲ್ಲಿ ಅಮ್ಮಾವರು ಬಹು ಕಠಿಣ ರೀತಿಯ ಬದುಕನ್ನು ಬದುಕಿದ್ದಾರೆ. ಸಾಧನೆ ಹಂತದಲ್ಲಿ ಹೊರಜಗತ್ತಿಗೆ ಅವರು ಬರಲೆ ಇಲ್ಲ. ಸದಾ ತಮ್ಮ ಲಿಂಗಾನುಷ್ಠಾನದ ಕೋಣೆಯಲ್ಲಿರುತ್ತಿದ್ದರು. ಲಿಂಗಾನುಷ್ಠಾನವೇ ಅವರ ದಿನಚರಿ. ಜೊತೆಗೆ ತಮ್ಮ ಕೆಲಸಗಳನ್ನು ಸ್ವಂತ ತಾವೇ ಮಾಡಿಕೊಳ್ಳುತ್ತಿದ್ದರು. ದಿನಕ್ಕೆ ಮೂರು ಸಲ ಸ್ನಾನ ಪೂಜೆ. ಲಿಂಗಪೂಜೆ, ಜಪ, ಅನುಷ್ಠಾನ ಮೌನ ಇದು ಅವರ ದಿನಚರಿ. ಒಂದುದಿನಕ್ಕೆ ಹನ್ನೆರಡು ಸಾವಿರಕ್ಕೂ ಹೆಚ್ಚು ಷಡಕ್ಷರ ಮಂತ್ರ ಪಠಣ, ಅನೇಕ ತಿಂಗಳು ಕೇವಲ ಸ್ವಲ್ಪ ಸಕ್ಕರೆ, ಸ್ವಲ್ಪ ಜೇನು ತುಪ್ಪ ಮತ್ತು ನಾಲ್ಕಾರು ಉತ್ತತ್ತಿ ಹಣ್ಣು ಇಷ್ಟರಲ್ಲಿಯೇ ಕಳೆದು ಹಸಿವು ಬಾಯಾರಿಕೆಗಳನ್ನು ತಮ್ಮ ಅಂಕಿತದಲ್ಲಿಟ್ಟುಕೊಂಡಿದ್ದರು. ಕೆಲವು ತಿಂಗಳು ಕೇವಲ ಒಂದು ಕಪ್ಪುಹಾಲಿನ ಮೇಲೆಯೇ ಕಳೆದು ಮನೋನಿಗ್ರಹಕ್ಕೆ ಎಡೆಮಾಡಿಕೊಂಡರು. ಮತ್ತೊಮ್ಮೆ ಅನುಷ್ಠಾನ ಮಾಡಿದಾಗ ದಿನಕ್ಕೆ ನೆನೆಹಾಕಿದ ಐದು ಉತ್ತತ್ತಿಗಳನ್ನಷ್ಟೆ ತಿನ್ನುತ್ತಿದ್ದರಂತೆ. ಹೀಗೆ ಅನೇಕ ಬಾರಿ ಅನುಷ್ಠಾನ ಮಾಡಿ ದೇಹ ದಂಡಿಸಿ, ದೇಹ ಹಾಗೂ ಮನಸ್ಸಿನ ಮೇಲೆ ಸಂಪೂರ್ಣ ನಿಯಂತ್ರಣ ಪಡೆದಿದ್ದರು. ಯಾವಾಗಲೂ ಖಾದಿ ಬಟ್ಟೆಯನ್ನೇ ಉಡುತ್ತಿದ್ದರು. ಗುಡಮೂರು ಅಜ್ಜಾವರಿದ್ದಾಗಲೇ ಖಾದಿಯ ಕಾವಿಯ ಸೀರೆಯನ್ನುಡಲು ಪ್ರಾರಂಭಿಸಿದ್ದರು. ಮುಪ್ಪಾದಮೇಲೆ ಖಾದಿಯ

ಸೀರೆಯುಡಲು ಪ್ರಾರಂಭಿಸಿದರು. ತಾಯಿ ಶರಣಮ್ಮನವರು ತಮ್ಮ ತಪಃ ಪ್ರಭಾವದಿಂದ ದೈವತ್ವವನ್ನು ಪಡೆದರು. ಆ ದೈವೀಶಕ್ತಿಯಿಂದ ಜೀವನದಲ್ಲಿ ನೊಂದ –ಬೆಂದವರಿಗೆ, ದುಃಖಿಗಳಿಗೆ–ದೀನರಿಗೆ, ಅಸಹಾಯಕರಿಗೆ ಅಶಾದೀಪವಾದರು. ಅವರ ದರ್ಶನಾಶೀರ್ವಾದ ಪಡೆದು ಲೆಕ್ಕವಿಲ್ಲದಷ್ಟು ಜನ ಜೀವನದಲ್ಲಿ ನೆಮ್ಮದಿಯನ್ನು ಪಡೆದಿದ್ದಾರೆ. ಸುಖಪಡೆದಿದ್ದಾರೆ.' ಕಷ್ಟಪರಿಹಾರ ಮಾಡಿಕೊಂಡಿದ್ದಾರೆ, ಮಾರ್ಗದರ್ಶನ ಸ್ವೀಕರಿಸಿದ್ದಾರೆ. ತಾಯಿಯವರ ನುಡಿ ಶಿವ ನುಡಿ; ವಾಣಿ ದಿವ್ಯ ವಾಣಿ, ಕಂಗಳು–ಅಮರದೀಪ, ಹಸ್ತ–ಅಭಯಹಸ್ತ, ಭಕ್ತರಿಗೆ ಅವರೇ ಕಾಮಧೇನು, ಕಲ್ಪವೃಕ್ಷವಾಗಿದ್ದರು.

ಇಷ್ಟೆಲ್ಲಾ ಸಾಧನೆಗೈದಿದ್ದರೂ ತಾವೇ ಮಹಾಶರಣರಾಗಿದ್ದರೂ ತಾಯಿಯವರು ತಾವಿದ್ದಲ್ಲಿಯೇ ಮಂಟಪಪೂಜೆ ಮಾಡಿ ಶ್ರೀಗಳನ್ನೇಕರನ್ನು ಕರೆಸಿ, ಪೂಜೆ ಮಾಡಿಸಿ, ದಕ್ಷಿಣೆ ಅರ್ಪಿಸಿ ಕಳುಹಿಸುತ್ತಿದ್ದರು. ಶಿವಯೋಗಿಗಳ ಪುರಾಣ ಪ್ರವಚನವಿಡಿಸಿ ಪುರಾಣ ಶ್ರವಣ ಮಾಡುತ್ತಿದ್ದರು. ಪ್ರತಿವರ್ಷ ಗೌರಿಹುಣ್ಣಿಮೆಯ ಮರುದಿನ ಸದ್ದು–ಗದ್ದಲವಿಲ್ಲದೆ, ಪ್ರಚಾರ ಪರಾಕುರಗಳಿಲ್ಲದೆ, ಮಂಟಪ ಪೂಜಾ ಸೇವೆ ಮಾಡಿಸಿ ಆನಂದಿಸುತ್ತಿದ್ದರು.

ತಾವು ಬಸವ ತತ್ತ್ವದ ಬಾಳನ್ನು ಬದುಕಿದರೂ, ಜನಸಾಮಾನ್ಯರಲ್ಲಿ ಬಸವತತ್ತ್ವವನ್ನು ಪ್ರಸಾರ ಮಾಡಬೇಕೆಂಬುದು ಅವರ ಇಚ್ಛೆಯಾಗಿತ್ತು. ಹಳ್ಳಿಯ ಮಕ್ಕಳಲ್ಲಿ ಮಹಿಳೆಯಲ್ಲಿ ಶ್ರದ್ಧಾಸಕ್ತಿಗಳನ್ನು ಉಂಟುಮಾಡಬೇಕೆಂದು ಬಯಸಿದರು. ಅದಕ್ಕಾಗಿ ಅಣ್ಣನ ಬಳಗ,ವನ್ನು ತಮ್ಮ ಆಶ್ರಮದಲ್ಲಿ ಪ್ರಾರಂಭಿಸಿದರು. ಪ್ರತೀ ಗುರುವಾರ ಅಣ್ಣನ ಬಳಗದ ಕಾರ್ಯಕ್ರಮವನ್ನು ಹಮ್ಮಿಕೊಂಡು ಸುತ್ತ–ಮುತ್ತಲ ಹಳ್ಳಿಯ ಮಕ್ಕಳನ್ನೆಲ್ಲಾ ಕೂಡಿಸಿ ಶರಣರ ವಚನಗಳನ್ನು ಬಾಯಿಪಾಠ ಮಾಡಿಸುತ್ತಿದ್ದರು. ಚೆನ್ನಾಗಿ ಹೇಳುವವರಿಗೆ ಹೆಚ್ಚು ಪ್ರಸಾದ ಕೊಟ್ಟು ಹುರಿದುಂಬಿಸುತ್ತಿದ್ದರು. ಪ್ರತಿ ಸೋಮವಾರ ಮಹಿಳೆಯರಿಗಾಗಿ ಅಕ್ಕನ ಬಳಗದ ಕಾರ್ಯಕ್ರಮವೆಂದು ಅವರಿಂದ ವಚನಗಳನ್ನು ರಾಗದಿಂದ ಹಾಡಿಸುತ್ತಿದ್ದರು. ಆಗ ಬಂದ ಬಹಿಳೆಯರಿಗೆ ಶಿವಾನುಭವ ಬೋಧೆಯನ್ನು ಮಾಡಿ, ವೀರಶೈವರಾಗಿ ಹುಟ್ಟಿ, ಅದರ ಗಂಧವೇನೆಂದೇ ಅರಿಯದ ಅವರಿಗೆ ಧರ್ಮದ ಬಗ್ಗೆ ಆಸಕ್ತಿ, ತಿಳುವಳಿಕೆ ಉಂಟುಮಾಡುತ್ತಿದ್ದರು. ಇಷ್ಟೆಲ್ಲಾ ಉತ್ತಮಕಾರ್ಯಗಳನ್ನು ಮಾಡಿಸಿದರೂ ಈ ಕಾರ್ಯಪ್ರಚಾರವಾಗದಂತೆ ಗುಪ್ತವಾಗಿಯೇ ಮಾಡುತ್ತಿದ್ದರು ಅವರಿಗೆ ಪ್ರಚಾರ, ಹೊಗಳಿಕೆ ಸೇರುತ್ತಿರಲಿಲ್ಲ. ಅವುಗಳಿಂದ ದೂರವಿರಲು ಸಾಧ್ಯವಾದ ಎಲ್ಲ ಪ್ರಯತ್ನಗಳನ್ನೂ ಮಾಡುತ್ತಿದ್ದರು. ಅನೇಕರು ಶರಣತತ್ತ್ವದಂತೆ ಬದುಕಿದ್ದಾರೆ. ಆದರೆ ಈ ತಾಯಿಯವರಂತೆ ಇಡೀ ಶರಣತತ್ತ್ವವನ್ನೇ ತಮ್ಮ ಜೀವನದಲ್ಲಿ ಅಳವಡಿಸಿಕೊಂಡು, ಎಲ್ಲೆಲ್ಲಿಯೂ ಒಂದು ಚೂರು ತಪ್ಪಿಗೂ ಅವಕಾಶವಿಲ್ಲದಂತೆ

ಬದುಕಿದವರ ಬಹಳ ಕಡಿಮೆ. ಅಷ್ಟೊಂದು ಕಟ್ಟು-ನಿಟ್ಟಿನ ಮಾದರಿಯ ದಿವ್ಯ ಶರಣ ಜೀವನವನ್ನು ತಾಯಿಯವರು ಬದುಕಿದರು. ಆದುದರಿಂದಲೇ ಕಂಬಳಿಹಾಳ. ಸಜ್ಜಲಗುಡ್ಡಗಳಲ್ಲಿ ಜಾತ್ರೆ ನಡೆದಾಗ, ಪುರಾಣ ಪ್ರವಚನ ನಡೆದಾಗ ಜನರು ಜಾತಿ-ಮತ, ಧರ್ಮಗಳ ಭೇದವಿಲ್ಲದೆ, ಹಿಂದು ಮುಸ್ಲಿಂ ಜೈನ, ಕ್ರೈಸ್ತ ಮುಂತಾದ ಎಲ್ಲ ಧರ್ಮದವರೂ ಭಾಗಿಗಳಾಗಿ ಅಮ್ಮನವರ ಆಶೀರ್ವಾದಕ್ಕಾಗಿ ಹಾತೊರೆಯುತ್ತಿದ್ದರು. ತಾಯಿಯವರು ಧರ್ಮಸಮನ್ವಯ ಮೂರ್ತಿ.

## ನೆಲೆಯಾಯಿತು ಪಾವನಕ್ಷೇತ್ರ

ಕನ್ನಡ ನಡಿನ ಬಹಳಷ್ಟು ಮಠಾಧೀಶರು, ಹರಗುರು ಚರಮೂರ್ತಿಗಳೂ, ಸಾಹಿತಿಗಳೂ, ರಾಜಕಾರಣಿಗಳೂ ಅಧಿಕಾರಿಗಳೂ ತಾಯಿಂಯುವರ ದರ್ಶನಾಶೀರ್ವಾದಕ್ಕಾಗಿ ಕಂಬಳಿಹಾಳ-ಸಜ್ಜಲಗುಡ್ಡಗಳಿಗೆ ಬಂದಿದ್ದಾರೆ. ಎರಡು ಹಳ್ಳಿಗಳೂ ತಾಯಿಯವರ ವಾಸ್ತವ್ಯದಿಂದ ಪುಣ್ಯ ಕ್ಷೇತ್ರಗಳಾಗಿವೆ. ದಿನಬೆಳಗಾದರೆ ಲೆಕ್ಕವಿಲ್ಲದಷ್ಟು ಭಕ್ತಾದಿಗಳು ತಾಯಿಯವರ ದರ್ಶನಕ್ಕಾಗಿ ಬರುತ್ತಿದ್ದರು. ತಾಯಿಯವರ ದೃಷ್ಟಿಯಲ್ಲಿ ಬಂದವರೆಲ್ಲಾ ಮಕ್ಕಳು. ಅವರಿಗೆ ಶ್ರೀಮಂತರು ಬಡವರು ವಿದ್ಯಾವಂತರು ನಿರಕ್ಷರಿಗಳು ಹಳ್ಳಿಗರು  ಪಟ್ಟಣಿಗರು ಅಧಿಕಾರಿಗಳು ಅಲ್ಲದವರು ಎಂಬ ಯಾವ ತಾರತಮ್ಯವೂ ಇರಲಿಲ್ಲ ಎಲ್ಲರನ್ನೂ ಸಮಾನವಾಗಿ ಆಶೀರ್ವದಿಸುತ್ತಿದ್ದರು ತಾಯಿಯವರ ಘನತೆಯ ಪರೀಕ್ಷೆಗಾಗಿಯೇ ಹೋದವರೂ, ಭಕ್ತಿ ಹೃದಯದ ತಾಯಿಯ ದರ್ಶನ ವರ್ತನೆಗಳಿಂದ 'ಭಕ್ತ'ರಾಗಿ ಹಿಂದಿರುಗಿರುವರು. ಅವರಿಗೆ ಭವಿಷ್ಯದ ವಿಚಾರಗಳು ಗೊತ್ತಿದ್ದರೂ ತಮಗೇನೋ ಎಲ್ಲರಿಗೂ ಅಸಾಧ್ಯವಾದುದು ಸಾಧ್ಯವಾಗುತ್ತಿದೆ ಎಂದು ಯಾರಿಗೂ ಅನ್ನಿಸದಂತೆ, ಸಹಜ ಸನ್ನಿವೇಶದಲ್ಲಿ ವಿಷಯಗಳನ್ನು ನಿರೂಪಿಸುತ್ತಿದ್ದರು. ದಿವ್ಯದೃಷ್ಟಿ ಇದೆ ಎಂದು ತೋರಿಸಿಕೊಳ್ಳುತ್ತಿರಲಿಲ್ಲ. ಆದರೆ ಅನುಭವದಿಂದ ಜನರಿಗೆ ಅವರ ಅರಿವಾಗಿ ತಾಯಿಯವರನ್ನು 'ಮಾತಾಡುವ ದೇವರೆಂದು' ತಿಳಿದಿದ್ದರು. ಇವರ ದಯೆಯಿಂದ ಈ ಹಳ್ಳಿಗಳು ಇಂದು ಸಕಲ ಸೌಲಭ್ಯಗಳನ್ನು ಹೊಂದಿರುವ ಮಾದರಿಯ ಗ್ರಾಮಗಳಾಗಿವೆ. ವಿದ್ಯುತ್, ಕುಡಿಯುವ ನೀರು, ಪಕ್ಕಾ ರಸ್ತೆ; ಮೋಟಾರು ಸೌಕರ್ಯ, ಹಳ್ಳಕ್ಕೆ ಸೇತುವೆ, ಪಂಚಾಯತಿ ಕಛೇರಿ, ಅಂಚೆ ಕಛೇರಿಗಳಾಗಿವೆ. ಹಿರಿಯ ಪ್ರಾಥಮಿಕ ಶಾಲೆ, ಸರ್ಕಾರಿ ಮಾಧ್ಯಮಿಕ ಶಾಲೆಗಳಾಗಿವೆ. ಉಚಿತ ಪ್ರಸಾದ ವ್ಯವಸ್ಥೆ, ಶಿಕ್ಷಕರಿಗೆ ವಾಸಿಸುವ ಮನೆ, ಹಿಂದುಳಿದ ಜನಾಂಗದ ಹಾಸ್ಟೆಲ್ ಕೂಡ ಆಗಿದೆ. ಇಂತಹ ಕುಗ್ರಾಮಗಳಿಗೆ ಇಷ್ಟೊಂದು ಸೌಲಭ್ಯ ತಾಯಿಯವರ ವರಪ್ರಸಾದವಲ್ಲದೆ ಬೇರಿನ್ನೇನೂ ಅಲ್ಲ. ಮೊನ್ನೆ ಮೊನ್ನಿನ ತನಕ( ೨೪-೪-೮೧) ಈ ಜೀವಂತ ದೇವರು ನಮ್ಮ ನಡುವೆ ಇದ್ದುದು ಕನ್ನಡಿಗರ ಪುಣ್ಯ ವಿಶೇಷ.

ತಾಯಿಯವರ ಗದ್ದುಗೆಯಿರುವ ಸಜ್ಜಲಗುಡ್ಡದಲ್ಲಿ ಮಠಕ್ಕೆ ಹೋಗಬೇಕಾದರೆ ಭವ್ಯವಾದ ಮುಖದ್ವಾರವಿದೆ. ಒಳಹೊಕ್ಕರೆ ಎದುರಿನಲ್ಲೇ ವೈರಾಗ್ಯನಿಧಿ ಅಕ್ಕಮಹಾದೇವಿಯ ಚಿಕ್ಕ ಕೋಣೆಯ ಚಿಕ್ಕ ಬಾಗಿಲು. ತಾಯಿಯವರು ಯಾವಾಗಲೂ ಆ ಬಾಗಿಲಿನ ಒಳಭಾಗದಲ್ಲಿ ಕುಳಿತಿರುತ್ತಿದ್ದರು. ಯಾರೇ ಬಂದು ನಮಸ್ಕರಿಸಿದರೂ (ಬಾಗಿಲಿನಿಂದ ಹೊರಗಿಂದಲೇ) ಪ್ರತಿಯಾಗಿ ತಾವೂ ನಮಸ್ಕರಿಸುತ್ತಿದ್ದರು. ಶಾಂತಿಯೇ ರೂಪವೆತ್ತಂತೆ, ಸರಳತೆಯೇ ಮೂಡಿಬಂದಂತೆ ಶುಭ್ರತೆಯೇ ಎದ್ದು ನಿಂತಂತೆ, ಸಾತ್ವಿಕತೆಯೇ ಮೈದಳೆದಂತೆ, ಹೊಂಬಣ್ಣದ ದೇಹ, ಕಾವಿಯ ಉಡುಗೆ, ಸೌಮ್ಯ, ಸುಂದರ ವದನದಿಂದ ಕುಳಿತ್ತಿದ್ದರು.

**ಪವಾಡ ಸದೃಶ್ಯ ಘಟನೆಗಳು**

ದ್ರಷ್ಟಾರರು, ಶರಣರ, ಕಾರಣಿಪುರುಷರ, ಸತ್ಯಶುದ್ಧ ಕಾಯಕನಿಷ್ಠರ, ಯುಗಪುರುಷರ ಸಿದ್ಧಿಪುರುಷರ ಜೀವನವನ್ನು ಪರಿಶೀಲಿಸಿದರೆ ಅವರು ಅನೇಕ ಅಸಾಧ್ಯಗಳನ್ನು ಸಾಧ್ಯಮಾಡಿ ತೋರಿಸಿರುವುದು ವೇದ್ಯವಾಗುತ್ತದೆ. ಭೂತ, ವರ್ತಮಾನ, ಭವಿಷ್ಯತ್‌ಗಳನ್ನು ಅವರು ಬಲ್ಲವರಿದ್ದುದು ಕಂಡು ಬರುತ್ತದೆ; ಪರಿಸ್ಥಿತಿಗಳನ್ನು, ಆಗು-ಹೋಗುಗಳನ್ನು ನಿಯಂತ್ರಿಸುವುದೂ ಗೋಚರಿಸುತ್ತದೆ. ಅವರಿಗೆ ಕೋಪ ಉಂಟಾದಾಗ ಶಾಪಕೊಟ್ಟು ಅವು ನಿಜವಾದ ಉದಾಹರಣೆಗಳೂ ಸಾಕಷ್ಟು ಪರಿಶುದ್ಧಜೀವನ ನಡೆಸಿ, ಭಗವಂತನಲ್ಲಿ ಸರ್ವಾರ್ಪಣ ಭಾವನೆಯಿಂದ ಬದುಕಿ, ಭಕ್ತಿ-ವೈರಾಗ್ಯಗಳ ಜೀವನ ನಡೆಸಿದವರಿಗೆ ಒಂದು ದೈವೀ ಶಕ್ತಿ ಕರಗತವಾಗುವುದು ಎಂಬ ಅಂಶ ನಿರ್ವಿವಾದವಾದುದು. ಇಂತಹ ಶಕ್ತಿಯನ್ನು ಸಜ್ಜಲಗುಡ್ಡದ ಶರಣಮ್ಮನವರೂ ಪಡೆದಿದ್ದರೆಂಬ ಅನುಭವವನ್ನು ಅನೇಕರು ಕಂಡಿದ್ದಾರೆ. ಇಷ್ಟೆಲ್ಲಾ ಶಕ್ತಿ ಇದ್ದರೂ ತಾಯಿಯವರೆಂದೂ ಅಂಥ ಶಕ್ತಿಯನ್ನು ಪಡೆದುಕೊಂಡ ಸಾಧಕರೆಂದು ಹೆಮ್ಮೆಪಟ್ಟುಕೊಲಳುತ್ತಿರಲಿಲ್ಲ. ಅವರಲ್ಲಿ 'ಅಹಂ' ಸಂಪೂರ್ಣ ನಾಶವಾಗಿತ್ತು. ಯಾರಾದರೂ ಅವರನ್ನು ಅಕ್ಕಮಹಾದೇವಿಗೆ ಹೋಲಿಸಿದರೆ "ಅದು ತುಂಬಾ ದೊಡ್ಡ ಮಾತು. ತಾವು ಅ ಮಟ್ಟಕ್ಕೆ ಏರಿಲ್ಲ" ಎಂದು ವಿನೀತರಾಗಿ ಹೇಳುತ್ತಿದ್ದರು. ಅದ್ಭುತಗಳನ್ನು ಮಾಡಿದರೂ, ಸಹಜವೆಂಬಂತೆ ಕಾಣಿಸಲು ಬಿಡುತ್ತಿರಲಿಲ್ಲ. ಅದರ ಉದ್ದೇಶ ಪ್ರಚಾರಕ್ಕಾಗಿರಲಿಲ್ಲ. ಹೊಗಳಿಕೆ ಅವರಿಗೆ ಬೇಕಿರಲಿಲ್ಲ. ಇಂತಹ ಡಂಭಾಚಾರದಿಂದ ದೂರವಿರುವುದು ಅವರ ಸ್ಪಷ್ಟ ಉದ್ದೇಶವಾಗಿತ್ತು. ಎಲ್ಲವನ್ನೂ ಎಲೆಯ ಮರೆಯ ಕಾಯಿಯಂತೆ ಇದ್ದುಕೊಂಡು, ಸದ್ದು-ಗದ್ದಲವಿಲ್ಲದೆ ನಡೆಸಿಕೊಂಡು ಹೋಗುತ್ತಿದ್ದರು. ಅವರ ಆಶೀರ್ವಾದ ದರ್ಶನಗಳನ್ನು ಪಡೆದ ಭಕ್ತರು ತಮ್ಮಲ್ಲಿ ಮಾತನಾಡಿಕೊಳ್ಳುವುದರಲ್ಲೇ ಕರ್ನಾಟಕದ ತುಂಬಾ ಅವರ ಹೆಸರು ಹಬ್ಬಿ ಹೋಗಿತ್ತು. ಉತ್ತರ ಕರ್ನಾಟಕದಲ್ಲಿಯಂತೂ

ಅವರ ಮಹಿಮೆ ಮನೆ ಮಾತಾಗಿದೆ. ಅವರು ಒಂದು ಫೋಟೋ ಸಹ ತೆಗೆಸಿಕೊಳ್ಳಲು ಇಷ್ಟಪಡುತ್ತಿರಲಿಲ್ಲ. ಅವರಿಗೆ ಅಂತಹವುಗಳೆಲ್ಲ ಇಷ್ಟವಿರಲಿಲ್ಲವಾಗಿ ಅವರನ್ನು ಆ ಬಗ್ಗೆ ಕೇಳುವ ಧೈರ್ಯವೂ ಯಾರಿಗಿರಲಿಲ್ಲ. ಆದರೆ ಪ್ರಕೃತಿ ನಿಯಮದಂತೆ ಶತಾಯುಷಿಗಳಾದಂತೆ ಶರೀರ ಜೀರ್ಣವಾಗತೊಡಗಿತು. ಅನೇಕ ಭಕ್ತರಿಗೆ ಅವರ ಕುರುಹಾಗಿ ಒಂದು ಫೋಟೋ ತೆಗೆದುಕೊಳ್ಳಬೇಕೆಂಬ ಉತ್ಕಟೇಚ್ಛೆಯಾಯ್ತು. ತಾಯಿಯವರ ಪರಮಭಕ್ತರೂ ನಿಕಟವರ್ತಿಗಳೂ ಆದ ಅವರು ಬಹಳ ಪ್ರಯತ್ನಮಾಡಿ ಫೋಟೋ ತೆಗೆಸಿಕೊಳ್ಳಲು ತಾಯಿಯವರ ಮನ ಒಲಿಸಿದರು. ಆಗಲೂ ತಾಯಿಯವರು ತಮ್ಮ ಗುರುಗುಡದೂರ ಅಜ್ಜಾವರ ಫೋಟೋವನ್ನು ಬರೆಯಿಸಿ ಅದನ್ನು ಕೈಲಿ ಹಿಡಿದುಕೊಂಡು ಭಕ್ತರ ಆಸೆಯನ್ನು ಈಡೇರಿಸಲು ತೆಗೆಯಿಸಿಕೊಂಡರು. ಅದು ಅವರು ಲಿಂಗೈಕ್ಯರಾಗುವ ಕೆಲವು ದಿನ ಮೊದಲು ಅಷ್ಟೆ

### ಅನುಗ್ರಹದ ಅಮ್ಮನವರು

ಪವಾಡವೆಂಬಂತಹ ಘಟನೆಗಳು ತಾಯಿಯವರ ಅನುಗ್ರಹದಿಂದ ಅನೇಕ ಜನರ ಜೀವನದಲ್ಲಿ ಜರುಗಿವೆ.

ಕಂಬಳಿಹಾಳದ ವೆಂಕಪ್ಪ ಓಲೆಕಾರಿಕೆ ವೈದ್ಯಕೀಯ ಮಾಡುತ್ತಿದ್ದ. ಈ ವಿಷಯ ತಾಯಿಯವರಿಗೆ ಗೊತ್ತಿತ್ತು. ಅವನ ಮಗ ಭೀಮಪ್ಪ ತಂದೆಯ ಯಾವ ಕಸುಬನ್ನು ಕಲಿತಿರಲಿಲ್ಲ. ತಂದೆ ಸತ್ತ ನಂತರ ಅವನು ಗೋಡೆ ಕಟ್ಟುವ ಕೆಲಸ ಮಾಡುತ್ತಿದ್ದ. ಅವ್ವಾವರು ಪೂಜೆ ಮುಗಿಸಿಕೊಂಡು ಹೊರಗೆ ಬಂದಾಗ ಭೀಮಪ್ಪ ಗೋಡೆ ಕಟ್ಟುತ್ತಿದ್ದನು; ನೋಡಿದರು. ಕೈಮಾಡಿ ಸನಿಹಕ್ಕೆ ಕರೆದರು. ಅಂಜುತ್ತಾ ಬಂದು ನಿಂತ. 'ಏ ಭೀಮ್ಯಾ ನಿಮ್ಮಪ್ಪ ವೈದ್ಯಕಿ ಮಾಡುತ್ತಿದ್ದ ನಿನಗೇನಾರ ಕಲಿಸಿ ಹೋಗ್ಯಾನೇನು, ಸಾಲಿಗೀಲಿ ಕಲ್ತಿ ಏನು?' ಎಂದರು.

'ಸ್ವಲ್ಪ ಸ್ವಲ್ಪ ತಪ್ಪಲಾ (ಗಿಡಮೂಲಕೆ) ತೋರಿಸ್ಯಾನ ತಾಯಿ. ಬಿನ್ನಿತ್ತೆ (ಒಂದನೆ ತರಗತಿ) ಓದೀನಿ' ಎಂದ. ತಾಯಿಯವರು ಭೀಮಪ್ಪನಿಗೆ ಕೆಸರುಗೈ ತೊಳೆದುಕೊಂಡು ಬರಲು ಹೇಳಿದರು. ಭೀಮಪ್ಪನಿಗೆ ಏನಾಗುತ್ತದೋ ಎಂಬ ಭಯ. ಅಂಜುತ್ತಾ ಕೈತೊಳೆದುಕೊಂಡು ಬಂದ. 'ಲೇ ತಮ್ಮಾ ಇವತ್ತಿನಿಂದ ನೀನು ಗೋಡೆ ಕಟ್ಟೋದು ಬ್ಯಾಡ. ನಿನ್ನ ಕೈ ಸಂಜೀವಿನಿ, ನೀನು ನಿಮ್ಮಪ್ಪನಂತೆ ವೈದ್ಯಕೀಯವನ್ನೆ ಮಾಡು' ಎಂದು ಆಶೀರ್ವದಿಸಿ, ಬಲಹಸ್ತದಲ್ಲಿ ತೀರ್ಥ ಹಾಕಿ ಒಂದು ಆಯುರ್ವೇದ ಪುಸ್ತಕ ಕೊಟ್ಟರು. ಮುಂದೆ ಭೀಮಪ್ಪ ಆ ಪ್ರಾಂತದ ಹೆಸರಾದ ವೈದ್ಯನಾದ. ಓದಲು ಬಾರದ ಅವನು ನಾಡೀ ಪರೀಕ್ಷೆ ಮಾಡಿ ಗಿಡಮೂಲಿಕೆಯ ಔಷಧಿಯಿಂದ

ಎಂತಹ ಖಾಯಿಲೆಯನ್ನಾದರೂ ಗುಣಪಡಿಸುತ್ತಿದ್ದ. ಶಸ್ತ್ರ ಚಿಕಿತ್ಸೆ ಬಿಟ್ಟು ಔಷಧ ಮತ್ತು ನಾಡಿ ಜ್ಞಾನಗಳಲ್ಲಿ ಆ ಪ್ರಾಂತದಲ್ಲಿ ಅವನಿಗೆ ಸರಿಗಟ್ಟುವ ವೈದ್ಯರೇ ಯಾರೂ ಇರಲಿಲ್ಲ. ಭೀಮಪ್ಪ ಕೈನಾಡಿ ನೋಡಿ, ಔಷಧಿ ಕೊಟ್ಟರೆ ಎಂದೂ ಹುಸಿಯಾಗುತ್ತಿರಲಿಲ್ಲ. ಆ ರೋಗಿ ನಿರೋಗಿಯಾಗುತ್ತಿದ್ದ. ಈ ಘಟನೆಯನ್ನು ಭೀಮಪ್ಪನೇ ಎಲ್ಲರ ಮುಂದೆ ಹೇಳುತ್ತಿದ್ದ. ಆತನನ್ನು ಕಂಡವರೆಲ್ಲ ಒಪ್ಪುವ ಮಾತು.

ಒಮ್ಮೆ ಕಂಬಳಿಹಾಳದಲ್ಲಿ ಮಳೆ ಇಲ್ಲದೆ ಕುಡಿಯಲು ನೀರಿಗೂ, ದನಗಳ ಮೇವಿಗೂ ಕಷ್ಟವಾಗಿತ್ತು. ಬಿತ್ತುವ ಮಾತಂತೂ ದೂರವೇ ಉಳಿಯಿತು ತಾಯಿಯವರ ಪರಮ ಭಕ್ತರಾದ ಬಲದಿಣ್ಣೆಯ ನೀಲಕಂಠರಾವ ನಾಡಗೌಡರು ತಾಯಿಯವರ ಮುಂದೆ ಈ ವಿಷಯ ಪ್ರಸ್ತಾಪಿಸಿದರು. ಆಗ ಅವ್ವಾವರು 'ಹೌದು ನೋಡಪ್ಪಾ, ಮುತ್ಯಾ (ಗುಡುದೂರ ಅಜ್ಜಾವರು) ಯಾಕೋ ಮುನಿಸಿಕೊಂಡಾನೆ' ಎಂದು ಹೇಳಿ ಮುಗಿಲ ಕಡೆ ನೋಡಿದರು. ಹತ್ತಿರದಲ್ಲಿದ್ದ ಅಗಸರ ಅಮೀನಪ್ಪನಿಗೆ, 'ಲೇ ಅಮೀನ ಎಲ್ಲಾದ್ರೂ ಒಂಚೂರು ಮೋಡಾ ಕಾಣ್ತೈತೇನೋ ನೋಡು' ಎಂದರು. ಅಮೀನಪ್ಪ ಆಕಾಶದಲ್ಲೆಲ್ಲಾ ಕಣ್ಣಾಡಿಸಿದ. ಮೋಡವಿಲ್ಲ. ಎಲ್ಲೋ ಒಂದು ಕಡೆ ಒಂದು ತುಂಡು ಮೋಡ ಕಾಣಿಸಿತು. ಅವ್ವಾ ಅಲ್ಲೆಲ್ಲೊ ಒಂದು ತುಂಡಿನಷ್ಟು ಐತವ್ವಾ' ಎಂದ. 'ಕರೀಲೆ ಅದ್ನ! ಸುರೀಲಿ ಮಳೆ ಧೋ, ಧೋ ಅಂತಾ' ಅಂದರು.

'ನಾ ಕರದೆ ಬರ್ತ್ತೆನ್ರವ್ವಾ, ನೀವ್ಕರದ್ರೆ ಬರ್ತ್ತೈತಿ'
'ಇಲ್ಲಲೆ ನೀನೆ ಕರಿ! ತಾನಾ ಬರ್ತ್ತೈತಿ'

ಅಮೀನಪ್ಪ ತಾಯಿಯವರ ಆಜ್ಞೆಗೆ ಮಣಿದು ಭಕ್ತಿ, ಶ್ರದ್ಧೆ, ನಂಬಿಕೆಗಳಿಂದ, 'ಬಾರೋ ಮಳೆರಾಯ' ಎಂದು ಕೂಗಿ ಕರೆದ. ಬಲದಿನ್ನಿಯ ನಾಡಗೌಡರು ಅಲ್ಲಿಯೇ ನಿಂತು ಇದೆಲ್ಲಾ ನೋಡುತ್ತಾ ಭಯ- ಭಕ್ತಿಯಿಂದ ಗಮನಿಸುತ್ತಿದ್ದರು. ಒಂದೆರಡು ಗಂಟೆಗಳೊಳಗಾಗಿ ಆಕಾಶದ ತುಂಬೆಲ್ಲ ಕಪ್ಪು ಮೋಡ ತುಂಬಿತು! ಧಾರಕಾರವಾಗಿ ಮಳೆ ಸುರಿಯಲಾರಂಭಿಸಿತು!! ನಿಸರ್ಗವೂ ತಾಯಿಯವರ ಆಜ್ಞೆಯನ್ನು ಶಿರಸಾವಹಿಸಿ ಪಾಲಿಸಿತು ಎನ್ನಬಹುದಲ್ಲವೆ?

ಸಜ್ಜಲಗುಡ್ಡದಲ್ಲಿ, ಮಳೆ, ಮೋಡಗಳೇ ಅಲ್ಲದೆ, ಪ್ರಾಣಿಗಳೂ ಸಹ ತಾಯಿಯವರ ಮಾತಿಗೆ ತಲೆಬಾಗುತ್ತಿದ್ದವು ಎನ್ನುವದಕ್ಕೊಂದು ನಿದರ್ಶನವಿದೆ. ಸಜ್ಜಲಗುಡ್ಡದಲ್ಲಿ ಒಂದು ಗೂಳಿ ಬಹು ಕೊಬ್ಬಿ ಜನರಿಗೆ ತ್ರಾಸು ಕೊಡುತ್ತಿತ್ತು. ಅದರ ಉಪಟಳದಿಂದ ಬೆಳೆ ನಾಶವಾಗುತ್ತಿತ್ತು. ಊರವರೆಲ್ಲ ಕಷ್ಟಪಟ್ಟರೂ ಅದನ್ನು ಹತೋಟಿಗೆ ತರಲಾಗಲಿಲ್ಲ. ಒಮ್ಮೆ ರೊಚ್ಚಿಗೆದ್ದ ಜನರು ಒಟ್ಟುಗೂಡಿ ಇದನ್ನು ಬಡಿದು ಸಾಯಿಸಿಬಿಡಬೇಕೆಂದು ಬೆನ್ನಟ್ಟಿ ಬಂದರು. ಅದು ತಪ್ಪಿಸಿಕೊಂಡು ತಾಯಿಯವರ ಆಶ್ರಮದ ಬಳಿ ಬಂದಿತು.

ಆಗ ಬೆನ್ನಟ್ಟಿ ಬಂದ ಜನರಿಗೆ 'ಯಪ್ಪಾ, ಶಿವನ ವಾಹನ ಅದು. ಮನೆಗಾಗಿ ದುಡಿವ ಮಗ ಅದು. ಅದನ್ನು ಕೊಲ್ಲಬೇಡಿ' ಎಂದು ಹೇಳಿ ಗೂಳಿಗೆ, 'ಯಪ್ಪಾ ಬಸವಾ ಮಂದೀಗೆ ಯಾಕ ತ್ರಾಸು ಕೊಡ್ತೀಯಪ್ಪ. ಉಪದ್ರವಿ ಆಗಬಾರ್ದು. ನಾಳಿಗ ಹೋಗಿಬಿಡು' ಎಂದರು. ಜನರೆಲ್ಲಾ ಹಿಂತಿರುಗಿ ಹೋದರು. ಮರುದಿನವೇ ತಾಯಿಯವರ ಆಜ್ಞೆಯಂತೆ ಗೂಳಿ ಪ್ರಾಣ ತ್ಯಜಿಸಿತು. ತಾಯಿಯವರು ಆಶ್ರಮದ ಸಮೀಪದ ಪತ್ರೆ ಗಿಡದ ಬುಡದಲ್ಲಿ ಅದರ ಸಮಾಧಿ ಮಾಡಿಸಿದರು.

ಮುಂಬರುವ ಘಟನೆಗಳ ಮುನ್ಸೂಚನೆ ತಾಯಿಯವರಿಗಾಗುತ್ತಿತ್ತು. ಆದರೆ ಅದನ್ನು ಬಾಯ್ಬಿಟ್ಟು ಅವರು ಹೇಳುತ್ತಿರಲಿಲ್ಲ. ಸಂಜ್ಞೆಯ ರೂಪದಲ್ಲಿ ಪ್ರಕಟಿಸುತ್ತಿದ್ದರು ಶುಭ-ಅಶುಭ ಎನ್ನುವುದು ಮಾತ್ರ ಜನರಿಗೆ ತಿಳಿಯುತ್ತಿತ್ತು. ಆದ ನಂತರ ಜನರಿಗೆ ಅದರ ಸಂಜ್ಞೆಯ ಅರ್ಥ ವಿವರವಾಗಿ ತಿಳಿಯುತ್ತಿತ್ತು. ಕರ್ನಾಟಕದ ಮಾಜೀ ಮುಖ್ಯಮಂತ್ರಿಗಳಾದ ಶ್ರೀಕಂಠಿಯವರು ಅವ್ವಾವರ ಬಗ್ಗೆ ಬಹು ಭಕ್ತಿಯುಳ್ಳವರಾಗಿದ್ದರು. ಬಹು ವರ್ಷಗಳಿಂದ ಅವರ ದರ್ಶನಾಶೀರ್ವಾದಕ್ಕಾಗಿ ಆಗಿಂದಾಗ ಸಜ್ಜಲಗುಡ್ಡ, ಕಂಬಳಿಹಾಳಗಳಿಗೆ (ತಾಯಿಯ ವರು ಎಲ್ಲಿದ್ದರಲ್ಲಿಗೆ) ಹೋಗುತ್ತಿದ್ದರು. ಎಂದಿನಂತೆ ಒಮ್ಮೆ ಕಂಬಳಿಹಾಳಕ್ಕೆ ಹೋದರು. ಕಂಠಿಯವರನ್ನು ಕಂಡರೂ ತಾಯಿಯವರಿಗೆ ಎಲ್ಲಿಲ್ಲದ ಪ್ರೀತಿ. ಅವರನ್ನು ಗಾದಿಯ ಮೇಲೆ ಕೂಡ್ರಿಸಿ ಮಮತೆಯಿಂದ ಯೋಗಕ್ಷೇಮ ವಿಚಾರಿಸುತ್ತಿದ್ದರು. ಆದರೆ ಈ ಸಾರಿ ಗಾದಿ ಹಾಕಿಸದೆ ಕುರ್ಚಿ ಹಾಕಿಸಿ ಕೂಡಲು ಹೇಳಿದರು. ಕಂಠಯವರಿಗೆ ತಾಯಿಯವರ ಎದುರು ಕುರ್ಚಿಯ ಮೇಲೆ ಕೂಡುವುದು ಒಪ್ಪಿಗೆಯಾಗಲಿಲ್ಲ. ಎಷ್ಟು ಒಲ್ಲೆಂದರೂ, ಕುರ್ಚಿಯ ಮೇಲೆ ಕೂಡ್ರಿಸಿ ಹಾರ ಹಾಕಿಸಿದರು. 'ಯಪ್ಪಾ ಅಮ್ಮ ನಿನ್ನ ಖುರ್ಚಿ ಮೇಲೆ ಕೂಡಿಸಿ ಹಾರ ಹಾಕಿ ನೋಡಿ ಸಂತೋಷಪಡ್ತಾಳ. ನಮ್ಮಪ್ಪ ರಾಜಾ, ರಾಜಾ' ಎಂದು ಮುಗಳ್ನಕ್ಕರು. ಕಂಠಿಯವರು ಏನೂ ತಿಳಿಯದೆ ತಾಯಿಯವರು ಹೇಳಿದಂತೆ ಕೇಳಿದರು. ಮುಂದೇ ಒಂದೇ ತಿಂಗಳಲ್ಲಿ ಕರ್ನಾಟಕ ಮುಖ್ಯ ಮಂತ್ರಿಗಳಾದರು.

ತಾಯಿಯ ಕರುಣೆ ಅಪಾರ. ದುಃಖದಿಂದ ಮೊರೆಹೊಕ್ಕವರನ್ನು ಎಂದೂ ಅಲಕ್ಷಿಸುತ್ತಿರಲಿಲ್ಲ. ರಕ್ಷಿಸಿ ಕಾಪಾಡುತ್ತಿದ್ದರು. ಒಮ್ಮೆ ಮಳೆಯೇ ಬರಲಿಲ್ಲ. ಕುಡಿಯುವ ನೀರು ಜನರಿಗೆ ಇಲ್ಲದಾಯ್ತು. ಊರ ಸನಿಹದಲ್ಲೇ ಹಳ್ಳವಿದ್ದರೂ, ಹಳ್ಳದಲ್ಲಿ ನೀರು ಹರಿಯುತ್ತಿರಲಿಲ್ಲ ಜನ ಕಂಗಾಲಾಗಿ ತಾಯಿಯವರ ಮೊರೆ ಹೊಕ್ಕರು. ಅವರ ಸಂಕಟವನ್ನು ನೋಡಿ ಅವ್ವನ ಕರುಳು ಮಿಡಿಯಿತು. ಅಲ್ಲಿಯೇ ಇದ್ದ ಅಗಸರ ಅಮೀನಪ್ಪನನ್ನು, 'ಲೇ ಅಮೀನಾ ಹಳ್ಳಕ್ಕೆ ಹೋಗಿ, ಹೊಸ ಒರತೆಯನ್ನು ತೋಡಿ ಗಂಗೆ ಪೂಜಿಸಿ ಕರೆದುಕೊಂಡು ಬಾ. ಪೂಜೆ ಮಾಡಿಕೊಂಡು ಬರುವಾಗ

ಒಂದು ತಂಬಿಗೆ ತುಂಬಿಕೊಂಡು ಬಂದು ಶರಣಬಸಪ್ಪನ ಬಾಗಿಲಿಗೆ (ಅಲ್ಲಿದ್ದ ಗದ್ದುಗೆಯ) ಹಾಕಿಬಿಡು ಎಂದರು. ಅಮೀನಪ್ಪ ಅಂದು ಮಧ್ಯಾಹ್ನ ಹಳ್ಳಕ್ಕೆ ಹೋಗಿ ತಾಯಿಯವರು ಹೇಳಿದಂತೆಯೇ ಮಾಡಿ, ನೀರು ತಂದು ಅವ್ವಾವರು ಮಲಗುತ್ತಿದ್ದ ಕೋಣೆಯ ಕಟ್ಟೆಯ ಮೆಟ್ಟಲುಗಳ ಮೇಲೆ ನೀರು ಸುರುವಿದ. ಅಂದೇ ಮಧ್ಯರಾತ್ರಿಯ ಹೊತ್ತಿಗೆ ಮೇಲೆ ಎಲ್ಲೋ ಮಳೆಯಾಗಿ ಹಳ್ಳಕ್ಕೆ ಮಹಾಪೂರ ಬಂದಿತ್ತು. ಹಳ್ಳ ತಂಬಿ ಹರಿದು ಮಧ್ಯಾಹ್ನ ಅಮೀನಪ್ಪ ಗಂಗೆ ಪೂಜಿಸಿ ತಂದ ನೀರು ಸುರಿದ ಮೆಟ್ಟಲಿನವರೆಗೂ ಹಳ್ಳದ ನೀರು ಬಂದಿತ್ತು. ಹೀಗೆ ತಾಯಿಯವರನ್ನೆಲ್ಲ ಕಂಡ ನೂರಾರು ಜನರೇ ಇದಕ್ಕೆ ಸಾಕ್ಷಿ.

ಮಾತೃ ಕರುಣೆಯ ಮಹಾತಾಯಿ

ಜನರು ಈ ರೀತಿಯಾಗಿ ತಾಯಿಯಲ್ಲಿ ತಮ್ಮ ಕಷ್ಟ ಪರಿಹಾರ ಮಾಡಿಕೊಳ್ಳುತ್ತಿದ್ದರಲ್ಲದೆ, ಯಾವ ವೈದ್ಯರಿಗೂ ನಿಭಾಯಿಸದ ಖಾಯಿಲೆಗಳಿಗಾಗಿ, ಎಷ್ಟೋ ವರ್ಷಗಳ ಕಾಲ ಮಕ್ಕಳಾಗದಿದ್ದವರು ತಾಯಿಯವರ ಆಶೀರ್ವಾದದಿಂದ ತಮ್ಮ ಇಷ್ಟಾರ್ಥಗಳನ್ನು ನೆರವೇರಿಸಿಕೊಂಡಿದ್ದಾರೆ. ಮುದ್ದೇಬಿಹಾಳ ತಾಲ್ಲೂಕಿನ ಆಲೂರಿನ ದೊಡ್ಡಬಸಪ್ಪನೆಂಬುವವನಿಗೆ ಫಿಟ್ಸ್ ಬರುತ್ತಿತ್ತು. ಅನೇಕ ವೈದ್ಯರುಗಳಿಂದ ಚಿಕಿತ್ಸೆ ಪಡೆದ. ಎಲ್ಲೂ ಉಪಯೋಗವಾಗಲಿಲ್ಲ. ವೈದ್ಯರ ಪ್ರಯತ್ನ ಮುಗಿದಿತ್ತು. ಯಾರದೋ ಸಲಹೆಯ ಮೇಲೆ ತಾಯಿಯವರ ಬಳಿ ಬಂದು ತನ್ನ ಗೋಳನ್ನು ತೋಡಿಕೊಂಡ. ತಾಯಿಯವರು ಉತ್ತತ್ತಿ, ಕಲ್ಲು ಸಕ್ಕರಿ ಆಶೀರ್ವದಿಸಿ ಒಂದು ಭಸ್ಮದ ಗಟ್ಟಿದಯಪಾಲಿಸಿದರು. 'ಯಪ್ಪಾ ಈ ಭಸ್ಮವನ್ನು ಹೊಟ್ಟೆಗೆ ಸವರಿಕೊಳ್ಳಪ್ಪಾ, ಹನ್ನೊಂದು ಅಮವಾಸ್ಯೆ ಮುತ್ತ್ಯಾನ (ಗುಡದೂರ ಅಜ್ಜಾ ಅವರ) ದರ್ಶನಕ್ಕೆ ಬಂದು ಹೋಗು ಎಂದು ಅಪ್ಪಣೆ ಮಾಡಿದರು. ಬಸಪ್ಪ ಶಿರಸಾವಹಿಸಿ ನಡೆದ. ಐದು ಆರು ಅಮವಾಸ್ಯೆ ಬರುವುದರೊಳಗೆ ಖಾಯಿಲೆ ವಾಸಿಯಾಯಿತು. ಹನ್ನೊಂದನೆಯ ಅಮಾವಾಸ್ಯೆಗೆ ರೋಗ ಸಂಪೂರ್ಣ ಹೋಗಿತ್ತು. ಇದನ್ನು ದೊಡ್ಡ ಬಸಪ್ಪನವರ ಬಾಯಿಂದಲೇ ಕೇಳಬಹುದು. ಈ ರೀತಿ ತಮ್ಮ ಸಂಕಟ ಪರಿಹಾರ ಮಾಡಿಕೊಂಡವರು ಲೆಕ್ಕವಿಲ್ಲದಷ್ಟು ಜನ. ಎಷ್ಟೋ ಮನೆತನಗಳಲ್ಲಿ ವಿವಾಹವಾಗಿ ಹದಿನೆಂಟು ಇಪ್ಪತ್ತು ವರ್ಷಗಳಾದರೂ ಮಕ್ಕಳಾಗದೇ ವಂಶ ಬೆಳೆಯದೆ ನಂದಿ ಹೋಗುವಂತಹ ಸಂದರ್ಭದಲ್ಲಿ ತಾಯಿಯವರ ಆಶೀರ್ವಾದದಿಂದ ಮಕ್ಕಳನ್ನು ಪಡೆದು ವಂಶ ಬೆಳೆಯುವಂತೆ ಮಾಡಿಕೊಂಡವರಿದ್ದಾರೆ.

ಮುಂಬರುವ ಕಷ್ಟಗಳನ್ನು ಮೊದಲೇ ತಮ್ಮ ದಿವ್ಯ ದೃಷ್ಟಿಯಿಂದ ತಾಯಿಯವರು ಕಂಡುಕೊಳ್ಳುತ್ತಿದ್ದರು. ಆಗ ಅದರಿಂದ ಅವರು ಪಾರಾಗಲು ಏನು ಬೇಕೋ ಹಾಗೆ ಮಾಡುತ್ತಿದ್ದರೇ ಹೊರತು, ಹೀಗಾಗುತ್ತದೆ ಎಂದು ಭವಿಷ್ಯವಾಣಿ ನುಡಿದು,

ಪ್ರಚಾರ ಮಾಡಿಕೊಳ್ಳಲು ಹೋಗುತ್ತಿರಲಿಲ್ಲ. ಮುಂದೆ ಅನುಭವದಿಂದ ಜನರು, 'ತಾಯಿಯವರು ಇದಕ್ಕಾಗಿಯೇ ಹೀಗೆ ಹೇಳಿದ್ದರೆಂದು ಅರ್ಥ ಮಾಡಿಕೊಳ್ಳುತ್ತಿದ್ದರು ಅಷ್ಟೆ. ಇಂತಹ ಅನುಭವಗಳು ತಾಯಿಯವರ ಸಾನ್ನಿಧ್ಯಕ್ಕೆ ಹೋಗುತ್ತಿದ್ದವರಿಗೆ ಸಾಕಷ್ಟು ಆಗಿವೆ. ಒಮ್ಮೆ ಕೊಪ್ಪಳದ ಗವಿಮಠದ ಶ್ರೀಗಳು ಕೆಲವು ಭಕ್ತರೊಂದಿಗೆ ಸಲ್ಲಾಪುರಕ್ಕೆ ಹೊರಟಿದ್ದರಂತೆ. ಹೋಗುವ ಕಾಲಕ್ಕೆ ತಾಯಿಯವರ ದರ್ಶನ ಮಾಡಿಕೊಂಡು ಹೋಗಲು ಸಜ್ಜಲಗುಡ್ಡಕ್ಕೆ ಬಂದರು. ದರ್ಶನ ಪಡೆದು ತಕ್ಷಣ ಹಿಂತಿರುಗುವುದು ಅವರ ಉದ್ದೇಶವಾಗಿತ್ತು. ಆದರೆ ತಾಯಿಯವರು 'ಯಪ್ಪಾ ! ಸಂಜೆಯ ಪೂಜೆ, ಪ್ರಸಾದ ಇಲ್ಲೇ ಆಗ್ಬೇಕಪ್ಪಾ, ಮುಂಜಾನೆದ್ದು ಹೋಗುವಿರಂತೆ' ಎಂದರು. ಶ್ರೀಗಳು ಬೇರೆ ರೀತಿಯ ಪ್ರೋಗ್ರಾಂ ಹಾಕಿಕೊಂಡಿದ್ದರು. ರಾತ್ರಿ ಪಯಣಿಸಿ ಬೆಳಗಾಗುವುದರಲ್ಲಿ ಸೊಲ್ಲಾಪುರ ಮುಟ್ಟುವದು ಅವರ ಗುರಿ. ಅದಕ್ಕಾಗಿ ಅವರು ನಮ್ರತೆಯಿಂದ 'ಇನ್ನೊಮ್ಮೆ ಬಂದಾಗ ಪೂಜೆ, ಪ್ರಸಾದ ತೀರಿಸಿಕೊಳ್ಳುತ್ತೇವೆ. ಈಗ ಹೋಗಲೇಬೇಕಾಗಿದೆ ತಾಯೀ ಎಂದರು. ಆದರೂ ತಾಯಿಯವರು ಹಾಗಲ್ರಪಾ ಈ ದಿನ ನೀವು ಇಲ್ಲೇ ವಾಸ್ತವ್ಯ ಮಾಡಬೇಕು ಎಂದರು. ನಿರ್ವಾಹವಿಲ್ಲದ ಶ್ರೀಗಳು 'ಮೊದಲು ಪೂಜೆ, ಪ್ರಸಾದ ತೀರಿಸಿಕೊಳ್ಳೋಣ, ಮುಂದೆ ಹೊರಡುವದರ ಬಗ್ಗೆ ಹೇಳಿದರಾಯ್ತು' ಎಂದುಕೊಂಡು ಪೂಜೆಗೆ ಹೋದರು. 'ಪ್ರಸಾದ ಮುಗಿಯುವಷ್ಟರಲ್ಲಿ ಜಿಟಿಜಿಟಿ ಮಳೆ ಪ್ರಾರಂಭವಾಯ್ತು. ಸ್ವಲ್ಪ ಕಡಿಮೆಯಾದ ಮೇಲೆ ಹೋದರಾಯ್ತೆಂದು ಕಾದರು. ಮಳೆ ನಿಲ್ಲಲಿಲ್ಲ. ಆದರೂ ಶ್ರೀಗಳೆದ್ದು ಹೋರಡಬೇಕೆಂದು ಇಚ್ಛೆ, ಅವರು ಹೊರಡುತ್ತೇವೆ' ಎಂದಂತೆಲ್ಲಾ ತಾಯಿಯವರು, 'ನಾಳೆ ಮುಂಜಾನೆ ದಯಮಾಡಿಸಬೇಕ್ರಪಾ' ಎನ್ನುತ್ತಿದ್ದರಂತೆ. ಒತ್ತಾಯದಿಂದ ವಾಸ್ತವ್ಯ ಮಾಡಿಸಿ, ಮುಂಜಾನೆ ಕಳಿಸಿಕೊಟ್ಟರಂತೆ.

ಮುಂಜಾನೆ ಶ್ರೀಗಳವರು ಸೊಲ್ಲಾಪುರದ ಮಾರ್ಗದಲ್ಲಿ ಕಂಡದ್ದೇನು. ಉದ್ದಕ್ಕೂ ದಾರಿಯಲ್ಲಿ ರಾತ್ರಿಯೆಲ್ಲ ಮಳೆ ಸುರಿದಿದೆ. ಹಳ್ಳ-ಕೊಳ್ಳಗಳು ತುಂಬಿ ಕೋಡಬಿದ್ದಿವೆ. ಹಿಂದಿನ ರಾತ್ರಿ ಪ್ರಯಾಣ ಹೊರಟ ಜನರೆಲ್ಲಾ ಮಾರ್ಗಮಧ್ಯದಲ್ಲಿ ಹಳ್ಳಗಳ ದಂಡೆಗಳಲ್ಲಿ ತೋಯ್ಸಿಕೊಂಡು ನಡಗುತ್ತಾ ಗುಂಪು ಗುಂಪಾಗಿ ನಿಂತಿದ್ದಾರೆ. ಮೋಟಾರುಗಳೂ ಹೋಗುವಂತೆ ಇರಲಿಲ್ಲ. ಈ ದೃಶ್ಯ ಕಂಡ ಶ್ರೀಗಳು ತಾಯಿಯವರು ತಮ್ಮನ್ನೇಕೆ ಕಳಿಸಲಿಲ್ಲ ಎಂಬುದನ್ನು ಅರ್ಥಮಾಡಿಕೊಂಡರು. ಅವರ ಮಾತು ಮೀರಿ ಬಂದಿದ್ದರೆ, ತಮಗಾಗುತ್ತಿದ್ದ ಫಜೀತಿ ಏನೆಂಬುದು ತಿಳಿಯಿತು. ಅವರು ಮನದಲ್ಲಿಯೇ ತಾಯಿಯವರಿಗೆ ನಮಸ್ಕಾರ ಸಲ್ಲಿಸಿದರು.

ಡಾ॥ ನರಸಣಗಿಯವರ ಕೃಪಾಮೂರ್ತಿ.

ತಾಯಿಯವರ ದರ್ಶನಾಶೀರ್ವಾದಕ್ಕೆ ದೂರ, ದೂರದಿಂದ ಸಾಹಿತಿಗಳು,

ಇಂಜನಿಯರರು, ವೈದ್ಯರು, ಸಾಹುಕಾರರು, ಬಡವರು ಎಲ್ಲರೂ ಬರುತ್ತಿದ್ದರು. ಅವರ ಒಂದು ಮಮತೆಯ ಆಶೀರ್ವಾದಕ್ಕೆ ಒಳಗಾದರೆ ತಮ್ಮ ಜೀವನ ಸುಗಮ ಎಂಬುದು ಜನರ ನಂಬಿಕೆ; ಅನುಭವ. ಒಮ್ಮೆ ಗುಲಬರ್ಗಾದ ಹೆಸರಾಂತ ವೈದ್ಯರಾದ ಡಾ. ನರಸಣಗಿಯವರು ಅವ್ವಾ ಅವರ ದರ್ಶನಕ್ಕೆ ಬಂದರು. ಬಂದ ಕೂಡಲೇ ತಾಯಿಯವರು ಆಶೀರ್ವದಿಸಿ, ತಕ್ಷಣವೇ ಹೊರಡಲು ಅಪ್ಪಣೆ ಕೊಟ್ಟುಬಿಟ್ಟರು. ಡಾಕ್ಟರಿಗಾದರೂ ಇನ್ನೂ ಸ್ವಲ್ಪ ಹೊತ್ತು ಕುಳಿತು ತಾಯಿಯವರೊಡನೆ ಮಾತಾಡಬೇಕೆಂಬಾಸೆ. ಆದರೆ ಅವರಾದರೋ ಕೂಡಲೇ ಹೊರಡುವಂತೆ ಅಪ್ಪಣೆ ಕೊಡಿಸಿದ್ದಾರೆ. ಮತ್ತೆ ಮರುಮಾತಾಡುವ ಧೈರ್ಯವಿಲ್ಲ. ನಿರ್ವಾಹವಿಲ್ಲದೆ ಹೊರಟರು. ಏಕೆ ಕೂಡಲೇ ಅಪ್ಪಣೆ ನೀಡಿದರು ಎಂಬುದೇ ಅವರಿಗೊಂದು ಒಗಟಾಯಿತು. ಕೆಲವಾರು ಮೈಲಿದಾಟಿದ ಮೇಲೆ ಮಳೆ ಪ್ರಾರಂಭವಾಯ್ತು. ಸುರಪುರ, ಶಹಾಪೂರದ ಸನಿಹಕ್ಕೆ ಕಾರು ಹೋಗುವುದರೊಳಗೆ ಭಯಂಕರ ಗಾಳಿ ಸುರುವಾಯ್ತು. ದಾರಿಯೇ ಕಾಣುವಂತಿರಲಿಲ್ಲ. ಶಹಪುರದ ಬಳಿ ಒಂದು ದೊಡ್ಡ ಮರವನ್ನು ದಾಟಿ ಮುಂದೆ ಸ್ವಲ್ಪ ದೂರ ಹೋಗಿರಬಹುದು. ಅಷ್ಟರಲ್ಲಿ ಆ ದೊಡ್ಡಮರ ಭಯಂಕರ ಶಬ್ದ ಮಾಡುತ್ತಾ ರಸ್ತೆಗೆ ಅಡ್ಡಲಾಗಿ ಮುರಿದು ಬಿತ್ತು. ಆ ಮರ ಬಿದ್ದ ಭೀಕರ ಶಬ್ದಕ್ಕೆ ದಂಗಾಗಿ ಡಾ. ನರಸಣಗಿಯವರು ಹಿಂದಿರುಗಿ ನೋಡಿದರು. ಕಾರು ಆ ಸ್ಥಳ ದಾಟಿದ ಕೆಲವೇ ಸೆಕೆಂಡುಗಳಲ್ಲಿ ಮರ ಮುರಿದು ಬಿದ್ದಿತ್ತು. ಆಗ ತಾಯಿಯವರು ತಮ್ಮನ್ನು ತೀವ್ರ ಏಕೆ ಕಳಿಸಿಕೊಟ್ಟರು ಎಂಬುದು ಡಾಕ್ಟರಿಗೆ ತಿಳಿಯಿತು. ಇನ್ನು ಸ್ವಲ್ಪ ತಡಮಾಡಿ ಹೊರಟ್ಟಿದ್ದರೆ (ಸಜ್ಜಲಗುಡ್ಡದಲ್ಲಿ ಸ್ವಲ್ಪವೂ ಮಳೆಯಿರಲಿಲ್ಲ) ಅವರು ಅಷ್ಟು ದೂರ ಹೋದ ಮೇಲೆ ಆ ದೊಡ್ಡಮಟ ದಾರಿಗೆ ಅಡ್ಡಲಾಗಿ ಬಿದ್ದಿರುತ್ತಿತ್ತು. ಆ ಬಿರುಗಾಳಿ, ಮಳೆಯಲ್ಲಿ ಬಿದ್ದಿರುತ್ತಿತ್ತು. ಮುಂದೆಯೂ ಹೋಗಲಾಗದೆ, ಹಿಂತಿರುಗಲೂ ಸಾಧ್ಯವಾಗದೆ ಒಬ್ಬರೇ ಸಿಕ್ಕಿಕೊಂಡು ಫಜೀತಿ ಪಡಬೇಕಾಗುತ್ತಿತ್ತು. ಅದನ್ನರಿತ ತಾಯಿಯವರು ಮಗನನ್ನು ತಕ್ಷಣವೇ ಕಳಿಸಕೊಟ್ಟು ತೊಂದರೆಯಿಂದ ಪಾರುಮಾಡಿದ್ದರು. ಇಂತಹ ಅನುಭವಗಳಿಂದ ಜನರು ಅವರನ್ನು ಜೀವಂತ ದೇವರೆಂದು ತಿಳಿದಿದ್ದರಲ್ಲಿ ಆಶ್ಚರ್ಯವೇನಿಲ್ಲ.

**ಅಮ್ಮನವರ ಜನಸೇವೆ**

ಮೊದಲು ಕಂಬಳಿಹಾಳಕ್ಕೆ ಸರಿಯಾದ ರಸ್ತೆಯಾಗಲೀ, ಸಾರಿಗೆ ವ್ಯವಸ್ಥೆಯಾಗಲೀ ಇರಲಿಲ್ಲ. ನಂದವಾಡಗಿಯಲ್ಲಿ ಇಳಿದು ಕಚ್ಚಾ ರಸ್ತೆಯಲ್ಲಿ ನಡೆದುಕೊಂಡೋ, ಚಕ್ಕಡಿ ಕಟ್ಟಿಸಿ ಕೊಂಡೋ ಬರಬೇಕಿತ್ತು. ಆದುದರಿಂದ ಇಲಕಲ್ಲಿನ ಕಂಪ್ಲಿ ಜಡಿಯಪ್ಪನವರು ಆಗಿನ ಇಂಜನಿಯರಾಗಿದ್ದ ಶ್ರೀ ಅಂಟಿನವರಿಗೆ ರಸ್ತೆ ಮಾಡಿಸಲು ಅನೇಕ ಸಾರಿ ಸೂಚಿಸಿದ್ದರೂ, ಕಾರ್ಯಗತವಾಗಿರಲಿಲ್ಲ. ಒಮ್ಮೆ ಶ್ರೀ

ಅಂಟಿನವರು, ಶ್ರೀ ಜಡಿಯಪ್ಪನವರು ಮತ್ತು ಧಾರವಾಡದ ರಾವಬಹಾದ್ದೂರ ಅಂಗಡಿಯವರೊಡನೆ ತಾಯಿಯವರ ದರ್ಶನಕ್ಕೆ ಹೊರಟರು. ದಾರಿಯಲ್ಲಿ ಮಳೆ ಬಂದು ಕಚ್ಚಾ ರಸ್ತೆ ಎಲ್ಲ ರಾಡಿಯಾಯಿತು. ಕಾರು ಕೆಸರಿನಲ್ಲಿ ಸಿಕ್ಕು ಮುಂದೆ ಸರಿಯದಾಯಿತು. ಎಲ್ಲರೂ ಕೂಡಿ ಎಷ್ಟೇ ಪ್ರಯತ್ನಿಸಿದರೂ ಗಾಡಿ ಅಲುಗಾಡಲಿಲ್ಲ. ಆಗ ಶ್ರೀ ಕಂಪ್ಲಿ ಜಡಿಯಪ್ಪನವರು, 'ಅಲ್ರಿ ಸಾಹೇಬ್ರ ರಸ್ತೆ ಮಾಡಿಸ್ರಿ ಅಂತ ಸಾವಿರ ಸಲ ಹೇಳಿದ್ರೂ ನೀವು ಕಿವ್ಯಾಗೆ ಹಾಕಿಕೊಳ್ಳಲಿಲ್ಲ. ಈಗ ನಿಮ್ಮಗೇ ಇಂಥಾ ಸ್ಥಿತಿ ಬಂತು. ಅವ್ವನವರ ಹೆಸರೇಳಿ ರಸ್ತೆ ಮಾಡಿಸ್ತೀನಿಂತ ಸಂಕಲ್ಪ ಮಾಡಿ ಕೊಳ್ಳಿ, ಅದ್ಹೆಂಗೆ ಗಾಡಿ ಮುಂದೆ ಹೋಗೋಲ್ಲ ನೋಡ್ತೀನಿ' ಎಂದರು. ಆಗ ಅಂಟಿನ ಸಾಹೇಬರು ಅವರು ಹೇಳಿದಂತೆ ಸಂಕಲ್ಪ ಮಾಡಿದರು. ಗಾಡಿ ಮುಂದೆ ಸರಾಗವಾಗಿ ನೀರಿನಲ್ಲಿ ತೇಲಿದಂತೆ ಸುಲಭವಾಗಿ ಹೋಯಿತು. ಶ್ರೀ ಅಂಟಿನವರು ಸಂಕಲ್ಪಿಸಿದಂತೆ ನಂದವಾಡಗಿ–ಕಂಬಳಿಹಾಳದ ರಸ್ತೆಯನ್ನು ಪಕ್ಕಾ ರಸ್ತೆಯನ್ನಾಗಿಸಿದರು. ಹೀಗೆ ತಾಯಿಯವರ ದಯೆಯಿಂದ ಭಕ್ತಾದಿಗಳಿಗೆ ತಾಯಿಯವರ ದರ್ಶನಕ್ಕಾಗಿ ಹೋಗುವಾಗ ಆಗುತ್ತಿದ್ದ ತೊಂದರೆ ತಪ್ಪಿತು. ಈಗ ಸುಲಭವಾಗಿ ಸಜ್ಜಲಗುಡ್ಡ, ಕಂಬಳಿಹಾಳಗಳಿಗೆ ಪ್ರಯಾಣ ಮಾಡಬಹುದು. ಅವರಿವರ ಮಾತಿರಲಿ ಒಮ್ಮೆ ನಾನು ಮತ್ತು ನಮ್ಮಯಜಮಾನರು ಅಮ್ಮನವರ ದರ್ಶನಕ್ಕೆ ಹೋಗಿದ್ದೆವು. ಅವರೊಡನೆ ವಿವರವಾಗಿ ಮಾಡನಾಡಿ, ಧಾರ್ಮಿಕ ವಿಚಾರಗಳನ್ನು ಚರ್ಚಿಸಿ, ಪರೀಕ್ಷಿಸುವ ಮನೋಭಾವ (ನಮ್ಮ ಯಜಮಾನರಿಗೆ ಮಾತ್ರ)ದಿಂದ ಸಜ್ಜಲ ಗುಡ್ಡಕ್ಕೆ ಹೋಗಿದ್ದೆವು. ಅನೇಕ ಜನರು ಅಂದು ಬಂದಿದ್ದರು. ನಾವಿಬ್ಬರೂ ದರ್ಶನಾಶೀರ್ವಾದಕ್ಕೆ ಪಾಳಿಹಚ್ಚಿಹೋದೆವು ಧಾರವಾಡದಿಂದ ಬಂದ ಸಂಗತಿ ಕೇಳಿ, ಆಶೀರ್ವಾದ ಮಾಡಿ ಕಳಿಸಿಯೇ ಬಿಟ್ಟರು. ನಮಗೆ ಸಮಾಧಾನವೇ ಆಗದೆ ದೂರದಲ್ಲಿ ಚಿಂತೆಯಿಂದ ಕುಳಿತುಕೊಂಡಿದ್ದೆವು. ಸುಮಾರು ಒಂದು ಗಂಟೆಯ ನಂತರ, ಮತ್ತೆ ನಮ್ಮನ್ನು ಕರೆಯಿಸಿ, ವಿವರವಾಗಿ ಮಾತನಾಡಿ ನಮಗೆ ತೃಪ್ತಿ ನೀಡಿದರು. ಪ್ರಸಾದಕ್ಕೆ ಅನುವು ಮಾಡಿಕೊಟ್ಟರು. ನಮ್ಮ ಮನದ ಅಭೀಷ್ಟವನ್ನು ಆ ತಾಯಿ ಅರ್ಥಮಾಡಿಕೊಂಡುದು ಒಂದು ಪವಾಡ ಸದೃಶ ಘಟನೆ.

ಇಂತಹ ಘಟನೆಗಳು ಒಂದೆ, ಎರಡೆ? ಸಾವಿರಾರು. ಅಲ್ಲಿಗೆ ಭಕ್ತಿಯಿಂದ ನಡೆದುಕೊಳ್ಳುತ್ತಿದ್ದ ಪ್ರತಿಯೊಬ್ಬ ಭಕ್ತರ ಜೀವನದಲ್ಲೂ ಇಂತಹ ಪವಾಡ ಸದೃಶ ಘಟನೆಗಳು ನಡೆದಿರುವುದರಲ್ಲಿ ಎಳ್ಳಷ್ಟು ಸಂಶಯವಿಲ್ಲ. ಹಾಗಾಗಿಯೇ ಅವರ ಭಕ್ತರ ಸಂಖ್ಯೆ ದಿನದಿನಕ್ಕೆ ಹೆಚ್ಚುತ್ತಾ ನಡೆದಿತ್ತು. ಪ್ರಚಾರದಿಂದ, ಮೋಡಿಯಿಂದ, ಉದ್ದೇಶಪೂರ್ವಕ ಯೋಜನೆ ಹಾಕಿಕೊಂಡು, ಸಮಾಜದ ಗಣ್ಯವ್ಯಕ್ತಿಗಳನ್ನು ಮೊದಲು ತಮ್ಮ ಬುಟ್ಟಿಗೆ ಹಾಕಿಕೊಂಡು, ನಂತರ ಆದರ ಪ್ರಭಾವದಿಂದ ಜನಸಾಮಾನ್ಯರು ಮರುಳಾಗುವಂತೆ ಮಾಡಿ ಮಹಿಮಾನ್ವಿತರಂತೆ

ತೋರಿಸಿಕೊಳ್ಳುವಂತಹ ಪವಾಡಪುರುಷರಿಗೇನೂ ನಮ್ಮ ಸಮಾಜದಲ್ಲಿ ಕೊರತೆ ಇಲ್ಲ. ಇಂತಹ ಕಡೆ ಹೋದ ಅನೇಕರು ಪರಿಸ್ಥಿತಿಯನ್ನು ಒರೆಗೆ ಹಚ್ಚಿ ನಿಜಾಂಶ ತಿಳಿದು ನಿರಾಶರಾಗಿ ಹಿಂತಿರುಗಿದ್ದಾರೆ. ನಂತರ ಅಲ್ಲಲ್ಲಿ ಅಂತಹವರ ಬಗ್ಗೆ-ಒಡಕು ದನಿಗಳೂ ಕೇಳಿಸಿವೆ. ಆದರೆ ಶರಣಮ್ಮನವರ ಬಗ್ಗೆ ಅಂತಹ ಸದ್ದು-ಗದ್ದಲವಾಗಲಿ, ವಿರೋಧಗಳಾಗಲೀ ಯಾವ ಮೂಲೆಯಿಂದಲೂ, ಯಾವ ವಿಚಾರವಾಗಿಯೂ ಇಲ್ಲ. ತಾಯಿಯವರದು ಸರಳ ಮಾರ್ಗ. ಇಲ್ಲಿ ಮುಚ್ಚು ಮರೆಯಿಲ್ಲ. ಹುಡುಕಿ ತೆಗೆದೇನೆಂದರೂ ಕಲ್ಮಷವಿಲ್ಲ. ಸತ್ಯ-ಶುದ್ಧವಾದ ನಿಷ್ಠಾವಂತ ಶರಣ ಜೀವನವನ್ನು ಬಾಳಿದ ಮಹಿಮಾನ್ವಿತರು. ಅವರು. ಅವರ ಮಾತು ಬಹು ಅಪ್ಯಾಯಮಾನ; ಬದುಕು ಉನ್ನತ. ಇದನ್ನು ಪುಷ್ಟೀಕರಿಸುವ ನೂರಾರು ಸನ್ನಿವೇಶಗಳನ್ನು ಪರಿಶೀಲಿಸಿದಾಗ ಈ ಅನಿಸಿಕೆಯ ಸತ್ಯತೆ ಎದ್ದು ಕಾಣುತ್ತದೆ.

ಹನ್ನೆರಡನೆಯ ಶತಮಾನದ ಶರಣರ ಜೀವನದ ಕಥೆ ಓದಿ ಕೇಳಿ ಇದ್ದೆವು ಆದರೆ ಅಂತಹ ಜೀವನವನ್ನು ಇಪ್ಪತ್ತನೆಯ ಶತಮಾನದಲ್ಲಿ ತಾಯಿಯವರು ಬದುಕಿ, ನಮ್ಮ ಮುಂದೆ ತೋರಿಸಿದ್ದಾರೆ'. 'ಲಕ್ಷಕೊಬ್ಬ ಭಕ್ತ, ಕೋಟಿಗೊಬ್ಬ ಶರಣ' ಎಂದಿದ್ದಾರೆ. ಇಂತಹವರನ್ನು, ಈ ಯುಗದಲ್ಲಿ ಕೋಟಿಗೊಬ್ಬರನ್ನೂ ಕಾಣುವುದೂ ಅಸಾಧ್ಯ. ಅಂತಹ ಪೂಜ್ಯ ತಾಯಿಗೆ ಸಮಾಜ ಕೈಜೋಡಿಸಿ, ತಲೆಬಾಗಿ ನಮಿಸದೆ ಮತ್ತೇನು ಮಾಡೀತು; ಅಕ್ಕಮಹಾದೇವಿ, ಮುಕ್ತಾಯಿ, ನೀಲಾಂಬಿಕೆ, ನಾಗಲಾಂಬಿಕೆಯರಂಥ 'ಶರಣೆ'ಯರ ಬಗೆಗೆ ಓದಿ ತಿಳಿದಿದ್ದೇವೆ. ಆದರೆ ಅಂಥ ಶರಣೆಯೊಬ್ಬರನ್ನು ನಮ್ಮ ಕಾಲದಲ್ಲಿಯೇ ಕಂಡೆವಲ್ಲ, ಅದೇ ಪುಣ್ಯ. ಪೂಜ್ಯ ಸಜ್ಜಲಗುಡ್ಡದ ಶರಣಮ್ಮ ಅಂಥ ಒಬ್ಬ ಶರಣೆ.

ತಾಯಿ ಶರಣಮ್ಮನವರು ನೂರು ವರ್ಷಗಳ ತುಂಬು ಜೀವನವನ್ನು ಬಾಳಿದರು. ಈ ವಯಸ್ಸಿನಲ್ಲಿಯೂ ಅವರು ಸ್ವಾವಲಂಬಿಗಳಾಗಿದ್ದರು. ಗುರುಗಳಾಜ್ಞೆಯಂತೆ ನಿತ್ಯವೂ ತ್ರಿಕಾಲ ಲಿಂಗೋಪಾಸನೆಯನ್ನು ಶಿವೈಕ್ಯರಾಗುವ ಎರಡು ದಿನ ಮೊದಲು ಪ್ರಜ್ಞಾಹೀನ ಸ್ಥಿತಿಯಲ್ಲಿಯೂ ಸಹ ಅವರು ಬೆರಳುಗಳು ಜಪಮಾಲೆ ಹಿಡಿದು ಜಪಮಾಡುತ್ತಿರುವಂತಹ ರೀತಿಯಲ್ಲಿ ಚಲಿಸುತ್ತಿದ್ದವು. ಎಂದರೆ ಅವರು ತಮ್ಮ ಪೂಜಾಪದ್ಧತಿಯನ್ನು ಕೊನೆಯ ಉಸಿರಿರುವವರೆಗೂ ಬಿಡಲಿಲ್ಲ. ಅವರು ತಮ್ಮ ಪೂಜ್ಯ ಗುರುಗಳಾದ ಗುಡದೂರ ದೊಡ್ಡ ಬಸವಾರ್ಯರು ಅಂದು ದಯಪಾಲಿಸಿದ ಪಾದೋದಕವನ್ನೆ ಬೆಳೆಯಿಸಿಕೊಳ್ಳುತ್ತ ತೆಗೆದುಕೊಳ್ಳುತ್ತಿದ್ದರು. ಆಗಾಗ ಹುಬ್ಬಳ್ಳಿಯ ಮೂರುಸಾವಿರ ಮಠದ ಶ್ರೀ ಮನ್ಮಹಾರಾಜನಿರಂಜನ ಜಗದ್ಗುರು ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳನ್ನು ಶ್ರೀ ನಿ.ಪ್ರ. ಸದಾಶಿವ ಮಹಾಸ್ವಾಮಿಗಳು ಹಾನಗಲ್ಲ ಮತ್ತು ಇಲಕಲ್ಲ ಚಿತ್ತರಗಿ ಸಂಸ್ಥಾನಮಠದ

ಶ್ರೀ ನಿ.ಪ್ರ ಮಹಾಂತಸ್ವಾಮಿಗಳನ್ನು ತಮ್ಮಲ್ಲಿಗೆ ಕರೆಯಿಸಿಕೊಂಡು, ಪೂಜೆ ಮಾಡಿಸಿಸಿ, ಪಾದೋದಕ ಪ್ರಸಾದ ಪಡೆಯುತ್ತಿದ್ದರು.

ಶರಣಮ್ಮನವರಿಗೆ ಈ ಜೀವಿತದ ಕೊನೆಯ ಕಾಲ ಸಮೀಪಿಸುತ್ತಿದೆ ಎಂಬ ಅರಿವು ಬಂದೊಡನೆಯೇ, ಹತ್ತೊಂಬತ್ತ ನೂರಾ ಎಪ್ಪತ್ತೇಳರಲ್ಲಿಯೇ ಗುಡದೂರ ಅಜ್ಜಾವರ ಕಿರಿಯ ಮಗ ದೊಡ್ಡಯ್ಯನವರ ಹೆಸರಿನಲ್ಲಿ ಮೃತ್ಯುಪತ್ರ ಮಾಡಿಸಿ ಅವರನ್ನು ಆಶ್ರಮಕ್ಕೆ ವ್ಯವಸ್ಥಾಪಕರೆಂದು ನೇಮಿಸಿದರು. ಅದಾದನಂತರ ಅಮ್ಮಾವರ ದೇಹ ಪ್ರಕೃತಿ ಕ್ಷೀಣಿಸತೊಡಗಿತು. ಆದರೂ ಅವರ ಚೈತನ್ಯ ತಗ್ಗಿರಲಿಲ್ಲ. ದಿನಚರಿಯಲ್ಲಿ ಏನೂ ಬದಲಾವಣೆಯಾಗಲಿಲ್ಲ. ಬಂದ ಭಕ್ತರಿಗೆಲ್ಲಾ ದರ್ಶನಕೊಟ್ಟು, ಯೋಗಕ್ಷೇಮ ವಿಚಾರಿಸಿ, ಹರಿಸಿ ಕಳುಹಿಸುತ್ತಿದ್ದರು. ಕಿವಿ ಸರಿಯಾಗಿ ಕೇಳಿಸದಂತಾದರೂ ಭಕ್ತರ ಬೇಡಿಕೆಗಳನ್ನು ಕಡೆಗಣಿಸಲಿಲ್ಲ. ಕಾಗದದ ಮೇಲೆ ಬರೆಸಿಕೊಂಡು ನೋಡಿ ಅವರಿಗೆ ಪರಿಹಾರ ಸೂಚಿಸುತ್ತಿದ್ದರು. ನೂರು ವರ್ಷ ವಯಸ್ಸಿನಲ್ಲಿಯೂ ಕನ್ನಡಕವಿಲ್ಲದೆ ಓದುವಷ್ಟು ಅವರ ಕಣ್ಣುಗಳು ಚುರುಕಾಗಿದ್ದವು!

ಹತ್ತೊಂಬತ್ತನೂರಾ ಎಂಬತ್ತರಲ್ಲಿ ತಾಯಿಯವರ ಆರೋಗ್ಯ ಕೆಡುತ್ತಾ ಹೊರಟಿತು. ಮೇ ತಿಂಗಳಲ್ಲಿ ವಿಷಮಿಸುತ್ತಾ ನಡೆಯಿತು. ತಾಯಿಯವರು ಐಕ್ಯರಾಗುವ ನಾಲ್ಕು ತಿಂಗಳಿಂದ ದಿನವೂ ೧೦೨ ರಿಂದ ೧೦೪ ಜ್ವರ ಬರುತ್ತಿತ್ತು. ಯಾವ ಔಷಧೋಪಚಾರವನ್ನು ಮಾಡಿಸಿಕೊಳ್ಳಲಿಲ್ಲ. ಕೆಲವು ದಿನ ಕೇವಲ ಹಣ್ಣಿನ ರಸದ ಮೇಲಿರುತ್ತಿದ್ದರು. ಕೆಲವು ದಿನ ಹಾಲು ಸೇವಿಸುತ್ತಿದ್ದರು. ಮತ್ತೆ ಕೆಲವು ದಿನಗಳು ಎಳ ನೀರನ್ನಷ್ಟೇ ತೆಗೆದುಕೊಳ್ಳುತ್ತಿದರು. ಆಮೇಲೆ ಬೇಸಗೆಯಲ್ಲಿ ಕೆಲವರ ಸಲಹೆ ಮೇಲೆ ಕಲ್ಲಂಗಡಿ ಹಣ್ಣು ಸ್ವೀಕರಿಸಿದರು. ಕೊನೆಗೆ ಅದೂ ವರ್ಜ್ಯವಾಗಿ ಅಂತಿಮದ ೧೦-೧೫ ದಿನಗಳು ನಿರಾಹಾರಿಗಳಾಗಿಯೇ ಇದ್ದು ಬಿಟ್ಟರು. ಆದರೆ ಪಕ್ಕಾ ಮಡಿ. ಲಿಂಗಾರ್ಚನೆಗಳನ್ನು ಪ್ರಜ್ಞಾವಸ್ಥೆಯಲ್ಲಿರುವತನಕ ಬಿಡಲೇ ಇಲ್ಲ. ಒಂದು ದಿನ ತಾಯಿಯವರು ಶಿವಯೋಗ ಮಂದಿರದ ಶ್ರೀಗಳ ಪಾದದರ್ಶನದ ಅಪೇಕ್ಷೆ ವ್ಯಕ್ತಪಡಿಸಿದರು. ಇದು ಅವರ ಇಹಲೋಕ ಯಾತ್ರೆಯ್ನನ್ನು ಮುಗಿಸುವ ಮುನ್ಸೂಚನೆಯಂತಾಯ್ತು. ತಾಯಿಯವರ ಪ್ರಕೃತಿ ವಿಷಮಿಸಿದ ಸುದ್ದಿ ನಾಡಿನಲ್ಲೆಲ್ಲಾ ಪಸರಿಸಿತು. ನಾಗನೂರು ಶ್ರೀಗಳು, ಹಾಲಕೆರೆ ಶ್ರೀಗಳು, ಹುಬ್ಬಳ್ಳಿಯ ಜಗದ್ಗುರುಗಳು, ಸಜ್ಜಲಗುಡ್ಡಕ್ಕೆ ದಯಮಾಡಿಸಿದರು. ಇಲಕಲ್ಲ ಮಹಾಂತ ಸ್ವಾಮಿಗಳಂತೂ ತಾಯಿಯವರ ಅಂತ್ಯ ಸಮಯದ ಎರಡು ದಿನಗಳೂ ಅಲ್ಲಿಯೇ ಇದ್ದರು. ನಂದವಾಡಗಿಯ ಶ್ರೀಗಳು ಕೊನೆಯ ಒಂದು ತಿಂಗಳು ಪೂರ್ತಿ ಅವರೊಡನಿದ್ದು ಸೇವೆಸಲ್ಲಿಸಿದ್ದರು. ಆಗ ಅಮ್ಮನವರು ಅನಾರೋಗ್ಯವನ್ನು ಮರೆತು ಆನಂದದಿಂದ ತಮ್ಮ ಕೊಠಡಿಯ ಹೊರಗೆ ಬಂದು, ಶ್ರೀಗಳ ಪಾದಪೂಜೆ ಮಾಡಿ ಆನಂದವನ್ನು ಅನುಭವಿಸಿದರು.

ಪಕ್ಕಾ ಮಡಿಯ ಚೊಕ್ಕ ಚಿನ್ನ

ಅಮ್ಮನವರು ತಮ್ಮ ಆಚಾರಗಳನ್ನು ಅನಾರೋಗ್ಯ ಸ್ಥಿತಿಯಲ್ಲಿ ಬಿಡಲಿಲ್ಲ. ಐಕ್ಯರಾಗುವ ಒಂದೆರಡು ದಿನ ಮೊದಲು ಮೂತ್ರಬಾಧೆ. ಆಗ ಅವರು ತಾವೇ ಬಚ್ಚಲು ಮನೆಗೆ ಹೋಗಿ ತಣ್ಣೀರು ಸ್ನಾನಮಾಡಿ ಬಂದು ಬಿಡುತ್ತಿದ್ದರಂತೆ. ಇಪ್ಪತ್ತೆರಡನೆಯ ತಾರೀಖು ರಾತ್ರಿ ಅವರ ಪ್ರಕೃತಿತೀರಾ ವಿಷಮಿಸಿ, ಪ್ರಜ್ಞೆ ತಪ್ಪಿಹೋಯ್ತು ಆ ಸ್ಥಿತಿಯಲ್ಲಿ ಸಹ ಅವರ ಬಲಗೈ ಹೆಬ್ಬೆರಳು ಜಪಮಾಲೆ ಎಣಿಸುವಂತೆ ಚಲಿಸುತ್ತಿದ್ದಿತಂತೆ. ಬಳಿಯಲ್ಲಿದ್ದ ಶ್ರೀಗಳು ಅಮ್ಮನವರ ಕಿವಿಯಲ್ಲಿ ಬಾಯಿಟ್ಟು 'ಅಮ್ಮಾ'ಎಂದು ಕರೆದರೂ ಪ್ರಕೃತಿ ಕ್ರಿಯೆ ಇರುತ್ತಿರಲಿಲ್ಲವಂತೆ. ಆದರೆ 'ಬಸವಾ' ಎಂದರೆ ಅವರೂ 'ಬಸವಾ' ಎನ್ನುತ್ತಿದ್ದರಂತೆ. ಹೀಗೆ ಬಹಿರಂಗದಲ್ಲಿ ಪ್ರಜ್ಞಾಹೀನ ಸ್ಥಿತಿ ಆದರೆ, ಅಂತರಂಗದಲ್ಲಿ 'ಶಿವಯೋಗ' ಸಮಾಧಿಯಲ್ಲಿದ್ದರು. ಈ ಪ್ರಪಂಚ ಸಂಪೂರ್ಣ ಅವರ ಮನಸ್ಸಿನಿಂದ ಮರೆಯಾಗಿತ್ತು. ಈ ಸ್ಥಿತಿಯ ಸಂಗತಿ ತಿಳಿದ ಕೂಡಲೇ ಭಕ್ತ ಸಮೂಹ ದಿಕ್ಕು, ದಿಕ್ಕುಗಳಿದ ಸಜ್ಜಲಗುಡ್ಡಕ್ಕೆ ಬಂದು ಸಂದಣಿಗೂಡಿತು. ಪರಮಭಕ್ತರಾದ ಬಲದಿನ್ನಿಯ ನಾಡಗೌಡರೂ, ಜಾಲಹಳ್ಳಿಯ ವೀರಭದ್ರಪ್ಪ ಶೆಟ್ಟರೂ ಓಡೋಡಿ ಬಂದರು. ಇಲಕಲ್ಲ ಶ್ರೀಗಳೂ ಧಾವಿಸಿ ದಯಮಾಡಿಸಿದರು.

ಅಮ್ಮಾವರು ಇಹಲೋಕ ಜೀವನವನ್ನು ಮುಗಿಸುವ ಹಾದಿಯಲ್ಲಿದ್ದರೆ ಭಕ್ತರಿಗೆ ಅವರನ್ನು ಉಳಿಸಿಕೊಳ್ಳಬೇಕೆಂದು ಬಯಸಿದರು. ಆದರೆ ಕೆಲವು ಭಕ್ತರು; 'ಇದು ಅಮ್ಮಾವರ ಇಷ್ಟಕ್ಕೆ ವಿರೋಧವಾದುದೆಂದೂ, ಅವರ ಪಕ್ಕಾ ಮಡಿಗೆ ಕುಂದಾಗುವುದೆಂದೂ ವಾದಿಸಿದರು. ಆದರೆ ವೈದ್ಯೋಪಚಾರದಿಂದ ತಾಯಿಯವರನ್ನು ಉಳಿಸಿಕೊಳ್ಳಬಹುದೆಂಬ ಹಿರಿಹಂಬಲದಿಂದ ನಾಡಗೌಡರು, 'ತಾಯಿ ಮಡಿ, ಮೈಲಿಗೆಯನ್ನು ಮೀರಿದ ಮಟ್ಟ ಮುಟ್ಟಿದ್ದಾಳೆ. ಆಕೆಯ ಮಡಿಗೆ ಯಾವುದೂ ಧಕ್ಕೆ ತರುವುದಿಲ್ಲ' ಎಂದು ವಾದಿಸಿ, ಇಂದಿನ ಗುಡದೂರ ಅಜ್ಜಾವರ ಅಪ್ಪಣೆ ಪಡೆದು ವೈದ್ಯರನ್ನು ಕರೆಸಿ ಉಪಚರಿಸಿದರು. ರಕ್ತದ ಒತ್ತಡ, ನಾಡಿಯ ಬಡಿತ ಎಲ್ಲವೂ ಸರಿಯಾಗಿದ್ದವು. ಆದರೂ ಮೇಲ್ಮುಖವಾಗಿ ಹೊರಟಿದ್ದ ತಾಯಿಗೆ ಹಿಂದಿರುಗಿ ನೋಡುವುದೂ ಬೇಕಾಗಿರಲಿಲ್ಲ. ಔಷಧೋಪಚಾರ ಸ್ವಲ್ಪವೂ ಪರಿಣಾಮ ಬೀರಲಿಲ್ಲ. ಉಪಚಾರ ನಾಟಲಿಲ್ಲ, ಪ್ರಜ್ಞೆ ಬರಲಿಲ್ಲ. ಕೈ ಬೆರಳು ಜಪ ಮಾಡಿದಂತೆ ಚಲಿಸುತ್ತಲೇ ಇತ್ತು. ಮುಖದಲ್ಲಿ ಮಂದಹಾಸ ಮಿನುಗುತ್ತಿತ್ತು. ಸಾವಿರಾರು ಜನರು ಬಂದು ತಾಯಿಯವರ ಅಂತ್ಯದ ದರ್ಶನ ಪಡೆಯುತ್ತಿದ್ದರು. ಕೊನೆಯ ಗಳಿಗೆಯವರೆಗೂ ತಾಯಿಯವರ ಕಿವಿಯಲ್ಲಿ 'ಬಸವಾ' ಎಂದರೆ 'ಬಸವಾ' ಎಂದು ಉಚ್ಚರಿಸುತ್ತಿದ್ದರು. ಅದರ ಹೊರತು ಬೇರೊಂದು ಪ್ರತಿಕ್ರಿಯೆಯೇ ಇಲ್ಲ. ಬಸವ

ಮಂತ್ರ ಜಪಿಸುತ್ತಲೇ ಅವರು ಇಹಲೋಕಯಾತ್ರೆ ಮುಗಿಸಿದುದು ಸ್ಪಷ್ಟವಾಗಿ ಸಮೀಪದಲ್ಲಿದ್ದವರಿಗೆ ಗೋಚರಿಸುತ್ತಿತ್ತು.

ಈ ಪ್ರಸಂಗದಲ್ಲಿ ಶ್ರೀ.ನಿ.ಪ್ರ. ಇಲಕಲ್ಲ ಮಹಾಂತಸ್ವಾಮಿಗಳವರು ಹುಬ್ಬಳ್ಳಿಯ ಮೂರುಸಾವಿರ ಮಠದ ಶ್ರೀ ಜಗದ್ಗುರುಗಳನ್ನು ಫೋನು ಮಾಡಿ ಕರೆಯಿಸಿಕೊಂಡು, ನಂದವಾಡಗಿ ಪಟ್ಟಾಧ್ಯಕ್ಷರಿಂದ ಶ್ರೀ ಜಗದ್ಗುರುಗಳವರ ಪಾದೋದಕವನ್ನು ಮಾಡಿಸಿ ಅಮ್ಮನವರಿಗೆ ಕುಡಿಸಿದ ಎರಡು ಗಂಟೆಯೊಳಗಾಗಿ ಅಂದರೆ ದಿನಾಂಕ ೨೪-೪-೮೧ನೆಯ ರಾತ್ರಿ ೧೨-೪೫ಕ್ಕೆ ಮಹಾ ಶಿವಶರಣೆ ಅಮ್ಮನವರ ದಿವ್ಯ ಜೀವವು ವಿಶ್ವಾತ್ಮನಲ್ಲಿ ಲೀನವಾಯಿತು. ಲಿಂಗೈಕ್ಯರಾದರು.

ಅಂತ್ಯಯಾತ್ರೆ

ತಾಯಿಯವರು ಲಿಂಗೈಕ್ಯರಾದ ಸುದ್ದಿ ರಾಜ್ಯದ ಮೂಲೆ ಮೂಲೆಗೆ ಮುಟ್ಟಿತು. ಆಕಾಶವಾಣಿಯಲ್ಲಿ ಬಿತ್ತರಿಸಲಾಯಿತು. ಜನಸಾಗರದಂತೆ ಸಜ್ಜಲಗುಡ್ಡದ ಕಡೆಗೆ ಹರಿಯಿತು. ಲೆಕ್ಕವಿಲ್ಲದಷ್ಟು ಜನ ಅಂತ್ಯದರ್ಶನ ಪಡೆದು ಹಿಂತಿರುಗಿದರು. ಹಾನಗಲ್ಲ ಶ್ರೀಗಳು, ಹುಬ್ಬಳ್ಳಿಯ ಜಗದ್ಗುರುಗಳು, ಹಾಲಕೆರೆಯ ಸ್ವಾಮಿಗಳು, ಇಲಕಲ್ಲ ಶ್ರೀಗಳು, ಒಳಬಳ್ಳಾರಿ ಸ್ವಾಮಿಗಳು, ಉರನಾಳ ಶ್ರೀಗಳು, ಶ್ರೀ ಪುಟ್ಟರಾಜ ಗವಾಯಿಗಳು, ಕೊಪ್ಪಳ ಶ್ರೀಗಳು ಮುಂತಾದ ಲೆಕ್ಕವಿಲ್ಲದಷ್ಟು ಹರ-ಗುರು-ಚರ ಮೂರ್ತಿಗಳೂ ಸಜ್ಜಲಗುಡ್ಡಕ್ಕೆ ಅಮ್ಮನವರ ಅಂತ್ಯ ಯಾತ್ರೆಯಲ್ಲಿ ಭಾಗವಹಿಸಲು ದಯಮಾಡಿಸಿದರು.

ಅಂತ್ಯಯಾತ್ರೆ ಹೊರಟಿತು. ನಿಸರ್ಗವೂ ಮಳೆ ಸುರಿಸಿ ಕಣ್ಣೀರಿಟ್ಟಿತು. ಸುಮಾರು ಅರವತ್ತು ಸಾವಿರಕ್ಕೂ ಹೆಚ್ಚು ಮಂದಿ ಅಂತ್ಯಯಾತ್ರೆಯಲ್ಲಿ ಭಾಗವಹಿಸಿದ್ದರು. ಎಲ್ಲರ ಹೃದಯವೂ ತಾಯಿಯವರನ್ನು ಕಳೆದುಕೊಂಡ ಅನಾಥ ಮಗುವಿನ ಹೃದಯದಂತೆ ಭಾರವಾಗಿತು; ಗದ್ಗದಿತವಾಗಿತ್ತು. ಶರಣರಿಗೆ ಸ್ವರ್ಗದ ಹಾದಿ; ನಮ್ಮಂಥ ಮಾನವರಿಗಿದೋ ಮಣ್ಣಿನ ಹಾದಿ. ಸಜ್ಜಲಗುಡ್ಡದ ಶರಣಮ್ಮನ 'ಜೀವಾತ್ಮ' ಆ 'ಮಹಾ ಆತ್ಮ'ದಲ್ಲಿ ಒಡಬೆರೆದುದರಿಂದ ಅವರು ಎಲ್ಲ ಅರ್ಥದಲ್ಲಿ 'ಮಹಾತ್ಮರು', ಮಾನವರ ಬಾಳಿಗೆ ಮಾರ್ಗದರ್ಶಕ ನಂದಾ ದೀಪ.

[ಶ್ರೀ ಗುಡದೂರು ಶಿವಚೇತನ ಎಂಬ ಪ್ರೊ. ಜಿ. ಎಸ್. ಮಾಮನಿಯವರ ಗ್ರಂಥಕ್ಕೆ ಬರೆದ ಮುನ್ನುಡಿ ೧೯೯೬]

ಸನ್ನುಡಿ

'ನಿಬ್ಬೆರಗು' ಹಾಗೂ "ಸಜ್ಜಲಗುಡ್ಡದ ಶರಣಮ್ಮನವರು' ಎಂಬ ಶರಣ

ಚರಿತ್ರೆಯನ್ನು ಬರೆಯುವ ಮೂಲಕ ಕನ್ನಡ ಸಾರಸ್ವತ ಲೋಕಕ್ಕೆ ಹಾಗೂ ಧಾರ್ಮಿಕ ಕ್ಷೇತ್ರಕ್ಕೆ ಪರಿಚಿತರಾದ ಪ್ರೊ. ಜಿ. ಎಸ್. ಮಾಮನಿಯವರು ಇದೀಗ 'ಶ್ರೀ ಪರಮ ಪೂಜ್ಯ ಬಸವಾರ್ಯ ತಾತನವರ ಜೀವನ ದರ್ಶನ'ವನ್ನು ಮಾಡುವ 'ಗುಡದೂರ ಶಿವಚೇತನ'ವೆಂಬ ಕೃತಿಯನ್ನು ಕನ್ನಡ ನಾಡಿನ ಜನತೆಯ ಮುಂದೆ ಇಡುತ್ತಿದ್ದಾರೆ.

ಪ್ರೊ. ಜಿ. ಎಸ್. ಮಾಮನಿಯವರು ಮೊದಲಿನಿಂದಲೂ ಶಿವಶರಣರ ಪರಿಸರದಲ್ಲಿ ಬೆಳೆದವರು. ಗುಡದೂರು, ಕಂಬಳಿಹಾಳ ಮತ್ತು ಸಜ್ಜಲಗುಡ್ಡ ಕ್ಷೇತ್ರಗಳು, ಬಾಲ್ಯದಿಂದಲೂ ಅವರ ಆಡಂಬೊಲವಾದುದರಿಂದ ಅಲ್ಲಿ ಮಾತಾಡುವ ಜೀವಂತ ದೇವರೆಂದೇ ಪ್ರಸಿದ್ಧರಾದ ಸಜ್ಜಲಗುಡ್ಡದ ಶರಣಮ್ಮ ತಾಯಿಯವರ ಮತ್ತು ಗುಡುದೂರು ತಾತನವರ ನೇರ, ನಿಕಟ ಪರಿಚಯವಿದ್ದ ಪುಣ್ಯಾತ್ಮರು, ಅವರುಗಳನ್ನು ಕಂಡವರು ಮಾತನಾಡಿಸಿದವರು, ಒಡನಿದ್ದವರು, ಅವರ ಪವಾಡ ಸದೃಶ್ಯ ಕಾರ್ಯಗಳನ್ನು, ದಿವ್ಯ ಜೀವನವನ್ನು, ಭಕ್ತರ ಸಂಕಟಗಳನ್ನು ನಿವಾರಿಸಿದ ಘಟನೆಗಳನ್ನು ನೇರಕಂಡವರು, ಶರಣದ್ವಯರ ಕೃಪಾಶೀರ್ವಾದಕ್ಕೆ ಪಾತ್ರರಾದವರು, ಹಾಗಾಗಿ ಆ ಶರಣರುಗಳ ಜೀವನ ಚರಿತ್ರೆಯನ್ನು ಇದ್ದಕ್ಕಿದ್ದ ಹಾಗೆ ಬರೆಯಲು ಸಮರ್ಥರಾಗಿದ್ದಾರೆ. ಇಬ್ಬರು ಶರಣರೂ ಗುಡದೂರಿನ ದೊಡ್ಡ ಬಸವಾರ್ಯ ಮಹಾಶರಣರ ಕೃಪಾಶೀರ್ವಾದಕ್ಕೆ ಪಾತ್ರರಾಗಿ, ಅವರ ಅನುಗ್ರಹದಿಂದ ರೂಪುಗೊಂಡ ಮಹಿಮರು. ಇವರುಗಳ ಬಗ್ಗೆ ಪ್ರೊ. ಜಿ. ಎಸ್. ಮಾಮನಿಯವರಿಗೆ ಅಪಾರವಾದ ಭಕ್ತಿ, ಶ್ರದ್ಧೆ, ನಿಷ್ಠೆ ಇಂತಹ ಪುಣ್ಯವಂತರ ಪರಿಸರದಲ್ಲಿ ಅನೇಕ ಶರಣಾನುಭವಗಳನ್ನು ಪಡೆದ ಪ್ರೊ. ಮಾಮನಿಯವರು ಶರಣರ ದಿವ್ಯ ಜೀವನದ ಪರಿಚಯವನ್ನು ಸಮಾಜಕ್ಕೂ ಉಂಟು ಮಾಡಿ, ಜನರಲ್ಲಿ ಧಾರ್ಮಿಕ ಭಾವನೆಯನ್ನು ಜಾಗ್ರತಗೊಳಿಸಲು ಸಹಾಯಕರಾಗಿದ್ದಾರೆ. ಅಲ್ಲದೆ ರೀತಿ-ನೀತಿಗಳನ್ನಾಗಲೀ ನಮ್ಮ ಸಂಸ್ಕೃತಿ-ಪರಂಪರೆಗಳನ್ನಾಗಲೀ ತಿಳಿದುಕೊಳ್ಳದೆ ಬೆಳೆಯುತ್ತಿರುವ ಇಂದಿನ ಪೀಳಿಗೆಗೆ ಈ ಕೃತಿಗಳ ಮೂಲಕ ಧರ್ಮ, ರೀತಿ-ನೀತಿ-ಸಂಸ್ಕೃತಿ, ಪರಂಪರೆಗಳ ಪರಿಚಯ ಮಾಡಿಕೊಡುತ್ತಿರುವುದು ಒಂದು ಸ್ತುತ್ಯವಾದ ಕೆಲಸವೇ ಸರಿ.

ಕಟ್ಟಾ ಬ್ರಹ್ಮಚಾರಿಣಿಯೂ, ನಿಷ್ಠಾವಂತ ಸಾಧಕರೂ ಆಗಿ, ಕಟ್ಟು-ನಿಟ್ಟಾದ ಜೀವನವನ್ನು ನಡೆಸಿದ್ದ, ತಮ್ಮ ಗುರುಗಳ ಇಚ್ಛೆಯಂತೆ ಚಾಚೂ ತಪ್ಪದೆ ನಡೆಯುತ್ತಾ, ಅವರ ಆದೇಶದಂತೆ ಬೇರೆಲ್ಲೂ ಹೋಗದೆ ಸಜ್ಜಲಗುಡ್ಡ-ಕಂಬಳಿಗಹಾಳಗಳನ್ನು ತಮ್ಮ ಸಾಧನೆಯ ಕ್ಷೇತ್ರವನ್ನಾಗಿ ಮಾಡಿಕೊಂಡು, ಶತಮಾನದ ಕಾಲ ಬದುಕಿದ ಮಾತೆ, ಸಜ್ಜಲಗುಡ್ಡದ ಶರಣಮ್ಮನವರ ಚರಿತ್ರೆಯನ್ನು ನಿಬ್ಬೆರಗಾಗುವಂತೆ ನಿರೂಪಿಸಿದ್ದಾರೆ. ಈಗ ಸಂಸಾರಿಯಾಗಿ ಹೆಂಡತಿ ಮಕ್ಕಳೊಂದಿಗೆ ಬಾಳುತ್ತಾ, ಶರಣ ಜೀವನವನ್ನು ಬದುಕಿ, 'ಗೃಹಸ್ಥ ಜೀವನ ಶರಣ ಜೀವನಕ್ಕೆ ಅಡ್ಡಿಯಲ್ಲ' ಎಂಬ ಶರಣರ ಸಂದೇಶವನ್ನು ಸ್ವತಃ ಬದುಕಿ ತೋರಿಸಿರುವ ಗುಡದೂರ ತಾತನವರ

ಜೀವನ ಚರಿತ್ರೆ ಹಾಗೂ ಪವಾಡ ಸದೃಶ ಜನ ಕಲ್ಯಾಣ ಕಾರ್ಯಗಳನ್ನು ಈ ಪುಸ್ತಕದಲ್ಲಿ ಚಿತ್ರಿಸಿದ್ದಾರೆ.

ಈ ಪುಸ್ತಕದಲ್ಲಿ ಬರುವ ಅಂಶಗಳನ್ನು ಎರಡು ಭಾಗವಾಗಿ ವಿಂಗಡಿಬಹುದಾಗಿದೆ. ಮೊದಲ ಭಾಗದಲ್ಲಿ ಗುಡದೂರ ತಾತನವರ ತಂದೆ-ತಾಯಿ, ಜನನ-ಬಾಲ್ಯ, ವಿದ್ಯಾಭ್ಯಾಸ-ವಿವಾಹ ಮುಂತಾದ ವಿಷಯಗಳನ್ನೊಳಗೊಂಡ ಅವರ ಜೀವನ ಚರಿತ್ರೆಯನ್ನು ವಿವರವಾಗಿ ಚಿತ್ರಿಸಿದ್ದಾರೆ.

ಇವರ ಶಿಕ್ಷಣ ಮುಲ್ಕಿ ಪರೀಕ್ಷೆಯವರೆಗೆ ಆಗಿತ್ತು. ನಂತರ ಪಂಚ ಪೀಠಗಳಲ್ಲಿ ಒಂದಾದ ಉಜ್ಜಯಿನಿಯ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯರ ಸನ್ನಿಧಿಯಲ್ಲಿ ಜ್ಯೋತಿಷ್ಯ, ಆಯುರ್ವೇದ, ಯೋಗ, ವಾಸ್ತುಶಿಲ್ಪ ಮುಂತಾದ ಶಾಸ್ತ್ರಗಳನ್ನು ಕರಗತ ಮಾಡಿಕೊಂಡರೆಂಬ ಅಂಶವೂ ಉಲ್ಲೇಖಿತವಾಗಿದೆ. ಈ ಸಂದರ್ಭವನ್ನು ಚಿತ್ರಿಸುವಾಗ, ಗುಡದೂರ ಅಜ್ಜನವರು ಜಗದ್ಗುರುಗಳಿಗೆ ಅಚ್ಚುಮೆಚ್ಚಿನವರಾಗಿದ್ದ ವಿಷಯ, ಅವರು ಬುಕ್ಕಾಂಬುಧಿಯ ಗುಹೆಯಲ್ಲಿ ತಪೋನಿರತರಾಗಿದ್ದಾಗ, ಆ ಗುಹೆಯ ಸುತ್ತಮುತ್ತ ಸರ್ಪ ಮತ್ತು ಕಾಡುಮೃಗಗಳು ಇರುತ್ತಿದ್ದವಾಗಿ, ಎಲ್ಲರೂ ಅಲ್ಲಿಗೆ ಹೋಗಲು ಹೆದರುತ್ತಿದ್ದರು. ಆದರೆ ಗುಡದೂರ ಅಜ್ಜನವರು ಧೈರ್ಯದಿಂದ ಹೋಗಿ ಪ್ರಸಾದ ಕೊಟ್ಟು ಬರುತ್ತಿದ್ದರೆಂಬ ಅಂಶವನ್ನು ನಿರೂಪಿಸಿದ್ದಾರೆ. ಈ ಸಂದರ್ಭಗಳಲ್ಲಿ, ನಮಗೆ ಗುಡದೂರ ಅಜ್ಜನವರು ಬಾಲ್ಯದಿಂದಲೇ ಶರಣ ಗುಣಗಳನ್ನು ಅಳವಡಿಸಿಕೊಂಡು ತಮ್ಮ ವ್ಯಕ್ತಿತ್ವ ರೂಪಿಸಿಕೊಂಡಿದ್ದತ್ತಿದ್ದರೆಂಬ ಅಂಶ ವ್ಯಕ್ತವಾಗುತ್ತದೆ.

ಉಜ್ಜಯನಿಯ ಜಗದ್ಗುರುಗಳ ಸೇವೆಯಲ್ಲಿದ್ದಾಗಲೇ ಅಜ್ಜನವರು ಹೊರಗೆ ಮುಗ್ಧ ಬಾಲಕನಂತೆ ಕಂಡರೂ, ಅಂತರಂಗದಲ್ಲಿ ಆಧ್ಯಾತ್ಮದ ಉನ್ನತಿಯನ್ನು ಪಡೆದಿದ್ದರೆಂಬುದು ಓದುಗರಿಗೆ ಗೋಚರವಾಗುತ್ತದೆ. ಇಲ್ಲಿ ಅಂತರಂಗದ ಬೆಳವಣಿಗೆಯನ್ನು ಮಾಡಿಕೊಂಡು ತಮ್ಮ ಊರಾದ ಚನ್ನಳ್ಳಿಗೆ ಹಿಂತಿರುಗುವ ಹೊತ್ತಿಗೆ ಗುಡದೂರಿನ ಮಠದ ಪವಾಡ ಪುರುಷ ದೊಡ್ಡ ಬಸವಾರ್ಯರು ಲಿಂಗೈಕ್ಯರಾಗಿದ್ದರು. ಆದುದರಿಂದ ಬಸವಾರ್ಯರ ಶರಣ ಗುಣಗಳ ಬಗೆಗೆ, ಸದಾಚಾರದ ಬಗೆಗೆ ಕೇಳಿದ್ದ ಗುಡದೂರಿನ ಸದ್ಭಕ್ತರು, ತಡಮಾಡದೆ ಈ ಕಿರಿಯ ಬಸವಾರ್ಯರನ್ನು ಗುಡದೂರ ಮಠಕ್ಕೆ ಕರೆತಂದರು. ಆಗಿನಿಂದ ಗುಡದೂರು ಇವರ ಕಲ್ಯಾಣ ಕಾರ್ಯಗಳ ಕಾರ್ಯ ಕ್ಷೇತ್ರವಾಯಿತು. ಇಲ್ಲಿ ಅವರು ಗುಡುದೂರಪ್ಪ, ಗುಡುದೂರಜ್ಜ, ಗುಡುದೂರ ಮುತ್ತ್ಯಾ ಮುಂತಾದ ನಾಮಗಳಿಂದ ಪ್ರಖ್ಯಾತರಾದರು.

ಅಕ್ಕಮಹಾದೇವಿ ಹೇಳಿರುವಂತೆ, ಈ ಲೋಕದಲ್ಲಿ ಹುಟ್ಟಿದ ಬಳಿಕ

ಸ್ತುತಿನಿಂದೆಗಳು ಯಾರಿಗೂ ತಪ್ಪಿದ್ದಲ್ಲ. ಇದಕ್ಕೆ ಶರಣರೂ, ತಪಸ್ವಿಗಳೂ, ಸಾಧು-ಸತ್ಪುರುಷರೂ, ಹೊರತಲ್ಲ. 'ನಡೆಯುವವನು ಎಡಹುವವನೇ ಹೊರತು ಕುಳಿತವನಲ್ಲ', ಜನರ ಹಿತಕ್ಕಾಗಿಯೇ ಜನರೊಡನೆ ಬದುಕಿದ ಗುಡದೂರಪ್ಪನವರೂ ಸಹ ಜೀವನದಲ್ಲಿ ಅನೇಕ ಸವಾಲುಗಳನ್ನು ಸ್ವೀಕರಿಸಬೇಕಾಯ್ತು; ಸಮಸ್ಯೆಗಳನ್ನು ಎದುರಿಸಬೇಕಾಯ್ತು, ವ್ಯಂಗ್ಯಗಳನ್ನು ಸಹಿಸಬೇಕಾಯ್ತು, ಎಲ್ಲವನ್ನು ಅಜ್ಜನವರು ತಮ್ಮ ತಪೋಬಲದಿಂದ ಶರಣ ಸಾಧನೆಗಳಿಂದ, ಶಾಂತಿ-ಸಮಾಧಾನಗಳಿಂದ ಸುಸೂತ್ರವಾಗಿ ಎದುರಿಸಿದ ವಿಷಯಗಳು ಇಲ್ಲಿ ನಮಗೆ ಕಾಣಸಿಗುತ್ತವೆ.

ಭೂಪಟದ ಒಂದು ಚಿಕ್ಕೆಯಂತಿರುವ, ಚಿಕ್ಕ ಹಳ್ಳಿಯಾದ ಗುಡುದೂರು, ಅಪ್ಪಗಳ ದಿವ್ಯ ಪ್ರಕಾಶದಿಂದ, ಒಂದು ಪುಣ್ಯಕ್ಷೇತ್ರವಾಗಿ ರೂಪುಗೊಂಡು ನೆರೆ ರಾಜ್ಯಗಳಲ್ಲೂ ಇವರ ಖ್ಯಾತಿ ಹಬ್ಬಿದ ಅಂಶಗಳು, ನಮಗಿಲ್ಲಿ ಕಂಡು ಬರುತ್ತಿವೆ. ಅವರು ತೊಡುತ್ತಿದ್ದ ಮೂರು ಮೀಟರಿನ 'ಕಲ್ಪವೃಕ್ಷ' ದಂತಿದ್ದ ಅವರ ಉಡುಪಿನ ವೈಶಿಷ್ಟ್ಯದ ವಿವರಣೆ ತುಂಬಾ ಚನ್ನಾಗಿ ಬಂದಿದೆ. ಅಂಗಿಯ ಜೇಬಿನಿಂದ ಭಕ್ತರು ಬೇಡಿದುದನ್ನು ತೆಗೆದುಕೊಡುತ್ತಿದ್ದ ವರ್ಣನೆ ಪವಾಡ ಸದೃಶ್ಯವಾಗಿದೆ.

ಸಜ್ಜಲಗುಡ್ಡದ ತಾಯಿ ಶರಣಮ್ಮನವರು ಮತ್ತು ಗುಡದೂರ ಅಪ್ಪಗಳು ಶ್ರೀ ದೊಡ್ಡಬಸವಾರ್ಯರ ಪರಮ ಶಿಷ್ಯರು. ಒಂದೇ ರೆಂಬೆಯ ಎರಡು ಹೂಗಳಂತೆ ಅವರಿಬ್ಬರೂ ತಮ್ಮ ಸತ್ಕಾರ್ಯಗಳ ಪರಿಮಳ ಬೀರುತ್ತಾ, ಒಬ್ಬನೇ ಗುರುವಿನ ಶಿಷ್ಯರಾಗಿ ಒಂದೇ ತಾಯಿಯ ಪ್ರೀತಿಯ ಮಕ್ಕಳಂತೆ ಒಂದಾಗಿ ಬಾಳಿದ, ಭಕ್ತ ಹಿತಕಾರ್ಯಗಳನ್ನೆಸಗಿದ ಕಾರ್ಯ ಕಥನವೂ ಈ ಕೃತಿಯಲ್ಲಿದೆ.

ಮೊದಲನೆಯ ಈ ಭಾಗದಲ್ಲಿ ಗುಡುದೂರಪ್ಪನವರು ವಿವಾಹ ಮತ್ತು ಅವರ ಸಂಸಾರ ಜೀವನದ ವರ್ಣನೆ ಬಂದಿದೆಯಾದರೂ, ಶರಣರು ಸ್ವಂತ ಸಂಸಾರಕ್ಕಿಂತ ಲೋಕ ಸಂಸಾರದ ಹಿತಕ್ಕಾಗಿ ಅನವರತ ಶ್ರಮಿಸುತ್ತಿದ್ದ ವರ್ಣನೆಯನ್ನು ಕೊಡಲಾಗಿದೆ.

ಭಕ್ತರ ಪ್ರಾರ್ಥನೆಯನ್ನು ಗುರು ಈಡೇರಿಸಬೇಕಾದರೆ, 'ಭಕ್ತರಲ್ಲಿ ನಿರ್ಮಲ ಭಕ್ತಿ ಇರಬೇಕು' ಗುರುವಿನಲ್ಲಿ ಸತ್ಯ-ನಿಷ್ಕಾಮ ಶಕ್ತಿ ಬೇಕು' ಎಂದರೆ ಭೂಮಿ ಫಲವತ್ತಾಗಿ ಹದವಾಗಿರಬೇಕು. ಬೀಜ ಶಕ್ತಿಯುತವಾಗಿ ನಿರೋಗಿಯಾಗಿರಬೇಕು, ಒಂದರಲ್ಲಿ ದೋಷವಿದ್ದರೂ ಗಿಡ ಚಿಗುರುವುದಿಲ್ಲ. ಎಂಬ ಹೋಲಿಕೆ ಕೊಟ್ಟು ಲೇಖಕರು ಅಲ್ಲದೆ ಗುಡುದೂರಿನ ಸುತ್ತಮುತ್ತಲ ಹಳ್ಳಿಯ ಜನರು ಗುಡದೂರ

---

+ ಗುರು - ಶಿಷ್ಯ ಗುಣಗಳನ್ನೂ ಚಿತ್ರಿಸಿದ್ದಾರೆ

ಅಪ್ಪಾವರಲ್ಲಿ ಇಟ್ಟಿದ್ದ ಶ್ರದ್ಧೆ, ಭಕ್ತಿ, ಪ್ರೇಮಗಳ ಹಾಗೂ ಅಪ್ಪಾವರು ಅನೇಕ ಘಟನೆಗಳ ವರ್ಣನೆಯನ್ನು ಸಾಕಷ್ಟು ಕಾಣಬಹುದು.

ಭಕ್ತಜನರ ಉದ್ಧಾರ ಕಾರ್ಯಗಳಲ್ಲಿ ಅಜ್ಜನವರೊಡನೆ ಒಂದಾಗಿ ಸಹಕರಿಸುತ್ತಿದ್ದ ಸಜ್ಜಲಗುಡ್ಡದ ಪೂಜ್ಯ ಶರಣಮ್ಮ ತಾಯಿಯವರ ಉಲ್ಲೇಖವೂ ಅಲ್ಲಲ್ಲಿ ಬಂದಿದೆ.

ಸಾರ್ಥಕ ಬಾಳನ್ನೂ ಬಾಳಿದ, ತಮ್ಮ ಭಕ್ತರ ಕಷ್ಟ ಪರಿಹಾರಮಾಡುತ್ತಿದ್ದ ಗುಡದೂರ ಅಪ್ಪಗಳು ೩-೩-೧೯೫೦ರಲ್ಲಿ ಲಿಂಗೈಕ್ಯರಾದ ವರ್ಣನೆಯನ್ನು ಲೇಖಕರು ಮನಂಬುಗುವಂತೆ, ಅಂದಿನ ಚಿತ್ರ ಕಣ್ಣು ಮುಂದೆ ಹಾದುಹೋಗುವಂತೆ ವರ್ಣಿಸಿದ್ದಾರೆ. ತಮ್ಮ ಕಷ್ಟಗಳಿಗೆಲ್ಲಾ ಪರಿಹಾರ ನೀಡುತ್ತಿದ್ದ ಮುತ್ಯಾನನ್ನೂ ಕಳೆದುಕೊಂಡ ಅನಾಥ ಜನರ ವರ್ಣನೆಯನ್ನು ಕಣ್ಣಿಗೆ ಕಟ್ಟುವಂತೆ ಮಾಡಿದ್ದಾರೆ.

'ಭಕ್ತರೋದ್ಧಾರವೇ ಬದುಕೆಂದು ನಂಬಿದ, ದುಃಖಿಗಳ ಕಣ್ಣೀರೊರಸುವುದೇ ಕಾಯಕವೆಂದು ಅರಿತ, ನಿಸ್ವಾರ್ಥ ಜೀವನವೇ ಸಾರ್ಥಕ ಬಾಳೆಂದು ಭಾವಿಸಿದ, ಲೋಕ ಕಲ್ಯಾಣವೇ ಶಿವಪೂಜೆಯೆಂದು ತಿಳಿದ, ಹಾಗೂ ಸಕಲ ಜೀವಿಗಳ ಲೇಸ ಬಯಸುವುದೇ ಶರಣಧರ್ಮವೆಂದು ಬಗೆದ, ಭಕ್ತಪ್ರಾಣಿ ಗುಡದೂರಜ್ಜನವರು ಸಮಗ್ರ ಐವತ್ತು ವರ್ಷಗಳವರೆಗೆ ಸಾವಿರಾರು ಹಳ್ಳಿಗಳಲ್ಲಿ ಸುತ್ತಾಡಿದರು; ಕೋಟಿ ಕೋಟಿ ಸದ್ಭಕ್ತರನ್ನು ಕಂಡರು ಮತ್ತು ಲಕ್ಷ-ಲಕ್ಷ ಅಘಟಿತ ಘಟನೆಗಳನ್ನು ಮಾಡಿ ತೋರಿಸಿದರು........... ಸಾರ್ಥಕಲಿಂಗ ಪೂಜೆ ಎಂದು ನಡೆದರು' ಎಂಬ ವಾಕ್ಯಗಳಿಂದ, ಓದುಗರಿಗೆ ಮುತ್ಯಾರವರ ವ್ಯಕ್ತಿತ್ವದ ಪರಿಚಯ ಮಾಡಿಕೊಟ್ಟಿದ್ದಾರೆ. ಆದರೂ ಶರಣರ ಮಹಿಮೆಯನ್ನು ಶಬ್ದಗಳಿಂದ ವ್ಯಕ್ತಪಡಿಸಲು ಯಾರಿಂದಲೂ ಅಳವಲ್ಲ ಅವರ ಸಾಗರದಾಳದಗಲದ ಮಹಿಮೆಯನ್ನು ಬಣ್ಣಿಸುವುದೆಂದರೆ, ಹಳ್ಳಕ್ಕೆ ಸಮುದ್ರವ ಸುರಿದಂತೆ, ಮೀನಮರಿ ಮಹಾಸಾಗರವನೀಜಿದಂತೆ, ರೆಕ್ಕೆ ಬಲಿಯದ ಪಕ್ಷಿ ವಿಶ್ವವನೀಕ್ಷಿಸಿದಂತೆ, ಮತ್ತು ಹೆಳವ ಹಿಮಾಲಯವನೇರಿದಂತೆ' ಎಂಬ ಹರಿಹರ ಕವಿಯ ಮಾತುಗಳ ಮೂಲಕ, ಯಾವ ವರ್ಣನೆಯೂ ಗುಡದೂರ ಅಪ್ಪಗಳ ಶಕ್ತಿ ಸಾಮರ್ಥ್ಯಗಳ, ಕೆಲಸ-ಕಾರ್ಯಗಳ, ವ್ಯಕ್ತಿತ್ವದ ಪೂರ್ಣ ಚಿತ್ರಕೊಡಲು ಸಾಧ್ಯವಿಲ್ಲ ವೆಂಬ ಮಾತನ್ನು ಹೇಳಿದ್ದಾರೆ.

ಇನ್ನು ಮುಂದಿನ ಭಾಗದಲ್ಲಿ ಗುಡದೂರು ಅಜ್ಜನವರು ಮಾಡಿದ ಪವಾಡಗಳ ಎಂದರೆ ಲೋಕಕಲ್ಯಾಣ ಕಾರ್ಯಗಳನ್ನು ಚರ್ಚಿಸುವ ಘಟನೆಗಳನ್ನು ವಿವರಿಸಿದ್ದಾರೆ.. ಇವುಗಳನ್ನು ವರಿಸುವ ಮೊದಲು ಲೇಖಕರು, 'ಇಂದಿನ ವಿಜ್ಞಾನಯುಗದ ಜನರ ಟೀಕೆಗಳನ್ನು ಗಮನದಲ್ಲಿಟ್ಟುಕೊಂಡು, ಹೇಳಿರುವ ಈ ಕೆಳಗಿನ ಮಾತುಗಳು ವಿಚಾರ ಮಾಡುವ ಜನರ ಕಣ್ಣು ತೆರೆಸುವಂತಿದೆ.

"ಪವಾಡಗಳ ವಿಷಯ ಜಟಿಲವಾದದ್ದು ಅದಾಗ್ಯೂ! ಯಾವ ದೇಶಗಳಲ್ಲಿ ಪವಾಡಗಳಿಲ್ಲ? ಸತ್ಯಶರಣರ, ಮಹಾತ್ಮರ ಮತ್ತು ಸಾಧು-ಸಂತರ ಜೀವನಕ್ಕೂ ಪವಾಡಗಳಿಗೂ . ಅಂಟಿದನಂಟು, ಒಂದೇ ನಾಣ್ಯದ ಎರಡು ಮುಖಗಳು ಪವಾಡಗಳಿಂದ ಸತ್ಯವಂತರು ಸಿಕ್ಕುವುದು ಅತೀ ವಿರಳ ಎಲ್ಲದಕ್ಕೂ ವೈಜ್ಞಾನಿಕ ಕಾರಣಗಳನ್ನು ಹಚ್ಚುವುದು, ಹುಡುಕುವುದು ಸರಿ ಎನಿಸದು, ಸತ್ಯವೂ ಎನಿಸದು ವಿಜ್ಞಾನ ದಾರಿ ಕಾಣದಾದಾಗ ಆತ್ಮಜ್ಞಾನ ದಾರಿತೋರುವುದು ; ಬೆಳಕನ್ನೀಯುವುದು ಆತ್ಮಜ್ಞಾನ ವಿಜ್ಞಾನಕ್ಕಿಂತ ಶಕ್ತಿಯುಕ್ತವಾಗಿದ್ದು ಸರ್ವತ್ರ ಆಳುವಂತಹುದಾಗಿದೆ. ವಿಜ್ಞಾನವು ಕಾರ್ಯ ಕಾರಣ ಸಂಬಂಧಕ್ಕೆ ಸೀಮಿತವಾಗಿದ್ದು, ಅವುಗಳಿಗೆ ಮೀರಿ ದೃಷ್ಟಿ ಹರಿಸಲಾರದು. ಆದರೆ ಆತ್ಮಜ್ಞಾನ. ಕಾರ್ಯ -ಕಾರಣ ಸಂಬಂಧಗಳನ್ನು ಮೀರಿ ದಿವ್ಯ ನೇತ್ರದ ಸಹಾಯದಿಂದ ಎಲ್ಲದರ ಆಳಕ್ಕೆ ಇಳಿದು ಎಲ್ಲೆಲ್ಲೂ ಬೆಳಕನ್ನು ಹರಿಸಿ ತ್ರಿಕಾಲಜ್ಞಾನ ಪ್ರಭುವಾಗಿರುತ್ತದೆ."

ಈ ವಾಕ್ಯಗಳು ವಿಜ್ಞಾನ ಎಲ್ಲಿ ನಿಲ್ಲುತ್ತೋ ಆತ್ಮಜ್ಞಾನ ಅಲ್ಲಿಂದ ಪ್ರಾರಂಭವಾಗುತ್ತದೆ ಎಂಬ ಮಾತನ್ನು ಪುಷ್ಟೀಕರಿಸುತ್ತದೆ. ದೇವಮಾನವರ ಕಾರ್ಯಗಳನ್ನು ವೈಜ್ಞಾನಿಕವಾಗಿ ವಿವರಿಸಲು ಸಾಧ್ಯವಿಲ್ಲ ಎಂದ ಮಾತ್ರಕ್ಕೆ ಅವು ಸುಳ್ಳಲ್ಲ ಎಂಬ ಮಾತನ್ನು ಸಾಬೀತುಗೊಳಿಸುವ ಅನೇಕ ಘಟನೆಗಳನ್ನು ಲೇಖಕರು ಇದ್ದಕ್ಕಿದ್ದ ಹಾಗೆ ಉಲ್ಲೇಖಿಸಿದ್ದಾರೆ. ಗುಡದೂರ ಅಜ್ಜನವರ ಸಂಕಲ್ಪಸಿದ್ಧಿಯ ನೂರಾರು ಉದಾಹರಣೆಗಳನ್ನು ಕೊಟ್ಟಿದ್ದಾರೆ,.

ಅವುಗಳಲ್ಲಿ, ಬಲದಿನ್ನಿಯ ಶಂಕರರಾವ ನಾಡಗೌಡರಿಗೆ ಮೆದುಳಿನಲ್ಲಿ ನೀರು ತುಂಬಿಕೊಂಡಾಗಿನ ಘಟನೆ, ಕುಷ್ಟಗಿಯ ನಿರ್ಗತಿಕ ಮುದುಕಿಯೊಬ್ಬಳನ್ನು ಬ್ಯಾನಿಯಿಂದ ಪಾರುಮಾಡಿದ ಸಂಗತಿ, ಕುರುಗೋಡು ಹನುಮಂತಪ್ಪನ ಮಹಾರೋಗ ನಿವಾರಣೆಯಾದ ವಿಚಾರ ಮುಂತಾದ ಹಲವು ಘಟನೆಗಳು ಶರಣರು ಅಸಾಧ್ಯವಾದುದನ್ನು ಸಾಧ್ಯವಾಗಿಸಬಲ್ಲರೆಂಬುದನ್ನು ಜನಮನದಲ್ಲಿ ಅಚ್ಚಳಿಯದೆ ಉಳಿಸಬಲ್ಲವು.

ಸತ್ಯ ಶರಣರು, ಭವರೋಗ ವೈದ್ಯರಿದ್ದಂತೆ, ಎಷ್ಟೋಸಲ ಕಲಿತ-ನುರಿತ ವೈದ್ಯರಿಗೂ ಸಾಧ್ಯವಾಗದ ಭಯಂಕರ ರೋಗಗಳನ್ನು ನಿವಾರಿಸಬಲ್ಲರು ಏಕೆಂದರೆ ಅವರ ಅಂಗಾಂಗಳು ಲಿಂಗಾಂಗವಾಗಿರುತ್ತವೆ. ಅದರ ಸ್ಪರ್ಶ ಪರುಷ ಸ್ಪರ್ಶವಾಗಿರುತ್ತದೆ. ಅದರಿಂದ ಕಬ್ಬಿಣವೂ ಬಂಗಾರವಾಗುತ್ತದೆ. ಅವರ ದೃಷ್ಟಿ ಶಿವದೃಷ್ಟಿಯಾಗಿದ್ದು, ಮಾತು ಮಂತ್ರವಾಗಿರುತ್ತದೆಯೆಂದು ಲೇಖಕರು ಶರಣರ ಶಕ್ತಿಯ ಬಗ್ಗೆ ನುಡಿದಿದ್ದಾರೆ.

ಶರಣರ ಮಹಿಮೆಯನ್ನು ಕೊಂಡಾಡುತ್ತಲೇ, ಅವರ ಬಗ್ಗೆ ಹಗುರವಾಗಿ ಮಾತನಾಡುವವರಿಗೆ, ಎಚ್ಚರದಪ್ಪಿ ವರ್ತಿಸಬಾರದೆಂಬ ಎಚ್ಚರಿಕೆ ನೀಡಿದ್ದಾರೆ. ಅಲಕ್ಷ್ಯದಿಂದ, ಅಹಂಕಾರದಿಂದ ವರ್ತಿಸಿದರೆ ಆಗುವ ಅನಾಹುತದ ಬಗ್ಗೆಯೂ ಗಮನಸೆಳೆದಿದ್ದಾರೆ. ಅದಕ್ಕೆ ಉದಾಹರಣೆಯಾಗಿ ಪಂಪನಗೌಡರೆಂಬುವರು ಅವಿವೇಕತನದಿಂದ, ಕಷ್ಟಕ್ಕೆ ಗುರಿಯಾದ ವರ್ಣನೆ ಇದೆ.

ಶರಣರ, ಸತ್ಪುರುಷರ ಶಕ್ತಿಯು ಪ್ರಶ್ನಾತೀತವಾಗಿದ್ದರೂ ಅವರ ಶಕ್ತಿ ಅವರು ಗಳಿಸಿಕೊಂಡ ತಪಸ್ಸಿನ ಫಲವಾಗಿದೆ. ಪವಾಡಗಳನ್ನು ಮಾಡಿದಾಗ ಅದು ಖರ್ಚಾಗುತ್ತದೆ. ಆಗ ಮತ್ತೆ ಗಳಿಸಿಕೊಳ್ಳಬೇಕು ಆದ್ದರಿಂದ ಮಹಾತ್ಮರ ಶಕ್ತಿಯ ಪರಿ-- ತೊಡಗುವುದು ಸರಿಯಲ್ಲವೆಂಬ ಕಿವಿಮಾತನ್ನು ಹೇಳಿದ್ದಾರೆ.

ಸೃಷ್ಟಿಯ ಆಗುಹೋಗುಗಳನ್ನು ತಡೆಯುವುದು, ವಿಧಿಲಿಖಿತವನ್ನು ಅಳಿಸುವುದು ಸತ್ಯ ಶತಣರಿಗೂ ಕಷ್ಟದ ಕೆಲಸ....ಪ್ರತಿ ಪವಾಡ ಸದೃಶ ಘಟನೆಗೆ ಶರಣರು ತಮ್ಮ ಪುಣ್ಯವನ್ನು, ಆಯುಷ್ಯವನ್ನು, ಆರೋಗ್ಯವನ್ನು, ಸತ್ಯಶಕ್ತಿಯನ್ನು ಖರ್ಚುಮಾಡಬೇಕಾಗುತ್ತದೆ. ಆ ಕೂಡಿಟ್ಟ ತಪೋಧನವನ್ನು ಖರ್ಚುಮಾಡಿದಂತೆ ಶರಣಶಕ್ತಿಯೂ ಮಸುಕಾಗುತ್ತದೆ. ಮತ್ತೆ ಜಪ-ತಪ ಅನುಷ್ಠಾನಗಳಿಂದ ಗಳಿಸಿಕೊಳ್ಳಬೇಕಾಗುವುದು. 'ದೀಪ ತನ್ನನ್ನು ತಾನೇ ಸುಟ್ಟುಕೊಂಡು ಬೆಳಕನ್ನು ಜಗತ್ತಿಗೆ ಕೊಡುವಂತೆ, ಶರಣರ ಬದುಕು' ಎಂಬ ಮಾತುಗಳಿಂದ ಭಕ್ತರು ಅತಿಯಾಗಿ ಎಲ್ಲದಕ್ಕೂ ಅವರನ್ನು ಪೀಡಿಸುವುದು ತರವಲ್ಲ ಎಂದು ಎಚ್ಚರ ಕೊಡಲು ಲೇಖಕರು ಮರೆತಿಲ್ಲ. ಸದ್ಭಕ್ತರು ಶರಣರ ಶಿವಶಕ್ತಿಯನ್ನು ಹಿತಮಿತವಾಗಿ ಬಳಸಿಕೊಂಡರೆ ಒಳ್ಳೆಯದೆಂಬ ಸೂಚನೆ ಇತ್ತಿದ್ದಾರೆ.

ಒಟ್ಟಿನಲ್ಲಿ ಲೇಖಕರು ಗುಡದೂರಪ್ಪನವರ ಶರಣಮಯವಾದ, ಲೋಕಹಿತಕರವಾದ, ಜಾತ್ಯಾತೀತಭಾವನೆಯಿಂದ ಕೂಡಿದ ಜೀವನ ಚರಿತ್ರೆಯನ್ನು ಚಿತ್ರಿಸಿ ಉಪಕರಿಸಿದ್ದಾರೆ. ಪ್ರಾರಂಭದಲ್ಲಿ ಬರವಣಿಗೆ ಸಾಮಾನ್ಯವಾಗಿದ್ದರೂ ಬರುಬರುತ್ತಾ ವಿಷಯದ ಆಳಕ್ಕೆ ಇಳಿದಂತೆ, ಬರಹದಲ್ಲಿ ಪ್ರಭುತ್ವ ಬೆಳೆಯುತ್ತಾ ಹೋಗಿ ಕೊನೆ-ಕೊನೆಯಲ್ಲಿ ಪರಿಪಕ್ವತೆಯ ಮಟ್ಟಕ್ಕೆ ಏರಿದೆ.

ಉತ್ತರ ಕರ್ನಾಟಕದಲ್ಲಿ ಮಠಗಳೂ, ಸ್ವಾಮಿಗಳೂ ಕರ್ನಾಟಕದ ಇತರ ಭಾಗಗಳಿಗಿಂತ ಹೆಚ್ಚಿರುವುದನ್ನು ಕಾಣುತ್ತೇವೆ. ಇದಕ್ಕೆ ಬಸವಾದಿ ಶರಣರ ಪ್ರಭಾವ ಈಕಡೆ ಹೆಚ್ಚಾಗಿರುವುದೇ ಕಾರಣವೆನ್ನಬಹುದು. ಹನ್ನೆರಡನೆಯ ಶತಮಾನದ ಪ್ರಭಾವ ಇಪ್ಪತ್ತನೆಯ ಶತಮಾನದವರೆಗೂ ಪಸರಿಸಿ, ಅಥಣಿ ಶಿವಯೋಗಿಗಳು, ಹಾನಗಲ್ಲ ಕುಮಾರಸ್ವಾಮಿಗಳು, ಧಾರವಾಡ ಮೃತ್ಯುಂಜಯಪ್ಪಗಳು, ಮುರುಗೋಡದ

ಮಹಾಂತಪ್ಪಗಳು, ಹಾಲಕೆರೆ ಅನ್ನದಾನೀಶ್ವರ ಸ್ವಾಮಿಗಳು, ಹಾರನಹಳ್ಳಿ, ಶಿವಲಿಂಗಸ್ವಾಮಿಗಳು, ಗುಡುದೂರಪ್ಪನವರು, ಸಜ್ಜಲಗುಡ್ಡದ ಶರಣಮ್ಮನವರು ಮುಂತಾದ ಮಹಾ ಮಹಾ ಶರಣರನ್ನು ಕನ್ನಡನಾಡು ಕಂಡಿದೆ. ಇವರುಗಳ ಸತ್ಪ್ರಭಾವದಿಂದ ಜನರು ಧಾರ್ಮಿಕ ನಡೆ-ನುಡಿಯನ್ನು ರೂಪಿಸಿಕೊಂಡು ನೀತಿವಂತರಾಗಿ ಬದುಕಿದ್ದಾರೆ. ಈ ದಿಶೆಯಲ್ಲಿ ಇಂತಹವರ ಚರಿತ್ರೆಗಳೂ ಜನರ ಮನಸ್ಸಿನಲ್ಲಿ ಅನೀತಿಯ ಜೀವನದ ಬಗ್ಗೆ ಭಯವನ್ನೂ ನೀತಿಯುತ ನಡತೆಯ ಬಗೆಗೆ ಆಸಕ್ತಿಯನ್ನೂ ಬೆಳೆಯಿಸುವುದರಲ್ಲಿ ಸಂಶಯವಿಲ್ಲ. ಆದುದರಿಂದ ಸತ್ಪುರುಷರ ಜೀವನ ಚರಿತ್ರೆಯು ಜನರಿಗೆ ದೊರೆಯುವಂತೆ ಮಾಡುವುದು ಎಂದಿಗಿಂತಲೂ ಇಂದು ಹೆಚ್ಚು ಅವಶ್ಯಕ. ಇಂದಿನ ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವವು ಟಿ.ವಿಯ ಮೂಲಕ ಮನೆ-ಮನೆಯನ್ನು ಪ್ರವೇಶಿಸಿದೆ. ಇದರ ದುಷ್ಪರಿಣಾಮವನ್ನು ತಡೆಗಟ್ಟುವುದು ಅನಿವಾರ್ಯವಾಗಿದೆ. ಇಂತಹ ಸತ್ಪುರುಷರ ಚರಿತ್ರೆಗಳು ಮನೆ ಮನೆಯನ್ನು ಪ್ರವೇಶಿಸುವಂತೆ ಮಾಡಿದರೆ, ಎಲ್ಲರೂ ಓದುವ ಆಸಕ್ತಿ ಬೆಳೆಯಿಸಿಕೊಂಡರೆ ಇನಿತಾದರೂ ಒಳಿತಾಗಬಹುದು.

ಸತ್ಕಾರ್ಯದಲ್ಲಿ ಪ್ರೊ. ಜಿ.ಎಸ್. ಮಾಮನಿಯವರು ತಮ್ಮ ಸೇವೆಯನ್ನು, ಶರಣರ ಚರಿತ್ರೆಯನ್ನು ಸಮಾಜದ ಮುಂದೆ ಇಡುವ ಮೂಲಕ ಮಾಡಿದ್ದಾರೆ. ಅದಕ್ಕಾಗಿ ಅವರು ಅಭಿನಂದನಾರ್ಹರು. ಲೇಖಕರಿಂದ ಇನ್ನು ಹೆಚ್ಚಿನ ಧಾರ್ಮಿಕ ಸೇವೆ, ಸಾಹಿತ್ಯರಚನೆಯ ಮೂಲಕ ಆಗಲಿ ಎಂದು ಆಶಿಸುತ್ತೇನೆ.

ಈ ಸತ್ಪುರುಷರ ಚರಿತ್ರೆಗೆ ನನ್ನ ಮುನ್ನುಡಿಯ ಅವಶ್ಯವೇನಿರಲಿಲ್ಲ. ಆದರೆ ಗುಡದೂರ ಅಜ್ಜನವರ ಸತ್ಪುತ್ರರೂ, ಸಜ್ಜಲ ಗುಡ್ಡದ ಮಠದ ನೇತಾರರೂ ಆಗಿರುವ ಶ್ರೀ ದೊಡ್ಡಯ್ಯತಾತನವರು 'ನೀವೇ ಬರೆಯಿರಂದು ಆದೇಶಿಸಿದರು. ನೀವು ಬರೆಯುವುದೇನಿದೆ? ಅಜ್ಜನವರೇ ಬರೆಯಿಸುತ್ತಾರೆ ಎಂದಾಗ, ಮಾತು ಮೀರದೆ ನನ್ನ ನುಡಿ ಸೇವೆ ಸಲ್ಲಿಸಿರುವೆ. ಗುಡದೂರಿನಲ್ಲಿ, ಗುಡದುದೂರು ಅಜ್ಜನವರ ಇನ್ನೊಬ್ಬ ಸತ್ಪುತ್ರರಾದ ಶ್ರೀ ನೀಲಕಂಠತಾತನವರು ಭಕ್ತರ ಕಷ್ಟಗಳನ್ನು ಪರಿಹರಿಸುವ ಕಾರ್ಯದಲ್ಲಿ ತೊಡಗಿದ್ದಾರೆ. ಇವರಿಬ್ಬರ ಕೃಪಾಶೀರ್ವಾದದಿಂದ ಜನತೆಯ ಕಷ್ಟಗಳು ಪರಿಹಾರವಾಗಲಿ, ಜನರು ನೀತಿವಂತರಾಗಿ ಬದುಕುವಂತಾಗಲಿ ಎಂದು ನಮ್ರವಾಗಿ ಪ್ರಾರ್ಥಿಸುತ್ತೇನೆ.

'ಶಿವ ಪ್ರಸಾದ'
ಕಲ್ಯಾಣ ನಗರ ಧಾರವಾಡ

ಲಲಿತಾಂಬ ವೃಷಭೇಂದ್ರಸ್ವಾಮಿ

■

ವೀರಶೈವ ಪುಣ್ಯಪುರುಷ ಸಾಹಿತ್ಯರತ್ನಮಾಲೆ – ೯೪

# ಪತ್ರೆ ಚನ್ನವೀರಪ್ಪಯ್ಯನವರು

ಲೇಖಕರು
ಪ್ರೊ. (ಶ್ರೀಮತಿ) ಲಲಿತಾಂಬಾ ವೃಷಭೇಂದ್ರ ಸ್ವಾಮಿ

೧೯೮೬

ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ

## ಮೊದಲ ಮಾತು

ಶಿವಶರಣರ ವಚನವಾಙ್ಮಯವನ್ನು ಮಥಿಸಿ ಸಾಹಿತ್ಯ ಸೌಂದರ್ಯವನ್ನು ಹರಿಹರ-ರಾಘವಾಂಕಾದಿಗಳು ಪ್ರಕಟಿಸಿದರೆ. ತತ್ತ್ವಸೌಂದರ್ಯವನ್ನು ಸಾಕ್ಷಾತ್ಕಾರಗೊಳಿಸಿದವರು ಏಳು ನೂರೊಂದು ವಿರಕ್ತರು. ಈ ವಿರಕ್ತಸಮೂಹದ ನಾಯಕ ವ್ಯಕ್ತಿಯಾಗಿ, ವೀರಶೈವ ಧರ್ಮಪರಂಪರೆಯ ಯುಗಪುರುಷನಾಗಿ ಮೆರೆದವ ತೋಂಟದ ಸಿದ್ಧಲಿಂಗಯತಿ. ಪ್ರಭುವಿನಂತೆ ನಿರಂಜನಮೂರ್ತಿಯಾಗಿ, ಬಸವನಂತೆ ವೀರಶೈವ ಸಂಘಟಿಕನಾಗಿ ಚೆನ್ನಬಸವನಂತೆ ತತ್ತ್ವವೇತ್ತನಾಗಿ ಬೆಳಗಿದ ೧೬ನೆಯ ಶತಮಾನದ ಈ ಶಿವಯೋಗಿಸೂರ್ಯನ ಪೀಠ-ಪ್ರಪೀಠ ಪರಂಪರೆ, ಶಿಷ್ಯ - ಪ್ರಶಿಷ್ಯಪರಂಪರೆ ನಾಡಿನ ಒಳಗೆಲ್ಲ ತುಂಬಿದೆ; ಹೊರಗೆಲ್ಲ ತುಳುಕಿದೆ. ಅಂದಿನಿಂದಲೂ ಕನ್ನಡಿಗರ, ವಿಶೇಷವಾಗಿ ವೀರಶೈವರ ಬದುಕನ್ನು ತಿದ್ದಿ, ಭಾವನೆಯನ್ನು ತೀಡಿ, "ಅಂಗವೇ ಶರಣ, ಲಿಂಗವೇ ಶಿವ" ಎಂಬ ಮಂತ್ರವನ್ನು ಘೋಷಿಸುತ್ತ, ಶಿಷ್ಯಕೋಟಿಯನ್ನು ಪೋಷಿಸುತ್ತ ಬಂದ ಘನತೆ, ಈ "ತೋಂಟದಾರ್ಯ ಪೀಠಪರಂಪರೆ"ಗೆ ಸಲ್ಲುತ್ತದೆ.

'ಶಿಷ್ಯರ ಸೇವೆಯೇ ಶಿವಪೂಜೆ'ಯೆಂಬ ಮಹಾಗುರು ತೋಂಟದಾರ್ಯರ ಸಂದೇಶದಂತೆ ನಡೆಯುವುದು ತನ್ನ ಪರಮ ಕರ್ತವ್ಯವೆಂದು ಡಂಬಳ-ಗದುಗಿನ "ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ" ನಂಬಿದೆ. ಈ ನಂಬಿಕೆಯ ಫಲವಾಗಿ ೧೯೭೪ ರಲ್ಲಿ ಸ್ಥಾಪಿತವಾದ "ವೀರಶೈವ ಅಧ್ಯಯನ ಸಂಸ್ಥೆ"ಯ ಅಂಗವಾಗಿ ಪ್ರಾರಂಭವಾದ "ವೀರಶೈವ ಪುರಾತನ, ನೂತನ ಹಾಗೂ ಅನುವಾದ ಸಾಹಿತ್ಯ ರತ್ನಮಾಲೆ"ಗಳ ಜೊತೆ ಈಗ "ವೀರಶೈವ ಪುಣ್ಯಪುರುಷ ಸಾಹಿತ್ಯರತ್ನಮಾಲೆ" ಉದಯವಾಗಿದೆ.

ಸಮಾಜದಲ್ಲಿ ಘಟಿಸಿದ ಸತ್ಕಾರ್ಯಗಳ ದಾಖಲೆ, ಸಮಾಜವನ್ನುದ್ಧರಿಸಿದ ಪುಣ್ಯಪುರುಷರ ಚರಿತ್ರೆಗಳು ಮುಂದಿನ ಪೀಳಿಗೆಗೆ ದಾರಿದೀಪವೂ ಹೌದು; ತೋರುಬೆರಳೂ ಹೌದು. ಕಾರಣ ಇತ್ತೀಚಿನ ದಿನಗಳಲ್ಲಿ ಸಮಾಜವನ್ನು ಕಟ್ಟಿ ಬೆಳೆಸಿದ, ಸಮಾಜಕ್ಕಾಗಿ ದುಡಿದ ಮಹಾತ್ಮರ ಚರಿತ್ರೆಗಳನ್ನು ಬರೆದು ಪ್ರಕಟಿಸಬೇಕೆಂಬ ಉದ್ದೇಶದಿಂದ ಈ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದೆ. ೧೯-೨೦ ನೆಯ

ವೀರಶೈವ ಪುಣ್ಯಪುರುಷರಲ್ಲಿ ಪ್ರತಿ ಶತಮಾನಗಳಲ್ಲಿ ಬಾಳಿದ ನೂರಾರು ಜನ ವೀರಶೈವ ಪುಣ್ಯಪುರುಷರಲ್ಲಿ ಪ್ರತಿ ತಿಂಗಳು ಒಬ್ಬರನ್ನು ಕುರಿತು ಉಪನ್ಯಾಸವನ್ನೇರ್ಪಡಿಸುವುದು, ಏರ್ಪಡಿಸಿದ ಉಪನ್ಯಾಸವನ್ನು ಪ್ರಕಟಿಸಿ ಸುಲಭ ಬೆಲೆಯಲ್ಲಿ ವಿತರಣೆಗೊಳಿಸುವುದು ಈ ಮಾಲಿಕೆಯ ಸಂಕಲ್ಪವಾಗಿದೆ. ತಿಂಗಳು ತಿಂಗಳು ಪ್ರಕಟವಾಗುವ ಈ ಮಾಲಿಕೆಯಲ್ಲಿ ತೊಂಭತ್ತ ನಾಲ್ಕನೆಯ ಕೃತಿ, "ಪತ್ರೆ ಚನ್ನವೀರಪ್ಪಯ್ಯನವರು".

ಬೀರೂರಿನ ಶ್ರೀ ಪತ್ರೆ ಅವರದು ನಮ್ಮ ರಾಜ್ಯದ ವೀರಶೈವ ಪ್ರತಿಷ್ಠಿತ ಮನೆತನ. ಶ್ರೀ ಚನ್ನವೀರಪ್ಪಯ್ಯನವರು ಈ ಮನೆತನದ ಅನರ್ಘ್ಯರತ್ನ. ಆಗರ್ಭಶ್ರೀಮಂತರಾಗಿದ್ದ ಇವರ ಮನಸ್ಸು ಇನ್ನೂ ಶ್ರೀಮಂತವಾಗಿದ್ದಿತು. ಇವರ ಔದಾರ್ಯದಲ್ಲಿ ಅರಳಿದ ಸಮಾಜಕಲ್ಯಾಣಕಾರ್ಯಗಳು ಅವರ ಕೀರ್ತಿಸ್ತಂಭದಂತೆ ಅನೇಕ ಸಂಖ್ಯೆಯಲ್ಲಿ ತಲೆಯೆತ್ತಿ ನಿಂತಿವೆ. ಒಬ್ಬ ಕುಟುಂಬವತ್ಸಲ ವ್ಯಕ್ತಿ, ಸಮಾಜವತ್ಸಲನೂ ಆಗಿ ಹೇಗೆ ಬೆಳೆಯಬಲ್ಲನೆಂಬುದಕ್ಕೆ ಶ್ರೀಯುತರ ಬದುಕು ಒಂದು ನಿದರ್ಶನವೆನಿಸಿದ್ದಿತು.

ವೀರಶೈವ ಅಧ್ಯಯನ ಸಂಸ್ಥೆಯ ಮುಖಾಂತರ ಈ ಮಹಾಪುರುಷನನ್ನು ಕುರಿತ ಕೃತಿಯನ್ನು ಪ್ರಕಟಿಸಲು ನಮಗೆ ತುಂಬ ಸಂತೋಷವೆನಿಸುತ್ತದೆ. ಇಲ್ಲಿ ವ್ಯಕ್ತವಾದ ಅಭಿಪ್ರಾಯಗಳಿಗೆ ಲೇಖಕರೇ ಸಂಪೂರ್ಣ ಹೊಣೆಗಾರರು. ಶ್ರೀ ಪತ್ರೆಯವರ ಮನೆತನದ ಮೇಲಿನ ಪ್ರೀತಿ. ಶ್ರೀಮಠದ ಮೇಲಿನ ಭಕ್ತಿ ಕಾರಣವಾಗಿ ಶ್ರಮವಹಿಸಿ ಶ್ರದ್ಧೆಯಿಂದ ಈ ಕೃತಿಯನ್ನು ಬರೆದುಕೊಟ್ಟ ಶ್ರೀಮತಿ ಲಲಿತಾಂಬಾ ವೃಷಭೇಂದ್ರಸ್ವಾಮಿ ಅವರಿಗೆ, ತಮ್ಮ ತಂದೆ ಶ್ರೀಚನ್ನವೀರಪ್ಪಯ್ಯನವರ ಪುಣ್ಯಸ್ಮರಣೆಗಾಗಿ ಗ್ರಂಥದಾನವನ್ನು ಕೈಕೊಂಡ ಅವರ ಮಕ್ಕಳಾದ ಪತ್ರೆ ಶ್ರೀ ಸದಾಶಿವನ್ ಹಾಗೂ ಶ್ರೀ ವಿನಾಯಕ ಅವರಿಗೆ, ಅಲ್ಪಾವಧಿಯಲ್ಲಿ ಅಂದವಾಗಿ ಮುದ್ರಿಸಿದ ಶ್ರೀ ವಿಜಯ ಹೊಸಕೇರಿ ಅವರಿಗೆ, ಬೇರೆ ಬೇರೆ ಹಂತಗಳಲ್ಲಿ ನಿಂತು ಈ ಕೃತಿಕಟ್ಟಡಕಾರ್ಯವನ್ನು ಪೂರ್ಣಗೊಳಿಸಿಕೊಟ್ಟ ಡಾ. ಬಿ.ಆರ್. ಹಿರೇಮಠ ಮೊದಲಾದ ಸಮಸ್ತರಿಗೆ ಶ್ರೀ ಎಡೆಯೂರ ಮಹಾಶಿವಯೋಗಿ ಸನ್ಮಂಗಳವನ್ನುಂಟುಮಾಡಲೆಂದು ಹಾರೈಸುತ್ತೇವೆ.

– ಪ್ರಕಾಶಕರು

■

## ನುಡಿ ನಮನ

ವೀರಶೈವರು ವೈಯಕ್ತಿಕವಾಗಿ, ಸಾಂಘಿಕವಾಗಿ ರಾಷ್ಟ್ರಕ್ಕೆ ಸಮಾಜಕ್ಕೆ ಬಹುಮುಖ ಸೇವೆಯನ್ನು ಸಲ್ಲಿಸುತ್ತ ಬಂದಿದ್ದಾರೆ. ಇವರ ಈ ಉದಾತ್ತವಾದ ಕೃತಿಗಳಿಂದ, ಸಮಾಜದ ಎಲ್ಲ ಪಂಗಡಗಳ ಜನರೂ ಪ್ರಯೋಜನ ಪಡೆದಿದ್ದಾರೆ. ಬಹುಶಃ ವ್ಯಕ್ತಿಗತವಾಗಿ ವೀರಶೈವರು ಸಮಾಜಕ್ಕೆ ಮಾಡಿರುವಷ್ಟು ಸೇವೆಯನ್ನು ಬೇರಿನ್ನಾವ ಸಮಾಜದವರೂ ಮಾಡಿಲ್ಲವೆಂದು ತೋರುತ್ತದೆ. ಇವೆಲ್ಲವೂ ಇಷ್ಟು ವರ್ಷ ಯಾವ ದಾಖಲೆಗಳೂ ಇಲ್ಲದೆ ಕಳೆದುಹೋದವು. ಇವುಗಳ ದಾಖಲೆ ಮುಂದಿನ ಪೀಳಿಗೆಗೆ, ಸಮಾಜಕ್ಕೆ ತೋರುಗಂಬವಾಗಿ ಇರಬಲ್ಲಂತಹುಗಳು. ಅದನ್ನರಿತು, ಗದುಗಿನ ತೋಂಟದಾರ್ಯ ಶ್ರೀಗಳವರು ವೀರಶೈವ ಪುಣ್ಯಪುರುಷರ ದಿವ್ಯಜೀವನವನ್ನು ಪ್ರಕಟಿಸುವ ಯೋಜನೆಯನ್ನು ಕೈಗೊಂಡುದೊಂದು ಮಹಾ ಪುಣ್ಯಕೆಲಸ. ಇಂತಹ ಕೆಲವೊಂದು ಪುಸ್ತಕಗಳನ್ನು ನೋಡಿದಾಗ ಈಗ ಸುಮಾರು ಹತ್ತು ವರ್ಷಗಳ ಹಿಂದೆಯೇ ಪತ್ರೆ ಶ್ರೀ ಚನ್ನವೀರಪ್ಪಯ್ಯನವರ ಬಗೆಗೂ ಬರೆಯಬೇಕೆಂಬಾಸೆ ನನ್ನಲ್ಲಿ ಮೂಡಿತು. ಅದಕ್ಕೆ ಕಾರಣ :

ನಾನು ಚಿಕ್ಕವಳಿದ್ದಾಗ ನಮ್ಮ ತಾಯಿಯವರು ಪತ್ರೆಯವರ ಮನೆಯ ಹಾಗೂ ನಮ್ಮ ಮನೆಯ (ಉಬ್ರಾಣಿ ಮಠದ ಶಿವಲಿಂಗಪ್ಪಯ್ಯರವರ ಮನೆಯ) ಬಗೆಗೆ ಅನೇಕ ವಿಷಯಗಳನ್ನು ಹೇಳುತ್ತಿದ್ದರು. ಎರಡೂ ಮನೆಯ ವೈಭವ, ದಾನ, ಧರ್ಮ, ಉದಾತ್ತತೆಗಳನ್ನು ವಿವರಿಸುವುದರ ಜೊತೆಗೆ ಅನೇಕ ಹಿತಶತ್ರುಗಳ ಕುಟಿಲತೆಗಳಿಂದ ಉಂಟಾದ ಕೆಡುಕುಗಳ ಬಗೆಗೂ ಹೇಳುತ್ತಿದ್ದರು. ಇವೆಲ್ಲ ನಡೆದಾಗ ಅವರಿನ್ನೂ ಹೊಸದಾಗಿ ಬಂದ ಸೊಸೆ. ವಯಸ್ಸಿನಲ್ಲಿ ಚಿಕ್ಕವರು. ಯಾವುದರಲ್ಲೂ ಬಾಯಿಹಾಕಿ ಮಾತಾಡುವ ಸ್ಥಾನವಿಲ್ಲದವರು. ಎಲ್ಲವನ್ನೂ ಮೂಕಸಾಕ್ಷಿಯಾಗಿ ನೋಡಿದವರು. ವಿಷಯಗಳನ್ನೆಲ್ಲಾ ಹೊರಹೊಮ್ಮಿಸಲು ಅವಕಾಶವಿಲ್ಲದೇ ತಮ್ಮ ಹೃದಯದಂಗಳದಲ್ಲಿ ಹುದುಗಿಸಿಟ್ಟುಕೊಂಡಿದ್ದರು. ಮಕ್ಕಳು ದೊಡ್ಡವರಾದ ಮೇಲೆ ನಮ್ಮನ್ನು ಕೂರಿಸಿಕೊಂಡು ಎಲ್ಲಾ ಹೇಳುತ್ತಿದ್ದಾಗ ರಾಮಾಯಣ, ಮಹಾಭಾರತದ ಕಥೆಗಳನ್ನು ಕೇಳಿದಂತೆ ರೋಚಕವೆನ್ನಿಸುತ್ತಿತ್ತು ನಮಗೆ. ಆಗಿನಿಂದಲೂ ನನಗೆ ಎರಡೂ ಮನೆತನಗಳ ಮೇಲೆ ತುಂಬಾ ಗೌರವ. ಎರಡೂ

ಮನೆತನಗಳವರ ಹಿರಿಯರ ಸಂಪರ್ಕ ನನಗೆ ಬಂದಿರಲಿಲ್ಲ. ಏಕೆಂದರೆ 'ದತ್ತಕ' ಪ್ರಕರಣದಿಂದ ಎರಡೂ ಮನೆತನಗಳು ಒಂದಕ್ಕೊಂದು ದೂರಾಗಿದ್ದವು. ಅಲ್ಲದೆ ಶ್ರೀ ಚನ್ನವೀರಪ್ಪಯ್ಯನವರು ತಮ್ಮ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಚಿಕ್ಕಮಗಳೂರಲ್ಲಿ ಮನೆ ಮಾಡಿಕೊಂಡಿದ್ದರು. ಶ್ರೀ ಶಿವಲಿಂಗಪ್ಪಯ್ಯನವರು ತಮ್ಮ ಕೊನೆಯ ದಿನಗಳಲ್ಲಿ ಆರ್ಥಿಕ ಹಾಗೂ ಕೌಟುಂಬಿಕ ತೊಂದರೆಗೆ ಒಳಗಾಗಿ ತುಂಬಾ ಬೇಸರಗೊಂಡಿದ್ದರು. ಅವರೂ ಮೈಸೂರಲ್ಲಿ ಮನೆ ಮಾಡಿಕೊಂಡು ಪತ್ನಿ ಮತ್ತು ಅವಿವಾಹಿತ ಮಕ್ಕಳೊಂದಿಗೆ ಅಲ್ಲೇ ಇದ್ದರು. ಪತ್ರೆಯವರು ತಮ್ಮ ಮಗಳ ಮದುವೆಗೆಂದು ೧೯೪೬ ರಲ್ಲಿ ಬೀರೂರಿಗೆ ಬಂದವರು ಅಲ್ಲೇ ಉಳಿದುಬಿಟ್ಟರು. ನಾನೂ ಸಹ ೧೯೪೭ ರಿಂದ ಓದುವ ಸಲುವಾಗಿ ಮೈಸೂರಿಗೆ ಹೋದುದರಿಂದ ನಾನು ಬೀರೂರಲ್ಲಿ ಬಂದು ನಿಂತುದು ನನ್ನ ಬಿ.ಎ. ಮುಗಿದ ಮೇಲೆಯೇ. ಬಿ.ಎ. ಮುಗಿಸಿ ಬಂದಾಗ ಮನೆಯಲ್ಲಿ ನನಗೆ ವೇಳೆ ಕಳೆಯುವುದೇ ಕಷ್ಟವಾಯ್ತು. ಒಂದು ದಿನ ಇದ್ದಕ್ಕಿದ್ದಂತೆ ಪತ್ರೆಯವರ ಮಗಳು ಸುಶೀಲಾ ನಮ್ಮ ಮನೆಗೆ ಬಂದರು. ಕಾಲೇಜಿನ ಆಕೆಯ ಗೆಳತಿ ತನ್ನ ಹಳೆಯ ಸ್ನೇಹಿತೆಯಾಗಿದ್ದರು. ಆ ಸಂಬಂಧ ಏನೋ ಕೆಲಸಕ್ಕೆ ಬಂದರು. ನನಗೂ ಬೌದ್ಧಿಕ ವಿಚಾರವಿನಿಮಯಕ್ಕಾಗಿ ಓದಿದವರ ಸ್ನೇಹ ಬೇಕಾಗಿತ್ತು. ಓದು ಮುಗಿಸಿ ಬಂದ ಅವರೂ ಅಂತಹ ಸ್ಥಿತಿಯಲ್ಲೇ ಇದ್ದರು. ಹಾಗಾಗಿ ನಮ್ಮಿಬ್ಬರ ಪರಿಚಯ-ಸ್ನೇಹವಾಯಿತು. ಸ್ನೇಹ ಆತ್ಮೀಯತೆಯನ್ನುಂಟುಮಾಡಿತು. ನಮ್ಮ ಮನೆತನಗಳಲ್ಲಿದ್ದ "ಕಹಿನೆನಪು"ಗಳು ಅಳಿಸುತ್ತಾ ಹೋದವು. ನಮ್ಮ ಸ್ನೇಹ ಗಾಢವಾಗಿ ಬೆಳೆಯುತ್ತಾ ಹೋಯಿತು. ಆಗಿನಿಂದ ನಾವಿಬ್ಬರೂ ನಮ್ಮ ನಮ್ಮ ವಿವಾಹವಾಗಿ ಆ ಊರು ಬಿಡುವ ವರೆಗೂ ಒಬ್ಬರನ್ನೊಬ್ಬರು ಭೇಟ್ಟಿಯಾಗದ ದಿನವಿರಲಿಲ್ಲ. ಆ ಸಮಯದಲ್ಲಿ ನನಗೆ ಪತ್ರೆ ಮನೆತನದ, ಮನೆಯವರ ನಿಕಟ ಪರಿಚಯವಾಯ್ತು. ಪತ್ರೆ ದಂಪತಿಗಳ ವಾತ್ಸಲ್ಯವನ್ನು ನಾನು ಅವರ ಮಕ್ಕಳಲ್ಲಿ ಒಬ್ಬಳಂತೆ ಅನುಭವಿಸಿದ್ದೇನೆ. ನನ್ನನ್ನು ಪ್ರೀತಿಯಿಂದ ಕಂಡಿದ್ದಾರೆ. ನನ್ನ ಬಗ್ಗೆ ಸಂತೋಷಪಟ್ಟಿದ್ದಾರೆ. ಆಗ ಶ್ರೀಯುತರ ಮನೆಯಲ್ಲಿ ನಡೆಯೂ ನುಡಿಯೂ ಆದರ್ಶವಾಗಿದ್ದುದನ್ನು ನಾನು ನೋಡುತ್ತಿದ್ದೆ. ಅವರ ಮನೆಯ ಜನರೆಲ್ಲರೂ ಸುಸಂಸ್ಕೃತರು. ಒಂದು ದಿನವೂ ಯಾವುದೇ ಸಂದರ್ಭದಲ್ಲೂ ಯಾರೂ ಒರಟಾಗಿಯಾಗಲೀ, ಇನ್ನೊಬ್ಬರಿಗೆ ನೋವಾಗುವಂತೆಯಾಗಲೀ ಮಾತನಾಡಿದುದನ್ನು ನಾನು ಕೇಳಲಿಲ್ಲ. ಶ್ರೀಯುತರು ಆಳು-ಕಾಳುಗಳನ್ನು ಸಹ ಮೃದುವಾಗಿ ಪ್ರೀತಿಯಿಂದ ಮಾತನಾಡಿಸುತ್ತಿದ್ದರು. ಎಲ್ಲರೂ ಅವರೊಡನೆ ಭಯದಿಂದ, ಗೌರವದಿಂದ, ಪ್ರೀತಿಯಿಂದ ನಡೆದುಕೊಳ್ಳುತ್ತಿದ್ದರು. ಅಡಿಗೆಯವರಿಗೆ ಇಷ್ಟು ಹೊತ್ತಿನ ತನಕ ಕೆಲಸ. ಯಾವಾಗ ಬೇಕೆಂದರೆ ಆವಾಗ, ಯಾರೂ ಅವರ ಮನೆಯಲ್ಲಿ ಊಟಕ್ಕೆ ಹೋಗುವಂತಿರಲಿಲ್ಲ.

ಕಾರಣ ಇಷ್ಟೆ. ಕೆಲಸದವರಿಗೆ ತೊಂದರೆಯಾಗುತ್ತದೆಯೆಂದು! "ಅವರೂ ಮನುಷ್ಯರೇ. ಅವರಿಗೂ ವಿಶ್ರಾಂತಿ ಬೇಕು, ಮನರಂಜನೆ ಬೇಕು. ಮನೆಯಲ್ಲಿ ಮಡದಿ ಮಕ್ಕಳಿರುತ್ತಾರೆ" ಎನ್ನುತ್ತಿದ್ದರು. ಹೀಗೆ ಪ್ರತಿಯೊಂದು ವಿಷಯವನ್ನೂ ಮಾನವೀಯತೆಯ ದೃಷ್ಟಿಯಿಂದ ನೋಡುತ್ತಿದ್ದರು. ಎಂದೂ ದರ್ಪದಿಂದಾಗಲೀ, ಅಹಂಕಾರದಿಂದಾಗಲೀ ಮಾತನಾಡಿದುದನ್ನು ನಾನು ಕಾಣಲಿಲ್ಲ.

ನಾನು ಬಿ.ಎ., ಮುಗಿಸಿ ಮನೆಗೆ ಹಿಂತಿರುಗಿ ಬಂದಮೇಲೆ ಮನೆಯಲ್ಲೇ ಸುಮ್ಮನೆ ಕುಳಿತುಕೊಳ್ಳಲು ಬೇಸರವಾಗಿ ನೌಕರಿಗೆ ಹೋಗಬೇಕೆಂದು ಇಷ್ಟಪಟ್ಟೆ. ಆಗಿನ ಕಾಲದಲ್ಲಿ ಸಂಪ್ರದಾಯಸ್ಥ ಮನೆತನದವರು ನೌಕರಿಗೆ ಹೆಣ್ಣುಮಕ್ಕಳನ್ನು ಕಳಿಸುತ್ತಿರಲಿಲ್ಲ. ಆದರೆ ನಾನು ನೌಕರಿಗೆ ಹೋಗಲೇಬೇಕೆಂದು ಬಯಸಿದುದರಿಂದ ಕಡೆಗೆ ನಮ್ಮ ತಂದೆ ಒಪ್ಪಿದರು. ಶ್ರೀ ಚನ್ನವೀರಪ್ಪಯ್ಯನವರು ಹೆಣ್ಣುಮಕ್ಕಳು ಮುಂದೆ ಬರುವುದನ್ನು ತುಂಬಾ ಸ್ವಾಗತಿಸುತ್ತಿದ್ದರು. ಅವರ ಆಪ್ತಗೆಳೆಯರಲ್ಲೊಬ್ಬರಾದ ಜೆ.ಬಿ. ಮಲ್ಲಾರಾಧ್ಯರು ಮೈಸೂರು ರಾಜ್ಯದಲ್ಲಿ ಶಿಕ್ಷಣ ಖಾತೆಯ ಡಿ.ಪಿ.ಐ. ಆಗಿದ್ದರು. ಶ್ರೀಯುತರು ಅವರಿಗೆ ಪತ್ರ ಬರೆದರು. ಪಕ್ಕದ ಊರಾದ ಕಡೂರಿನಲ್ಲಿ (ಕಡೂರು ಬೀರೂರಿಗೆ ನಾಲ್ಕೇ ಮೈಲಿ ದೂರ) ಪದವೀಧರ ಶಿಕ್ಷಕಿಯ ಒಂದೇ ಒಂದು ಸ್ಥಾನ ಖಾಲಿ ಇದ್ದಿತು. ಕೂಡಲೇ ಆ ಸ್ಥಾನಕ್ಕೆ ನನ್ನನ್ನು ಶಿಕ್ಷಕಿಯನ್ನಾಗಿ ನೇಮಿಸಿದ ಆಜ್ಞೆ ಬಂದಿತು. ದೂರದ ಊರಿಗೆ ಕಳಿಸಬಾರದೆಂಬ ನಮ್ಮ ತಂದೆಯವರ ಉದ್ದೇಶ, ನೌಕರಿ ಸೇರಬೇಕೆಂಬ ನನ್ನ ಆಸೆ ಎರಡೂ ನೆರವೇರಿ, ನಾನು ಶಿಕ್ಷಕಿಯಾಗಿ ೧೯೫೩ ರಲ್ಲಿ ನೌಕರಿ ಸೇರಿದೆ. ಹೀಗೆ ಇಂದಿನ ನನ್ನ ನೌಕರಿಗೆ ಬುನಾದಿ ಹಾಕಿದವರು ಪತ್ರೆ ಶ್ರೀ ಚನ್ನವೀರಪ್ಪಯ್ಯನವರು.

ನನ್ನ ವಿವಾಹವಾದಾಗಲೂ ಪತ್ರೆ ದಂಪತಿಗಳು ತುಂಬಾ ಸಂತೋಷಪಟ್ಟರು. ನನ್ನ ಮಗ ಹುಟ್ಟುವ ಮೊದಲು ಮತ್ತು ಅನಂತರ ತುಂಬಾ ತೊಂದರೆಗಳಾದವು. ಜೀವನ್ಮರಣದ ಪ್ರಶ್ನೆಯಿತ್ತು. ಅಂತಹ ಸಂದರ್ಭದಲ್ಲಿ ಶ್ರೀಯುತರು ಹಾಗೂ ಶ್ರೀಮತಿಯವರು ತೋರಿಸಿದ ಆಸಕ್ತಿ, ಕಳಕಳಿ ಮತ್ತು ಒದಗಿಸಿದ ಸಹಾಯಗಳು ಇಂದೂ ನನ್ನ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದಿವೆ.

ಶ್ರೀ ಪತ್ರೆಯವರ ಮನೆಯ ಹಾಗೂ ಮನೆಯವರ ಬಗೆಗೆ ನನ್ನದು ಅನನ್ಯ ಪ್ರೇಮ. ನನ್ನ ಹಾಗೂ ಸುಶೀಲಮ್ಮನ ಸ್ನೇಹ ಬೆಳೆದ ಮೇಲೆ ಆ ಮನೆಯವರೊಂದಿಗೆ ನಾನು ನಿಕಟವಾಗಿ ಬೆಳೆದೆ. ವಿವಾಹದ ನಂತರ ಈ ಕಡೆ ಬಂದ ಮೇಲೆ ಅವರೆಲ್ಲರಿಂದ ದೂರವಿದ್ದರೂ ನನ್ನ ಹೃದಯದಲ್ಲಿ ಅವರ ಬಗೆಗಿನ ಆದರಾಭಿಮಾನಗಳು, ಪ್ರೀತಿ-ಗೌರವಗಳು ಎಂದಿನಂತೆಯೇ ಇದ್ದವು. ಊರಿಗೆ ಹೋದಾಗ ತಪ್ಪದೆ ಅವರೆಲ್ಲರನ್ನು ಕಂಡು ಬರುತ್ತಿದ್ದೆ. ೧೯೭೦ ರಲ್ಲಿ ಒಂದು

ದಿನ ರಾತ್ರಿ ಮೂರು ಗಂಟೆಯ ಸುಮಾರಿನಲ್ಲಿ ಅತೀ ಕೆಟ್ಟ ಕನಸು. ಮನಸ್ಸಿಗೆ ವಿಪರೀತವಾದ ತೊಳಲಾಟ, ಕಸಿವಿಸಿಗೊಳ್ಳುತ್ತಾ ಎಚ್ಚರಾದೆ. ಮನಸ್ಸಿಗೆ ಸಹಿಸಿಕೊಳ್ಳಲಾಗದ ಸಂಕಟ. ಅಮಂಗಳ ರೀತಿಯ ಕನಸು. ಆ ಮನಸ್ಸಿನ ಆ ಹಿಂಸೆಯನ್ನು ತಾಳಲಾರದೆ, ನಮ್ಮ ಮನೆಯವರನ್ನು ಎಚ್ಚರಿಸಿ, ಅಕ್ಕಮ್ಮಗೆ (ನಮ್ಮ ತಾಯಿಗೆ) ಖಂಡಿತಾ ಏನೋ ಅಮಂಗಳವಾಗುತ್ತಿದೆ. ಅಣ್ಣನಿಗೆ (ತಂದೆಯವರಿಗೆ) ಖಂಡಿತಾ ಏನೋ ಕೆಡುಕಾಗಿದೆ ಎಂದು ಒದ್ದಾಡಿದೆ. ಯಾವಾಗ ಏನು ಸುದ್ದಿಯೋ ಎಂದು ಮನಸ್ಸು ಆತಂಕಗೊಂಡೇ ಬೆಳಗಾಗಿಸಿದೆ. ಏನೂ ಸುದ್ದಿ ಇರಲಿಲ್ಲ. ಸ್ನಾನ ಮಾಡಿ ಪೂಜೆ ಮಾಡುತ್ತಾ ಕುಳಿತಾಗ ನಾನು ಪೂಜಿಸುತ್ತಿದ್ದ ಅನ್ನಪೂರ್ಣೇಶ್ವರಿಯ ಫೋಟೋ ಮುಗುಚಿಕೊಂಡು ಬಿದ್ದಿತು. ನನ್ನ ಎದೆ "ಧಸಕ್" ಎಂದಿತು. ನಮ್ಮ ತಾಯಿಗೆ ಏನೋ ಕೆಡುಕಾಗಿರುವುದರಲ್ಲಿ ಸಂಶಯವಿಲ್ಲೆನ್ನಿಸಿತು. ಸ್ವಲ್ಪ ಹೊತ್ತಿನಲ್ಲಿಯೇ ನಮ್ಮ ತಂದೆಯವರಿಂದ ಶ್ರೀ ಪತ್ರೆ ಚನ್ನವೀರಪ್ಪಯ್ಯನವರು ಲಿಂಗೈಕ್ಯರಾದ ಸುದ್ದಿ ಬಂದಿತು. ನನ್ನನ್ನು ದುಃಖದಲ್ಲಿ ಮುಳುಗಿಸಿತು. ವ್ಯವಹಾರಿಕ ಜೀವನದಲ್ಲಿ ನಾವು ಮುಳುಗಿದ್ದರೂ ಆತ್ಮ ಆತ್ಮಗಳಿಗೆ ಸಂಬಂಧವಿರುತ್ತದೆ. 'ಕಣ್ಣರಿಯದಿದ್ದೊಡೆ ಕರುಳರಿಯದೆ' ಎಂಬಂತೆ ತಂದೆ ತಾಯಿಗಳಂತಹ ಭಾವನೆ ಅವರ ಬಗ್ಗೆ ನನ್ನ ಮನಸ್ಸಿನಲ್ಲಿ ಬೆಳೆದುಬಂದದ್ದರಿಂದ ಶ್ರೀಯುತರು ಕೊನೆಯುಸಿರೆಳೆದಾಗ, ತಾಯಿಯ ಸಮಾನರಾದ ಅನ್ನಪೂರ್ಣಮ್ಮನವರ ಮನಸ್ಸಿಗೆ ಮೇರೆ ಇಲ್ಲದ ದುಃಖವುಂಟಾದಾಗ ಅದರ ಪ್ರಭಾವ ನನ್ನ ಹೃದಯದ ಮೇಲಾಯ್ತು. ಆ ನೋವು ನನ್ನನ್ನು ನಿದ್ದೆಯಿಂದೆಚ್ಚರಿಸಿತು.

ಶ್ರೀ ಪತ್ರೆ ವಂಶದವರ ಸುಸಂಸ್ಕೃತ ನಡೆ ನುಡಿ–ಘನತೆ, ಗಾಂಭೀರ್ಯ, ಉದಾತ್ತತೆಗಳನ್ನು ಸನಿಹದಿಂದ ನೋಡಿದ ನನಗೆ ಆ ಬಗ್ಗೆ ತುಂಬಾ ಗೌರವ ಸಂತೋಷ. ಅಂತಹ ವ್ಯಕ್ತಿಗಳ ಜೀವನ, ಎಲ್ಲಾ ಮೌಲ್ಯಗಳಿಂದ ದೂರ ಸರಿಯುತ್ತಿರುವ ಆಧುನಿಕ ಸಮಾಜಕ್ಕೆ ಒಂದು ಆದರ್ಶ. ಇಂತಹವುಗಳನ್ನು ಓದುವುದರಿಂದ ಮುಂಬರುವ ಪೀಳಿಗೆಗೆ ಬದುಕುವ ರೀತಿಯ ಅರಿವಾಗಬಹುದು. 'ಮಾನವಜನಾಂಗಕ್ಕೆ ದಾರಿದೀಪವಾಗಬಲ್ಲ ಈ ಮನೆತನದ ಇತಿಹಾಸ ಕಾಲಾನುಕ್ರಮದಲ್ಲಿ, ಕಾಲಗರ್ಭದಲ್ಲಿ ಅಡಗಿಹೋಗುತ್ತದೆಯಲ್ಲಾ ಇದು ಎಲ್ಲರಿಗೆ ಗೊತ್ತಾಗುವಂತೆ ಹೇಗೆ ಮಾಡಬೇಕು ಎಂದು ಯೋಚಿಸುತ್ತಿದ್ದಾಗಲೇ ಶ್ರೀ ತೋಂಟದಾರ್ಯ ಜಗದ್ಗುರುಗಳು ಇಂತಹ ಮಹಾನುಭಾವರ ಜೀವನ ಚರಿತ್ರೆಗಳನ್ನು ಹೊರತರುವ ಯೋಜನೆಯೊಂದನ್ನು ಹಾಕಿಕೊಂಡಾಗ, ಉತ್ತರ ಕರ್ನಾಟಕಕ್ಕೆ ಪರಿಚಯವಿಲ್ಲದಿದ್ದ ಶ್ರೀ ಪತ್ರೆಯವರ ಬಗ್ಗೆ ಶ್ರೀಗಳವರಿಗೆ ನಿವೇದಿಸಿದೆ. ಈಗ ಸುಮಾರು ಮೂರು ವರ್ಷಗಳ ಹಿಂದೆ ನನಗೆ ಅವರ ಚರಿತ್ರೆ ಬರೆಯುವ ಕೆಲಸವನ್ನು ಶ್ರೀಗಳವರು ವಹಿಸಿಕೊಟ್ಟರು. ಅನೇಕ ಕಾರಣಗಳಿಂದಾಗಿ ಇದಕ್ಕೂ

ಮೊದಲು ನನಗೀ ಕೆಲಸ ಮುಗಿಸಲಾಗಲಿಲ್ಲ. ಆದರೂ ಶ್ರೀಗಳು ಇಷ್ಟುದಿನ ಕಾದು ನನ್ನಿಂದ ಈ ಪುಣ್ಯ ಕೆಲಸವಾಗುವಂತೆ ಆಶೀರ್ವದಿಸಿದರು. ಈ ನನ್ನ ಅಳಿಲ ಸೇವೆಯಿಂದ ಅನೇಕ ಒಳಿತುಗಳು ಸಿದ್ಧಿಸಿವೆಯೆಂದು ನನಗೆ ತುಂಬಾ ಸಂತೋಷವಾಗಿದೆ. ಮೊದಲನೆಯದಾಗಿ ಶ್ರೀಗಳು ಒಪ್ಪಿಸಿದ ಕೆಲಸ ಪೂರೈಸಿದೆನೆಂಬ ತೃಪ್ತಿ. ಎರಡನೆಯದಾಗಿ ಶ್ರೀಯುತ ಪತ್ರೆಯವರ ಬಗ್ಗೆ ನನಗಿದ್ದ ಗೌರವಾದರಗಳನ್ನು ಈ ಮೂಲಕ ಅರ್ಪಿಸಲೊಂದು ಅವಕಾಶ. ಇಂದಿನ ಹಾಗೂ ಮುಂದಿನ ಪೀಳಿಗೆಗೆ ಉತ್ತಮವಾದ ಉದಾಹರಣೆಯೊಂದನ್ನು ತಿಳಿಸಿ, ಸಮಾಜ ಹಿತದ ಅಳಿಲುಸೇವೆಯಂಥ ಕೆಲಸ ಮಾಡಿದೆನೆಂಬ ಹಿಗ್ಗು. ಇದಕ್ಕೆಲ್ಲ ಕಾರಣಪುರುಷರಾದ ಶ್ರೀ ಎಡೆಯೂರು ಸಿದ್ಧಲಿಂಗೇಶ್ವರರಿಗೆ ಭಕ್ತಿಯ ಅನಂತ ಪ್ರಣಾಮಗಳು.

ಈ ಕೃತಿಗೆ ನೆರವಾದವರು ಅನೇಕರು. ನಮ್ಮ ತಂದೆ ಉಬ್ರಾಣಿಮಠದ ಶ್ರೀಕಂಠ ಶರ್ಮರು (ಬೀರೂರು) ಇವರಲ್ಲಿ ಮುಖ್ಯರು. ಅವರಿಗೀಗ ಎಂಬತ್ತೈದು ವರುಷ. ಹಿಂದಿನ ತಲೆಮಾರಿನ ಅನೇಕ ವ್ಯಕ್ತಿಗಳು, ಈಗ ಅಲಭ್ಯವಾಗಿರುವ ವಿಶೇಷ ಸಂಗತಿಗಳು ಅವರಿಗೆ ನೇರ ಪರಿಚಿತ ಅಂಶಗಳು. ಅವರು ತಮ್ಮ ದಿನಚರಿ ನೆನಪು, ಹೇಳಿ ಕೇಳಿದ ಸಂಗತಿಗಳನ್ನೆಲ್ಲ ನನಗೆ ತಿಳಿಸಿ ಉಪಕಾರ ಮಾಡಿರುವರು. ನಮ್ಮ ತಾಯಿ ನೀಡಿದ ನೆರವನ್ನು ಮೇಲೆಯೇ ಸ್ಮರಿಸಿರುವೆ. ಶ್ರೀ ಪತ್ರೆ ಚನ್ನವೀರಪ್ಪಯ್ಯನವರ ಮಗಳು ಶ್ರೀಮತಿ ಸುಶೀಲಮ್ಮ ಪರ್ವತಯ್ಯ ಅವರು ದಾವಣಗೆರೆಗೆ ಹೋಗಿ, ತಮ್ಮ ಸೋದರತ್ತೆ ಶ್ರೀಮತಿ ವೀರಮ್ಮನವರಿಂದಲೂ, ಚಿಕ್ಕಮಗಳೂರಿನ ಶ್ರೀ ಶ್ರೀನಿವಾಸ ಶೆಟ್ಟರಿಂದಲೂ, ತಮ್ಮ ತಾಯಿಯವರಾದ ಶ್ರೀಮತಿ ಅನ್ನಪೂರ್ಣಮ್ಮನವರಿಂದಲೂ ಅನೇಕ ವಿಷಯಗಳನ್ನು ಸಂಗ್ರಹಿಸಿ ಬರೆದು ಕಳಿಸಿ ನೆರವಾದರು. ಶ್ರೀಯುತರ ಸೊಸೆ ಶ್ರೀಮತಿ ಶೈಲಜಾ ಸದಾಶಿವನ್ ಅವರು ಕೆಲವು ವಿಶೇಷ ಮಾಹಿತಿ ಹಾಗೂ ಭಾವಚಿತ್ರಗಳನ್ನು ಒದಗಿಸಿ ಉಪಕರಿಸಿದರು. ಶ್ರೀ ಪತ್ರೆಯವರ ಸಮಕಾಲೀನರಾದ ಶ್ರೀ ಎನ್.ಟಿ. ಮಲಿಯಪ್ಪನವರೂ ತಮ್ಮ ಅನಿಸಿಕೆಗಳನ್ನು ಬರೆದು ಕಳಿಸಿ ಉಪಕಾರ ಮಾಡಿರುವರು. ಅಲ್ಲದೆ ಕಲ್ಯಾಣ ಮಂಟಪದ ಉದ್ಘಾಟನೆಯ ಸಮಾರಂಭದ ಸ್ಮರಣ ಸಂಚಿಕೆಯಿಂದಲೂ ಅನೇಕ ಅಂಶಗಳನ್ನು ನನ್ನ ಈ ಕೃತಿಗೆ ಬಳಸಿಕೊಂಡಿದ್ದೇನೆ. ಈ ಎಲ್ಲರ ಉಪಕಾರದ ಮಾಹಿತಿಯೊಡನೆ ಸ್ವತಃ ನನಗೂ ತಿಳಿದ ಸಂಗತಿಗಳನ್ನು ಸೇರಿಸಿ, ಮುಕ್ತಮನಸ್ಸಿನಿಂದ ಜೀವನಚಿತ್ರವನ್ನು ರೂಪಿಸಲು ಪ್ರಯತ್ನಿಸಿರುವೆನೆಂದು ವಿನಂತಿಸುತ್ತೇನೆ.

ಈ ಗ್ರಂಥದ ಹಸ್ತಪ್ರತಿ ಸಿದ್ಧವಾದಾಗ, ಅದನ್ನು ಓದಲು ಡಾ. ಎಂ.ಎಂ. ಕಲಬುರ್ಗಿಯವರಿಗೆ ಕೊಟ್ಟೆ. ಅವರು ಓದಿ ತುಂಬ ಚೆನ್ನಾಗಿ ಬಂದಿದೆ ಎಂದು ಮೆಚ್ಚುಗೆ ಸೂಚಿಸಿ, 'ಸ್ವಲ್ಪ ಸಂಪಾದಿಸಬೇಕೆಂದು' ಕೈಗೆತ್ತಿಕೊಂಡೆ. ಆದರೆ ಆ

ಮಹಾಪುರುಷರ ಮಹಾಸಾಧನೆಗಳನ್ನು ಓದುತ್ತಾ ನಡೆದಂತೆ ಕೊನೆಯವರೆಗೆ ಓದದೇ ಬಿಡಲಾಗಲಿಲ್ಲ. ತುಂಬ ಚೆನ್ನಾಗಿ ಬಂದಿದೆ' ಎಂದು ಪ್ರೋತ್ಸಾಹಿಸಿದರು. ಅವರಿಗೂ ವಂದನೆಗಳು. ಈ ಪುಸ್ತಕ ಮುದ್ರಣಕ್ಕೆ ಹೋಗುವ ಮುನ್ನ ಇದನ್ನು ಸಾದ್ಯಂತವಾಗಿ ಓದಿಸಿ. ಕೇಳಿ, ಸಂತೋಷ ವ್ಯಕ್ತಪಡಿಸಿ, ಪ್ರಕಟಿಸಬಹುದೆಂದು ಒಪ್ಪಿಗೆ ಸೂಚಿಸಿದ ಶ್ರೀಮತಿ ಅನ್ನಪೂರ್ಣಮ್ಮ ಹಾಗೂ ಅವರ ಹಿರಿಯ ಮಗ ಶ್ರೀ ಪತ್ರೆ ಸದಾಶಿವನ್ ಮತ್ತು ಅವರ ಪತ್ನಿ ಶ್ರೀಮತಿ ಶೈಲಜಾ ಸದಾಶಿವನ್ ಹಾಗೂ ಅವರ ಪರಿವಾರದ ಇತರ ಸದಸರೆಲ್ಲರಿಗೆ ನಾನೆಷ್ಟು ಋಣಿಯಾದರೂ ಸಾಲದು. ಕೊನೆಯದಾಗಿ, ಇದರ ಮುದ್ರಣದ ಹಂತದಲ್ಲಿ ತುಂಬ ವಿಶ್ವಾಸದಿಂದ ಇದರ ಕರಡಚ್ಚುಗಳನ್ನು ತಿದ್ದಿ ಸಹಕರಿಸಿದ, ಡಾ. ಬಿ.ಆರ್. ಹಿರೇಮಠ ಅವರಿಗೆ ನನ್ನ ವಂದನೆಗಳು. ಈ ಪುಸ್ತಿಕೆಯನ್ನು ಅತ್ಯಂತ ಅಚ್ಚುಕಟ್ಟಾಗಿ ಮುದ್ರಿಸಿದ ಧಾರವಾಡದ ವಿಜಯ ಮುದ್ರಣಾಲಯದ ಶ್ರೀ ವಿಜಯ ಹೊಸಕೇರಿ ಅವರಿಗೆ ಅನೇಕ ವಂದನೆಗಳು.

'ಶಿವಪ್ರಸಾದ'
ಕಲ್ಯಾಣನಗರ
ಧಾರವಾಡ–೭

– ಲಲಿತಾಂಬಾ ವೃಷಭೇಂದ್ರ ಸ್ವಾಮಿ

■

## ತಿದ್ದಿಕೊಂಡು ಓದಿರಿ

| ತಪ್ಪು | ಸರಿ |
|---|---|
| ಅವರ ಮಕ್ಕಳು | ಅವರ ಮಕ್ಕಳು ಮತ್ತು ಶ್ರೀಯುತರು |
| ಕಿರಿಯವರಾದ | ಕಿರಿಯವರಾದ |
| ಶಿವಪ್ಪಯ್ಯನವರ ಮೇಲೆ | ವೀರಪ್ಪಯ್ಯನವರ ಮೇಲೆ |
| ಎಂ.ಟಿ. ಮರಿಯಪ್ಪ | ಎನ್.ಟಿ. ಮಲಿಯಪ್ಪ |
| ಬಸವಲಿಂಗಪ್ಪಯ್ಯನವರನ್ನು | ಬಸವಲಿಂಗಪ್ಪಯ್ಯನವರ ಮಕ್ಕಳನ್ನು |
| ಯಂಕಮ್ಮನವರು | ವೀರಮ್ಮನವರು |
| ಕೆಲಸವನ್ನು | ಕೆಲಸದವನನ್ನು |

■

# ಹಿನ್ನೆಲೆ

ಜಗತ್ತಿನಲ್ಲಿ ದಾನ, ಧರ್ಮಾದಿ ಕಾರ್ಯಗಳು ಅನಾದಿ ಕಾಲದಿಂದಲೂ ಅವ್ಯಾಹತವಾಗಿ ನಡೆದುಕೊಂಡು ಬಂದಿವೆ. ಮಹಾತ್ಮರ, ಸಮಾಜ ಸುಧಾರಕರ, ದಾನಿಗಳ, ಪರೋಪಕಾರಿಗಳ, ಧರ್ಮಾತ್ಮರ ಕೊಡುಗೆಯೇ ಸಮಾಜದ ನೆಮ್ಮದಿಗೆ, ಪ್ರಗತಿಗೆ, ಕಲ್ಯಾಣಕ್ಕೆ ಕಾರಣವಾಗಿದೆ.

ದಾನಿಗಳಲ್ಲಿ ಹಲವು ವಿಧ. ಕೆಲವರು ತಮಗೆ ಕೀರ್ತಿ ಬರಲೆಂದು ದಾನಮಾಡಬಹುದು. ಹಲವರು ದಾನ ಮಾಡುವ ನೆಪದಲ್ಲಿ ತಮ್ಮ ಸ್ವಾರ್ಥಸಾಧನೆಗೆ ದಾರಿ ಮಾಡಿಕೊಳ್ಳಬಹುದು. ಮತ್ತೆ ಕೆಲವರು 'ಸಂತೆಯಲ್ಲಿ ಕಳೆದು ಹೋದ ದುಡ್ಡು ತಿರುಪತಿ ತಿಮ್ಮಪ್ಪನಿಗೆ ಸೇರಲಿ' ಎಂದು ಹೇಳುವಂತೆ, ತಮಗೆ ಬೇಡವಾದುದನ್ನು 'ದಾನ' ಕೊಟ್ಟು, 'ದಾನಿ'ಗಳೆಂಬ ಬಿರುದನ್ನು ಪಡೆದರೆ, ತಮ್ಮ ಸಂಪತ್ತು ತಮಗೆ ಬೇಡವಾದ ಯಾರೋ ಬಂಧುಗಳ ಪಾಲಾದೀತೆಂದು ದಾನಮಾಡುವವರಿಗೂ ಕೊರತೆ ಏನಿಲ್ಲ. ಈಗಿನ ಕಾಲದಲ್ಲಂತೂ ಭ್ರಷ್ಟಾಚಾರದಿಂದ ಗಳಿಸಿದ ಹಣವನ್ನು ದಾನಮಾಡಿ ತಮ್ಮ ಮೇಲಿನ ಕಳಂಕವನ್ನು ತೊಳೆದುಕೊಳ್ಳಲು ಅಥವಾ ಜನರು ತಾವು ಹಣ ಸಂಪಾದಿಸಿದ ರೀತಿಯನ್ನು ಗಮನಿಸದೆ ದಾನವನ್ನು ಕೊಂಡಾಡಲಿ ಎಂದು ಸಾರ್ವಜನಿಕ ಸತ್ಕಾರ್ಯ ಮಾಡುವವರೇ ಹೆಚ್ಚು. ಆದರೆ ಇದಾವ ರೀತಿಯ ಕಾರಣಗಳೂ ಇಲ್ಲದೆ, ವಾರಸುದಾರರಾದ ಮಕ್ಕಳಿದ್ದರೂ, ಸತ್ಕಾರ್ಯ ಮಾಡಬೇಕೆಂಬಾಸೆಯಿಂದ, ಸಮಾಜದ ಕಲ್ಯಾಣವಾಗಬೇಕೆಂಬ ಪ್ರೇರಣೆಯಿಂದ, ಸ್ವಇಚ್ಛೆಯಿಂದ ಜನೋಪಕಾರ ಕಾರ್ಯ ಕೈಗೊಂಡವರ ಸಂಖ್ಯೆ ಅತಿ ವಿರಳ. ಅಂತಹ ಅತಿ ವಿರಳ ದಾನಿಗಳ ಸಾಲಿನಲ್ಲಿ ನಿಲ್ಲುವುದು ಚಿಕ್ಕಮಗಳೂರು ಜಿಲ್ಲೆಯ, ಬೀರೂರಿನ ಸುಪ್ರಸಿದ್ಧ ಪತ್ರೆಯವರ ಮನೆತನ. ಕೆಲವು ಮನೆತನಗಳಲ್ಲಿ ಯಾರೋ ಒಬ್ಬರು ದಾನಿಗಳಿರುತ್ತಾರೆ. ಆದರೆ ದಾನಮಾಡುವ ಸ್ಥಿತಿಯನ್ನು ದೇವರು ಕರುಣಿಸಿದಂದಿನಿಂದಲೂ ಪರಂಪರಾಗತವಾಗಿ ಪ್ರತಿಯೊಂದು ಪೀಳಿಗೆಯೂ ಒಂದಕ್ಕಿಂತ ಒಂದು ಮಿಗಿಲಾಗಿ ಸಮಾಜ ಕಲ್ಯಾಣಕಾರ್ಯ ಮಾಡಿಕೊಂಡು ಬಂದಿರುವುದು ಪತ್ರೆ ಮನೆತನದ ವೈಶಿಷ್ಟ್ಯ. ಇದು ಸಾರ್ವಜನಿಕ ಜೀವನದಲ್ಲಿ ಎದ್ದು ಕಾಣುವ ಆದರ್ಶ ಹಾಗೂ ಅನನ್ಯವಾದ ಉದಾಹರಣೆ.

ನೂರಾರು ವರ್ಷಗಳಿಂದ ಇಂದಿಗೂ ಕರ್ನಾಟಕದಲ್ಲೆಲ್ಲಾ ಪ್ರಖ್ಯಾತವಾಗಿರುವ ಸುಪ್ರಸಿದ್ಧ ಮನೆತನ ಪತ್ರೆಯವರದ್ದು. ಈಗಿನ ಚಿಕ್ಕಮಗಳೂರು ಜಿಲ್ಲೆಯ ಬೀರೂರು ದೊಡ್ಡ ನಗರವಾಗಿಲ್ಲದಿದ್ದರೂ, ಪತ್ರೆಯವರ ಕೊಡುಗೆಗಳಿಂದಾಗಿ ರಾಜ್ಯದಲ್ಲಿ ಸುಪರಿಚಿತವಾದ ಊರಾಗಿದೆ. ಪತ್ರೆಯವರ ಮನೆತನ ಬೀರೂರಿಗೆ, ಕರ್ನಾಟಕದಲ್ಲಿ ಒಂದು ಉನ್ನತ ಸ್ಥಾನವನ್ನು ತಂದುಕೊಟ್ಟಿದೆ. ಬೆಂಗಳೂರಿನಿಂದ ಶಿವಮೊಗ್ಗೆಗೆ ಹೋಗುವ ರಾಜ್ಯ ಹೆದ್ದಾರಿಯಲ್ಲಿದೆ ಬೀರೂರು. ಕಡೂರಿನ ನಂತರ ಸಿಗುತ್ತದೆ. ಬೀರೂರಿನ ನಡುವೆಯೇ ಬಿ.ಎಚ್. ರೋಡು ಹಾದು ಹೋಗುತ್ತದೆ. ಊರನ್ನು ಪ್ರವೇಶಿಸಿ, ಸ್ವಲ್ಪ ದೂರ ಮುಂದೆ ಹೋದರೆ, ರಸ್ತೆಯ ಎಡಭಾಗದಲ್ಲಿ ಪತ್ರೆ ಗಂಗಮ್ಮನವರ ಹೆಸರಿನಲ್ಲಿ ಸುಸಜ್ಜಿತವಾದ ಹೆರಿಗೆ ಆಸ್ಪತ್ರೆ ಗೋಚರವಾಗುತ್ತದೆ. ಪಕ್ಕದಲ್ಲೇ, ಪತ್ರೆ ಶಿವಪ್ಪಯ್ಯನವರ ಹೆಸರಿನಲ್ಲಿ ಅವರ ಮಕ್ಕಳು ಮತ್ತು ಶ್ರೀಯುತರು ನಿರ್ಮಿಸಿರುವ ಜನರಲ್ ಆಸ್ಪತ್ರೆಯಿದೆ. ಜೊತೆಯಲ್ಲೇ ಚನ್ನವೀರಪ್ಪಯ್ಯನವರ ಸ್ಮಾರಕವಾಗಿ ಆಸ್ಪತ್ರೆಯ ಆಡಳಿತ ವಿಭಾಗವೂ ಎದ್ದು ಕಾಣಿಸುತ್ತದೆ (ಬೀರೂರು ತಾಲ್ಲೂಕ ಸ್ಥಳ ಸಹ ಅಲ್ಲ. ಆದರೂ ಜಿಲ್ಲಾ ಆಸ್ಪತ್ರೆಗೆ ಸಮನಾದ ಆಸ್ಪತ್ರೆ ಇಲ್ಲಿರುವುದಕ್ಕೆ ಪತ್ರೆ ಮನೆತನದವರ ಉದಾರತೆಯೇ ಕಾರಣವಾಗಿದೆ). ಅಲ್ಲಿಂದ ಮುಂದೆ ಹೋದರೆ ಅದೇ ಸಾಲಿನಲ್ಲಿ 'ಪತ್ರೆ ಸುವರ್ಣಮ್ಮ ಬಾಲಿಕಾ ಪಾಠಶಾಲೆ'ಯೂ ಕಾಣಿಸಿಗುತ್ತದೆ. ಇನ್ನೂ ಸ್ವಲ್ಪ ಮುಂದೆ ಹೋದರೆ, ಪತ್ರೆ ರುದ್ರಪ್ಪನವರು ಕಟ್ಟಿಸಿದ ಉರ್ದು ಶಾಲೆ ಕಣ್ಣಿಗೆ ಬೀಳುತ್ತದೆ. ಅಲ್ಲಿಂದ ಕೆಲವೇ ಗಜಗಳ ದೂರದಲ್ಲಿ ಬಲಬದಿಗೆ ಪತ್ರೆ ಚನ್ನವೀರಪ್ಪಯ್ಯನವರ ಹೆಸರಿನಲ್ಲಿ ಕಟ್ಟಿರುವ ಕಲ್ಯಾಣಮಂಟಪ ಜನಕಲ್ಯಾಣಕ್ಕೆಂದು ಸುಂದರವಾಗಿ ನಿರ್ಮಾಣವಾಗಿ ನಿಂತಿರುವುದು ಕಾಣಿಸುತ್ತದೆ. ಇಷ್ಟು ಸಣ್ಣ ಊರಿನಲ್ಲಿ ಇಷ್ಟೊಂದು ಸಮಾಜೋದ್ಧಾರಕ ಸಂಸ್ಥೆಗಳನ್ನು ಒಂದೇ ಮನೆತನದವರು ನಿರ್ಮಿಸಿರುವ ಉದಾಹರಣೆಗಳು ಅತೀ ವಿರಳ. ಇಲ್ಲವೇ ಇಲ್ಲವೆಂದರೂ ಅಡ್ಡಿ ಇಲ್ಲ. ಸಮಾಜದಲ್ಲಿ ಶ್ರೀಮಂತರು ಸಾಕಷ್ಟು ಮಂದಿ ಇರಬಹುದು. ಆದರೆ ತಮ್ಮ ದುಡಿಮೆಯ ಭಾಗ ಸಮಾಜದವರೆಲ್ಲರ ಹಿತಕ್ಕಾಗಿ ಎಂದು ಬಯಸುವ ಹೃದಯಶ್ರೀಮಂತಿಕೆ ಇರುವವರ ಮನೆತನ ಬೆರಳಲ್ಲೆಣಿಸುವಷ್ಟು ಸಿಕ್ಕಬಹುದು. ಅಂತಹ ಅಪರೂಪದ ಮನೆತನಗಳಲ್ಲಿ ಪತ್ರೆಯವರ ಮನೆತನ ಒಂದು.

■

## ಸಂಪನ್ನ ಮನೆತನ

ಈಗ ನಾಲ್ಕು ತಲೆಮಾರುಗಳಿಂದಲೂ ಪತ್ರೆಯವರ ಮನೆತನ ಕರ್ನಾಟಕದಲ್ಲಿ ಶ್ರೇಷ್ಠ ಸ್ಥಾನವನ್ನು ಪಡೆದುಕೊಂಡು ಬಂದಿದೆ. ಇಂತಹ ಘನತೆವೆತ್ತ ಕುಟುಂಬದಲ್ಲಿ ಜನಿಸಿ ಬಂದ ಪುಣ್ಯ ಶ್ರೀ ಚನ್ನವೀರಪ್ಪನವರದು. ಈ ಮನೆತನ ಬೀರೂರಲ್ಲಿ ಪ್ರಾರಂಭವಾದ ರೀತಿ, ಅದು ಶ್ರೀಮಂತವಾದ ಕಥೆ ದಂತಕಥೆಯಾಗಿ ಬೆಳೆದಿದೆ. ಹತ್ತೊಂಬತ್ತನೆಯ ಶತಮಾನದಲ್ಲಿ ಕೋಟ್ಯಾಧೀಶರಾಗಿದ್ದ ಮನೆತನ. ಆಗ ಸಾವಿರರೂಪಾಯಿ ಆದಾಯವಿದ್ದ ವ್ಯಕ್ತಿ ಶ್ರೀಮಂತನೆನ್ನಿಸಿಕೊಳ್ಳುತ್ತಿದ್ದ! ಲಕ್ಷದ ಆಸ್ತಿಯುಳ್ಳವ 'ಲಕ್ಷಾಧೀಶ'. ಆತನೇ ಆಗರ್ಭ ಶ್ರೀಮಂತ. ಅಂತಹ ಕಾಲದಲ್ಲಿ ಪತ್ರೆಯವರು ಕೋಟ್ಯಾಧೀಶರಾಗಿದ್ದರು. ಆದುದರಿಂದ ಅನೇಕರು ಇಷ್ಟು ಶ್ರೀಮಂತರು ಹೇಗಾದರು ಎಂದರೆ, ಅವರ ಪೂರ್ವಿಕರು ಪತ್ರೆ ತಂದು ಎಲ್ಲರಿಗೂ ಹಂಚುತ್ತಿದ್ದರಂತೆ, ಹಾಗೆ ಪತ್ರೆ ತರಲು ಒಂದು ದಿನ ಹೋದಾಗ, 'ನಾನೂ ಬರ್ತೀನಿ, ನಾನು ಬರ್ತೀನಿ ಎಂದು' ಯಾರೋ ಅಂದ ಹಾಗೆ ಆಯ್ತಂತೆ. ಆಗ ಆತ ಹೆದರಿ ಮನೆಗೆ ಬಂದು ಹೇಳಿದಾಗ ಮನೆಯ ಗುರುಗಳು. 'ಅದು ಲಕ್ಷ್ಮಿ ನೀನು ಹೆದರಬೇಡ, ನನಗೆ ಒಳ್ಳೆಯದು ಮಾಡುವಂತಿದ್ದರೆ ಬಾ' ಎಂದು ಹೇಳು ಎಂದರಂತೆ. ಎಂದಿನಂತೆ ಮರುದಿನ ಆತ ಸ್ನಾನಮಾಡಿಕೊಂಡು ಮಡಿಯುಟ್ಟುಕೊಂಡು ಅಲ್ಲಿಗೆ ಪುನಃ ಹೋದಾಗ ಅದೇ ಮಾತುಗಳು ಕೇಳಿಬಂದವು. ಆಗ ಗುರುಗಳು ಹೇಳಿದಂತೆ ಹೇಳಲು, ಏಳು ಕೊಪ್ಪರಿಗೆಯ ಹಣ ಒಮ್ಮೆಲೇ ಭೂಮಿಯ ಮೇಲೆ ಬಂದು ಚೆಲ್ಲಾಡಿತಂತೆ. ಆಗ ಎಲ್ಲವನ್ನೂ ಬಂಡಿಯಲ್ಲಿ ಹೇರಿಕೊಂಡು ಬಂದರಂತೆ, ಎಂದು ಕಥೆ ಹೇಳುತ್ತಾರೆ. ಪತ್ರೆಯವರ ಐಶ್ವರ್ಯ ನೋಡಿ ಬೆಳೆದ ಕಟ್ಟುಕಥೆ ಇದು. ಅವರ ಐಶ್ವರ್ಯ ಕಷ್ಟಪಟ್ಟು ನ್ಯಾಯವಾದ ರೀತಿಯಲ್ಲಿ, ಯಾರನ್ನೂ ಶೋಷಿಸದೆ, ಯಾರನ್ನೂ ನೋಯಿಸದೆ ಗಳಿಸಿದ ಸಂಪತ್ತು. ಇದಕ್ಕೆ ಸ್ಪಷ್ಟವಾದ ಇತಿಹಾಸವೇ ಇದೆ.

ಪತ್ರೆಯವರ ಮನೆತನ ಬೀರೂರಲ್ಲಿ ಪ್ರಾರಂಭವಾದುದೂ ಒಂದು ಯೋಗಾಯೋಗ. ಅದು ಪ್ರಾರಂಭವಾದದ್ದು ಹೀಗೆ. ದೊಡ್ಡಮನೆ ರಾಮಣ್ಣನವರು, ಉಬ್ರಾಣಿಮಠದ ಮರುಳಯ್ಯನವರು ಬೀರೂರಿನ ಗಣ್ಯರು. ಅವರಿಬ್ಬರೂ

ವೀರಶೈವರೇ ಆದರೂ ಒಳಪಂಗಡದಲ್ಲಿ ಭೇದವಿತ್ತು. ಆದರೂ ಅವರಿಬ್ಬರೂ ಒಬ್ಬರಿಗೊಬ್ಬರು ಅಣ್ಣತಮ್ಮಂದಿರಂತೆ (ದಾಯಾದಿಗಳಂತೆ ಅಲ್ಲ) ನಡೆದುಕೊಂಡವರು. ಅವರಿಬ್ಬರೂ ಪ್ರತಿ ದಿನ ಬೆಳಿಗ್ಗೆ ಊರಿನ ಮಠ, ದೇವಸ್ಥಾನಗಳನ್ನೆಲ್ಲಾ ಸುತ್ತಾಡಿಕೊಂಡು ಬರುವುದು ವಾಡಿಕೆ. ಒಂದು ದಿನ ಹೀಗೆಯೇ ಸುತ್ತಾಡಿಕೊಂಡು ಬರುವಾಗ, ಊರೊಳಗಿನ ವಿರೂಪಾಕ್ಷ ಮಠಕ್ಕೆ ಹೋದರಂತೆ. ಅದು ಒಂದು ಸಣ್ಣ ಮಠ. ಸರಿಯಾಗಿ ನೋಡಿಕೊಳ್ಳುವವರು ಯಾರೂ ಇರಲಿಲ್ಲ. ಆದರೆ ಅಂದು ಬೆಳಿಗ್ಗೆ ಇವರಿಬ್ಬರೂ ಅಲ್ಲಿಗೆ ಹೋದಾಗ ಒಬ್ಬ ತೇಜಸ್ವಿ ಜಂಗಮ ಯುವಕ ಮಠದಲ್ಲಿದ್ದ. ಹೆಸರು ಚನ್ನವೀರಯ್ಯ. ಇವರಿಬ್ಬರನ್ನು ಕಂಡ ಆ ಯುವಕ, ಗಣ್ಯರಿಗೆ ಗೌರವಿಸಿ, ತನಗೆ ಆ ಮಠದಲ್ಲೇ ಪೂಜೆಮಾಡಿಕೊಂಡು ಇರಲು ಅನುಮತಿ ಕೇಳಿದನಂತೆ. ಆತನ ತೇಜಸ್ಸು, ವಿನಯ, ಗಾಂಭೀರ್ಯಗಳಿಗೆ ಮನಸೋತು, ತ್ಯಾವಣಿಗೆ ಮಠದಿಂದ ಬಂದ ಆ ಜಂಗಮರಿಗೆ ಅಲ್ಲಿರಲು ಅನುಮತಿಸಿದರಂತೆ. ಅಂದಿನಿಂದ ಆತ ದಿನವೂ ಬೆಳಗಾಗೆದ್ದು ಬಿಲ್ವಪತ್ರೆಯನ್ನು ತಂದು ಊರಿನಲ್ಲಿ ಅನೇಕ ಮನೆಗಳ ಪೂಜೆಗೆ ಕೊಟ್ಟ ನಂತರ ತನ್ನ ಕರ್ತವ್ಯಗಳನ್ನೆಲ್ಲಾ ವ್ಯವಸ್ಥಿತವಾಗಿ ಮುಗಿಸಿಕೊಂಡು ಕಂತೆ ಭಿಕ್ಷಕ್ಕೆ ಹೋಗುತ್ತಿದ್ದನಂತೆ. ಈತನ ಸಾತ್ವಿಕತೆ, ಗಾಂಭೀರ್ಯ, ಸದ್ಗುಣ, ವಿನಯಗಳನ್ನು ಗಮನಿಸಿದ ದೊಡ್ಡಮನೆ ರಾಮಣ್ಣನವರು ಒಂದು ದಿನ ಮರುಳಯ್ಯನವರಿಗೆ, 'ಮರುಳಯ್ಯ, ನಿನಗೆ ವಯಸ್ಸಿಗೆ ಬಂದ ಸೋದರಿ ಇದ್ದಾಳೆ. ಈತ ತುಂಬಾ ಅದೃಷ್ಟವಂತನಾಗಿ ಕಾಣುತ್ತಾನೆ. ಈ ಜಂಗಮಮೂರ್ತಿಯೊಡನೆ ನಿನ್ನ ತಂಗಿಯ ವಿವಾಹ ಮಾಡಬಾರದೇಕೆ' ಎಂದರಂತೆ. ಐಶ್ವರ್ಯಕ್ಕಿಂತ ಗುಣಕ್ಕೆ ಬೆಲೆ ಕೊಡುತ್ತಿದ್ದ ಮರುಳಯ್ಯನವರು, ಇದು ಒಳ್ಳೆಯ ಸಲಹೆಯೆಂದು ಭಾವಿಸಿ ತಮ್ಮ ಸೋದರಿ ಮರುಳಮ್ಮನ ವಿವಾಹವನ್ನು ಚನ್ನವೀರಯ್ಯನೊಡನೆ ಮಾಡಿಯೇ ಬಿಟ್ಟರು. ನಂತರ ಅವರನ್ನು ಅಡಿಕೆಯ ವ್ಯಾಪಾರದಲ್ಲಿ ತೊಡಗಿಸಿದರು. ಚನ್ನವೀರಯ್ಯನವರು ಅತ್ಯಂತ ಶ್ರದ್ಧೆಯಿಂದ ಕರ್ತವ್ಯ ನಿರ್ವಹಿಸುತ್ತಾ, ಬೀಗರ ಹಂಗಿನಲ್ಲಿ ಇರಬಾರದೆಂದು ಸ್ವತಂತ್ರವಾಗಿ ವ್ಯಾಪಾರ ಮಾಡಿ ಬಂದ ಲಾಭದಲ್ಲಿ ಜೀವನ ನಿರ್ವಹಣೆ ಮಾಡುತ್ತಾ ಅವರು ಕೊಟ್ಟ ಹಣವನ್ನು ಕಾಲ-ಕಾಲಕ್ಕೆ ಹಿಂತಿರುಗಿಸುತ್ತಿದ್ದರು. ಹೀಗೆ ರೀತಿ ನೀತಿಗಳಲ್ಲಿ, ವ್ಯವಹಾರದಲ್ಲಿ ಅತ್ಯಂತ ಸಮರ್ಪಕವಾಗಿ ತಮ್ಮ ಜೀವನವನ್ನು ಸಾಗಿಸುತ್ತಿದ್ದ ಈ ದಂಪತಿಗಳಿಗೆ ನಾಲ್ಕು ಜನ ಗಂಡುಮಕ್ಕಳು ಜನಿಸಿದರು. ಆ ಮಕ್ಕಳೇ ಮುಂದೆ ರುದ್ರಪ್ಪಯ್ಯ, ಬಸವಲಿಂಗಪ್ಪಯ್ಯ, ಕೊಟ್ರಪ್ಪಯ್ಯ ಮತ್ತು ವೀರಪ್ಪಯ್ಯನವರೆಂದು ಪ್ರಸಿದ್ಧರಾದರು.

■

## ಪ್ರಾಮಾಣಿಕ ಪ್ರಯತ್ನ

ಹಿರಿಯರಾದ ರುದ್ರಪ್ಪಯ್ಯನವರು ಪ್ರಬುದ್ಧಮಾನಕ್ಕೆ ಬಂದಂತೆ ಮನೆಯ ಸ್ಥಿತಿಗತಿಗಳು ದಿನ ದಿನಕ್ಕೆ ಅಭಿವೃದ್ಧಿಗೊಂಡವು. ಸೋದರಮಾವ ಮರುಳಯ್ಯನವರು ಅಳಿಯವ ದಕ್ಷತೆ ನೋಡಿ ಬಹುರೀತಿಯಿಂದ ಪ್ರೋತ್ಸಾಹ ನೀಡುತ್ತಿದ್ದರು. ತಮ್ಮ ವ್ಯಾಪಾರ ವ್ಯವಹಾರ ಚತುರತೆಯನ್ನು ಅಳಿಯನಿಗೆ ಮನನ ಮಾಡಿಕೊಟ್ಟರು. ರುದ್ರಪ್ಪಯ್ಯನವರು ಹುಮ್ಮಸ್ಸಿನಿಂದ, ಚಾಣಾಕ್ಷ ರೀತಿಯಿಂದ, ದಕ್ಷತೆಯಿಂದ, ವ್ಯವಹಾರ ಚತುರತೆಯಿಂದ ಕಾರ್ಯ ನಿರ್ವಹಿಸುತ್ತಿದ್ದರು. ಸಾವಿರಾರು ರೂಪಾಯಿಗಳ ವ್ಯವಹಾರ ಕಾಗದ ಪತ್ರಗಳಿಲ್ಲದೇ ನಡೆಯುತ್ತಿದ್ದವು. ಇಷ್ಟರಲ್ಲಿ ತಂದೆ ಚನ್ನವೀರಯ್ಯನವರು ನಿಧನರಾದರು. ಆಗ ಮೇಳ್ಗೆ ಕರಿಬಸಣ್ಣ ಎಂಬುವರಿಗೆ ಚನ್ನವೀರಯ್ಯನವರು ಅನೇಕ ಸಾವಿರ ರೂಪಾಯಿ ಕೈಗಡ ಕೊಡಬೇಕಾಗಿತ್ತಂತೆ. ಇದಾವುದೂ ಬರಹದಲ್ಲಿರಲಿಲ್ಲ. ಹಾಗಾಗಿ ಚನ್ನವೀರಯ್ಯನವರ ಸಾವಿನ ಸುದ್ದಿ ತಿಳಿದದ್ದೇ ತಡ, ಮೇಳ್ಗೆ ಕರಿಬಸಣ್ಣ ಗಾಬರಿಯಾಗಿ ಬೀರೂರಿಗೆ ಓಡಿ ಬಂದನಂತೆ. ಹಿರಿಯ ಮಗನಾದ ರುದ್ರಪ್ಪಯ್ಯನವರನ್ನು ಕಂಡು, 'ರುದ್ರಪ್ಪಯ್ಯ' ನೀನೇನು ನನ್ನ ಹಣ ಹಿಂತಿರುಗಿಸಿ ಚನ್ನವೀರಯ್ಯನವರ ಮಗನಾಗ್ತೀಯೋ, ಇಲ್ಲವೆ ನನ್ನ ಮಗನಾಗಿ ಬದುಕ್ತೀಯೋ' ಎಂದು ಚುಚ್ಚು ಮಾತನಾಡಿದಂತೆ. ಆಗ ಅವರಿಗೆ ತುಂಬಾ ನೋವಾಗಿ ಹಣವನ್ನು ಕೂಡಲೇ ಹಿಂತಿರುಗಿಸಬೇಕೆನಿಸಿದರೂ ಅಷ್ಟೊಂದು ಹಣ ಕೈಯಲ್ಲಿರಲಿಲ್ಲವಾಗಿ ದುಃಖ ನುಂಗಿಕೊಳ್ಳಬೇಕಾಯ್ತು. ಮರುದಿನ ತನ್ನ ತಂದೆಯಂತಿದ್ದ ಸೋದರಮಾವನಲ್ಲಿ ದುಃಖ ತೋಡಿಕೊಂಡರು. ಆಗ ಮರುಳಯ್ಯನವರು ಅಳಿಯನಿಗೆ ಧೈರ್ಯ ಹೇಳಿ ಸಮಾಧಾನ ಪಡಿಸಿ, ಮೇಳ್ಗೆ ಕರಿಬಸಣ್ಣನನ್ನು ಕರೆಸಿದರು. 'ಕರಿಬಸಣ್ಣಾ, ನೋಡು, ಇವತ್ತು ಸತ್ತಿರುವವನು ಮರುಳಯ್ಯನೇ ಹೊರತು ಚನ್ನವೀರಯ್ಯ ಅಲ್ಲ. ನಿನ್ನ ಎದುರಿಗಿರುವವನು ಚನ್ನವೀರಯ್ಯ. ತಗೊಂಡ್ಹಾಬ ನಿನ್ನ ಲೆಕ್ಕಪತ್ರವನ್ನು' ಎಂದು ಹೇಳಿ, ಕೂಡಲೇ ಕೊಡಬೇಕಾದ ಹಣವನ್ನೆಲ್ಲಾ ಕೊಟ್ಟು ಚುಕ್ತಾಮಾಡಿದರಂತೆ. ಈ ವಿಷಯ ರುದ್ರಪ್ಪಯ್ಯನವರಿಗೆ ತಿಳಿದದ್ದು ನಂತರವೇ! ತಂದೆಯಂತೆ ತಮ್ಮನ್ನು ಪ್ರೀತಿಸಿದ ಮರುಳಯ್ಯನವರನ್ನು ಈ ಅಣ್ಣ ತಮ್ಮಂದಿರು ತುಂಬಾ ಗೌರವದಿಂದ ಕಾಣುತ್ತಿದ್ದರು. ರುದ್ರಪ್ಪಯ್ಯನವರ ಕಾರ್ಯದಕ್ಷತೆಯಿಂದ, ವ್ಯವಹಾರ ಚತುರತೆಯಿಂದ ಶ್ರದ್ಧಾ ಮನೋಭಾವದಿಂದ ಅವರು ಹಿಡಿದ ಕೆಲಸಗಳೆಲ್ಲಾ

ಕೈಗೂಡುತ್ತಿದ್ದವು. ಮುಟ್ಟಿದ್ದೆಲ್ಲಾ ಚಿನ್ನವಾಯ್ತು. ವ್ಯಾಪಾರ ವ್ಯವಹಾರ ಅಭಿವೃದ್ಧಿಗೊಂಡವು. ಹೊಲ-ತೋಟ ಮನೆಗಳಾದವು. ಕಾಫಿ ತೋಟ ಮಾಡಿದರು. ಅಡಿಕೆಯ ವ್ಯಾಪಾರದ ಜೊತೆಗೆ ಮೆಣಸಿನ ವ್ಯಾಪಾರ, ಲೇವಾದೇವಿ ವ್ಯವಹಾರಗಳೂ ಪ್ರಾರಂಭವಾದವು. ರುದ್ರಪ್ಪಯ್ಯನವರು ವ್ಯವಹಾರವನ್ನು ಅತ್ಯಂತ ವ್ಯವಸ್ಥಿತ ರೀತಿಯಲ್ಲಿ ನಿರ್ವಹಿಸುತ್ತಿದ್ದರು. ತಂದೆಯಿಲ್ಲದ ತಮ್ಮಂದಿರರಿಗೆ ತಾವೇ ತಂದೆಯಂತಿದ್ದರು. ತಮ್ಮಂದಿರೂ ಸಹ ಅಣ್ಣನನ್ನು ಬಹಳ ಗೌರವ-ಪ್ರೀತಿಗಳಿಂದ ಕಾಣುತ್ತಿದ್ದರು. ಅಣ್ಣ ಹಾಕಿದ ಗೆರೆಯನ್ನು ಎಂದೂ ದಾಟಿದವರಲ್ಲ. ತಮ್ಮಂದಿರರಿಗೆ ಅಣ್ಣ ಎಂದೂ ದ್ರೋಹ ಬಗೆದವರಲ್ಲ. ಅಣ್ಣ ತಮ್ಮಂದಿರು ಒಬ್ಬರಿಗೊಬ್ಬರು ಪಾಂಡವರಂತೆ ಅನ್ಯೋನ್ಯವಾಗಿದ್ದರು. ವ್ಯವಹಾರ ಬೆಳೆದಂತೆ ಕಾರ್ಯವ್ಯಾಪ್ತಿಯೂ ವಿಶಾಲವಾಯಿತು. ಆಗ ರುದ್ರಪ್ಪಯ್ಯನವರು ವ್ಯಾಪಾರದ ಕೆಲಸವನ್ನು ತಾವಿಟ್ಟುಕೊಂಡು, ಹಣ ಕೊಡುಕೊಳ್ಳುವ ವ್ಯವಹಾರ, ಮದ್ರಾಸ, ವಾಲಾಜಿ ಮುಂತಾದ ದೂರದ ಊರುಗಳಿಗೆ ಹೋಗಿ "ಆಸಾಮಿ"ಗಳಲ್ಲಿ ವ್ಯಾಪಾರ ಕುದುರಿಸುವ ಮುಂತಾದ ಚಾಣಾಕ್ಷತನದ ಕೆಲಸಗಳನ್ನು ಬಸವಲಿಂಗಪ್ಪಯ್ಯನವರ ಪಾಲಿಗೆ ವಹಿಸಿದರು. ಈ ವ್ಯವಹಾರದಲ್ಲಿ ನಿಸ್ಸೀಮರೂ, ದಕ್ಷರೂ, ಧೈರ್ಯವಂತರೂ ಇದ್ದುದರಿಂದ ತಮ್ಮ ವ್ಯವಹಾರದಲ್ಲಿ ಬಲಗೈಯಾಗಿ ಅವರನ್ನು ಇರಿಸಿಕೊಂಡರು. ಊರಲ್ಲಿದ್ದ ಹೊಲ, ತೋಟ ಮುಂತಾದ ಆಸ್ತಿಯ ಮೇಲ್ವಿಚಾರಣೆಯನ್ನು ಕೊಟ್ರಪ್ಪಯ್ಯನವರಿಗೆ ವಹಿಸಿಕೊಟ್ಟರು. ಯಾವುದೇ ಗದ್ದಲಕ್ಕೆ ಹೋಗದವರು. ಮಡಿ, ಆಚಾರ, ಪೂಜೆಗಳಲ್ಲಿ ಮಗ್ನರೂ ಆಗಿದ್ದ ವೀರಪ್ಪಯ್ಯನವರಿಗೆ ಊರಲ್ಲಿಯ "ಅಂಗಡಿ"ಯ ಲೆಕ್ಕಪತ್ರಗಳನ್ನು ನೋಡಿಕೊಳ್ಳುವ ಜವಾಬ್ದಾರಿ ವಹಿಸಿದರು. ಹೀಗೆ ನಾಲ್ಕು ಜನ ಅಣ್ಣ ತಮ್ಮಂದಿರು ದುಡಿಮೆಯ ನಾನಾ ಮಾರ್ಗಗಳಲ್ಲಿ ದಕ್ಷತೆಯಿಂದ ದುಡಿದದ್ದೇ ಪತ್ರೆಯವರ ಸಂಪತ್ತು ಪರ್ವತವಾಗಿ ಬೆಳೆಯಲು ಕಾರಣವಾಯ್ತು ಎಂಬುದು ಐತಿಹಾಸಿಕ ಸತ್ಯ.

■

## ಪ್ರೀತಿ-ಗೌರವದ ಸಂಸಾರಬಳ್ಳಿ

ರುದ್ರಪ್ಪಯ್ಯನವರ ಪತ್ನಿ ರುದ್ರಮ್ಮನವರು. ಹಿರಿಯ ಸೊಸೆಯಾದ ಅವರನ್ನು ಎಲ್ಲರೂ "ದೊಡ್ಡಮ್ಮಾರು" ಎಂದೇ ಕರೆಯುತ್ತಿದ್ದರು. ಕೇವಲ ಮನೆಯವರೇ ಅಲ್ಲ ಊರಿನವರೆಲ್ಲಾ ಅವರನ್ನು "ದೊಡ್ಡವ್ವಾರು" ಅಥವಾ "ದೊಡ್ಡಮ್ಮಾರು" ಎಂದು ಕರೆಯುತ್ತಿದ್ದರು. ರುದ್ರಪ್ಪಯ್ಯನವರಿಗೆ ಕೊಟ್ಟಂತಹ ಗೌರವವನ್ನೇ ಎಲ್ಲರೂ, ಅವರಿಗೂ ಕೊಡುತ್ತಿದ್ದರು. ಅದಕ್ಕೆ ಕಾರಣವಿಲ್ಲದಿಲ್ಲ. ಅವರು ಅಷ್ಟು ದಕ್ಷರು, ಘನತೆ, ಗಾಂಭೀರ್ಯಉಳ್ಳ ಮಹಿಳೆಯಾಗಿದ್ದರು. ಮೈದುನರೂ ಸಹ ಅವರನ್ನು ತಾಯಿಯಂತೆಯೇ ಗೌರವಿಸುತ್ತಿದ್ದರು. ರುದ್ರಮ್ಮನವರು ಆಚಾರವಂತರೂ,

ಪೂಜಾನಿಷ್ಠರೂ ಆಗಿದ್ದರು. ರಸ್ತೆಯಲ್ಲಿ ಹೋಗುತ್ತಿದ್ದುದೇ ಅಪರೂಪ. ಹೊರಟರೆಂದರೆ ಬೀದಿಯಲ್ಲಿ ಎದುರಾದ ಎಲ್ಲರೂ ಬದಿಗೆ ಸರಿದು ನಿಲ್ಲುತ್ತಿದ್ದರಂತೆ. ಅಂತಹ ವ್ಯಕ್ತಿತ್ವ ಅವರದು! ಈ ದಂಪತಿಗಳಿಗೆ ಚಿತ್ರಶೇಖರ, ಸೋಮಶೇಖರರೆಂಬ ಇಬ್ಬರು ಮಕ್ಕಳು ಜನಿಸಿದರಾದರೂ ಸ್ವಲ್ಪ ಕಾಲದಲ್ಲಿಯೇ ಸಾವನ್ನಪ್ಪಿದರು. ತಮ್ಮಂದಿರ ಮಕ್ಕಳನ್ನೇ ತಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಂತೆ ಪ್ರೀತಿಸುತ್ತಿದ್ದರು. ತಮ್ಮ ಬಸವಲಿಂಗಪ್ಪಯ್ಯನವರ ಪತ್ನಿ ನೀಲಮ್ಮನವರು. ಈ ದಂಪತಿಗಳಿಗೆ ಚನ್ನವೀರಯ್ಯ ನಂಜುಂಡಯ್ಯ ಎಂಬ ಗಂಡು ಮಕ್ಕಳು. ನಂಜಮ್ಮ, ಗಂಗಾಧರಮ್ಮ ಎಂಬ ಇಬ್ಬರು ಹೆಣ್ಣು ಮಕ್ಕಳೂ ದುರಾದೃಷ್ಟವಶಾತ್ ಬಸವಲಿಂಗಪ್ಪಯ್ಯನವರು ಚಿಕ್ಕವಯಸ್ಸಿನಲ್ಲಿಯೇ ಎಂದರೆ ಮೂವತ್ತೆರಡು ವಯಸ್ಸಿನವರಿದ್ದಾಗಲೇ ಲಿಂಗೈಕ್ಯರಾದರು. ರುದ್ರಪ್ಪಯ್ಯನವರ ವ್ಯಾಪಾರದಲ್ಲಿ ಜೊತೆ ಜೊತೆಯಾಗಿಯೇ ಕೆಲಸ ಮಾಡುತ್ತಿದ್ದು ಅವರಿಬ್ಬರಲ್ಲೂ ಒಂದು ರೀತಿಯ ಆತ್ಮೀಯತೆ ಬೆಳೆದಿತ್ತು. ವ್ಯಾಪಾರ ವ್ಯವಹಾರ ಸುಸ್ಥಿತಿಯಲ್ಲಿ ಸಾಗಿಸಿಕೊಂಡು ಹೋಗಲು ಬಸವ ಲಿಂಗಪ್ಪಯ್ಯನವರ ಚಾಕಚಕ್ಯತೆ ಬಹಳ ಸಹಕಾರಿಯಾಗಿತ್ತು. ಈ ಕಡೆ ವ್ಯವಹಾರಕ್ಕೂ ಪೆಟ್ಟು, ಆ ಕಡೆ ಪ್ರೀತಿಯ ತಮ್ಮನ ಅಗಲುವಿಕೆಯಿಂದ ಹೃದಯಕ್ಕೂ ನೋವು. ಇದು ರುದ್ರಪ್ಪಯ್ಯನವರಿಗೆ ನುಂಗಲಾರದ ತುತ್ತಾಯಿತು. ಇದೂ ಸಾಲದೆಂಬಂತೆ ಸ್ವಲ್ಪ ಕಾಲದಲ್ಲಿಯೇ ಕೊಟ್ರಪ್ಪಯ್ಯನವರೂ ಶಿವಾಧೀನರಾದರು. ಮೂರನೆಯವರಾದ ಕೊಟ್ರಪ್ಪಯ್ಯನವರ ಪತ್ನಿ ಗಂಗಮ್ಮನವರು – ಈ ದಂಪತಿಗಳಿಗೆ ಚನ್ನವೀರಯ್ಯ (ಈ ಗ್ರಂಥದ ಪುಣ್ಯಪುರುಷರು) ಮತ್ತು ಶಿವಪ್ಪಯ್ಯರೆಂಬ ಇಬ್ಬರು ಗಂಡುಮಕ್ಕಳೂ ವೀರಮ್ಮ ಹಾಗೂ ಕರಿಸಿದ್ದಮ್ಮರೆಂಬ ಇಬ್ಬರು ಹೆಣ್ಣುಮಕ್ಕಳೂ ಇದ್ದರು. ಕೊನೆಯ ತಮ್ಮನಾದ ವೀರಪ್ಪಯ್ಯನವರಿಗೆ ಮೊದಲನೆಯ ಪತ್ನಿ ಸಿದ್ದಮ್ಮ ತೀರಿ ಹೋಗಿ, ರುದ್ರಮ್ಮನವರನ್ನು ವಿವಾಹವಾದರು. ಅವರ ಏಕಮಾತ್ರ ಪುತ್ರಿ ಸರ್ವಮಂಗಳಮ್ಮ. ಇಂಥ ದೊಡ್ಡ ಸಂಸಾರದ ಜವಾಬ್ದಾರಿಗಳನ್ನು ರುದ್ರಪ್ಪನವರು ಬಹಳ ಸಮರ್ಪಕವಾಗಿ ನಿರ್ವಹಿಸುತ್ತಿದ್ದರು.

ರುದ್ರಪ್ಪಯ್ಯನವರಿಗೆ, ತಂದೆಗೆ ಸಮನಾಗಿ, ತಮ್ಮ ಅಭಿವೃದ್ಧಿಗೆ ಸಹಾಯಕರಾದ, ತಮ್ಮನ್ನು ಅತ್ಯಂತ ಅಭಿಮಾನದಿಂದ ಕಾಣುತ್ತಿದ್ದ ಉಬ್ರಾಣಿಮಠದ ಮರುಳಯ್ಯನವರ ಮನೆಯ ಮೇಲೆ ತುಂಬಾ ಅಭಿಮಾನ. ಅವರ ಏಕಮಾತ್ರ ಪುತ್ರರಾದ ಬೀರೂರಲ್ಲೇ ಇದ್ದ ಶಿವಲಿಂಗಪ್ಪಯ್ಯನವರಿಗೆ ತಮ್ಮ ಪ್ರೀತಿಯ ಮಗಳಾದ ನಂಜಮ್ಮನವರನ್ನು (ಬಸವಲಿಂಗಪ್ಪಯ್ಯನವರ ಮಗಳು) ಕೊಟ್ಟು ವಿವಾಹ ಮಾಡಿದರು. ಸ್ವತಃ ತಂದೆಯೇ ಅಷ್ಟು ವೈಭವದಿಂದ ಮದುವೆ ಮಾಡುತ್ತಿದ್ದರೋ ಇಲ್ಲವೋ ಅಷ್ಟು ವೈಭವದಿಂದ ತಮ್ಮ ವಿವಾಹ ಮಾಡಿದರೆಂದು ಸ್ವತಃ ನಂಜಮ್ಮನವರೇ ಹೇಳುತ್ತಿದ್ದರು. ವಾಲಾಜಿಯಿಂದ ಮದುವೆಯ ಚಪ್ಪರಕ್ಕೆ ಹತ್ತು ಸಾವಿರ ರೂಪಾಯಿ ಖರ್ಚು

ಮಾಡಿದರಂತೆ! (ಇಪ್ಪತ್ತು ರೂಪಾಯಿಗೆ ಒಂದು ತೊಲ ಬಂಗಾರವಿದ್ದ ಕಾಲದಲ್ಲಿ). ತಂದೆ ಇಲ್ಲದೆ ಶಿವಲಿಂಗಪ್ಪಯ್ಯನವರು ಮಾವನವರಾದ ರುದ್ರಪ್ಪಯ್ಯನವರನ್ನು ತಂದೆಯಲ್ಲಿರಿಸಿದಂಥ ಪ್ರೀತಿ-ಗೌರವಗಳಿಂದ ಕಾಣುತ್ತಿದ್ದರು. ಅವರೂ ಅಷ್ಟೆ, ಅಳಿಯನನ್ನು ಮಗನಂತೆಯೇ ಭಾವಿಸಿದ್ದರು.

■

## ದಾನ-ಧರ್ಮದ ಬೇರು ಶ್ರೀ ರುದ್ರಪ್ಪಯ್ಯ

ರುದ್ರಪ್ಪನವರು ದಾನ-ಧರ್ಮದಲ್ಲಿ ಎತ್ತಿದ ಕೈ. ಪಾತ್ರಾ-ಪಾತ್ರ ಅರಿತು ದಾನಮಾಡುತ್ತಿದ್ದರು. ಹುಂಬ ರೀತಿಯ ದಾನವಾಗಿರಲಿಲ್ಲ. ಮಾನವೀಯತೆಯ ದೃಷ್ಟಿಯಿಂದ ಧಾರ್ಮಿಕ ಭಾವನೆಯಿಂದ ದಾನಮಾಡುತ್ತಿದ್ದರು. ದಾನದಲ್ಲಿ ದುಂದಿರಲಿಲ್ಲ, ವಿವೇಕವಿತ್ತು. ಇದೇ ವಿವೇಕವನ್ನು ಅವರ ವಂಶಜರು ಪರಿಪಾಲಿಸಿಕೊಂಡು ಬಂದಿದ್ದಾರೆ. ಅನೇಕರು ಇವರ ಸಹಾಯದಿಂದ ಕಷ್ಟಗಳಿಂದ ಪಾರಾಗಿದ್ದಾರೆ. ಜೀವನದಲ್ಲಿ ಅಭಿವೃದ್ಧಿ ಹೊಂದಿದ್ದಾರೆ. ಒಂದನೇ ಮಹಾಯುದ್ಧ ಕಾಲದಲ್ಲಿ ಸಂತ್ರಸ್ತರ ನಿಧಿಗೆ ಉದಾರವಾಗಿ ದಾನ ಸಲ್ಲಿಸಿದರಂತೆ. ಇಂದು ಬೀರೂರಲ್ಲಿರುವ ಉರ್ದು ಸ್ಕೂಲಿನ ಕಟ್ಟಡವನ್ನು ಬ್ರಿಟಿಷರ ಕಾಲದಲ್ಲಿ 'ಇಂಗ್ಲಿಷ್ ಸ್ಕೂಲ್' ಕಟ್ಟಿಸಿ ಊರಿನ ಮಕ್ಕಳ ಶಿಕ್ಷಣಕ್ಕೆ ಕಾರಣರಾದ ಕೀರ್ತಿ ರುದ್ರಪ್ಪಯ್ಯನವರಿಗೆ ಸಲ್ಲತಕ್ಕಂತಹುದು. ಈಗ ಅಡಿಕೆಯ ವ್ಯಾಪಾರದಲ್ಲಿ ಪ್ರಸಿದ್ಧಿಯಾಗಿರುವ ಶಿವಮೊಗ್ಗಾದಲ್ಲಿ ಪ್ರಥಮ ಅಡಿಕೆ ಮಂಡಿಯನ್ನು ಸ್ಥಾಪಿಸಿದ ಕೀರ್ತಿ ಶ್ರೀಯುತರದ್ದು ಎಂಬುದು ಜನಜನಿತವಾಗಿದೆ. ಇವರ ಕಾಲಾನಂತರ ಇವರ ಕೊನೆಯ ತಮ್ಮಂದಿರಾದ ವೀರಪ್ಪಯ್ಯನವರೂ ಧಾರ್ಮಿಕ, ಶೈಕ್ಷಣಿಕ ಕಾರ್ಯಗಳಿಗೆ ಶ್ರಮಿಸಿದರು. ಊರಿನಲ್ಲಿರುವ ಭೋಗಮಲ್ಲೇಶ್ವರ ದೇವಸ್ಥಾನದ ಜೀರ್ಣೋದ್ಧಾರಕ್ಕಾಗಿ ಉದಾರ ಧನ ಸಹಾಯ ಮಾಡಿದುದಲ್ಲದೆ, ಸಂಸ್ಕೃತ ಪಾಠಶಾಲೆಯನ್ನು ಬೀರೂರಲ್ಲಿ ಪ್ರಾರಂಭಿಸಿ ಅನೇಕ ವಟುಗಳು ಸಂಸ್ಕೃತಾಭ್ಯಾಸವನ್ನು, ಪೌರೋಹಿತ್ಯವನ್ನು ಕಲಿಯಲು ಅನುವುಮಾಡಿಕೊಟ್ಟರು.

ಹೀಗೆ ಪತ್ರೆ ರುದ್ರಪ್ಪಯ್ಯನವರು ದುಡಿಮೆಯಲ್ಲಷ್ಟೇ ಜಾಣರಾಗಿರಲಿಲ್ಲ. ಶಿಕ್ಷಣ, ಧರ್ಮ, ಸಮಾಜ ಕಲ್ಯಾಣ ಮುಂತಾದ ಜನಹಿತ ಕಾರ್ಯಗಳಲ್ಲೂ ಕೊಡುಗೈ ದೊರೆಯಾಗಿದ್ದರು. ತಮ್ಮಂದಿರ ಮರಣದ ದುಃಖವನ್ನು ಸಹಿಸುವುದೇ ಕಷ್ಟವಾಗಿದ್ದಾಗ ತಮ್ಮ ಬಸವಲಿಂಗಪ್ಪಯ್ಯನವರ ಮಕ್ಕಳಾದ ರಾಜಕುಮಾರರಂತಿದ್ದ ನಂಜುಂಡಯ್ಯ ಮತ್ತು ಚನ್ನವೀರಯ್ಯನವರೂ ಒಳ್ಳೆ ಪ್ರಾಯಕ್ಕೆ ಬಂದ ವಯಸ್ಸಿನಲ್ಲಿ ವಿಧಿವಶರಾದರು. ಇದೂ ಕೂಡ ರುದ್ರಪ್ಪಯ್ಯನವರಿಗೆ ಸಹಿಸಲಾರದ ಪೆಟ್ಟಾಯ್ತು. ಇನ್ನೊಬ್ಬ ತಮ್ಮ ಕೊಟ್ರಪ್ಪಯ್ಯನವರ ಮಕ್ಕಳಾದ ಚನ್ನವೀರಪ್ಪಯ್ಯ ಮತ್ತು ಶಿವಪ್ಪಯ್ಯನವರ ಮಕ್ಕಳಿನ್ನೂ

ಚಿಕ್ಕವರಾಗಿದ್ದರು. ಇದೇ ಸಮಯದಲ್ಲಿ ರುದ್ರಪ್ಪನವರೂ ಸಹ ಕೈಲಾಸವಾಸಿಗಳಾದರು. ಇಷ್ಟು ದೊಡ್ಡ ವ್ಯವಹಾರದ ಹೊರೆಯೆಲ್ಲಾ ಕಿರಿಯವರಾದ ವೀರಪ್ಪಯ್ಯನವರ ಮೇಲೆ ಬಿದ್ದಿತು. ಅನೇಕ ಕಾರಣಗಳಿಂದ ಅವರು ಹೆಚ್ಚಾಗಿ ನ್ಯಾಮತಿಯಲ್ಲಿರುತ್ತಿದ್ದರು. ಅಲ್ಲದೆ ಅವರು ಹೆಚ್ಚಿನ ವೇಳೆಯನ್ನೆಲ್ಲ ಶಿವಪೂಜೆಯಲ್ಲೇ ಕಳೆಯುತ್ತಿದ್ದದರಿಂದ, ಬೀರೂರಲ್ಲೇ ಇದ್ದ, ಅಳಿಯನಾದ ಉಬ್ರಾಣಿಮಠದ ಶಿವಲಿಂಗಪ್ಪಯ್ಯನವರಿಗೆ ವ್ಯವಹಾರದ ಮೇಲ್ವಿಚಾರಣೆಯ ಜವಾಬ್ದಾರಿಯನ್ನು ವಹಿಸಿದರು. "ಅಳಿಯ ಶಿವಲಿಂಗಪ್ಪಯ್ಯ" ಎಂಬ ಹೆಸರಿನಲ್ಲಿ ಸುಮಾರು ಇಪ್ಪತ್ತು ವರ್ಷಗಳ ಕಾಲ ವೀರಪ್ಪಯ್ಯನವರ ಕೆಲಸ ಕಾರ್ಯಗಳಲ್ಲಿ ಶಿವಲಿಂಗಪ್ಪಯ್ಯನವರ ಸಹಕಾರಿಗಳಿಗೆ ವ್ಯವಹಾರ ನೋಡಿಕೊಳ್ಳುತ್ತಿದ್ದರು. ಮಗನಂತೆ ಸಂಪೂರ್ಣ ವಿಶ್ವಾಸವಿಟ್ಟ ಮಾವನವರಿಗೆ ಶಿವಲಿಂಗಪ್ಪಯ್ಯನವರು ಅತ್ಯಂತ ನಂಬಿಕೆಯಿಂದ, ಜವಾಬ್ದಾರಿಯಿಂದ, ನಿಷ್ಠೆಯಿಂದ ನಡೆದುಕೊಂಡರೆಂದು ಕಂಡು- ಕೇಳಿದ ಜನರೆಲ್ಲ ಇಂದಿಗೂ ಸ್ಮರಿಸುತ್ತಾರೆ.

■

## ಅಳಿಯ ಶಿವಲಿಂಗಪ್ಪಯ್ಯನವರು

ಉಬ್ರಾಣಿಮಠದ ಶಿವಲಿಂಗಪ್ಪಯ್ಯನವರದೂ ದೊಡ್ಡ ವ್ಯವಹಾರ. ಸಾರ್ವಜನಿಕ ಸೇವೆಯಲ್ಲಿ ನಿರತವಾದ ಬದುಕು ಆದರೂ ಮಾವನವರ ನಂಬಿಕೆಗೆ ಚಾಚೂ ತಪ್ಪದಂತೆ ತಮ್ಮ ಕರ್ತವ್ಯ ನಿರ್ವಹಿಸುತ್ತಿದ್ದರು. ಅವರ ಪ್ರಾಮಾಣಿಕತೆಯ ಮಟ್ಟಕ್ಕೆ ಉದಾಹರಣೆಯಾದ ಒಂದು ನಿದರ್ಶನ ಇಲ್ಲಿದೆ. ಆಗಿನ ಕಾಲದಲ್ಲಿ ಎಷ್ಟೇ ಶ್ರೀಮಂತರಿದ್ದರೂ ಮಕ್ಕಳಿಗೆ ಸಿಕ್ಕಾಪಟ್ಟೆ ದುಡ್ಡು (ಈಗಿನ ಮಕ್ಕಳಿಗೆ ಸಿಗುವಂತೆ) ಸಿಗುತ್ತಿರಲಿಲ್ಲ. ಸಂತೆಯ ದಿನ ಮಕ್ಕಳಿಗೆಲ್ಲ ಒಂದಾಣೆಯನ್ನೋ ಎರಡಾಣೆಯನ್ನೋ ಒಬ್ಬೊಬ್ಬರಿಗೆ ಕೊಡುತ್ತಿದ್ದರಂತೆ. ಚನ್ನವೀರಪ್ಪಯ್ಯನವರ ಮಕ್ಕಳಾದ ಮರುಳಯ್ಯನವರು ಮತ್ತು ಶ್ರೀಕಂಠಯ್ಯನವರಿಗಿಂತ ಸ್ವಲ್ಪ ದೊಡ್ಡವರಷ್ಟೇ. ಹೆಚ್ಚು ಕಡಿಮೆ ಸಮಯವಯಸ್ಕರು. ಸಂತೆಯ ದಿನ ಅಂಗಡಿ ಲೆಕ್ಕದಿಂದ ಹುಡುಗರಿಗೆ ದುಡ್ಡು ಕೊಡುತ್ತಿದ್ದರಂತೆ. ಆಗ ಚನ್ನವೀರಪ್ಪಯ್ಯನವರಿಗೂ ಶಿವಪ್ಪಯ್ಯನವರಿಗೂ ಪತ್ರೆಯವರ ಲೆಕ್ಕದಲ್ಲೂ, ತಮ್ಮ ಮಕ್ಕಳಿಗೆ ತಮ್ಮ ಲೆಕ್ಕದಿಂದಲೂ "ಸಂತೆಯ ದುಡ್ಡು" ಕೊಡುತ್ತಿದ್ದರಂತೆ. ಶಿವಲಿಂಗಪ್ಪಯ್ಯನವರ ಹಿನ್ನೆಲೆಯೂ ದೊಡ್ಡದು. ಊರಿನ ಗಣ್ಯರೂ, ಧರ್ಮಾಭಿಮಾನಿಗಳೂ ಆಗಿದ್ದ ಮರುಳಯ್ಯನವರ ಏಕಮಾತ್ರ ಪುತ್ರ, ಅಲ್ಲದೆ ಪತ್ರೆಯವರದ್ದು ಅದೇ ಊರಲ್ಲಿದ್ದ ಸೋದರತ್ತೆಯ ಮನೆ. ಅಲ್ಲಿಯ ಒಡನಾಟದಿಂದ ಆ ಮನೆಯ ಹಿರಿಯರ ಸದ್ಗುಣಗಳೂ ದಕ್ಷತೆಯೂ ಅವರಲ್ಲಿ ಮನೆ ಮಾಡಿದ್ದವು. ಅವರು ಮಾವನವರ ಕಷ್ಟಸಮಯದಲ್ಲಿ ಹೆಗಲು ಕೊಟ್ಟು

ನೆರವಾದರು. ಪತ್ರೆಯವರ ಅಳಿಯಂದಿರಾದ ಶಿವಲಿಂಗಪ್ಪಯ್ಯನವರು ತಮ್ಮದೇ ಆದ ವರ್ಚಸ್ಸನ್ನು ಪಡೆದಿದ್ದರು. ಆಗ ಈ ಎರಡು ಮನೆತನಗಳು ಒಂದೇ ಎಂಬಂತೆ ಬಾಳಿದರೆಂಬುದು ತುಂಬಾ ಹೆಮ್ಮೆಯ ವಿಷಯ.

ಉಬ್ರಾಣಿಮಠದ ಶಿವಲಿಂಗಪ್ಪಯ್ಯನವರು ಅತ್ಯಂತ ಪ್ರಾಮಾಣಿಕರೂ, ಸಮಾಜ ಸುಧಾರಕರೂ, ಪೂಜಾನಿಷ್ಠರೂ ಧರ್ಮಾಭಿಮಾನಿಗಳೂ ಆಗಿದ್ದರು. ಸಾಮಾಜಿಕ, ಧಾರ್ಮಿಕ, ರಾಜಕೀಯ ಕ್ಷೇತ್ರದಲ್ಲಿ ಬಹಳಷ್ಟು ಸೇವೆ ಸಲ್ಲಿಸಿದವರು. ಅವರ ಪತ್ನಿ ಪತ್ರೆಯ ಮನೆತನದ ನಂಜಮ್ಮನವರೂ ಬಹಳ ಉದಾರಿಗಳಾಗಿದ್ದರು. ಕೋಟ್ಯಾಧೀಶರ ಮನೆಯ ಮಗಳು, ಆಗರ್ಭ ಶ್ರೀಮಂತರ ಮನೆಯ ಸೊಸೆ. ಎರಡು ಮನೆಯಲ್ಲೂ ಸ್ಥಾನಮಾನಗಳು. ಅವರನ್ನು ಹಿಡಿಯುವವರಾರು? ತಮಗೆ ತಿಳಿದಂತೆ ದಾನ ಧರ್ಮ ಮಾಡುತ್ತಿದ್ದರು. ಆಳು ಕಾಳುಗಳಿಗೆಲ್ಲ ತಮ್ಮ ಕೈಯಿಂದ ಪೂರ್ಣ ಖರ್ಚು ಹಾಕಿ ಮದುವೆ ಮಾಡುತ್ತಿದ್ದರು. ಮನೆಯಂತೂ "ದಾಸೋಹ ಮಠ" ವಾಗಿದ್ದಿತಂತೆ. ಆಗಿನ ಕಾಲದಲ್ಲಿ ಬಹುಶಃ ಅವರ ಮನೆಯಲ್ಲಿ ಪೂಜೆ ಮಾಡದ ವೀರಶೈವ ಸ್ವಾಮಿಗಳು ಇರಲಿಲ್ಲವೆನ್ನುವಷ್ಟರ ಮಟ್ಟಿಗೆ ಪ್ರತಿ ದಿನ ಆ ಈ ಸ್ವಾಮಿಗಳ ಪೂಜೆ, ಹಬ್ಬ, ಹರಿದಿನಗಳೂ, ವ್ರತೋಪವಾಸಗಳೂ, ಪೂಜೆ ಪುನಸ್ಕಾರಗಳೂ ಅವ್ಯಾಹತವಾಗಿ ನಡೆಯುತ್ತಿದ್ದವು. ಶಿವಲಿಂಗಪ್ಪಯ್ಯನವರ ಹಿನ್ನೆಲೆಯೂ ಹಿರಿದು. ಇವರು ಊರಿನ ಮಕ್ಕಳನ್ನು ತಮ್ಮ ಮಕ್ಕಳಂತೆಯೇ ಕಾಣುತ್ತಿದ್ದ ಮರುಳಯ್ಯನವರ ಮಾರ್ಗದರ್ಶನದಲ್ಲಿ ರೂಪುಗೊಂಡ ಪುತ್ರರು. ಮರುಳಯ್ಯನವರ ಮನೆಯಲ್ಲಿ ನೂರಾರು ಆಕಳುಗಳು ಹಾಲು ಕರೆಯುತ್ತಿದ್ದವು. ಮನೆಯ ಮುಂದೆ ಒಂದು ದೊಡ್ಡ ಹಾಸುಗಲ್ಲಿತ್ತು. ಬಡಬಗ್ಗರು ದಿನವೂ ಆ ಹಾಸುಗಲ್ಲಿನ ಮೇಲೆ ತಮ್ಮ ಮಕ್ಕಳಿಗೆ ಹಾಲಿಗಾಗಿ ಬಟ್ಟಲುಗಳನ್ನು ತಂದಿಡುತ್ತಿದ್ದರು. ಹಾಲು ಕರೆದುಕೊಂಡು ಆಳುಗಳು ಮನೆಯ ಒಳಕ್ಕೆ ತೆಗೆದುಕೊಂಡು ಹೋಗುವ ಮುನ್ನ ಈ ಬಟ್ಟಲುಗಳಿಗೆ ಹಾಲು ತುಂಬಿಸಿ ಉಳಿದ ಹಾಲನ್ನು ಒಳಕ್ಕೆ ಒಯ್ಯಬೇಕಾಗಿತ್ತಂತೆ. ಮನೆಯಲ್ಲಿ ಅವರ ವಿಧವಾ ಸೋದರಿಯೊಬ್ಬರಿದ್ದರಂತೆ. ಆಕೆ ಮನೆಗಾಗಿ ತುಂಬಾ ದುಡಿಯುತ್ತಿದ್ದಳು. ಸ್ವಲ್ಪ ನಷ್ಟವಾದರೂ ಸಹಿಸುತ್ತಿರಲಿಲ್ಲ. ಅಣ್ಣನ ಈ ಧಾರಾಳತನ ಆಕೆಗೆ ಸರಿ ಬರುತ್ತಿರಲಿಲ್ಲ. ಒಂದು ದಿನ ಮರುಳಯ್ಯನವರು ಇಲ್ಲದ ವೇಳೆ ನೋಡಿ, ಹಾಲಿಗೆ ಬಂದವರನ್ನೆಲ್ಲ ಬೈದು ಹಾಲು ಕೊಡದೆ ಕಳಿಸಿಬಿಟ್ಟರಂತೆ. ಅಷ್ಟರಲ್ಲೇ ಬಂದ ಮರುಳಯ್ಯನವರಿಗೆ ಈ ವಿಚಾರ ತಿಳಿದು, ಕೋಪಗೊಂಡು ಆ ದಿನ ಒಂದು ಹನಿ ಹಾಲನ್ನೂ ಮನೆಯಲ್ಲಿ ಬಳಸಬಾರದೆಂದು ಕಟ್ಟಪ್ಪಣೆ ಮಾಡಿ ಎಲ್ಲ ಹಾಲನ್ನು ಬಡಬಗ್ಗರಿಗೆ ಹಂಚಿಸಿ ಬಿಟ್ಟರಂತೆ! ಅಂತಹ ತಂದೆಯ ಮಗನಾದ ಶಿವಲಿಂಗಪ್ಪಯ್ಯನವರೂ ದಾನ-ಧರ್ಮ ಮಾಡುವಾಗ ಹಿಂದು-ಮುಂದು ನೋಡುತ್ತಿರಲಿಲ್ಲ.

ಮೊದಲನೆಯ ಯುದ್ಧದ ಸಮಯದಲ್ಲಿ ಕಾಳು-ಕಡಿ ಬಹಳ ತುಟ್ಟಿಯಾಗಿ ಬಡ-ಬಗ್ಗರಿಗೆ ಕೊಳ್ಳುವುದೇ ಕಷ್ಟವಾಯಿತಂತೆ. ಅಲ್ಲದೆ ಕಾಳೂ ಸಿಗುತ್ತಿರಲಿಲ್ಲವಂತೆ. ಆಗ ಶಿವಲಿಂಗಪ್ಪಯ್ಯನವರು ರಂಗೂನಿನಿಂದ ಅಕ್ಕಿಯನ್ನು ತರಿಸಿ, ಅತ್ಯಂತ ಕಡಿಮೆ ಬೆಲೆಯಲ್ಲಿ ಊರಿನ ಜನರಿಗೆ ಧಾನ್ಯ ಸಿಗುವಂತೆ ಮಾಡಿದರಂತೆ! ಇವರ ಮನೆಯಲ್ಲಿ ಅನೇಕ ಹುಡುಗರು 'ವಾರಾನ್ನಕ್ಕೆ' ಬರುತ್ತಿದ್ದರೆ, ಮತ್ತೆ ಕೆಲವು ವಿದ್ಯಾರ್ಥಿಗಳು ದಿನವೂ ಊಟ ಮಾಡಿಕೊಂಡು ಹೋಗುತ್ತಿದ್ದರು, ಅನೇಕರು ಮನೆಯಲ್ಲಿ ಇದ್ದುಕೊಂಡೂ ಓದುತ್ತಿದ್ದರು. ಇಷ್ಟಲ್ಲದೆ ಪುಸ್ತಕ, ಫೀಸು, ಬಟ್ಟೆಗಳನ್ನು ಎಷ್ಟೋ ಹೊರಗಿನ ವಿದ್ಯಾರ್ಥಿಗಳಿಗೂ ಕೊಡಿಸುತ್ತಿದ್ದರಂತೆ. ಇವರಿಗೆ ವಿದ್ಯಾರ್ಥಿಗಳ ಮೇಲೆ ಹುಚ್ಚು ಪ್ರೀತಿ. ಆಗಿನ ಕಾಲದಲ್ಲಿ ಇಡೀ ಡಿಸ್ಟ್ರಿಕ್ಟಿಗೆ ಲೋಯರ್ ಸೆಕೆಂಡರಿ ಪರೀಕ್ಷೆಯು ಜಿಲ್ಲೆಯ ಮುಖ್ಯಸ್ಥಳವಾದ ಕಡೂರಲ್ಲಿ (ಆಗ ಕಡೂರು ಜಿಲ್ಲಾಕೇಂದ್ರವಾಗಿತ್ತು, ಚಿಕ್ಕಮಗಳೂರು ಅಲ್ಲ) ಮಾತ್ರ ನಡೆಯುತ್ತಿತ್ತು. ಕಡೂರಲ್ಲಿ ಶಿವಲಿಂಗಪ್ಪಯ್ಯನವರ ಒಂದು ಬಂಗಲೆ ಇತ್ತು. ಪ್ರತಿ ವರ್ಷವೂ ಹೊರಗಿನಿಂದ ಪರೀಕ್ಷೆಗೆಂದು ಬಂದ ವಿದ್ಯಾರ್ಥಿಗಳಿಗೆ ತಮ್ಮ ಬಂಗಲೆಯಲ್ಲೇ ಊಟ-ವಸತಿ ವ್ಯವಸ್ಥೆ ಮಾಡಿಸುತ್ತಿದ್ದರು. ಪರೀಕ್ಷೆ ಮೂರು ದಿನಗಳವರೆಗೆ ನಡೆಯುತ್ತಿತ್ತು. ಒಮ್ಮೆ ಸುಮಾರು ಐದುನೂರು ವಿದ್ಯಾರ್ಥಿಗಳು ಪರೀಕ್ಷೆಗೆ ಕುಳಿತಿದ್ದರು, ಪರೀಕ್ಷೆಯ ನಡುವೆ ಯುಗಾದಿ ಹಬ್ಬ ಬಂದಿತು. ಆಗಿನ ಮೈಸೂರು ರಾಜ್ಯದಲ್ಲಿ ಈ ಹಬ್ಬದಂದು ಮನೆಯವರೆಲ್ಲಾ ಅಭ್ಯಂಜನ ಸ್ನಾನ ಮಾಡಿ, ಹೊಸ ಬಟ್ಟೆ ಹಾಕಿಕೊಂಡು ಹೋಳಿಗೆ ಊಟ ಮಾಡುವುದು ಪದ್ಧತಿ. ಈ ವರ್ಷ ಪರೀಕ್ಷೆಗೆ ಕೂತಿರುವ ಮಕ್ಕಳಿಗೆ ಈ ಸೌಲಭ್ಯವಿಲ್ಲವಾಗುತ್ತದೆಯಲ್ಲಾ ಎಂದು ಶಿವಲಿಂಗಪ್ಪಯ್ಯನವರಿಗೆ ಚಿಂತೆ. ಸರಿ ತಲೆಗೆ ವಿಚಾರ ಬಂದದ್ದೇ ತಡ. ಆ ದಿನ ಮಕ್ಕಳಿಗೆಲ್ಲಾ ತಮ್ಮ ಕಡೂರಿನ ಬಂಗಲೆಯಲ್ಲೇ ಅಭ್ಯಂಜನ ಸ್ನಾನದ ವ್ಯವಸ್ಥೆ ಮಾಡಿಸಿ, ಹೋಳಿಗೆ ಊಟದ ಏರ್ಪಾಟು ಮಾಡಿಸಿದರು. ಎಲ್ಲರಿಗೂ ಹೊಸಬಟ್ಟೆ ತೊಡಿಸಿದರು. ಇದು ಶಿವಲಿಂಗಪ್ಪಯ್ಯನವರ ಉದಾರತೆಯ ವೈಖರಿ!

ಗಣಪತಿ ಉತ್ಸವವೂ ಅಷ್ಟೆ. ಇವರ ಮನೆಯಲ್ಲಿ ಅತ್ಯಂತ ವೈಭವಯುತವಾಗಿ ಆಚರಿಸಲ್ಪಡುತ್ತಿತ್ತು. ಇಪ್ಪತ್ತೊಂದು ದಿನಗಳು ಮನೆಯಲ್ಲಿ ವೈಭವದ ಪೂಜೆ. ದಿನವೂ ರುದ್ರಾಭಿಷೇಕ. ಇಬ್ಬರು ಸ್ವಾಮಿಗಳನ್ನು ಮನೆಯಲ್ಲೇ ಇಪ್ಪತ್ತೊಂದು ದಿನ ಇರಿಸಿಕೊಂಡು ಪೂಜೆ. ಕೊನೆಯ ದಿನ ಊರಿಗೆಲ್ಲಾ ಅನ್ನ ಸಂತರ್ಪಣೆ. ಮದ್ದು, ಬಾಣ, ಬಿರುಸುಗಳಿಂದ ವಾದ್ಯಮೇಳದೊಡನೆ ವೈಭವ ಪೂರ್ಣವಾಗಿ ಗಣಪತಿ ವಿಸರ್ಜನೆಯಾಗುತ್ತಿತ್ತು. ವಿಜಯದಶಮಿಯ ಹಿಂದಿನ ದಿನ ಎಂದರೆ ಆಯುಧಪೂಜೆಯ ದಿನ ಮನೆಯಲ್ಲಿದ್ದ ಕುದುರೆಗೆ (ಆಗಿನ ಕಾಲದಲ್ಲಿ ಕಾರಿರುತ್ತಿರಲಿಲ್ಲ. ದೊಡ್ಡ ದೊಡ್ಡ ಮನೆಗಳಲ್ಲಿ ಉತ್ತಮ ಜಾತಿಯ ಕುದುರೆಗಳನ್ನು

ಉಪಯೋಗಿಸುತ್ತಿದ್ದರು) ವಜ್ರಾಭರಣಗಳಿಂದ ಅಲಂಕಾರ ಮಾಡಿ, ಬ್ಯಾಂಡು-ಓಲಗ ಸಮೇತ ಊರು ತುಂಬಾ ಮೆರವಣಿಗೆ ಮಾಡಿಸುತ್ತಿದ್ದರಂತೆ. ಮನೆತನದ ಕಾರ್ಯ ವೈಭವ ಈ ರೀತಿಯಾದರೆ, ಶ್ರೀ ಶಿವಲಿಂಗಪ್ಪಯ್ಯನವರ ಸಾರ್ವಜನಿಕ ಸೇವೆಯೂ ಅಷ್ಟೇ ಅದ್ಭುತ. ಇವರು ಆಗಿನ ಕಾಲದಲ್ಲಿ ದುಡಿಯದ ಕ್ಷೇತ್ರವಿರಲಿಲ್ಲ. ನಾಲ್ವಡಿ ಕೃಷ್ಣರಾಜ ಒಡೆಯರ ಆಸ್ಥಾನದ ಪ್ರಜಾಪ್ರತಿನಿಧಿ ಸಭೆಯಲ್ಲಿ ಸತತವಾಗಿ ಹದಿನೆಂಟು ವರ್ಷಗಳ ಕಾಲ ಕಡೂರು ತಾಲ್ಲೂಕಿನ ಚುನಾಯಿತ ಪ್ರತಿನಿಧಿಯಾಗಿ, ತಾಲ್ಲೂಕಿನ ಏಳ್ಗೆಗೆ ಕಾರಣರಾದರು. ಇವರು ಅನೇಕ ಸಾರ್ವಜನಿಕ ಸಂಘಸಂಸ್ಥೆಗಳ ಸದಸ್ಯರಾಗಿ ಜಿಲ್ಲೆಯ ಶೈಕ್ಷಣಿಕ, ವ್ಯಾಪಾರಿಕ, ನ್ಯಾಯದಾನಿಕ ಕ್ಷೇತ್ರಗಳಲ್ಲಿ ವಿಶೇಷ ಸೇವೆ ಸಲ್ಲಿಸಿದ್ದಾರೆ. ಈಲ್ಲೆಯ ಹಾನರರಿ ಬೆಂಚ್ ಮ್ಯಾಜಿಸ್ಟ್ರೇಟರಾಗಿದ್ದರು. ಅಲ್ಲದೆ ತಾಲ್ಲೂಕ್ ಬೋರ್ಡ್ ಮೆಂಬರ್, ಡಿಸ್ಟ್ರಿಕ್ಟ್ ಬೋರ್ಡ್ ಮೆಂಬರ್ ಆಗಿದ್ದುದಲ್ಲದೆ, Board of Industries and Commerce ನ ಸದಸ್ಯರಾಗಿ ಆ ಭಾಗದ ವ್ಯಾಪಾರ, ಉದ್ದಿಮೆಯ ಬೆಳವಣಿಗೆಗೆ ಸಾಕಷ್ಟು ಸಹಾಯಕರಾಗಿದ್ದರು. ಸ್ಕೂಲ್ ಬೋರ್ಡಿನ ಸ್ಕಾಲರ್‌ಷಿಪ್ ಕಮಿಟಿಯ ಸದಸ್ಯರಾಗಿ ಅನೇಕ ಬಡ ಹುಡುಗರಿಗೆ ಹಣ ಸಹಾಯ ದೊರೆತು ಶಿಕ್ಷಣ ಪಡೆಯಲು ಸಹಾಯಕರಾಗಿದ್ದರು. ಇಷ್ಟೇ ಅಲ್ಲದೆ ಬೀರೂರಿನ ಮುನಿಸಿಪಾಲಿಟಿಯ ಅಧ್ಯಕ್ಷರಾಗಿ ಊರಿನ ಬೆಳವಣಿಗೆಗೆ, ಕಾರಣೀಭೂತರಾದರು. ಅವರು ನ್ಯಾಯ ತೀರ್ಮಾನ ಮಾಡುವ ಕಾಲದಲ್ಲಿ ಎಷ್ಟೋ ಜನರಿಗೆ ತಾವೇ ಜಾಮೀನಾಗಿ, ಕೃತಘ್ನರಾದ ಆ ಜನರ ಕಾರಣದಿಂದ ತಮ್ಮ ಆಸ್ತಿಯ ಬಹುಪಾಲನ್ನು ಕಳೆದುಕೊಂಡರೆಂದು ಹೇಳುತ್ತಾರೆ. ಇಷ್ಟೊಂದು ಸಾರ್ವಜನಿಕ ಕ್ಷೇತ್ರದಲ್ಲಿ ದುಡಿದರೂ ಎಲ್ಲಿಯೂ ಒಂದು ಕಾಸನ್ನೂ ಮುಟ್ಟಿದವರಲ್ಲ. ಹೋದಲ್ಲೆಲ್ಲಾ ತಮ್ಮ ಕೈಯಿಂದಲೇ ಖರ್ಚು ಮಾಡುತ್ತಿದ್ದರೇ ವಿನಃ ಬೇರೆಯವರದನ್ನು ಬಿಡಿಗಾಸೂ ಮುಟ್ಟಿದವರಲ್ಲ. ಹೀಗೆ ಸಾರ್ವಜನಿಕ ಜೀವನಕ್ಕೆ ತಮ್ಮನ್ನು ಅರ್ಪಿಸಿಕೊಂಡಿದ್ದ ಶಿವಲಿಂಗಪ್ಪಯ್ಯನವರು ಆದರ್ಶ ವ್ಯಕ್ತಿಗಳಾಗಿ ಬಾಳಿದರು.

■

## ಹೊಣೆಗಾರಿಕೆಯ ಪ್ರಾರಂಭ

ಪತ್ರೆ ಮನೆತನದ ಮೂಲಪುರುಷರಾದ ಚನ್ನವೀರಯ್ಯನವರ ನಾಲ್ಕು ಜನ ಮಕ್ಕಳಲ್ಲಿ ಮೊದಲನೆಯ ರುದ್ರಪ್ಪಯ್ಯನವರೂ ಮತ್ತು ಕೊನೆಯವರಾದ ವೀರಪ್ಪಯ್ಯನವರನ್ನುಳಿದು ಉಳಿದ ಈರ್ವರೂ ತೀರಿಹೋಗಿದ್ದರು. ಕಾಲಾನಂತರದಲ್ಲಿ ಮನೆತನದ ಬೆನ್ನೆಲುಬಾಗಿದ್ದ ರುದ್ರಪ್ಪಯ್ಯನವರೂ ಪ್ಲೇಗಿಗೆ ತುತ್ತಾದರು. ಈ ಮೊದಲೇ ಬಸವಲಿಂಗಪ್ಪಯ್ಯನವರ ಮಕ್ಕಳಾದ ನಂಜುಂಡಯ್ಯ ಮತ್ತು ಚನ್ನವೀರಯ್ಯ ಇವರುಗಳೂ ತೀರಿಹೋಗಿದ್ದರು. ಹೀಗಾಗಿ ಈ ಮನೆತನದ

ಆಸ್ತಿಗೆ ಹಕ್ಕುದಾರರಾಗಿ ಉಳಿದ ಗಂಡು ಸಂತಾನವೆಂದರೆ, ಈ ಪುಸ್ತಕದ ಪುಣ್ಯಪುರುಷರಾದ ಚನ್ನವೀರಪ್ಪಯ್ಯನವರು ಮತ್ತು ಅವರ ತಮ್ಮನಾದ ಶಿವಪ್ಪಯ್ಯನವರು. ಇವರುಗಳು ಬಹು ಚಿಕ್ಕವರಿದ್ದಾಗಲೇ ತಂದೆಯನ್ನು ಕಳೆದುಕೊಂಡುದುದರಿಂದ ದೊಡ್ಡಪ್ಪನವರಾದ ರುದ್ರಪ್ಪಯ್ಯನವರೇ ಈ ಮಕ್ಕಳನ್ನು ತಂದೆಯಂತೆ ಪೋಷಿಸಿದರು. ಅವರ ವ್ಯಕ್ತಿತ್ವದ ಪ್ರಭಾವ ಈ ಮಕ್ಕಳ ಮೇಲೆ ಅಪಾರ. ಬೀರೂರಿನಲ್ಲಿ ಮೇಲಿಂದ ಮೇಲೆ ಪ್ಲೇಗು ಬರುತ್ತಿದ್ದುದರಿಂದ ತಾಯಿಯ ತೌರೂರಾದ ಗುಂಡುಸಮುದ್ರದಲ್ಲೇ ಈ ಮಕ್ಕಳು ಬಾಲ್ಯದ ಬಹುದಿನ ಕಳೆಯುತ್ತಿದ್ದರು. ಹೀಗಾಗಿ ವಿದ್ಯೆಗೆ ಬಹಳಷ್ಟು ಅಡೆತಡೆಗಳು. ಅಲ್ಲದೆ ಆಗಿನ ಕಾಲದಲ್ಲಿ ಶ್ರೀಮಂತರ ಮಕ್ಕಳು ಓದಲು ಹೋಗುತ್ತಿದ್ದುದೇ ಕಡಿಮೆ. ವಿದ್ಯೆಗೆ ಈಗಿನಷ್ಟು ಮಹತ್ವವಿರಲಿಲ್ಲ. ದಾವಣಗೆರೆಯ ತಿರುಕಪ್ಪನವರ ಮಠದ ರುದ್ರಯ್ಯನವರಿಗೆ ಇವರ ಅಕ್ಕ ವೀರಮ್ಮನವರನ್ನು ಕೊಟ್ಟಿತ್ತು. ಅಕ್ಕನ ಮನೆಯಲ್ಲಿದ್ದು ಸ್ವಲ್ಪಕಾಲ ವಿದ್ಯಾಭ್ಯಾಸ ಮಾಡಿದರು. ಲೋಯರ್ ಸೆಕೆಂಡರಿವರೆಗೆ ಓದಿದರು. ಆಗಿನ ಕಾಲದ ಮನೆಯ ವಾತಾವರಣದಿಂದಲೂ, ಹಿರಿಯರೆಲ್ಲಾ ತೀರಿದುದರಿಂದಲೂ ಓದು ಅಲ್ಲಿಗೆ ಮುಗಿಯಿತು. ಶ್ರೀ ಚನ್ನವೀರಪ್ಪಯ್ಯನವರು ಶಾಲೆಯಲ್ಲಿ ಕಲಿತದ್ದು ಅಲ್ಪವಾದರೂ, ಸ್ವತಃ ಅಭ್ಯಾಸ ಮಾಡಿ ಕಲಿತದ್ದು ಬಹಳ. ವಿದೇಶ ಪ್ರವಾಸ ಮಾಡಿ ಬಂದು, ಲೋಕಜ್ಞಾನವನ್ನು ಹೆಚ್ಚಿಸಿಕೊಂಡು ನಿರರ್ಗಳವಾಗಿ ಇಂಗ್ಲಿಷಿನಲ್ಲಿ ಮಾತನಾಡುತ್ತಿದ್ದರು. ಇಂಗ್ಲಿಷ್ ಗ್ರಂಥಗಳನ್ನು ನಿರಾಯಾಸವಾಗಿ ಓದಿ ಅರ್ಥ ಮಾಡಿಕೊಳ್ಳುತ್ತಿದ್ದರು. ದಿನವೂ ರಾತ್ರಿ ಹನ್ನೊಂದು–ಹನ್ನೆರಡು ಗಂಟೆಯವರೆಗೆ ಇಂಗ್ಲಿಷ್ ಗ್ರಂಥಗಳನ್ನು, ಧರ್ಮಗ್ರಂಥಗಳನ್ನು ಓದುವ ಹವ್ಯಾಸ ಇಟ್ಟು ಕೊಂಡಿದ್ದರು. ಜೀವನದ ಎಲ್ಲ ಕ್ಷೇತ್ರಗಳ ಬಗ್ಗೆ ವಿಪುಲವಾದ ಜ್ಞಾನ ಸಂಪಾದಿಸಿಕೊಂಡಿದ್ದರು.

ಶ್ರೀ ಚನ್ನವೀರಪ್ಪಯ್ಯನವರದ್ದು ಎತ್ತರವಾದ ನಿಲುವು. ಎತ್ತರಕ್ಕೆ ಸರಿಯಾದ ಮೈಕಟ್ಟು, ಶ್ರೀಮದ್ಗಾಂಭೀರ್ಯವನ್ನು ಸೂಸುವ ಮುಖಭಾವ. ಸ್ವಭಾವದಷ್ಟೇ ನೇರವಾದ ಹಾಗೂ ದಿಟ್ಟತನದ ನಡಿಗೆ. ಆತ್ಮ ವಿಶ್ವಾಸವನ್ನು, ಕೆಚ್ಚೆದೆಯನ್ನು, ದಕ್ಷತೆಯನ್ನು ಸೂಚಿಸುವ ವರ್ಚಸ್ಸು. ಅಚ್ಚುಕಟ್ಟಾದ, ಸರಳವಾದ ಆದರೆ ಘನತೆಗೆ ಒಪ್ಪುವ ಉಡುಪು. ಧಾರ್ಮಿಕ ಕಾರ್ಯ, ವಿವಾಹಾದಿ ಮಂಗಳಕಾರ್ಯಗಳಲ್ಲಿ ಪಂಚೆ, ಕೋಟು ಹಾಗೂ ಜರಿಯ ಶಲ್ಯೆ ಇವರ ಉಡುಪು. ಉಳಿದ ಮುಖ್ಯ ಸಂದರ್ಭಗಳಲ್ಲಿ ಸೂಟು ಧರಿಸುತ್ತಿದ್ದರು. ಎದುರಿಗೆ ಬಂದರೆ ಗೌರವದಿಂದ ಮಣಿಯಬೇಕು, ಆದರದಿಂದ ಕಾಣಬೇಕು ಎನ್ನಿಸುವಂತಹ ವ್ಯಕ್ತಿತ್ವ. ಸದ್ಗುಣಗಳನ್ನು ಮೆಚ್ಚುವ ಸ್ವಭಾವ. ಹೊಟ್ಟೆ ಕಿಚ್ಚು, ಮೋಸ, ದ್ವೇಷ, ಕುತಂತ್ರಗಳ ಗಂಧವೂ ಗೊತ್ತಿಲ್ಲದ ತೃಪ್ತ ಸತ್ಪುರುಷ. ಶಿಕ್ಷಣ–ಸಾಹಿತ್ಯ–ಕಲೆಗಳ ಬಗ್ಗೆ ಪ್ರೇಮ

ಪ್ರೋತ್ಸಾಹಕೊಡುವ ಸ್ವಭಾವ. ಶಿಸ್ತಿನ ಸಿಪಾಯಿ. ಏನೇ ಕಷ್ಟಬಂದರೂ ಎದೆಗುಂದದ ಧೀರೋದಾತ್ತತೆ.

■

## ಆತ್ಮೀಯ ಸಂಸಾರಬಳ್ಳಿ

ರುದ್ರಪ್ಪಯ್ಯನವರೂ ತೀರಿಕೊಂಡ ಮೇಲೆ ಶ್ರೀಯುತರ ಮೇಲೆಯೇ ಮನೆಯ ಜವಾಬ್ದಾರಿ ಬಿದ್ದಿತು. ಆಗ ಇವರು ಅಕ್ಕನ ಮನೆಯಲ್ಲಿದ್ದು ವಿದ್ಯಾಭ್ಯಾಸ ಮಾಡುತ್ತಿದ್ದಾಗ, ತಿರುಕಪ್ಪನವರ ಮಠದ ಷಡಕ್ಷಯ್ಯನವರ ಐದನೆಯ ಮಗಳನ್ನು ನೋಡಿದ್ದರು. ತಮ್ಮ ಮದುವೆಯ ಮಾತು ಬಂದಾಗ ಆ ಹುಡುಗಿಯ ಬಗ್ಗೆ ಸೂಚನೆ ಇತ್ತರು. ಚಿಕ್ಕಪ್ಪನವರಾದ ವೀರಪ್ಪಯ್ಯನವರು ತಮ್ಮ ಆಪ್ತರಾದ ಮುನ್ಷಿ ಮರುಳಯ್ಯನವರನ್ನು ಆ ಬಗ್ಗೆ ವಿಚಾರಿಸಲು ಕಳಿಸಿದಾಗ ಹದಿಮೂರು ವರ್ಷದ ಕುವರಿ ಅನ್ನಪೂರ್ಣೆ ಹೂವು ಕಟ್ಟುತ್ತಿದ್ದಳಂತೆ. ಶುಭ ಶಕುನವಾಯ್ತೆಂದು ಹಿರಿಯರೆಲ್ಲಾ ಒಪ್ಪಿ, ಆ ಕನ್ಯೆಯೊಂದಿಗೆ ಇಪ್ಪತ್ತೊಂದು ವರ್ಷದ ಚನ್ನವೀರಪ್ಪಯ್ಯನವರ ವಿವಾಹವಾಯ್ತು. ಅಂದೇ ಅನ್ನಪೂರ್ಣೆ 'ನಿಮ್ಮ ಮನೆಗೆ ಹೂವು ತರುವೆನಲ್ಲದೆ ಹುಲ್ಲು ತಾರೆನೆಂದು' ಹೂವು ಕಟ್ಟುವುದರ ಮೂಲಕ ಹಿರಿಯರಿಗೆಲ್ಲಾ ವಚನ ಕೊಟ್ಟಿದ್ದಳು! ಅದರಂತೆ ಆ ಅನ್ನಪೂರ್ಣ ಇಂದು ಪತ್ರೆ ಅನ್ನಪೂರ್ಣಮ್ಮನವರಾಗಿ, ಪತ್ರೆಯ ಮನೆತನದ ಘನತೆ, ಗಾಂಭೀರ್ಯಗಳನ್ನು ಹೆಚ್ಚಿಸಿದ್ದಾರೆ. ಪತಿಗೂ ಸಲಹೆ ಸೂಚನೆಗಳನ್ನು ಕೊಡಬಲ್ಲ ಜಾಣ್ಮೆ ಪಡೆದವರು. ಅವರ ಅಚುಮೆಚ್ಚಿನ ಪತ್ನಿಯಾಗಿ, ಉತ್ಕೃಷ್ಟ ಮಾತೆಯಾಗಿ, ಮಮತೆಯ ಬಂಧುವಾಗಿ ಸಾರ್ವಜನಿಕರಿಂದಲೂ ಗೌರವಾನ್ವಿತರಾದ ಉತ್ತುಂಗ ವ್ಯಕ್ತಿಯಾಗಿ ಬಾಳಿರುವರು, ಶ್ರೀಮತಿಯವರೂ ಸಹ ದಾವಣಗೆರೆಯ ಶ್ರೇಷ್ಠ ಮನೆತನದಲ್ಲಿ ಜನಿಸಿದವರು. ಅವರ ತಂದೆ ಲೇವಾದೇವಿ ವ್ಯವಹಾರ ಮಾಡುತ್ತಿದ್ದ ಷಡಕ್ಷರಯ್ಯನವರು ನ್ಯಾಯ-ನಿಷ್ಠೆಗಳಿಗೆ ಪ್ರಖ್ಯಾತರಾದವರು. ಅವರ ತಮ್ಮ (ಅನ್ನಪೂರ್ಣಮ್ಮನವರ ಚಿಕ್ಕಪ್ಪ) ಸಂಗೀತ ಪ್ರೇಮಿಗಳು, ವೀಣಾ ವಿದ್ವಾಂಸರು. ಮೈಸೂರು ಮಹಾರಾಜರಿಂದ ಸನ್ಮಾನಿತರಾದವರು. ಹೀಗೆ ದಾವಣಗೆರೆ ಸುಸಂಸ್ಕೃತ ಶ್ರೀಮಂತ ಮಹೇಶ್ವರ ಮನೆತನದ ಸದ್ಗುಣ ಸಂಸ್ಕಾರಗಳನ್ನು ಹೊತ್ತು ತಂದ ಅನ್ನಪೂರ್ಣಮ್ಮ ಆಗರ್ಭ ಶ್ರೀಮಂತರೂ, ಗುರು-ಲಿಂಗ-ಜಂಗಮ ಪ್ರೇಮಿಗಳೂ ಜನಪ್ರಿಯ ದಾನಿಮಹೋದಯರಿಂದ ಬೆಳೆದುಬಂದ ಬೀರೂರಿನ ಪತ್ರೆ ಮನೆತನವನ್ನು ಬೆಳಗುವ ಪುಣ್ಯಜ್ಯೋತಿಯಾದರು. ಈ ದಂಪತಿಗಳಿಗೆ ಇಬ್ಬರು ಗಂಡುಮಕ್ಕಳು, ನಾಲ್ಕುಜನ ಹೆಣ್ಣುಮಕ್ಕಳು. ಮೊದಲನೆಯ ಮಗಳು ಸುವರ್ಣ ಚಿಕ್ಕ ವಯಸ್ಸಿನಲ್ಲಿಯೇ ಮೃತಳಾದಳು. ಎರಡನೆಯ ಮಗಳು ಸುಮಂಗಲಾ ದೇವಿಯನ್ನು ಅನ್ನಪೂರ್ಣಮ್ಮನವರು ತಮ್ಮ ಚಿಕ್ಕಪ್ಪನವರ ಮಗನಿಗೆ ಕೊಟ್ಟರು. ಮೂರನೆಯ

ಮಗಳಾದ ಸುಶೀಲಾದೇವಿಯನ್ನು ಜಿಲ್ಲಾ ಸರ್ಜನ್ನರಾಗಿ ಈಗ ನಿವೃತ್ತರಾಗಿರುವ ಡಾ. ಪರ್ವತಯ್ಯ ನಿಶಾನಿಮಠರವರಿಗೆ ಕೊಟ್ಟಿದ್ದಾರೆ. ನಾಲ್ಕನೆಯ ಮಗಳ ಪತಿ ಸ್ವತಂತ್ರ ಮೈಸೂರು ರಾಜ್ಯದ ಮೊದಲನೆಯ ಕಾನೂನು ಸಚಿವ ದಿವಂಗತ ಶ್ರೀ ಹೆಚ್. ಸಿದ್ದಯ್ಯನವರ ಏಕಮಾತ್ರ ಪುತ್ರ ರಾಜಶೇಖರ್‌ರವರು.

■

## ವಾತ್ಸಲ್ಯಮಯ-ಮಾರ್ಗದರ್ಶಕ ತಂದೆ

ಶ್ರೀ ಚನ್ನವೀರಪ್ಪಯ್ಯನವರು ಅತೀ ಪ್ರೀತಿಯ ತಂದೆ. ಮಕ್ಕಳ ಬಗೆಗೆ ತುಂಬಾ ಮಮತೆ. ಯಾವ ತಂದೆಗೆ ಮಕ್ಕಳ ಬಗೆಗೆ ಪ್ರೀತಿಯಿಲ್ಲ? ಎನ್ನಿಸಬಹುದು. ಆದರೆ ಇವರ ಪ್ರೀತಿ ಉಳಿದವರಿಗಿಂತ ಭಿನ್ನ. ಮಕ್ಕಳೆಂದರೆ ಪಂಚಪ್ರಾಣ. ಹಾಗೆಂದು ಅತೀ ಮುದ್ದಿನಿಂದಾಗಲೀ ಸಲಿಗೆಯಿಂದಾಗಲೀ ಬೆಳೆಸಿದವರಲ್ಲ. ಶಿಸ್ತಿನ ತಂದೆಯ ಎದುರಿನಲ್ಲಿ ಮಕ್ಕಳೆಂದೂ ಒಡೆದು ಮಾತಾಡಿದವರಲ್ಲ. ತಂದೆಯ ಬಗೆಗೆ ಅಪಾರವಾದ ಗೌರವ ಹಾಗೂ ಪ್ರೀತಿ. ಮಕ್ಕಳ ಬಗೆಗೆ ತಂದೆಗೆ ಅತೀವ ಮಮತೆ-ವಾತ್ಸಲ್ಯ. ಮಡದಿ ಮಕ್ಕಳಿಗೇನು ಬೇಕು? ಯಾವುದು ಅವಶ್ಯಕ ಎಂಬುದನ್ನು ತಿಳಿದು ನೋಡುತ್ತಿದ್ದರು. ಅವರುಗಳೂ ಅಷ್ಟೆ. ಶ್ರೀಯುತರಿಗೆ ಯಾವಾಗ ಏನು ಬೇಕು, ಹೇಗೆ ಮಾಡಬೇಕೆಂಬುದೆಲ್ಲಾ ಗೊತ್ತು. ಯಾರಿಗೆ ಯಾರೂ ಬಾಯಿಬಿಟ್ಟು ಹೇಳುವ ಪ್ರಸಂಗವಿರಲಿಲ್ಲ.

ಚನ್ನವೀರಪ್ಪಯ್ಯನವರು ದೊಡ್ಡ ಆಸ್ತಿಯ ಮೇಲ್ವಿಚಾರಣೆಯನ್ನು ಕುಂದುಬಾರದಂತೆ ನೋಡುತ್ತಿದ್ದರಾದರೂ ಕುಟುಂಬಕ್ಕೆ ಸಂಬಂಧಿಸಿದ ಪ್ರತಿಯೊಂದು ವಿಷಯವನ್ನು ಗಮನಿಸದೆ ಇರುತ್ತಿರಲಿಲ್ಲ. ಮಕ್ಕಳು ಹವಾಮಾನಕ್ಕೆ ತಕ್ಕ ಉಡುಪು ಧರಿಸಿದ್ದಾರೆಯೇ ಇಲ್ಲವೋ? ಚಪ್ಪಲಿ ಹಾಕಿಕೊಂಡಿದ್ದಾರೋ ಇಲ್ಲವೊ ಎನ್ನುವಂತಹ ವಿಷಯವನ್ನು ಒಳಗೊಂಡು, ಸೊಳ್ಳೆಗಳು ಒಳಗೆ ಹೋಗದಂತೆ ಪರದೆಯನ್ನು ಸರಿಯಾಗಿ ಹಾಕಿಕೊಂಡಿದ್ದಾರೆಯೋ ಇಲ್ಲವೋ ಎಂಬುದನ್ನು ಸಹ ಪರಿಶೀಲಿಸುತ್ತಿದ್ದರು!

೧೯೨೨ ನೆಯ ಇಸವಿಯಲ್ಲಿ ಮೊದಲ ಮಗಳು ಸುವರ್ಣ ಜನಿಸಿದಳು. ಅತೀ ಮುದ್ದಾದ, ಮುಗ್ಧ ಸ್ವಭಾವದ ಮಗಳು ಮನೆಯವರೆಲ್ಲರ ಅಚ್ಚು ಮೆಚ್ಚಿನ ಮಗುವಾಗಿದ್ದಳು. ವಯಸ್ಸಿಗೆ ಮೀರಿದ ಬೆಳವಣಿಗೆ, ಹನ್ನೊಂದು ವರ್ಷಕ್ಕೇ ಯುವತಿಯಂತೆ ಕಾಣಿಸುತ್ತಿದ್ದಳು. ಸದಾ ನಗುಮುಖ. ತಂದೆಗಂತೂ ಮಗಳ ಬಗ್ಗೆ ಹಿಗ್ಗೋ ಹಿಗ್ಗು. ಆಗರ್ಭ ಶ್ರೀಮಂತರ ಮೊದಲನೆಯ ಪುತ್ರಿ, ಊಟಕ್ಕೆ ಬಂಗಾರದ ತಟ್ಟೆ, ಕುಡಿಯಲು ಬಂಗಾರದ ಲೋಟ, ಕಾಲಿಗೆ ಬಂಗಾರದ ಚೈನು.

ಬಂಗಾರದಂತಹ ಮಗುವಿಗೆ ಎಲ್ಲವೂ ಬಂಗಾರದ್ದೆ. ಹೆಸರೂ ಸುವರ್ಣ. ಈಕೆ ಹುಟ್ಟಿದ ಎಂಟು ವರ್ಷದ ನಂತರ ಇಬ್ಬರು ಹೆಣ್ಣು ಮಕ್ಕಳು, ಸುಶೀಲಾ, ಸುಮಂಗಳಾ ಜನಿಸಿದರು. ಆದುದರಿಂದ ಬಹಳ ಕಾಲದವರೆಗೆ ಮನೆಯವರೆಲ್ಲರ ಕಣ್ಮಣಿ ಸುವರ್ಣ ಒಬ್ಬಳೆ! ಸತ್ಯವಾನನ ಪ್ರಿಯ ಪತ್ನಿ ಸಾವಿತ್ರಿ ಹುಟ್ಟಿದಾಗ ಆಕೆಯ ತಂದೆ ತಾಯ್ಗಳು 'ನೋಡಿ ದಣಿಯರು, ಮಗಳ ಸಿಂಗಾರ ಮಾಡಿ ದಣಿಯರು, ನೇಹ ಮಿಗೆ ಮುದ್ದಾಡಿ ದಣಿಯರು' ಎಂಬಂತೆ ಪತ್ರೆ ದಂಪತಿಗಳೂ ಮಗಳನ್ನು ನೋಡಿ ನೋಡಿ ದಣಿಯರು, ಮಾಡಿ ಮಾಡಿ ತಣಿಯರು. ಹೀಗಿರುವಾಗ್ಗೆ ೧೯೩೩ನೆಯ ಇಸ್ವಿಯಲ್ಲಿ ಸುವರ್ಣ ಹನ್ನೊಂದು ವರ್ಷದವಳಿದ್ದಾಗ ಡಿಫ್ತೀರಿಯಾ ರೋಗಕ್ಕೆ ಗುರಿಯಾದಳು. ಚಿಕಿತ್ಸೆಗಾಗಿ ಮದ್ರಾಸು, ಬಾಂಬೆ, ಬೆಂಗಳೂರು ಎಲ್ಲಿಗೆ ಬೇಕಾದರೂ ಹೋಗಲು ತಂದೆ ಕಾತರಿಸಿದರು. ಆದರೆ ಚಿಕ್ಕಮಗಳೂರಲ್ಲಿದ್ದ ಅವರ ಸ್ನೇಹಿತ ಡಾಕ್ಟರೊಬ್ಬರು, 'ಅಷ್ಟುದೂರ ಹೋಗುವ ಅಗತ್ಯವಿಲ್ಲ, ನಾನೇ ಆಪರೇಷನ್ ಮಾಡುತ್ತೇನೆ' ಎಂದಾಗ ಶ್ರೀಯುತರು ಒಪ್ಪಿದರು. ಮಾನವನೊಂದು ಎಣಿಸಿದರೆ ದೈವ ಮತ್ತೊಂದನ್ನು ಬಗೆಯಿತು. ಆಪರೇಷನ್ ಆದಾಗ ರಕ್ತಸ್ರಾವ ನಿಲ್ಲಲೇ ಇಲ್ಲ. ಎಲ್ಲರ ಕಣ್ಮಣಿ ಸುವರ್ಣ ಕಣ್ಣುಮುಚ್ಚಿದಳು. ತಮ್ಮ ಜೀವದುಸಿರಾಗಿದ್ದ ಮಗಳು ಜೀವ ತೊರೆದುದನ್ನು ಚನ್ನವೀರಪ್ಪಯ್ಯನವರು ಒಪ್ಪಲು ಸಿದ್ಧರಿರಲಿಲ್ಲ. ಚಿಕ್ಕಮಗಳೂರಿಂದ ಕಾರಿನಲ್ಲಿ ಮಗಳ ಶವವನ್ನು ಬೀರೂರಿಗೆ ತರುವಾಗ, ತಂಗಾಳಿಗೆ ಮಗಳ ಜೀವ ಮತ್ತೆ ಕೂಡಿರಬಹುದೇ ಎಂದು ಹತ್ತು ನಿಮಿಷಕ್ಕೊಮ್ಮೆ ಕಾರು ನಿಲ್ಲಿಸಿ ಉಸಿರಾಟ ಪರೀಕ್ಷಿಸುತ್ತಿದ್ದರಂತೆ. ಆ ದುಃಖದಲ್ಲಿ ಊರು ಸೇರಿದುದೇ ದೊಡ್ಡ ಮಾತಾಯ್ತು. ಆಘಾತ ಶ್ರೀಯುತರ ಮನಸ್ಸಿನ ಮೇಲೆ ಬಹಳ ಆಳವಾದ ನೋವಿನ ಗುರುತನ್ನುಳಿಸಿತು. ಆ ಮಗಳ ನೆನಪು ಚಿರಸ್ಥಾಯಿಯಾಗಿ ಉಳಿಯುವಂತೆ 'ಪತ್ರೆ ಸುವರ್ಣಮ್ಮ ಬಾಲಿಕಾ ಪಾಠಶಾಲೆ'ಯನ್ನು, ಊರಿನ ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕೆ ಅನುಕೂಲಿಸುವಂತೆ ಕಟ್ಟಿಸಿಕೊಟ್ಟರು. ಇದು ಅವರು ಮಗಳಿಗೆ ಕೊಟ್ಟ ಪ್ರೀತಿಯ ಕಾಣಿಕೆ. ಮಗಳ ಸಾವಿನ ನೋವನ್ನು ಮರೆಯಲೆತ್ನಿಸಿದ ರೀತಿ. ಎಷ್ಟು ಜನ ಶ್ರೀಮಂತರು ಇಂತಹ ಕಾಣಿಕೆ ಕೊಟ್ಟಾರು? ಈ ರೀತಿ ನೋವನ್ನು ಮರೆಯಲೆತ್ನಿಸಿಯಾರು?

ಮೂರನೆಯ ಮಗಳು ಸುಶೀಲಾ ಹೈಸ್ಕೂಲಿನಲ್ಲಿ ಓದುತ್ತಿದ್ದಳು. ಆ ಸಮಯದಲ್ಲಿ ಮೈಸೂರಿನ ಕ್ರಾಫರ್ಡ್‌ಹಾಲ್ ಪ್ರಾರಂಭೋತ್ಸವಕ್ಕೆ ಪ್ರಧಾನಮಂತ್ರಿ ಪಂಡಿತ ಜವಾಹರಲಾಲ ನೆಹರು ಬರುವ ವಿಚಾರ ಕೇಳಿ, ಗಾಂಧೀಜಿಯವರನ್ನು ನೋಡಲಾಗದಿದ್ದರೂ ಅವರ ನಿಕಟವರ್ತಿಗಳಾದ ನೆಹರೂರವರನ್ನಾದರೂ, ನೋಡಬೇಕೆನ್ನಿಸಿತು ಅವಳಿಗೆ. ತಂದೆಯವರನ್ನು ಕೇಳಬೇಕು, ಕೇಳಲು ಧೈರ್ಯವಿಲ್ಲ. ಕಾರ್ಯಕ್ರಮಕ್ಕೆ ಇನ್ನು ಎರಡೇ ದಿನಗಳು ಉಳಿದಿದ್ದವು. ತಡ ಮಾಡುವಂತಿರಲಿಲ್ಲ.

ಆಸೆ, ಭಯವನ್ನು ಮೀರಿ ನಿಂತಿತ್ತು. ಧೈರ್ಯ ಮಾಡಿ ಕೇಳಿಯೇಬಿಟ್ಟಳು. ಶ್ರೀಯುತರಿಗೆ ಕಾಫಿ ತೋಟದಲ್ಲಿ ಬಿಡುವಿಲ್ಲದ ಕೆಲಸವಿತ್ತು. ಬಾಯಿಬಿಟ್ಟು ಕೇಳಿದ ಮಗಳ ಇಂತಹ ಉತ್ತಮ ಆಸೆಗೆ ನೀರೆರಚುವುದು ಹೇಗೆ? 'ನೆಹರೂರವರನ್ನು ನೋಡಿದ್ರೆ ಏನು ಪ್ರಯೋಜನ. ಅವ್ರ ಹತ್ರ ಮಾತಾಡುವಂತಿದ್ರೆ ಹೋಗಬೇಕು' ಎಂದು ತಮಾಷೆಯಲ್ಲಿ ಜಾರಿಸಲು ಪ್ರಯತ್ನಿಸುತ್ತಾ, 'ಇಲ್ಲಮ್ಮಾ, ನನಗೆ ತೋಟದಲ್ಲಿ ಅಗತ್ಯ ಕೆಲಸವಿದೆ. ಈದಿನ ಹೋಗಲೇ ಬೇಕು!' ಎಂದು ಹೇಳಿ, ಆದಿನ ತೋಟಕ್ಕೆ ಹೋದರು. ಸುಶೀಲಾಗೆ ತುಂಬಾ ನಿರಾಸೆಯಾಯ್ತು. ಏಕೆಂದರೆ ತೋಟಕ್ಕೆ ಹೋದರೆ ಅವರು ಮೂರು ನಾಲ್ಕು ದಿನಗಳಿಲ್ಲದೆ ಹಿಂತಿರುಗುತ್ತಿರಲಿಲ್ಲ. ಆದರೆ ಆ ಸಾರಿ ಮರುದಿನವೇ ಹಿಂತಿರುಗಿ ಬಂದು, 'ಮೈಸೂರಿಗೆ ಹೋಗೋಣ ಬೇಗ ಸಿದ್ಧ ಮಾಡಿಕೋಮ್ಮ' ಎಂದರಂತೆ. ಮಗಳು ಅಪರೂಪಕ್ಕೆ ಆಸೆಪಟ್ಟು ಕೇಳಿದರೆ ಇಲ್ಲ ಎಂದೆನಲ್ಲಾ ಎಂದು ಆ ರಾತ್ರಿ ಎಲ್ಲಾ ನಿದ್ರೆ ಬರದೆ, ಬೆಳಗಾಗುತ್ತಲೇ ವಾಪಸ್ಸು ಬಂದು ಬಿಟ್ಟರಂತೆ. ಉತ್ಸಾಹದಿಂದ ತಂದೆಯೂ ತಮ್ಮ ಚಿಕ್ಕಪ್ಪನವರ ಮಗ ಮೂರ್ತಣ್ಣ (ಶ್ರೀರುದ್ರಮೂರ್ತಿ)ನ ಜೊತೆಯಲ್ಲಿ ಹೊರಟಳು. ಪೂರ್ವಸಿದ್ಧತೆ, ಯೋಜನೆಗಳಿಲ್ಲದೆ ಇದ್ದಕ್ಕಿಂತೆಯೇ ಹೊರಟಿದ್ದರು. ಮೈಸೂರಿಗೆ ಹೋದರೆ ಯಾವ ಸುಸಜ್ಜಿತ ಹೋಟಲಿನಲ್ಲೂ ರೂಮು ಖಾಲಿ ಇಲ್ಲ. ಶ್ರೀಯುತರೆಂದಿಗೂ ಅವ್ಯವಸ್ಥೆಗೆ ಹೊಂದಿಕೊಂಡವರಲ್ಲ. ಅವರಿಗೆ ಎಲ್ಲವೂ ಎ–ಒನ್ ಇರಬೇಕು. ಏನೇ ಮಾಡಬೇಕೆಂದರೂ ಪೂರ್ವಭಾವಿ ಯೋಚಿಸಿ, ಎಲ್ಲವನ್ನೂ ವ್ಯವಸ್ಥಿತವಾಗಿ ಏರ್ಪಡಿಸಿಕೊಂಡೇ ಮುಂದಿನ ಕೆಲಸ ಅವರದ್ದು. ಆದರೆ ಈಗಿನ ಪರಿಸ್ಥಿತಿಯಲ್ಲಿ ಅದಾವುದೂ ಸಾಧ್ಯವಾಗಿರಲಿಲ್ಲ. ಮಗಳಿಗಾಗಿ ಅಂದು ಯಾವುದೇ ರೀತಿಯ ಅನುಕೂಲವಿಲ್ಲದ ಚಿಕ್ಕ ಹೊಟೆಲೊಂದರಲ್ಲಿ ಉಳಿದುಕೊಂಡಿದ್ದರಂತೆ. ಇದನ್ನು ನೋಡಿದ ಮಗಳಿಗೆ, 'ಅಯ್ಯೋ, ತಂದೆಯವರಿಗೆ ನಾನೆಂತಹ ತೊಂದರೆ ಕೊಟ್ಟೆ' ಎಂದು ತುಂಬಾ ಕಸಿವಿಸಿಯಾಯಿತಂತೆ. ಹೀಗಿತ್ತು ಆ ತಂದೆ ಮಕ್ಕಳ ಸಂಬಂಧ. ಹೀಗೆಂದು ಮಕ್ಕಳಿಗೆ ಬೇಕಾದುದನ್ನೆಲ್ಲಾ ಮಾಡುತ್ತಿದ್ದರೆಂದು, ಕುರುಡು ಪ್ರೀತಿ ಮಾಡುತ್ತಿದ್ದರೆಂದು ಅರ್ಥವಲ್ಲ. ಮಕ್ಕಳ ಆಸೆ ಯೋಗ್ಯವಾಗಿದ್ದರೆ ಮಾತ್ರ ಮನ್ನಣೆ. ತಪ್ಪಿದಾಗ, ಕೂಡಲೇ ತಿದ್ದಿ ಸರಿಪಡಿಸುವ ಎಚ್ಚರಿಕೆಯನ್ನು ವಹಿಸುತ್ತಿದ್ದರು.

ಶ್ರೀಯುತರ ವಿವಾಹದ ಹತ್ತೊಂಬತ್ತು ವರ್ಷದ ನಂತರ ಅಪರೂಪಕ್ಕೆ ಮೊದಲನೆಯ ಮಗ ಸದಾಶಿವನ್‌ನ ಜನನವಾಯಿತು. ಮನೆಯಲ್ಲಿ ಆನಂದವೋ ಆನಂದ. ಕುಟುಂಬದ ಮುಂದಿನ ಯುಜಮಾನನಾಗುವ ಮಗ ಹೀಗೆಯೇ ಬೆಳೆಯಬೇಕೆಂಬುದು ಶ್ರೀಯುತರ ವಿಚಾರ. ಗುಣ, ಸ್ವಭಾವ, ರೀತಿ ನೀತಿ, ಶಿಸ್ತು, ದಕ್ಷತೆ, ಊಟ–ಉಡುಪುಗಳ ಬಗೆಗೂ ನಿರ್ದಿಷ್ಟವಾದ ವ್ಯವಸ್ಥೆ, ಅದರಲ್ಲೇನಾದರೂ ಸ್ವಲ್ಪ ಲೋಪದೋಷಗಳಾದರೂ ಎಲ್ಲಿಲ್ಲದ ಕೋಪ ತಂದೆಗೆ. ಎಲ್ಲಾ ರೀತಿಯಲ್ಲೂ

ಮಗ ಎ–ಒನ್ ಆಗಬೇಕು. ಅಪರೂಪಕ್ಕೆ ಹುಟ್ಟಿದ ಮಗನಾದರೂ ಅತ್ಯುತ್ತಮವಾಗಿ ಬೆಳೆಸುವ ಪ್ರಯತ್ನದಲ್ಲಿ ಶಿಕ್ಷಿಸಲೂ ಹಿಂದು ಮುಂದೆ ನೋಡುತ್ತಿರಲಿಲ್ಲ. ಮಗ ಬೆಳೆ ಬೆಳೆದಂತೆ ಹಂತ–ಹಂತವಾಗಿ ಮನೆ, ಆಸ್ತಿ, ವ್ಯವಹಾರ ಎಲ್ಲದರ ಬಗೆಗೆ ಪರಿಚಯಿಸಿಕೊಟ್ಟರು. ಶ್ರೀಯುತರ ದೊಡ್ಡಪ್ಪನವರಾದ ರುದ್ರಪ್ಪನವರೂ ಮಕ್ಕಳಿಗೆ ಹೀಗೆ ಮಾಡು, ಹಾಗೆ ಮಾಡು ಎಂದು ಹೇಳದೆ, ತಮ್ಮ ಜೊತೆ ಎಲ್ಲಾಕಡೆ ಕರೆದೊಯ್ದು, ಏನು ಮಾಡಬೇಕು. ಹೇಗೆ ಮಾಡಬೇಕು ಎಂಬುದನ್ನು ತಾವೇ ತಿಳಿದುಕೊಳ್ಳುವಂತೆ ಆಸ್ಪದ ಕೊಡುತ್ತಿದ್ದರಂತೆ. ಎಲ್ಲಾ ವಿಧದಲ್ಲೂ ತಮ್ಮ ಹಿರಿಯರ ರೀತಿಯನ್ನೇ ಅನುಸರಿಸಿದ ಚನ್ನವೀರಪ್ಪಯ್ಯನವರು ಮಗ ಪ್ರಬುದ್ಧಮಾನಕ್ಕೆ ಬರುವುದರೊಳಗೆ ಮನೆತನದ ಎಲ್ಲಾ ಹೊಣೆಗಾರಿಕೆಗಳ ಬಗೆಗೆ ಸಾಕಷ್ಟು ಅನುಭವ ಬರುವಂತೆ ಮಾಡಿದ್ದರು. ಕೆಲಸದ ಜವಾಬ್ದಾರಿ ವಹಿಸಿ, ನಿರ್ವಹಿಸುವಂತೆ ಮಾಡಿ, ದೂರದಿಂದ ಅವಲೋಕಿಸುತ್ತಾ, ಅಗತ್ಯ ಬಿದ್ದಾಗ ಮಾತ್ರ ಮಾರ್ಗದರ್ಶನ ಮಾಡುತ್ತಾ, ಮನೆಯ ಯಜಮಾನಿಕೆಯನ್ನು ದಕ್ಷತೆಯಿಂದ ನಿರ್ವಹಿಸುವ ಜಾಣ್ಮೆಯನ್ನು ಮಗನಿಗೆ ತಂದುಕೊಟ್ಟರು. ತೋಟದ ಮೂಲೆ ಮೂಲೆಯ ಪರಿಚಯವೂ ಶ್ರೀಯುತರಿಗಿತ್ತು. ಸಾವಿರಾರು ಎಕರೆಯ ಕಾಫೀ ತೋಟದ ಒಂದಿಂಚೂ ಅವರ ಗಮನಕ್ಕೆ ಬರದಂತೆ ಇರಲಿಲ್ಲ. ಹಾಗೆಯೇ ಮಗನನ್ನು ತಮ್ಮ ಜೊತೆ ತೋಟದ ಮೂಲೆ ಮೂಲೆಗೂ ಕರೆದುಕೊಂಡು ಹೋಗಿ ಎಲ್ಲೆಲ್ಲಿ ಏನೇನು ಆಗಬೇಕು, ಹೇಗೆ–ಹೇಗೆ ಮಾಡಬೇಕು ಎಂಬುದರ ಎಲ್ಲ ಪರಿಚಯ ಮಾಡಿಕೊಡುತ್ತಿದ್ದರಂತೆ. ಆ ಇಳಿವಯಸ್ಸಿನಲ್ಲೂ ತೋಟದ ಏರು–ತಗ್ಗುಗಳನ್ನೆಲ್ಲಾ, ಹತ್ತಿ–ಇಳಿದು ಇಡೀ ತೋಟವನ್ನು ಸುತ್ತಾಡಿ ಬರುತ್ತಿದ್ದರು. ಅವರ ಉತ್ಸಾಹ, ಕಾರ್ಯತತ್ಪರತೆ ಯುವಕರನ್ನೂ ನಾಚಿಸುವಂತಿತ್ತು. ಸೋಮಾರಿಯಲ್ಲೂ ನವಚೇತನವನ್ನು ಉಕ್ಕಿಸುವಂತಿತ್ತು. ಮಗ ಸದಾಶಿವನ್ ತಂದೆಯ ಪಡಿಯಚ್ಚಾಗಿ ರೂಪಗೊಂಡರು. ತಾಯಿ ಶ್ರೀಮತಿ ಅನ್ನಪೂರ್ಣಮ್ಮನವರದು ಈ ಎಲ್ಲ ಸಾಧನೆಗಳಿಗೆ ಪ್ರೇಮದ ಮಾರ್ಗದರ್ಶನ, ಮಮತೆಯ ಕಾವಲು.

■

## ದಿನಚರಿ – ಗುಣ ಸ್ವಭಾವ

ಚನ್ನವೀರಪ್ಪಯ್ಯನವರು ತಮ್ಮ ಜೀವನದಲ್ಲಿ ವೇಳೆಗೆ ಬಹಳ ಮಹತ್ವ ಕೊಡುತ್ತಿದ್ದರು. ಕೆಲಸದಲ್ಲಿ ಅಚ್ಚುಕಟ್ಟುತನ ಎದ್ದು ಕಾಣುತ್ತಿತ್ತು. ಯಾವ ಕೆಲಸ ಯಾವಾಗ ಆಗಬೇಕು. ಹೇಗೆ ಆಗಬೇಕು, ಎಂಬುದರ ಬಗ್ಗೆ ಪೂರ್ವ ಯೋಜನೆ ಹಾಕಿಕೊಂಡಿರುತ್ತಿದ್ದರು. ಯಾವುದೂ ಚಾಚೂ ತಪ್ಪುವಂತಿರಲಿಲ್ಲ. ಸಮಯದ ಬಗ್ಗೆ ಯಾವುದೇ ಕಾರಣಕ್ಕೂ ಅಲಕ್ಷ್ಯ ಮಾಡುವಂತಿರಲಿಲ್ಲ. ಬೆಳಿಗ್ಗೆ ಏಳುವುದರಿಂದ



ಪತ್ರೆ ಚೆನ್ನವೀರಪ್ಪಯ್ಯನವರ ಧರ್ಮಪತ್ನಿ
ಶ್ರೀಮತಿ ಅನ್ನಪೂರ್ಣಮ್ಮನವರು

ಹಿಡಿದು ರಾತ್ರಿ ಮಲಗುವವರೆಗಿನ ಕೆಲಸಗಳು ಕಾಲಕ್ಕೆ ಸರಿಯಾಗಿ ನಡೆಯಬೇಕು. ಯಾವ ಕೆಲಸದಲ್ಲೂ ವಿಳಂಬವಾಗಕೂಡದು. ಎಲ್ಲಿಯಾದರೂ ಹೊರಟರೆ, ಪ್ರಯಾಣದ ದೂರವೆಷ್ಟು, ಅದಕ್ಕೆ ಸಮಯವೆಷ್ಟು ಬೇಕು, ಎಷ್ಟು ಹೊತ್ತಿಗೆ ಹೊರಡಬೇಕು. ಎಷ್ಟು ಹೊತ್ತಿಗೆ ಊರು ಮುಟ್ಟಬೇಕು. ದಾರಿಯಲ್ಲಿ ಎಷ್ಟು ಹೊತ್ತು ಎಲ್ಲಿ ಕಾರು ನಿಲ್ಲಿಸಬೇಕು. ಇದೆಲ್ಲವನ್ನು ಹೊರಡುವ ಮೊದಲೇ ತೀರ್ಮಾನಿಸುತ್ತಿದ್ದರು. ಯೋಜನೆಗೆ ಅನುಗುಣವಾಗಿ ಎಲ್ಲಾ ಆಗಬೇಕು. ಪ್ರಯಾಣದಲ್ಲಿ ಸ್ವಲ್ಪ ವಿಳಂಬವಾದರೆ ಡ್ರೈವರನ ಮುಖ ನೋಡಿದರೆ ಸಾಕು ಅವನಿಗೆ ಅರ್ಥವಾಗುತ್ತಿತ್ತು. 'ವಿಳಂಬವಾಗಿದೆ ಅದನ್ನು make up ಮಾಡಬೇಕೆಂದು.' ಸಂದರ್ಶಕರು ಬಂದರೂ ಅಷ್ಟೆ. ಎಷ್ಟು ಬೇಕೊ ಅಷ್ಟೆ. ವ್ಯರ್ಥವಾಗಿ ವೇಳೆ ಕಳೆಯುತ್ತಿರಲಿಲ್ಲ. ಈ ಸಮಯ ಪ್ರಜ್ಞೆಯ ಜೊತೆಗೆ ಸಂತೋಷದ ಸಮಯದಲ್ಲಿ, ಅತಿಥಿಗಳು ಬಂದಾಗ, ರೋಗಿಗಳು ಇದ್ದಾಗ, ಹೇಗ್ಹೇಗೆ ವರ್ತಿಸಬೇಕೆಂಬ ಎಲ್ಲ ರೀತಿ ನೀತಿಗಳಲ್ಲಿ ಒಂದು ಬಗೆಯ ಶಿಸ್ತು, ಅಚ್ಚುಕಟ್ಟುತನ ಇತ್ತು. ಅವರ ಈ ಗುಣವನ್ನು ಅವರ ಶ್ರೀಮತಿಯವರು ಬಹಳ ಮೆಚ್ಚುತ್ತಿದ್ದರು. ಈ ಬಗ್ಗೆ ಅವರು ತಮ್ಮ ಆತ್ಮೀಯರೊಡನೆ ಬಹು ಹೆಮ್ಮೆಯಿಂದ, 'ಸಾಹುಕಾರ್‍ರು ಟೈಂ ಅಂದರೆ ಟೈಂ, ಯಾರಾದ್ರೂ ಮಲಗಿದ್ರೆ, ಕಾಹಿಲೆಯವರಿದ್ರೆ ಮಾತು ಸಹ ಗಟ್ಟಿಗೆ ಆಡೋಲ್ಲ. ನಡ್ಯೋದು ಸಹ ಹೆಜ್ಜೆ ಮೇಲೆ ಹೆಜ್ಜೆ ಇಟ್ಟು ನಡೀತಾರೆ. ಇಷ್ಟು ಎಚ್ಚರ ಪ್ರತಿಯೊಂದು ವಿಷಯದಲ್ಲೂ. ಆದರೇನು ಹೆಚ್ಚು ಕಲಿತವರಲ್ಲ, ಆದ್ರೆ ಅವ್ರ ಮುಂದೆ ಈಗಿನ ವಿದ್ಯಾವಂತರ್‍ಯಾತಕ್ಕೇಕು' ಎಂದು ಹೇಳುತ್ತಿದ್ದುದನ್ನು ನಾನೇ ಎಷ್ಟೋಬಾರಿ ಕೇಳಿದ್ದೇನೆ.

■

## ಅವರ ದಿನಚರಿ

ತೋಟದಲ್ಲಲ್ಲದೆ ಊರಿನ ಮನೆಯಲ್ಲಿದ್ದರೆ ಬೆಳಗಿನ ಜಾವ ಎದ್ದು ತಮ್ಮ ವಿಶಾಲವಾದ ಕಾಂಪೌಂಡಿನಲ್ಲಿ ಅಲ್ಲಿಂದಿಲ್ಲಿಗೆ ತುಂಬಾ ಸ್ಪೀಡಾಗಿ ಓಡಾಡುತ್ತಿದ್ದುದನ್ನು ಯಾರು ಬೇಕಾದರೂ ನೋಡಬಹುದಾಗಿತ್ತು. ದಿನಚರಿಯನ್ನು ಅವರೆಂದೂ ತಪ್ಪುತ್ತಿರಲಿಲ್ಲ. ಮನೆ ತುಂಬ ಆಳು-ಕಾಳುಗಳಿದ್ದರೂ, ಮನೆಯಲ್ಲಿ ಉಡುತ್ತಿದ್ದ ಪಂಚೆಯನ್ನು ತಾವೇ ಒಗೆದುಕೊಳ್ಳುತ್ತಿದ್ದರು. ತಾವು ಊಟ ಮಾಡಿದ ತಟ್ಟೆಯನ್ನು ತಾವೇ ತೊಳೆದು, ಒರೆಸಿ ಇಡುತ್ತಿದ್ದರು. ತಮ್ಮ ಬೂಟುಗಳನ್ನು ತಾವೇ ಪಾಲಿಷ್ ಮಾಡಿಕೊಳ್ಳುತ್ತಿದ್ದರು. ಅರಸರಂತೆ ಬಾಳುವ ಸಂಪತ್ತು ಇದ್ದರೂ, ಸ್ವಂತ ವಿಷಯಗಳಲ್ಲಿ ಸಾಮಾನ್ಯರಂತೆಯೇ ಬಾಳಿದುದು ಅವರ ವ್ಯಕ್ತಿತ್ವದ ವಿಶೇಷ.

ಊಟ ಉಪಚಾರದಲ್ಲೂ ಹಿತಮಿತ. ಹಣ್ಣು ಹಂಪಲು ತರಲಿ, ಕಾಯಿಪಲ್ಯೆ

ತರಲಿ ಅವುಗಳ ಗುಣಮಟ್ಟಕ್ಕೆ ಬಹಳ ಮಹತ್ವ ಕೊಡುತ್ತಿದ್ದರು. ಅತ್ಯುತ್ತಮವಾದ ಹಣ್ಣು ತರಕಾರಿಗಳನ್ನು ಮನೆಯವರೆಲ್ಲ ಸೇವಿಸುವಂತೆ ಎಚ್ಚರ ವಹಿಸುತ್ತಿದ್ದರು. ಹೀಗೆ ತಮ್ಮ ಜವಾಬ್ದಾರಿಗೆ ಒಳಪಟ್ಟ ವಿಷಯಗಳಲ್ಲಿ ಸಣ್ಣದರಿಂದ ಹಿಡಿದು ದೊಡ್ಡದರವರೆಗೂ ಪ್ರತಿಯೊಂದನ್ನೂ ಗಮನಿಸಿ ಎಲ್ಲವೂ ಸುವ್ಯವಸ್ಥಿತವಾಗಿರುವಂತೆ ನೋಡಿಕೊಳ್ಳುತ್ತಿದ್ದರು. ಈ ಅಚ್ಚುಕಟ್ಟುತನವನ್ನು, ಶಿಸ್ತನ್ನು ನಾವು ಅವರ ಮನೆಯಲ್ಲಿ ಇಂದೂ ಮಡದಿ ಮಕ್ಕಳಲ್ಲೆಲ್ಲಾ ಕಾಣಬಹುದು. ಮನೆತನದ ಸಂಸ್ಕೃತಿಯ ಸಂವಹನ ಎಂದರೆ ಇದೇ ತಾನೆ?

■

## ಕಂದಾಚಾರ ಒಪ್ಪದ ವಿಚಾರವಾದಿ

ಶ್ರೀಯುತರಿಗೆ ಹಳೆಯ ಕಂದಾಚಾರ, ಗೊಡ್ಡು ನಂಬಿಕೆಗಳು, ಅಂಧಶ್ರದ್ಧೆಗಳು ಎಂದರೆ ಆಗುತ್ತಿರಲಿಲ್ಲ. ಅಪಶಕುನ, ಶುಭ ಶಕುನಗಳಿಗಾಗಿ, ರಾಹುಕಾಲ-ಗುಳಿಕಕಾಲಗಳಿಗಾಗಿ ಎಂದೂ ತಲೆ ಕೆಡಿಸಿಕೊಂಡವರಲ್ಲ. ಯಾವುದಾದರೂ ಶುಭ ಕಾರ್ಯಮಾಡಲು ಶುಭದಿನ, ಶುಭವಾರ, ಶುಭನಕ್ಷತ್ರಗಳೇ ಆಗಬೇಕೆಂದು ಶುಭಮುಹೂರ್ತವನ್ನು ಪುರೋಹಿತರಿಂದ ಕೇಳಿ ಆಚರಿಸುವ ಪದ್ಧತಿ ಶರಣ ಸಂಪ್ರದಾಯವಲ್ಲ. ಶಿವಭಕ್ತರಿಗೆ ಎಲ್ಲ ವಾರ, ಎಲ್ಲ ಸಮಯ, ಎಲ್ಲ ನಕ್ಷತ್ರಗಳೂ ಶುಭ. ಅದನ್ನು ಬಸವಣ್ಣನವರ

ಎಮ್ಮವರು ಬೆಸಗೊಂಡರೆ ಶುಭಲಗ್ನವೆನಿರಯಾ
ರಾಶಿಕೂಡ ಋಣ ಸಂಬಂಧ ಉಂಟೆಂದು ಹೇಳಿರಯ್ಯಾ
ಚಂದ್ರಬಲ, ತಾರಾಬಲ ಉಂಟೆಂದು ಹೇಳಿರಯ್ಯಾ
ನಾಳಿನ ದಿನಕಿಂತಿಂದಿನ ದಿನ ಲೇಸೆಂದು ಹೇಳಿರಯ್ಯಾ
ಕೂಡಲಸಂಗನ ಪೂಜಿಸಿದ ಫಲ ನಿಮ್ಮದಯ್ಯಾ

ಎಂಬ ವೀರಶೈವ ತತ್ವದಂತೆ ಎಲ್ಲ ಗಳಿಗೆಯೂ ಶ್ರೀಯುತರಿಗೆ ಶುಭವೇ. ಇವರು ಹತ್ತೊಂಬತ್ತನೆಯ ಶತಮಾನದ ಕೊನೆಯಲ್ಲಿ ಜನಿಸಿದವರಾದರೂ ಆಧುನಿಕ ವಿಚಾರಗಳಲ್ಲಿ ಇಪ್ಪತ್ತನೆಯ ಶತಮಾನದ ಕೊನೆಯಲ್ಲಿಯ ಜನರನ್ನು ಮೀರಿಸುವಂತಿದ್ದರು. ಎಲ್ಲ ವಿಷಯಗಳನ್ನು ವೈಜ್ಞಾನಿಕ ದೃಷ್ಟಿಕೋನದಿಂದಲೇ ನೋಡುತ್ತಿದ್ದರು. ಈಗಿನ ಕಾಲದಲ್ಲಿ ಸಹ ಕೆಲವು ಮನೆಗಳಲ್ಲಿ ಗಂಡಸರಿಗೆ ಮೂಢನಂಬಿಕೆಗಳಿರುವುದಿಲ್ಲವಾದರೂ ಹೆಣ್ಣುಮಕ್ಕಳು ಅದಕ್ಕೆ ಅಂಟಿಕೊಂಡಿರುತ್ತಾರೆ. ಆದರೆ ಪತ್ರೆ ಮನೆಯ ವಿಶೇಷವೆಂದರೆ ಶ್ರೀಮತಿ ಅನ್ನಪೂರ್ಣಮ್ಮನವರು ಪತಿಯ ಈ ಸ್ವಭಾವವನ್ನು ಮೆಚ್ಚಿ, ಅದನ್ನೇ ಅನುಕರಿಸುತ್ತಿದ್ದರು. ನನ್ನೊಡನೆಯೇ ನೋಡ್ತಾ

ನಮ್ಮ ಸಾಹುಕಾರ್ರು ಆಮಾಸ ಈಮಾಸ ಆಕಾಲ ಈಕಾಲ, ಅಪಶಕುನ ಶುಭಶಕುನ ಯಾವ್ದನ್ನೂ ನಂಬೋದಿಲ್ಲ. ಅಮಾವಾಸ್ಯೆ ದಿನವೇ ನಾವು ಮಕ್ಕಳನ್ನು ಗಂಡನ ಮನೆಗೆ ಕಳಿಸಿದ್ದೇವೆ. ಎಲ್ಲ ಸುಖವಾಗೇ ಆಗಿದೆ ಎಂದು ಮೂಢ ನಂಬಿಕೆಗಳನ್ನು disprove ಮಾಡುತ್ತಿದ್ದರು. ಹೀಗೆ ಶ್ರೀಮತಿಯವರು ಪತಿ ನಡೆದ ದಾರಿಯಲ್ಲೇ ಸಹಕರಿಸಕೊಂಡು ಹೋಗಿ, ಅವರ ಸದಭಿಪ್ರಾಯಗಳನ್ನು ಅರ್ಥ ಮಾಡಿಕೊಂಡು ಅವರ ಜಾಡಿನಲ್ಲಿ ತಮ್ಮ ದಾರಿಯನ್ನು ರೂಪಿಸಿಕೊಂಡು ಯಾವುದೇ ಘರ್ಷಣೆಗಾಗಲೀ ವಿರಸಕ್ಕಾಗಲೀ ಆಸ್ಪದ ಕೊಡದೆ ಮನೆಯನ್ನು ನಂದವನವನ್ನಾಗಿ ಮಾಡಿದರು.

■

## ಕಾರು ಕೊಳ್ಳುವ ಖಯಾಲಿ

ಶ್ರೀಯುತರಿಗೆ ಕುದುರೆ ಸವಾರಿ, ಬೇಟೆಯಾಡುವುದು, ಹೊಸ ಹೊಸ ಕಾರುಗಳನ್ನು ಕೊಳ್ಳುವುದು ಬಹಳ ಇಷ್ಟ. ಹಳೆಯ ಮೈಸೂರು ರಾಜ್ಯದಲ್ಲಿ ಕಾರು ಕೊಂಡವರಲ್ಲಿ ಇವರು ಎರಡನೆಯವರೆಂದು ಜನ ಹೇಳುತ್ತಿದ್ದರು. ಕಾರಿನ ಪ್ರಿಯರಿವರು. ಆ ನಿರ್ಜೀವವಾದ ಕಾರನ್ನು ಒಮ್ಮೆ ಕೊಂಡರೆಂದರೆ ಸ್ನೇಹಿತನಂತೆ ಅದರ ಯೋಗಕ್ಷೇಮ ನೋಡಿಕೊಳ್ಳುತ್ತಿದ್ದರು. ಅದು ಸದಾ ಠಾಕುಠೀಕಾಗಿರಬೇಕು ಎಂದೂ ಒಂದಿಷ್ಟು ಹೊಲಸಾಗಬಾರದು. ಒಂದು ಗೆರೆ ಅದರ ಮೈಮೇಲೆ ಬೀಳಬಾರದು. ಇವರ ಅಭಿರುಚಿಯನ್ನು ತಿಳಿದಿದ್ದ ಡ್ರೈವರ್ ತನ್ನ ದಣಿಯ ಕಣ್ಣಿಗೆ ಹಬ್ಬವಾಗುವಂತೆ ಕಾರನ್ನು ಸದಾ ಥಳಥಳಿಸುವಂತೆ ಇಡುತ್ತಿದ್ದ. ಅನೇಕ ವರ್ಷಗಳು ಬಳಸಿದರೂ ಇವರ ಕಾರುಗಳು ಸುಸ್ಥಿತಿಯಲ್ಲೇ ಇರುತ್ತಿದ್ದವು. ಶ್ರೀಯುತರು ಆ ಬಗ್ಗೆ ವಹಿಸುತ್ತಿದ್ದ ಕಾಳಜಿಯೇ ಇದಕ್ಕೆ ಮುಖ್ಯ ಕಾರಣ. ೧೯೧೭ ರಲ್ಲಿ ಶ್ರೀಯುತರು ತಮ್ಮ ಮೊದಲ ಕಾರನ್ನು ಕೊಂಡರು. ನಂತರ ಆಸ್ಟಿನ್ ಸೆವನ್‌ಗೆ ಬದಲಾಯಿಸಿದರು. ನಂತರ ಲಾಸೆಲ್, ಫೋರ್ಡ್, ಲ್ಯಾನ್ಸಿಯ ಲ್ಯಾಮ್ಡ, ಬೆಂಟ್ಲಿ ವ್ಯಾಕ್ಸ್‌ಹಾಲ್ ಕ್ಯಾಡಿಲಾಕ್, ರೋಲ್ಸ್‌ರಾಯ್ಸ್, ಕ್ರಾಸ್ಲಿ, ಕ್ಯಾಡಿಲಾಕ್ ಓಲ್ಡಮೊಬೈಲ್ ಸ್ಟುಡಿಬೇರಕ, ಸಿಟ್ರಿಯಾಸ್, ಡಾಡ್ಜ್, ವ್ಯಾನ್‌ಗಾರ್ಡ್, ಫಿಯಟ್ ಮುಂತಾದ ಕಾರುಗಳನ್ನಿಟ್ಟಿದ್ದರು. ಮೇಲಿಂದ ಮೇಲೆ ಕಾರುಗಳನ್ನು ಬದಲಾಯಿಸುವ ಹವ್ಯಾಸವಿತ್ತು. ಅದು ಅವರ ಸದಭಿರುಚಿ ಹಾಗೂ ಪ್ರಯೋಜನದ ದ್ಯೋತಕ.

ಬೊಂಬಾಯಿನಲ್ಲಿದ್ದ 'ರೂಟ್ಸ್ ಇಂಡಿಯಾ ಲಿಮಿಟೆಡ್ ಕಂಪನಿ'ಯಲ್ಲಿ ಆಗಿನ ಕಾಲದಲ್ಲಿ ವಿಶ್ವವಿಖ್ಯಾತವಾದ ರೋಲ್ಸ ರಾಯ್ಸ ಕಾರನ್ನು ೧೯೩೧ ರಲ್ಲಿ ಶ್ರೀಯುತರು ಖರೀದಿಸಿದರು. ಆಗಿನ ಕಾಲದಲ್ಲಿ ಅದರ ಬೆಲೆ ಅರವತ್ತು ಸಾವಿರ ರೂಪಾಯಿಗಳು. ಬಹಳ ಖುಷಿಯಿಂದ ತಂದರು. ಇದೇ ಮಾದರಿಯ ಕಾರನ್ನು ಮೈಸೂರು ಮಹಾರಾಜರು ಕೊಂಡಿದ್ದರಂತೆ! ಹಾಗಾಗಿ ಇವರು ಎಲ್ಲಿಗಾದರೂ ಹೋದರೆ,

'ಮಹಾರಾಜರು ಬಂದರು' ಎಂದು ಜನರೆಲ್ಲ ಮುತ್ತಿಗೆ ಹಾಕುತ್ತಿದ್ದರಂತೆ. ಆಗ ಕೆಲವು ಹೊಟ್ಟೆಕಿಚ್ಚಿನ ಜನ ಮಹಾರಾಜರ ಮೇಲೆ ಪೈಪೋಟಿ ಮಾಡುತ್ತಿದ್ದಾರೆಂದು ಸುದ್ದಿ ಹಬ್ಬಿಸಿದರಂತೆ. ಶ್ರೀಯುತರು ಮಹಾರಾಜರ ನಿಕಟವರ್ತಿಗಳಲ್ಲೊಬ್ಬರಾಗಿದ್ದರು. ಈ ಕೆಟ್ಟ ಪ್ರಚಾರದಿಂದ ತಮ್ಮ ವಿಶ್ವಾಸ ಕೆಡಬಾರದೆಂದು ಕಾರನ್ನು ಕೂಡಲೇ ಕಂಪನಿಗೆ ಹಿಂದಿರುಗಿಸಿದರಂತೆ. ಬೇರೆಯವರಿಗೆ ಮಾರಲು ಆಗ ಮಹಾರಾಜರ ಹೊರತು ಬೇರೆ ಗಿರಾಕಿ ಸಿಗುವಂತಿರಲಿಲ್ಲ. ಕಂಪನಿಯವರೂ ಸಹ, ಸಮಸ್ಯೆಯನ್ನು ಅರ್ಥ ಮಾಡಿಕೊಂಡು, ಪೂರ್ಣ ಹಣವನ್ನು ಹಿಂತಿರುಗಿಸಿದರಂತೆ.

■

## ಗುಣಪಕ್ಷಪಾತಿ ಸಜ್ಜನ

ಶ್ರೀಯುತರು ಅಲೆಕ್ಸಾಂಡರನಂತೆ ಗುಣಪಕ್ಷಪಾತಿ. ಪುರೂರವನು ಶತ್ರುವಾದರೂ ಅವನ ಸ್ವಾಭಿಮಾನ, ಶೌರ್ಯ, ದೇಶ ಪ್ರೇಮಗಳಿಗೆ ಮಾರುಹೋದ. ಸೋತು ಬಂದಿಯಾಗಿ ಬಂದ ಪುರೂರವನನ್ನು ಅವನ ಗುಣಗಳಿಗಾಗಿ ಅಲೆಗ್ಸಾಂಡರ್ ಅಪ್ಪಿ ಆಲಂಗಿಸಿಕೊಂಡ. ಚನ್ನವೀರಪ್ಪಯ್ಯನವರೂ ಸಹ ಅದೇ ರೀತಿಯ ಸ್ವಭಾವದವರಾಗಿದ್ದರು. ಮೆಚ್ಚುವಂತಹ ಗುಣ ವಿರೋಧಿಗಳಲ್ಲಿದ್ದರೂ ಅವರನ್ನು ಕರೆಸಿ, ಕೊಂಡಾಡಿ ಸಂತೋಷಪಡುವ ಸಜ್ಜನಿಕೆ ಇತ್ತು ಅವರಲ್ಲಿ. ಬೇರೆಯವರ ಪ್ರಗತಿ ನೋಡಿ ಎಂದೂ ಕರುಬಿದವರಲ್ಲ. ಯಾರಾದರೂ ಮುಂದುವರಿಯುತ್ತಾರೆ, ಯೋಗ್ಯರಿದ್ದಾರೆ ಎಂದರೆ ಎಲ್ಲಿಲ್ಲದ ಸಂತೋಷ. ಸೇಡಿನ ಮನೋಭಾವ ಅವರಲ್ಲಿರಲಿಲ್ಲ. ಯಾವುದೇ ಕಾರಣದಿಂದ ಯಾರೊಡನೆಯಾದರೂ ವಿರಸ ಬಂದಿದ್ದರೆ, ಅದನ್ನು ಬೆಳೆಯಗೊಟ್ಟವರಲ್ಲ. ಅದನ್ನೆಲ್ಲ ಬಹುಬೇಗ ಮರೆತು ಸರಸ ಸಂಬಂಧವನ್ನು ಪುನಃ ಬೆಳೆಯಿಸಿಕೊಂಡು ಎಲ್ಲರೊಡನೆ ಮೈತ್ರಿಯಿಂದ ಬಾಳಿದ ಹಿರಿಯ ಜೀವ ಚನ್ನವೀರಪ್ಪಯ್ಯನವರದ್ದು. ಯಾರಿಗಾದರೂ ಕೇಡು ಬಗೆಯುವುದಂತೂ ಕನಸಿನಲ್ಲೂ ಅವರಿಗೆ ಸಾಧ್ಯವಿರಲಿಲ್ಲ. ಯಾರಾದರೂ ಅವರಿಗೆ ಸರಿ ಬರಲಿಲ್ಲವೆಂದರೆ ಅವರಿಂದ ದೂರವಿರುತ್ತಿದ್ದರೇ ವಿನಃ ಎಂದಿಗೂ ಕೆಡಕು ಮಾಡುತ್ತಿರಲಿಲ್ಲ. ಇವೆಲ್ಲ ಅವರಲ್ಲಿದ್ದ ಅನುಕರಣೀಯ ವ್ಯಕ್ತಿತ್ವಾಂಶಗಳು.

■

## ಸ್ವ ಕರ್ತವ್ಯ ನಿರತ ವ್ಯಕ್ತಿ

ಚನ್ನವೀರಪ್ಪಯ್ಯನವರಿಗೆ ಡಯಾಬಿಟೀಸ್ ತೊಂದರೆ ಇತ್ತು. ಅದಕ್ಕಾಗಿ ಅವರೆಂದೂ ಚಿಂತಿಸಲಿಲ್ಲ. ಆರೋಗ್ಯಕ್ಕೇನು ಎಚ್ಚರಿಕೆ ವಹಿಸಬೇಕೋ ಆ ಎಚ್ಚರಿಕೆ ವಹಿಸಿ ನಿಶ್ಚಿಂತೆಯಿಂದ ಇರುತ್ತಿದ್ದರು. ಆರೋಗ್ಯಕ್ಕೆ ಬೇಕಾದ ಲಕ್ಷ್ಯ ವಹಿಸುತ್ತಿದ್ದರು.

ದಿನವೂ ತಮ್ಮ ಖಾಯಿಲೆ ಯಾವ ಮಟ್ಟಕ್ಕಿದೆಯೆಂಬುದನ್ನು ತಾವೇ ಪರೀಕ್ಷಿಸಿಕೊಂಡು ಅವಶ್ಯಕವಿದ್ದಷ್ಟು ಇನ್ಸುಲಿನ್‌ನ್ನು ತಾವೇ ಇಂಜಕ್ಟ್ ಮಾಡಿಕೊಳ್ಳುತ್ತಿದ್ದರು. ಅವರಿಗೆ ಹೋಳಿಗೆ ಸೀಕರಣೆ ಎಂದರೆ ಬಹಳ ಪ್ರೀತಿ. ಎಂದಾದರೂ ಒಂದುದಿನ ಮಾಡಿಸಿಕೊಂಡು ತಿಂದು, ಅದಕ್ಕೆ ತಕ್ಕಷ್ಟು ಇನ್ಸ್‌ಲಿನ್ ತೆಗೆದುಕೊಳ್ಳುತ್ತಿದ್ದರು. ರೋಗಕ್ಕೆ ಹೆದರಿದವರೇ ಅಲ್ಲ; ಸಾವಿಗೂ ಅಂಜಿದವರಲ್ಲ. ಸಾಮಾನ್ಯವಾಗಿ ಸುಖವಾಗಿದ್ದ ಜನ ವಯಸ್ಸಾದಂತೆ, ಎಲ್ಲಿ ರೋಗ ಬರುತ್ತದೆಯೋ, ಎಲ್ಲಿ ಸತ್ತು ಹೋಗುತ್ತೇವೆಯೋ ಎಂದು ಭಯಪಡುತ್ತಾರೆ. ಆದರೆ ತೃಪ್ತಜೀವನವನ್ನು ನಡೆಯಿಸಿದ ಶ್ರೀಯುತರು, 'ನನ್ನೆಲ್ಲ ಕರ್ತವ್ಯಗಳನ್ನು ಮುಗಿಸಿದ್ದೇನೆ ಜೀವನದಲ್ಲಿ ಪಡಬಹುದಾದ ಸುಖವನ್ನೆಲ್ಲ ಪಟ್ಟಿದ್ದೇನೆ. ಮೇಲಿನಿಂದ ಯಾವಾಗ ಕರೆ ಬಂದರೂ ಹೋಗಲು ರೆಡಿ ಎಂದು ಅತ್ಯಂತ ನಿರ್ವಿಕಾರತೆಯಿಂದ ಹೇಳುತ್ತಿದ್ದರು. ಆದರೆ ಅವರ ಏಕಮಾತ್ರ ತಮ್ಮನವರಾದ ಶಿವಪ್ಪಯ್ಯನವರು ತಮ್ಮ ಐವತ್ನಾಲ್ಕನೆ ವಯಸ್ಸಿನಲ್ಲಿಯೇ ಹೃದಯಾಘಾತದಿಂದ ತೀರಿಕೊಂಡಾಗ ಅವರಿಗೆ ಜೀವನದಲ್ಲಿ ಬೇಸರ ಕಾಣಿಸಿತು. ಕೆಲವು ವರ್ಷಗಳಂತೂ ಒಳಗೆ ತುಂಬಾ ಕೊರಗಿದರು. "ನನಗಿಂತ ಚಿಕ್ಕವನೇ ಹೋದ ಮೇಲೆ ಇದೆಲ್ಲ ನನಗೇಕೆ?" ಎಂದು ದುಃಖ ಪಡುತ್ತಿದ್ದರಂತೆ.

ತಮ್ಮಲ್ಲಿ ಸರಿ ಇಲ್ಲದ ಯಾವುದಾದರೂ ಸ್ವಭಾವವಿದ್ದರೆ ಅದನ್ನು ತಿದ್ದಿಕೊಳ್ಳಲು ಶ್ರೀಯುತರು ಸದಾ ಪ್ರಯತ್ನ ಪಡುತ್ತಿದ್ದರು. ವಿದೇಶ ಪ್ರವಾಸ, ಆಂಗ್ಲ ಸ್ನೇಹಿತರುಗಳ ಸಹವಾಸದಿಂದಾಗಿ ಅವರಿಗೆ ಹೇಗೋ ಸಿಗರೇಟು ಸೇದುವ ಚಟ ಗಂಟುಬಿದ್ದಿತು. ಅದು ತಪ್ಪು; ಅದನ್ನು ಬಿಡಬೇಕೆಂದು ಅನೇಕ ಸಾರಿ ಪ್ರಯತ್ನಿಸಿದರಂತೆ, ಕೆಲವು ಕಾಲ ಬಿಡುವುದು, ಮತ್ತೆ ಸೇದುವುದು–ಹೀಗೆ ಅನೇಕಬಾರಿ ನಡೆದಿತ್ತು. ಅವರ ಮಗಳು ಸುಶೀಲಮ್ಮ ತನ್ನ ಮೊದಲ ಮಗನಿಗೆ ಒಂದು ವರ್ಷವಾದಾಗ ಎದೆ ಹಾಲು ಕುಡಿಸುವುದನ್ನು ಬಿಡಿಸಬೇಕೆಂದು ತವರುಮನೆಗೆ ಬಂದಳು. ಮಗು ಹಾಲು ಬಿಡಲು ಎಷ್ಟು ರಗಳೆ ಮಾಡುವುದೋ ಎಂದು ಎಲ್ಲರಿಗೂ ಆತಂಕ. ಆದರೆ ಮಗು ತಂಟೆಯೂ ಇಲ್ಲದೆ ರಾತ್ರಿ ಸುಖವಾಗಿ ನಿದ್ರಿಸಿತು. ಬದಲಾದ ಪ್ರಸಂಗಕ್ಕೆ ಅತೀ ಸುಲಭವಾಗಿ ಒಗ್ಗಿಕೊಂಡು ಬಿಟ್ಟಿತು. ಇದನ್ನು ನೋಡಿದ ಶ್ರೀಯುತರಿಗೆ ಆಶ್ಚರ್ಯ, ಸಂತೋಷ. 'ಇಷ್ಟು ಸಣ್ಣ ಮಗು ಒಂದೇ ದಿನದಲ್ಲಿ ತಾಯಿಯ ಹಾಲು ಕುಡಿಯುವ ರೂಢಿ ಬಿಟ್ಟಿತು. ನಾನು ಎಷ್ಟು ಬಾರಿ ಸಿಗರೇಟು ಸೇದುವುದು ಬಿಡಲು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲವಲ್ಲಾ! ಛೇ! ನಾನು ಇಂದಿನಿಂದ ಸಿಗರೇಟು ಸೇದುವುದನ್ನು ಬಿಟ್ಟೇ ತೀರಬೇಕು' ಎಂದು ನಿಶ್ಚಯಿಸಿದರು. ಅಂದಿನಿಂದ ಕೊನೆಯವರೆಗೂ ಪುನಃ ಸಿಗರೇಟು ಕೈಯಲ್ಲಿ ಹಿಡಿಯಲಿಲ್ಲ.

ಎಲ್ಲ ವಿಷಯಗಳಲ್ಲೂ ಚನ್ನವೀರಪ್ಪನವರಿಗೆ ಮುಂಜಾಗ್ರತೆ ಬಹಳ. ಅವರಿಗೆ

ಡಯಾಬೀಟಿಸ್ ಇತ್ತು. ವಯಸ್ಸಾದ ನಂತರ ಸಾಮಾನ್ಯವಾಗಿ ಪೆರಾಲಿಸಿಸ್ ಅಟ್ಯಾಕ್ ಆಗುವುದು ಸಾಮಾನ್ಯ. ಅದರ ಮುಂಜಾಗ್ರತೆಯಾಗಿ ಯಾವುದೋ ಒಂದು ಜಾತಿಯ ಪಾರಿವಾಳಗಳನ್ನು ಸಾಕಿದ್ದರು. ಆ ಪಾರಿವಾಳಗಳು ಹಾರಾಡುವಾಗಿನ ಗಾಳಿ ಬಡಿಯುತ್ತಿದ್ದರೆ ಲಕ್ವ ಹೊಡೆಯುವದಿಲ್ಲವಂತೆ. ಆ ವಿಷಯ ತಿಳಿದ ಶ್ರೀಯುತರು ಆ ಪಕ್ಷಿಗಳನ್ನು ತಂದು, ಸಾಕಿ ದಿನವೂ ಸಂಜೆಯ ಹೊತ್ತಿನಲ್ಲಿ ಅವುಗಳೊಡನೆ ಕೆಲವು ಸಮಯ ಕಳೆಯುತ್ತಿದ್ದರು. ಅವರು ಸಮಯವನ್ನು ತಮ್ಮ ಕೆಲಸಗಳಿಗೆ ಸರಿಯಾಗಿ ಹಂಚಿಕೊಂಡು ಅದರಂತೆ ಮಾಡುತ್ತಿದ್ದುದರಿಂದ, ವೇಳೆಯು ವ್ಯರ್ಥವಾಗದೆ ಎಷ್ಟು ಬೇಕಾದರೂ ಕೆಲಸ ಮಾಡಲು, ಅವರಿಗೆ ಸಾಧ್ಯವಾಗುತ್ತಿತ್ತು. ಎಲ್ಲ ವಿಷಯಗಳಲ್ಲಿ ಆಸಕ್ತಿ ಇದ್ದ, ವ್ಯವಸ್ಥಿತ ಜೀವನದ ಚುರುಕುವ್ಯಕ್ತಿಯಾಗಿದ್ದರವರು.

■

## ವರದಕ್ಷಿಣೆ ವಿರೋಧಿ

ನಮ್ಮ ಸಮಾಜದಲ್ಲಿ ವರದಕ್ಷಿಣೆಯ ಪಿಡುಗು ಎಲ್ಲೆಡೆ ಹಬ್ಬಿದೆ. ಎಷ್ಟೆಷ್ಟು ಹೆಚ್ಚು ಶ್ರೀಮಂತರೋ ಅಷ್ಟಷ್ಟು ಹೆಚ್ಚು ವರದಕ್ಷಿಣೆ ತೆಗೆದುಕೊಂಡರೇ ತಮಗೆ ಗೌರವ ಎನ್ನುವ ಭಾವನೆ ಜನರಲ್ಲಿ. ಶ್ರೀಯುತರ ತಮ್ಮಂದಿರಾದ ಶಿವಪ್ಪಯ್ಯನವರ ಜೇಷ್ಠ ಪುತ್ರ ರುದ್ರಮೂರ್ತಿಯವರಿಗೆ ಕನ್ಯೆ ನೋಡಬೇಕಾಗಿತ್ತು. ಸೊಂಡೂರಿನ ಗೊಗ್ಗಾ ರುದ್ರಯ್ಯನವರ ಪೈಕಿ ಕನ್ಯೆ ಮನಸ್ಸಿಗೆ ಬಂದಿತು. ಅವರಿಗೆ ಜಾತಕ ತೆಗೆದುಕೊಂಡು ಮಾತುಕತೆಗೆ ಬರಲು ಬರೆದರು. ಆಗ ಕನ್ಯೆಯ ಮನೆಯವರ ಮುಂದಿದ್ದ ಪ್ರಶ್ನೆ. ವರದಕ್ಷಿಣೆ ಎಷ್ಟು ಕೇಳುತ್ತಾರೋ ಏನೋ. ಅಷ್ಟು ಶ್ರೀಮಂತರು ಬಹಳಷ್ಟು ಕೇಳಬಹುದು. ಅಷ್ಟನ್ನು ಕನ್ಯೆಯ ಮನೆಯವರಿಗೆಲ್ಲಿ ಕೊಡಲಿಕ್ಕೆ ಆಗುತ್ತದೆ ಎಂದು ಚಿಂತೆಗೀಡಾದರು. 'ಸಂಬಂಧವೇನೋ ತುಂಬಾ ಒಳ್ಳೆಯದು. ಕನ್ಯೆಯನ್ನು ಒಪ್ಪಿಯೂ ಬಿಟ್ಟಿದ್ದಾರೆ. ಈಗ ವರದಕ್ಷಣೆಯ ಸಂಬಂಧ ಅಂತಹ ಮನೆತನ ತಪ್ಪಿಸಿಕೊಳ್ಳಬೇಕಾಗಿದೆ' ಎಂದು ಪೇಚಾಡಿದರು. ಕೆಲವರು 'ಹೋಗಿ ಏಕೆ ಸುಮ್ಮನೆ ಬರಬೇಕು. ಅವರಿಗೆ ತಾಳುವಷ್ಟು ವರದಕ್ಷಿಣೆ ನಮಗೆ ಕೊಡಲಿಕ್ಕೆ ಆಗೋದಿಲ್ಲ. ಹೋಗುವುದನ್ನೇ ಬಿಟ್ಟರಾಯ್ತು' ಎಂದರು. ಮತ್ತೆ ಕೆಲವರು 'ನೋಡೋಣ, ಕೇಳೋದಾದರೂ ಎಷ್ಟು ಕೇಳ್ತಾರೆ. ಸ್ವಲ್ಪ ಹೆಚ್ಚು ಕಡಿಮೆ ನೋಡಿ ಕೊಟ್ರಾಯ್ತು. ಒಳ್ಳೆ ಸಂಬಂಧ. ವಿಪರೀತ ಕೇಳಿದ್ರೆ ಬಿಟ್ಟು ಬಂದರಾಯ್ತು' ಎಂದು ಕೆಲವರು ಸಲಹೆ ಕೊಟ್ಟರು. ಅಂತೂ ಹಿರಿಯರೆಲ್ಲ ಕೂಡಿಕೊಂಡು ಬೀರೂರಿಗೆ ಬಂದರು. ಚನ್ನವೀರಪ್ಪಯ್ಯನವರ ಮನೆಯಲ್ಲೇ ಊಟ ಉಪಚಾರಗಳಾದವು. ಪುರೋಹಿತರನ್ನು ಕರೆಸಿ, ಲಗ್ನದ ಮುಹೂರ್ತವಿಡುವ ಮಾತು ತೆಗೆದರು. ಆದರೆ ಕನ್ಯೆಯ ಕಡೆಯವರಿಗೆ

ಒಳಗೆ ಭಯ. 'ಇವರು ವರದಕ್ಷಿಣೆಯ ವಿಚಾರವನ್ನೇ ಎತ್ತಲೊಲ್ಲರು. ಲಗ್ನದ ಮುಹೂರ್ತ ನೋಡುತ್ತಿದ್ದಾರೆ. ಎಲ್ಲಾ ಮುಗಿದ ಮೇಲೆ ಅಷ್ಟು ಕೊಡಿ, ಇಷ್ಟು ಕೊಡ ಅಂದ್ರೆ ಎಲ್ಲಿಂದ ತರ್ಬೇಕೊಂತ' ಅವರವರೇ ಗುಸುಗುಸು ಮಾತನಾಡಿಕೊಂಡರು. ಕಡೆಗೆ ಒಬ್ಬರು ಧೈರ್ಯಮಾಡಿ 'ಎಲ್ಲಾ ಸರಿ, ವರದಕ್ಷಿಣೆ ಎಷ್ಟು ಕೊಡಬೇಕು' ಎಂದು ಕೇಳಿಯೇಬಿಟ್ಟರು. ಆಗ ಶ್ರೀಯುತರು, 'ಯಾರಿಗಪ್ಪಾ ದಕ್ಷಿಣೆ. ನಮಗೆ ದೇವರು ಸಾಕಷ್ಟು ಕೊಟ್ಟಿದ್ದಾನೆ. ಬೇರೆಯವರ ಹಣ ಎಷ್ಟು ದಿನ ಬಂದೀತು. ನಾವು ನ್ಯಾಯವಾಗಿ ದುಡಿದದ್ದು ನಮಗೆ ಉಳಿದೀತೆ ಹೊರತು, ಮತ್ತೊಬ್ಬರದು ಉಳಿಯುವುದಿಲ್ಲ. ನಮಗೆ ಬೇಕಾಗಿರುವುದು ಕನ್ಯೆ. ನೀವು ಸಂತೋಷದಿಂದ ಧಾರೆ ಎರೆದುಕೊಡಬೇಕು. ಆಕೆ ನಮ್ಮ ಮನೆಯನ್ನು ಬೆಳಗಿಸಬೇಕು ಅಷ್ಟೇ' ಎಂದರಂತೆ. ಈ ಮಾತುಗಳಿಂದ ಬಂದವರೆಲ್ಲ ದಂಗಾಗಿ ಹೋದರು. ವರದಕ್ಷಿಣೆಯ ಹೆಸರೇ ಇಲ್ಲವೆಂದಾಗ ಅವರು ಕಿವಿಯನ್ನೇ ನಂಬದಾದರು.

ತಮ್ಮ ಮೊದಲನೆಯ ಮಗನಾದ ಸದಾಶಿವನ್‌ರವರಿಗೆ ಕನ್ಯೆ ಮಾಡಿಕೊಂಡಾಗಲೂ ಅಷ್ಟೇ. ಇವರೆಷ್ಟು ವರದಕ್ಷಿಣೆ ಕೇಳುತ್ತಾರೆಯೋ ಎಂದು ಬೀಗರು ಹೆದರಿದ್ದರಂತೆ. ಆದರೆ 'ನೀವು ಹೆಣ್ಣು ಹೆತ್ತವರು. ಮಗಳನ್ನು ಸಂತೋಷದಿಂದ ಆಶೀರ್ವದಿಸಿ ನಮ್ಮ ಮನೆಗೆ ಕಳಿಸಿಕೊಟ್ಟರೆ ಅದೇ ವರದಕ್ಷಿಣೆ' ಎಂಬಂತೆ ಕನ್ಯಾದಾತೃಗಳಿಗೇ ತೃಪ್ತಿಯಾಗುವಂತೆ ಉಡುಗೊರೆ ಕೊಟ್ಟು ಆನಂದಗೊಳಿಸಿದವರು ಇವರು.

■

## ಬಹುಮುಖ ವ್ಯಕ್ತಿತ್ವದ ಚನ್ನವೀರಪ್ಪಯ್ಯನವರು

ಚನ್ನವೀರಪ್ಪಯ್ಯನವರ ಜೀವನದ ಪುಟಗಳನ್ನು ತಿರುವಿ ನೋಡಿದರೆ ಅವರ ಬಹುಮುಖ ವ್ಯಕ್ತಿತ್ವದ ಪರಿಚಯವಾಗುತ್ತದೆ. ಇದಲ್ಲದೆ ಧರ್ಮ, ರಾಜಕೀಯ, ಶಿಕ್ಷಣ, ಸಮಾಜಸೇವೆ, ಸ್ನೇಹ ಸಂಬಂಧ, ಮಾನವೀಯತೆ, ಕುಟುಂಬಪ್ರೇಮ ಮುಂತಾದ ಬದುಕಿನ ಎಲ್ಲ ಅಂಗಗಳಲ್ಲಿ ಅವರ ಧೀಮಂತ ವ್ಯಕ್ತಿತ್ವದ ಪ್ರಭಾವ ಕಂಡುಬರುತ್ತದೆ. ಪರೋಕ್ಷವಾಗಿ ಬಹುಮುಖ ಸೇವೆ ಸಲ್ಲಿಸಿರುವ ಅಂಶ ವ್ಯಕ್ತವಾಗುತ್ತದೆ.

ಕರ್ನಾಟಕದ ರೂವಾರಿಯಾದ ಶ್ರೀ ಎಸ್. ನಿಜಲಿಂಗಪ್ಪನವರು ದಿವಂಗತ ಚನ್ನವೀರಪ್ಪಯ್ಯನವರ ಸ್ಮರಣಾರ್ಥ ನಿರ್ಮಿಸಿದ ಕಲ್ಯಾಣ ಮಂಟಪದ ಉದ್ಘಾಟನೆಯ ಸಂದರ್ಭದಲ್ಲಿ ಅವರ ಪುತ್ರ ಸದಾಶಿವನ್‌ರವರಿಗೆ ಹೀಗೆ ಬರೆದಿದ್ದಾರೆ. "ಶ್ರೀಯುತರ ವ್ಯಕ್ತಿತ್ವವು ಘನತೆ, ಗಾಂಭೀರ್ಯದಿಂದ ಕೂಡಿತ್ತು. ಬಡವರಲ್ಲಿ ಅನುಕಂಪ, ಕರ್ತವ್ಯ

ಪರಾಯಣತೆ, ಔದಾರ್ಯ, ಅಚ್ಚುಕಟ್ಟುತನ, ಪ್ರಾಮಾಣಿಕತೆ, ಶ್ರದ್ಧೆ, ಅತಿಥಿ ಸತ್ಕಾರ ಮುಂತಾದ ಸದ್ಗುಣಗಳು ಅವರಲ್ಲಿ ಮನೆಮಾಡಿದ್ದವು". ಕರ್ನಾಟಕದ ಮಾಜಿ ಆರೋಗ್ಯ ಸಚಿವ ಮಾರ್ಗದ ಮಲ್ಲಪ್ಪನವರು ಉಲ್ಲೇಖಿಸಿರುವಂತೆ ಶ್ರೀಯುತರು 'ಪ್ರಾಮಾಣಿಕ ದುಡಿಮೆ, ಸಮಾಜಸೇವೆ, ಸಹೃದಯತೆ, ಸ್ನೇಹಪರತೆ, ವಿಶಾಲಮನೋಭಾವನೆ' ಮೊದಲಾದ ಸದ್ಗುಣಗಳ ಆಗರವಾಗಿದ್ದರು. ಕರ್ನಾಟಕದ ಮಾಜಿ ಮುಖ್ಯಮಂತ್ರಿಗಳಾದ ಶ್ರೀ ವೀರೇಂದ್ರ ಪಾಟೀಲರು 'ಉದಾರ ಹೃದಯಿಗಳೂ, ಜನಪ್ರಿಯ ದಾನಿಗಳೂ ಮತ್ತು ಇಡಿ ಕರ್ನಾಟಕದಲ್ಲಿಯ ಎಲ್ಲಾ ಒಳ್ಳೆಯ ಕೆಲಸಗಳಿಗೂ ಪ್ರೋತ್ಸಾಹಿಸಿದವರೂ' ಆಗಿದ್ದರು ಎಂದು ಶ್ರೀ ಚನ್ನವೀರಪ್ಪಯ್ಯನವರನ್ನು ಕುರಿತು ವರ್ಣಿಸಿರುವರು.

■

## ಸಮಾಜದ ಪ್ರತಿಷ್ಠಿತ ವ್ಯಕ್ತಿ

ಶ್ರೀಯುತರ ಅನೇಕ ವಿಧವಾದ ಸಮಾಜಸೇವೆಯಿಂದಲೂ, ಶ್ರೇಷ್ಠ ವ್ಯಕ್ತಿತ್ವದಿಂದಲೂ ಸಂತೋಷಗೊಂಡ ಮೈಸೂರಿನ ಆಗಿನ ಅರಸರಾಗಿದ್ದ ನಾಲ್ಮಡಿ ಕೃಷ್ಣರಾಜ ಒಡೆಯರು, ಇವರಿಗೆ ಬಂಗಾರದ ಪದಕ ನೀಡಿ, ಗೌರವಿಸಿದ್ದರು. ಈ ಮಹನೀಯರು ಅನೇಕ ಸಂಘ-ಸಂಸ್ಥೆಗಳಿಗೆ ಅವ್ಯಾಹತವಾಗಿ ಹಣದ ನೆರವು ನೀಡುತ್ತಿದ್ದರು. ಜಯದೇವ ಹಾಸ್ಟೆಲ್‌ಗೆ ೧೯೪೦ ರಲ್ಲಿ ಉದಾರ ಧನಸಹಾಯ ಮಾಡಿದರು. ಚಿತ್ರದುರ್ಗದ ಹಿಂದಿನ ಶ್ರೀಗಳವರಿಗೆ ಒಂದು ಸುಂದರವಾದ ಕಾರನ್ನು ಅರ್ಪಿಸಿದ್ದರು. ೧೯೪೬ ರಲ್ಲಿ ಶಿವಮೊಗ್ಗಾದಲ್ಲಿ ನಡೆದ ರಾಜ್ಯಮಟ್ಟದ ವೀರಶೈವ ಧರ್ಮಸಮ್ಮೇಳನದ ಅಧ್ಯಕ್ಷರನ್ನಾಗಿ ಮಾಡಿ ಇವರನ್ನು ಜನತೆ ಗೌರವಿಸಿತು. ಆಗಿನ ಮಂತ್ರಿಗಳಾಗಿದ್ದ ಎಲ್. ಸಿದ್ಧಪ್ಪನವರು, ಹೆಚ್. ಲಿಂಗಪ್ಪನವರು ಮುಂತಾದ ಗಣ್ಯರ ಬಲವಂತಕ್ಕೆ ಕಟ್ಟುಬಿದ್ದು ಅಧ್ಯಕ್ಷರಾದರು. ಏಕೆಂದರೆ ಅವರು ಏನಿದ್ದರೂ ಪರೋಕ್ಷವಾಗಿ ನಿಂತು ಸಹಾಯ, ಪ್ರೋತ್ಸಾಹಗಳನ್ನು ಮಾಡುತ್ತಿದ್ದರೇ ವಿನಃ ಯಾವುದಕ್ಕೂ ತಾವೇ ಮುಂದೆ ಹೋಗುತ್ತಿರಲಿಲ್ಲ. ರಾಜಕೀಯದಿಂದಂತೂ ಗಾವುದ ದೂರವಿರುತ್ತಿದ್ದರು. ರಾಜಕೀಯ ಕ್ಷೇತ್ರದಲ್ಲಿ ಅವರನ್ನೇ ಮುಂದಾಳಾಗಿಟ್ಟುಕೊಂಡು ಕೆಲಸ ಮಾಡಲು, ಜನತೆ ಅವರು ಹೇಳಿದಂತೆ ಕೆಲಸ ಮಾಡಲು ಬಯಸುತ್ತಿದ್ದರು. ಆದರೆ ಶ್ರೀಯುತರೆಂದೂ ಅದರಲ್ಲಿ ಸಿಕ್ಕಿ ಹಾಕಿಕೊಳ್ಳಲಿಲ್ಲ. ಈ ವಿಷಯವು, ಚನ್ನವೀರಪ್ಪಯ್ಯನವರ ಸಮಕಾಲೀನರೂ ಕುರುಬ ಜನಾಂಗದ ಗಣ್ಯರೂ, ಬೀರೂರಿನ ಮಾಜಿ ಪುರಸಭಾಧ್ಯಕ್ಷರೂ ಆದ, ಎನ್.ಟಿ. ಮರಿಯಪ್ಪನವರು ಉಲ್ಲೇಖಿಸಿರುವ ಅಂಶಗಳಿಂದ ಸಾಬೀತಾಗುತ್ತದೆ. ಒಮ್ಮೆ ಊರಿನ ಮುಖಂಡರೆಲ್ಲಾ ಸೇರಿ ಶ್ರೀಯುತರನ್ನು ಪುರಸಭಾಧ್ಯಕ್ಷರಾಗಿ ಮಾಡಬೇಕೆಂದು ಮನವಿ

ಮಾಡಿಕೊಂಡರಂತೆ. ತಮಗೆ ರಾಜಕೀಯ ಬೇಡವೆಂದು ಮನವಿಯನ್ನು ನಿರಾಕರಿಸಿದರಂತೆ. ಆದರೂ ಆ ಜನರೆಲ್ಲಾ ಸೇರಿ ಹೇಗೋ ಅವರ ಸಹಿ ಪಡೆದು ಅರ್ಜಿ ಹಾಕಿದರಂತೆ. ಆದರೆ ಚುನಾವಣೆಯ ಸಲುವಾಗಿ ಅವರು ಹೊರಗೆ ಕಾಲಿಡಲೇ ಇಲ್ಲ. ಆಶ್ಚರ್ಯವೆಂದರೆ ಜನರು ಎಲ್ಲರಿಗಿಂತ ಹೆಚ್ಚು ಮತಗಳನ್ನು ಅವರಿಗೇ ಹಾಕಿದ್ದರು. ಆದರೂ ಸಹ ಅವರು ಅಧ್ಯಕ್ಷ ಸ್ಥಾನ ಬೇಡವೇ ಬೇಡವೆಂದು ದೂರ ಉಳಿದುಬಿಟ್ಟರಂತೆ! ಹಾಗೆಂದು ಅವರಿಗೆ ರಾಜಕೀಯದಲ್ಲಿ ಆಸಕ್ತಿಯೇ ಇರಲಿಲ್ಲವೆಂದಲ್ಲ. ಎಲ್ಲಾ ವಿಚಾರಗಳನ್ನು ಇದ್ದಲ್ಲಿಂದಲೇ ಸೂಕ್ಷ್ಮವಾಗಿ ಗಮನಿಸುತ್ತಿದ್ದರು. ಅನೇಕ ರಾಜಕೀಯ ಮುಖಂಡರು ಇವರ ಮನೆಯಲ್ಲಿ ರಾಜಕೀಯ ವಿಚಾರಗಳನ್ನು ಚರ್ಚಿಸುತ್ತಿದ್ದರು. ಶ್ರೀಯುತರು ರಾಜಕೀಯದಲ್ಲಿ ಪರಿಶುದ್ಧತೆ, ನಿಸ್ವಾರ್ಥತೆಯನ್ನು ಅಪೇಕ್ಷಿಸುತ್ತಿದ್ದರು. ರಾಷ್ಟ್ರದ ಬಗ್ಗೆ ಅಪಾರವಾದ ಪ್ರೇಮವಿತ್ತು. ಶ್ರೇಷ್ಠ ರಾಜಕಾರಣಿಗಳಿಗೆ ಪ್ರೋತ್ಸಾಹವನ್ನೂ, ಸಲಹೆಯನ್ನೂ, ಸಹಕಾರವನ್ನೂ, ಉದಾರ ಧನಸಹಾಯವನ್ನೂ ಎಲೆಮರೆಯ ಕಾಯಿಯಂತೆ ಹಿನ್ನೆಲೆಯಲ್ಲಿ ಇದ್ದುಕೊಂಡೇ ಮಾಡುತ್ತಿದ್ದರು. ಅನೇಕ ರಾಜಕಾರಣಿಗಳು ಇವರ ಆಪ್ತರಿದ್ದರು. ಅವರಲ್ಲಿ ಶ್ರೀ. ಎಸ್. ನಿಜಲಿಂಗಪ್ಪನವರು, ಶ್ರೀ ಕೆ.ಜಿ. ಒಡೆಯರ ಹಾಗೂ ಇತ್ತೀಚಿನ ದಿನಗಳಲ್ಲಿ ಮಾರ್ಗದ ಮಲ್ಲಪ್ಪನವರನ್ನು ಇಲ್ಲಿ ಹೆಸರಿಸಬಹುದು. ಶ್ರೀ ನಿಜಲಿಂಗಪ್ಪನವರು ಸದಾಶಿವನ್‌ರವರಿಗೆ ಬರೆದ ಪತ್ರದಲ್ಲಿ, "ಸುಮಾರು ನಾಲ್ವತ್ತು ವರ್ಷಗಳಿಂದ ನಿಮ್ಮ ತಂದೆಯವರನ್ನು ಕಂಡು ವಿಚಾರವಿನಿಮಯ ಮಾಡುವ ಸದವಕಾಶಗಳು ದೊರೆತು ಅವರ ಸದ್ಗುಣಗಳು ನನ್ನ ಮನಸ್ಸನ್ನು ಸೆಳೆದಿದ್ದವು" ಎಂದು ಬರೆದಿದ್ದಾರೆ. ಕ್ರಿ.ಶ. ೧೯೫೬ ರಲ್ಲಿ ಅಂದಿನ ಲೋಕಸಭಾ ಸದಸ್ಯರಾಗಿದ್ದ ಕೆ.ಜಿ. ಒಡೆಯರ್ ಅವರು ಹೀಗೆ ಬರೆದಿದ್ದಾರೆ:

"As you might have gathered from the papers, this session of Parliament has been rather eventful and the changes of portfolios in the cabinet as well as changes of attitude towards men and matters has made it necessary for many of us to keep ourselves busy to understand at all. Even the Party affairs are taking shape in a move dynamic way and there are problems that are to be purposeful tackled. In short, we have all been made to concern ourselves of the Mysore affairs that are disturbed once again and this is very painful to all of us. We have only some influence but not power to set things there. We must hope for good sense to prevail with our more quarrel some

friends in the state legislature. I am writing all this to you fully well realizing that though you may not yourself be in active politics, there are men that matter who may need your wise counsel, and I expect that you will exert to the fullest measure you good offices in bringing about a State of rest if not harmony in our politics there." ಹೀಗೆ ಬರೆದಿರುವುದನ್ನು ನೋಡಿದರೆ, ಶ್ರೀಯುತರು ರಾಜಕೀಯದಿಂದ ಹೊರಗಿದ್ದುಕೊಂಡೇ, ರಾಜಕೀಯದ ಆಗುಹೋಗುಗಳನ್ನು ನಿರ್ಣಯಿಸುವಲ್ಲಿ ತಮ್ಮ ಮಹತ್ತರ ಪಾತ್ರ ವಹಿಸುತ್ತಿದ್ದರೆಂಬ ಅಂಶವು ವ್ಯಕ್ತವಾಗುತ್ತದೆ. ಹೀಗೆಯೇ, ಇನ್ನು ಎಷ್ಟೆಷ್ಟು ಸನ್ನಿವೇಶಗಳಲ್ಲಿ ರಾಜ್ಯದ ರಾಜಕೀಯ ಕ್ಷೇತ್ರದಲ್ಲಿನ ಸುವ್ಯವಸ್ಥೆಗೆ, ಒಳಿತಿಗೆ ಸಹಾಯಕರಾಗಿದ್ದರೋ ತಿಳಿಯದು. ಆಕಸ್ಮಾತ್ತಾಗಿ ದೊರೆತ ಈ ಒಂದು ಪತ್ರ ಈ ಅಂಶವನ್ನು ಬೆಳಕಿಗೆ ತಂದಿದೆ. ರಾಜಕೀಯ ಸ್ವಾರ್ಥ, ಭ್ರಷ್ಟಾಚಾರ, ಕುತಂತ್ರ, ಮೋಸ, ದ್ವೇಷಗಳು ಅವರಿಗೆ ಬಹಳ ಬೇಸರವನ್ನುಂಟು ಮಾಡುತ್ತಿದ್ದವು. ಹಾಗಾಗಿ ಯಾರೇ ಎಷ್ಟು ಪ್ರಯತ್ನ ಪಟ್ಟರೂ ಅವರೆಂದಿಗೂ ರಾಜಕೀಯದಲ್ಲಿ ಸಿಕ್ಕಿ ಹಾಕಿಕೊಳ್ಳಲಿಲ್ಲ. ಯಾರೇ ಬಂದರೂ ಧನಸಹಾಯ ಮಾಡುತ್ತಿದ್ದರು. ರಾಜಕೀಯದ ಬಗ್ಗೆ ಚರ್ಚಿಸುತ್ತಿದ್ದರು, ಸಲಹೆ ಸೂಚನೆಗಳನ್ನು ನೀಡುತ್ತಿದ್ದರು. ಆದರೆ ಯಾವ ಪಕ್ಷ ಯೋಗ್ಯ ಕೆಲಸ ಮಾಡುತ್ತಿತ್ತೋ, ಯಾವ ವ್ಯಕ್ತಿ ನ್ಯಾಯದಿಂದ ವರ್ತಿಸುತ್ತಿದ್ದನೋ ಅಂತಹ ವ್ಯಕ್ತಿಗೆ, ಆ ಪಕ್ಷಕ್ಕೆ ಶ್ರೀಯುತರ ಪೂರ್ಣ ಬೆಂಬಲ ಹಾಗೂ ಸಹಾಯ. ಇವರ ಬಳಿ ಸಹಾಯ ಕೋರಿ ಬಂದ ಯಾವ ಸಂಘ-ಸಂಸ್ಥೆಯೂ ಬರಿಗೈಲಿ ಹೋದುದಿಲ್ಲ. ಆದರೆ ಅನ್ಯಾಯದ ಕೆಲಸಗಳಿಗೆಂದೂ ಬೆಂಬಲವಿತ್ತವರಲ್ಲ. ಯಾರಿಗಾದರೂ ಒಳ್ಳೆಯದಾಗುತ್ತದೆಯೆಂದರೆ ಯಾವುದೇ ಸಂಸ್ಥೆ ಒಳ್ಳೆಯ ಕೆಲಸ ಮಾಡುತ್ತದೆಯೆಂದರೆ, ಶ್ರೀಯುತರ ಸಹಾಯಹಸ್ತ ಸಿದ್ಧವಿರುತ್ತಿತ್ತು. ಅವರೆಂದೂ ಜಾತಿ ಮತ ಭೇದ ಮಾಡಿದವರಲ್ಲ. ಕುರುಬ ಜನಾಂಗದ ಗಣ್ಯರಾದ ಬೀರೂರಿನ ಎನ್.ಟಿ. ಮರಿಯಪ್ಪನವರು 'ಅವರಲ್ಲಿ ಕೋಮು ಭಾವನೆ ಲವಲೇಶವಿರಲಿಲ್ಲ. ಹರಿಜನರನ್ನು ಕೂಡ ಏನಣ್ಣಾ, ಎಂದೇ ಸಂಭೋಧಿಸುತ್ತಿದ್ದ ಸರಳ, ಸೌಜನ್ಯತೆಯ ಸಾಕಾರಮೂರ್ತಿ. ಅವರ ಬಳಿ ಬಂದ ಯಾರೂ ನಿರಾಶೆಗೊಂಡು ಹೋದುದಿಲ್ಲ. ಧಾರ್ಮಿಕ – ಮದುವೆ ಇತ್ಯಾದಿ ಯಾವುದೇ ಶುಭ ಕಾರ್ಯಗಳಿಗೆ ಇಲ್ಲ ಎನ್ನದೆ ಸಹಾಯ ಮಾಡುತ್ತಿದ್ದ ಕೊಡುಗೈ ದೊರೆ ಅವರು. ಅಂತಹ ಮನೆತನ ಈ ನೆಲದಲ್ಲಿ ನೆಲಸಿರುವದು ಬೀರೂರಿನ ಸುಕೃತವೆನಿಸಬೇಕು ಎಂದು ತಮ್ಮ ಅನಿಸಿಕೆಯನ್ನು ವ್ಯಕ್ತಪಡಿಸಿದ್ದಾರೆ.

■

## ಜಾತ್ಯತೀತ ಮನೋಭಾವ

ಶ್ರೀಯುತರು ಅತೀ ಸಂಪ್ರದಾಯಸ್ಥ ಕುಟುಂಬದಲ್ಲಿ ಹುಟ್ಟಿದವರಾಗಿದ್ದರೂ, ಆಗಿನ ಕಾಲದಲ್ಲಿ ಜನರು ಅತ್ಯಂತ ಸೌಹಾರ್ದಯುತ ಭಾವನೆಗಳಿಂದ ತುಂಬಿದ್ದ ಕಾಲವಾಗಿದ್ದರೂ (೧೮೯೭-೧೯೭೦), (ಕೂಳಿಗೆ ಬಡತನವಿರಬಹುದು. ಆದರೆ ಕುಲಕ್ಕೆ ಬಡತನವೆ ಎಂದು ಜನರು ಹೇಳುತ್ತಿದ್ದ ಕಾಲ) ಇವರಲ್ಲಿ ಜಾತೀಯ ಭಾವನೆ ಲವಲೇಶವಿರಲಿಲ್ಲ. ಕೌಟುಂಬಿಕವಾಗಿ ಕೆಲವೊಂದು ಆಚರಣೆಗಳನ್ನು ಸಂಪ್ರದಾಯಗಳನ್ನು ಧರ್ಮಕ್ಕನುಗುಣವಾಗಿ ಆಚರಿಸುತ್ತಿದ್ದರಾದರೂ, ಸಾರ್ವಜನಿಕ ಜೀವನದಲ್ಲಿ ಜಾತೀಯವಾದ ಭಾವನೆಯನ್ನು ಎಂದೂ ತೋರಿಸಿದವರಲ್ಲ. ಒಳಿತಾದುದು ಎಲ್ಲೇ ಇದ್ದರೂ, ಯಾರಲ್ಲೇ ಇದ್ದರೂ ಮೆಚ್ಚಿ ಪ್ರೋತ್ಸಾಹಿಸುತ್ತಿದ್ದರು. ಕೆಡುಕಿನ ಗುಣ ತಮ್ಮವರಲ್ಲೇ ಇದ್ದರೂ ಸಹಿಸುತ್ತಿರಲಿಲ್ಲ. ಬಡವರು ಅಸಹಾಯಕರು ಯಾರೇ ಇರಲಿ ತಮ್ಮ ದೃಷ್ಟಿಗೆ ಬಿದ್ದರೆ ಕೈ ಬಿಡುತ್ತಿರಲಿಲ್ಲ. ಒಮ್ಮೆ ಮಂಗಳೂರಿಗೆ ಹೋಗಿದ್ದರಂತೆ. ಒಬ್ಬ ಹತ್ತು ವರ್ಷದ ಬಾಲಕ, "ಸ್ವಾಮಿ, ನನಗೇನಾದರೂ ಕೆಲಸ ಕೊಡಿ" ಎಂದು ದುಂಬಾಲು ಬಿದ್ದನಂತೆ. ಅವನ ಜಾತಿ, ಕುಲ, ಗೋತ್ರಗಳನ್ನೆಲ್ಲಾ ಕೇಳಿಕೊಂಡರು. ಅವನ ಬಗ್ಗೆ ಕನಿಕರವಾಯ್ತು. ಮನೆಗೆ ಕರೆದುಕೊಂಡು ಬಂದು, 'ಈ ಹುಡುಗ ಮನೆಯಿಂದ ಓಡಿ ಬಂದಿದ್ದಾನೆ. ಸ್ವಲ್ಪ ದಿನ ನಮ್ಮ ಮನೆಯಲ್ಲೇ ಇರುತ್ತಾನೆ. ಬ್ರಾಹ್ಮಣರ ಹುಡುಗ, ಹೆಸರು ವಾಮನ, ಎಂದು ಮಡದಿಗೆ ಹೇಳಿದರು. ಅವರ ಮಕ್ಕಳೊಂದಿಗೆ ಆಡಿಕೊಂಡು ಕೆಲವು ತಿಂಗಳು ಅವರ ಮನೆಯಲ್ಲೇ ಇದ್ದ. ಅವನ ತಂದೆ ತಾಯ್ಗಳನ್ನು ಪತ್ತೆ ಹಚ್ಚಿ ಅವನ ಊರಿಗೆ ಕಳಿಸಿಕೊಟ್ಟರು. ಆ ಹುಡುಗ ಹೋದ ಮೇಲೆ ಆ ಹುಡುಗ ಕ್ರಿಶ್ಚಿಯನ್ ಎಂದು ಅವನ ಹೆಸರು ಪಿಂಟೋ ಎಂದು ಮನೆಯವರಿಗೆಲ್ಲ ಗೊತ್ತಾದದ್ದು. ಆ ಹುಡುಗ ಮಾಂಸಾಹಾರಿ ಎಂದು ಮಡದಿಗೆ ಗೊತ್ತಾದರೆ ಮನೆಯಲ್ಲಿ ಅವನ ಸ್ಥಾನ ಬೇರೆಯಾಗಬಹುದೆಂದು ಪತ್ನಿಗೂ ಬೇಸರವಾಗಬಹುದೆಂದು ತಿಳಿದು, ಹುಡುಗನಿಗೂ ತೊಂದರೆಯಾಗದಂತೆ, ಹೆಣ್ಣುಮಕ್ಕಳಿಗೂ ಬೇಜಾರಾಗದಂತೆ ತಮ್ಮ ಜಾತಿಯ ವಿಶಾಲಭಾವನೆಗೂ ಚ್ಯುತಿ ಬಾರದಂತೆ, ಕೆಲಸ ನಿರ್ವಹಿಸಿದ್ದರು : ಶ್ರೀಯುತರು ಸಹಾಯಕ್ಕಾಗಿ ಬಂದ ಅನೇಕ ಕ್ರೈಸ್ತ ಸಂಸ್ಥೆಗಳಿಗೂ ಧಾರಳವಾಗಿ ಧನ ಸಹಾಯ ಮಾಡಿದ್ದಾರೆ. ಒಮ್ಮೆ ಜೈನ ಮುನಿಗಳೊಬ್ಬರು ಬೀರೂರಿಗೆ ತಮ್ಮ ಪರಿವಾರ ಸಮೇತ ಬಂದು ಬಿಡಾರ ಮಾಡಿದ್ದರು. ಶ್ರೀಯುತರು ಆ ಮುನಿಗಳನ್ನು ಪರಿವಾರ ಸಮೇತ ಆಹ್ವಾನಿಸಿ, ಗೌರವಿಸಿ ಗಂಟೆಗಳ ಕಾಲ ಜೈನ ಧರ್ಮದ ಬಗ್ಗೆ ಅವರೊಡನೆ ಚರ್ಚಿಸಿದರು. ಮಡದಿ ಮಕ್ಕಳೆಲ್ಲರೂ ಗುರುಗಳಿಗೆ ನಮಸ್ಕರಿಸಿ, ಆಶೀರ್ವಾದ ಪಡೆದರು. ನಂತರ ಮುನಿಗಳಿಗೆ ಸಾಕಷ್ಟು ಕಾಣಿಕೆ ಇತ್ತು ಬೀಳ್ಕೊಟ್ಟರು.

ಹೀಗೆ ಅವರು ತಮ್ಮ ಜಾತಿಯ ಬಗ್ಗೆ ಅಭಿಮಾನವಿಟ್ಟುಕೊಂಡೂ, ಎಲ್ಲಾ ಜಾತಿಯನ್ನು ಗೌರವ ಭಾವದಿಂದ ಕಾಣುತ್ತಿದ್ದರು.

ಇವರು ಆಡಳಿತದಲ್ಲಿಯೂ ತಮ್ಮ ದಕ್ಷತೆಯನ್ನು ತೋರಿಸಿದ್ದಾರೆ. ಮೈಸೂರು ಕಾಫಿ ಕ್ಯೂರಿಂಗ್ ವರ್ಕ್ಸ್‌ನ ನಿರ್ದೇಶಕರಾಗಿ ಇಂದಿನ ರೆಂಕೋ ಸಂಸ್ಥೆಯಾದ ಹಿಂದಿನ "ಎರಮೆಕ್" ಎಂದು ಕರೆಯಲ್ಪಡುತ್ತಿದ್ದ ಸಂಸ್ಥೆಯ ನಿರ್ದೇಶಕರಾಗಿಯೂ ಪ್ರಶಾಂಸಾರ್ಹ ಸೇವೆ ಸಲ್ಲಿಸಿ ಕೀರ್ತಿಗಳಿಸಿದರು.

■

## ನ್ಯಾಯ ನಿಷ್ಠುರಿ, ದಾಕ್ಷಿಣ್ಯಪರನಲ್ಲ

ಇವರ ತೋಟದ ಪಕ್ಕದ ತೋಟ ತೊಗರಿ ಹಂಕಲು ಕೋರ್ಟಿನ ತಕರಾರಿನಲ್ಲಿ ಸಿಲುಕಿ ಬಿತ್ತು. ಆಪ್ತರೆಲ್ಲಾ ಸೇರಿ ಅದಕ್ಕೆ ಒಬ್ಬ ನಿರ್ವಾಹಕರನ್ನು ನೇಮಿಸಬೇಕೆಂದು ತೀರ್ಮಾನಿಸಿ ಗಣ್ಯರೂ ದೊಡ್ಡ ಕಾಫೀ ಪ್ಲಾಂಟರರೂ ಆದ ಶ್ರೀ ನಿರ್ವಾಣಪ್ಪ ಶೆಟ್ಟರ ಸಲಹೆ ಕೇಳಿದರು. ಅವರು ಪತ್ರೆ ಚನ್ನವೀರಪ್ಪಯ್ಯನವರ ಆಪ್ತಸ್ನೇಹಿತರು. ಪತ್ರೆಯವರ ದಕ್ಷತೆ, ಪ್ರಾಮಾಣಿಕತೆಗಳ ಬಗೆಗೆ ಸಂಪೂರ್ಣ ಪರಿಚಯವಿದ್ದವರು. ಆಸ್ತಿಯೂ ಹೋಗಬಾರದು. ಸುವ್ಯವಸ್ಥಿತವಾಗಿಯೂ ಉಳಿಯಬೇಕೆಂದರೆ ಆ ಜವಾಬ್ದಾರಿಯನ್ನು ಪತ್ರೆ ಚನ್ನವೀರಪ್ಪಯ್ಯನವರಿಗೆ ಒಪ್ಪಿಸಬೇಕೆಂದು ಸಲಹೆ ಮಾಡಿದರು. ಮತ್ತು ಅದರಂತೆ ಶ್ರೀಯುತರನ್ನು ಆ ತೋಟಕ್ಕೆ ನಿರ್ವಾಹಕರನ್ನಾಗಿ ನೇಮಿಸಿದರು. ಆದರೆ ಕೆಲವು ಕುತಂತ್ರಿಗಳಿಗೆ ಇದು ಸರಿಬೀಳಲಿಲ್ಲ. ಏಕೆಂದರೆ "ತಾಮ್ರದ ಬಿಲ್ಲೆ ತಾಯಿ ಮಕ್ಕಳನ್ನು ಅಗಲಿಸಿತಂತೆ". ಎಂತೆಂತಹ ಆದರ್ಶವಾದಿಗಳೋ ಹಣದ ಪ್ರಶ್ನೆ ಬಂದಾಗ ಅತೀ ಮೋಸಗಾರರಾಗಿ ಅತೀ ಕ್ಷುಲ್ಲಕವಾಗಿ ವರ್ತಿಸಿರುವ ಉದಾಹರಣೆಗಳೇ ಲೋಕದ ತುಂಬೆಲ್ಲತುಂಬಿದೆ. ಅಣ್ಣನಿಗೆ ತಮ್ಮನ ಮೋಸ ಅಥವಾ ತಮ್ಮನಿಗೆ ಅಣ್ಣನ ಮೋಸ. ಮಕ್ಕಳು ತಂದೆ ತಾಯ್ಗಳನ್ನು ಹಣಕ್ಕಾಗಿ ಹೀನಾಯ ಮಾಡಿರುವ ಘಟನೆಗಳು ಲೆಕ್ಕವಿಲ್ಲದಷ್ಟು. ಹಣಕ್ಕಾಗಿ, ಆಸ್ತಿಗಾಗಿ ತಮ್ಮ ಏಳ್ಗೆಗೆ ಕಾರಣರಾದವರಿಗೆ ತಮಗಾಗಿ ಸರ್ವ ತ್ಯಾಗ ಮಾಡಿದವರಿಗೆ ಸಹ ಮೋಸ ಮಾಡುತ್ತಾರೆ. ಎಂತಹ ಒಳ್ಳೆಯವರನ್ನೂ ಹಣ ಕೆಳಮಟ್ಟಕ್ಕೆ ಇಳಿಸಿ ಬಿಡುತ್ತದೆ. ಇದು ಜನಸಾಮಾನ್ಯರ ರೀತಿ. ಆದುದರಿಂದ ಚನ್ನವೀರಪ್ಪಯ್ಯನವರೂ ಸಹ ತಮ್ಮ ತೋಟದ ಪಕ್ಕದಲ್ಲೇ ಇರುವ ಈ ತೋಟವನ್ನು ಕಬಳಿಸಬಹುದೆಂದು ಕ್ಷುಲ್ಲಕರು ಬಗೆದರು. ತೋಟದ ಜವಾಬ್ದಾರಿಯನ್ನು ವಹಿಸಿ ಕೊಟ್ಟರೆ, ತೋಟ ಹಾಳು ಮಾಡಿ ನಷ್ಟವಾಗುವಂತೆ ಮಾಡಿ, ಕೊನೆಗೆ ತಾವೇ ನುಂಗಿ ಹಾಕಬಹುದೆಂದು ತರ್ಕಿಸಿ ಇವರು ತಾವಾಗಿಯೇ ನಿರ್ವಾಹಕ ಕೆಲಸವನ್ನು ಬಿಟ್ಟು ಬಿಡಲಿ ಎಂದು

ಸಾಕಷ್ಟು ಕಿರುಕುಳ ಕೊಟ್ಟರು. ಆಗ ಶ್ರೀಯುತರು ತಮ್ಮನ್ನು ನಂಬಿ ಜನ ಆ ಜವಾಬ್ದಾರಿಯನ್ನು ಹೊರಿಸಿರುವಾಗ, ಏನೇ ಕಷ್ಟಬಂದರೂ ಸಹಿಸಿ ತಮ್ಮ ಕರ್ತವ್ಯ ನಿರ್ವಹಿಸಬೇಕೆಂದು ದೃಢ ಸಂಕಲ್ಪ ಮಾಡಿದರು. ವ್ಯವಸ್ಥಿತವಾಗಿ ಜವಾಬ್ದಾರಿಯನ್ನು ನಿರ್ವಹಿಸಿ, ತೋಟದ ಮೇಲಿದ್ದ ಸಾಲವನ್ನು ತೀರಿಸಿದರು. ತೋಟದ ಸ್ಥಿತಿಯನ್ನು ಉತ್ತಮಗೊಳಿಸಿ, ಮಾಲಿಕರಿಗೆ ಅವರ ಆಸ್ತಿಯನ್ನು ಹಿಂದಿರುಗಿಸಿದರು. ಆಗ ಇವರ ಬಗೆಗೆ ತಪ್ಪು ಭಾವನೆ ಮಾಡಿಕೊಂಡಿದ್ದ ಮಾಲೀಕರೂ ಪಶ್ಚಾತ್ತಾಪ ಪಟ್ಟುಕೊಂಡರಂತೆ! ಅಲ್ಲದೆ 'ಪತ್ರೆಯವರೇ ಅಲ್ಲದೆ ಇನ್ನ್ಯಾರ ಕೈಲಾದರೂ ಆಸ್ತಿ ಸಿಕ್ಕಿದ್ದರೆ ನಾವು ಮುಳುಗಿ ಹೋಗುತ್ತಿದ್ದೆವು' ಎಂದು ಮಾಲಿಕರ ಮಕ್ಕಳು ಇಂದಿಗೂ ನೆನೆಯುತ್ತಾರೆ. ಈ ರೀತಿ ಪತ್ರೆ ಚನ್ನವೀರಪ್ಪಯ್ಯನವರು ಕೊಟ್ಟ ಮಾತಿನಂತೆ ಬೇರೆಯವರ ತೋಟವನ್ನು ಉತ್ತಮ ಪಡಿಸಿ ಬೆಲೆಬಾಳತಕ್ಕ ಆಸ್ತಿಯನ್ನು ತಾವು ಮೋಸಗೊಳಿಸಲು ಸಾಧ್ಯವಿದ್ದರೂ ಪ್ರಾಮಾಣಿಕತೆಯಿಂದ ಹಿಂತಿರುಗಿಸಿದುದು ಅವರ ನ್ಯಾಯನೀತಿ, ಕರ್ತವ್ಯದಕ್ಷತೆ, ಪ್ರಾಮಾಣಿಕತೆ ಮುಂತಾದ ಮೌಲ್ಯಗಳ ಸಾಕಾರ ಮೂರ್ತಿಯಾಗಿದ್ದರು ಎನ್ನುವುದಕ್ಕೆ ಸಾಕ್ಷಿಯಾಗಿದೆ.

■

## ಕಾಯಕ ನಿಷ್ಠೆ – ಸೇವಾನಿರತ

ಇವರ ನಡೆ–ನುಡಿಗಳು ಭಾರತೀಯರಿಂದಷ್ಟೇ ಮೆಚ್ಚುಗೆ ಪಡೆದಿರಲಿಲ್ಲ. ಅವರ ಆಂಗ್ಲ ಸ್ನೇಹಿತರು ಶ್ರೀಯುತರ ಬಗ್ಗೆ ಅಪಾರವಾದ ಮೆಚ್ಚುಗೆ, ಪ್ರೀತಿಯನ್ನಿಟ್ಟುಕೊಂಡಿದ್ದರು. ಇವರ ಕಾಫೀ ತೋಟವಾದ ಮಂಡಲಖಾನನ್ನು ಬಹಳ ಉತ್ತಮ ಸ್ಥಿತಿಯಲ್ಲಿಟ್ಟಿದ್ದರು. ನೆರೆಹೊರೆಯಲ್ಲೆಲ್ಲಾ ಈ ತೋಟ ಪ್ರಸಿದ್ಧಿ ಪಡೆದಿತ್ತು. ಈ ತೋಟದ ಪಕ್ಕದಲ್ಲೇ 'ಕೊತ್ತನಕೂಲ್' ಎಂಬ ತೋಟದ ಮಾಲಿಕರು ಆಂಗ್ಲರಾಗಿದ್ದರು. ಇವರಿಬ್ಬರೂ ಆಪ್ತಗೆಳೆಯರು ಮಿ. ಕಾರ್‌ರವರು ಇವರ ಮನೆಗೆ ಊಟಕ್ಕೆ ಬರುತ್ತಿದ್ದರು. ಇವರ ಮನೆಯ ಹೋಳಿಗೆ ಸೀಕರಣೆ ಕಾರ್‌ರವರಿಗೆ ಬಹು ಪ್ರೀತಿ. ಇಬ್ಬರ ಗೆಳೆತನ ಅನೇಕ ವರ್ಷಗಳವರಗೆ ಅವ್ಯಾಹತವಾಗಿತ್ತು. ಕಾರ್‌ರವರಿಗೆ ಇನ್ನೂ ಅನೇಕ ಪ್ಲಾಂಟರುಗಳ ಸ್ನೇಹವಿದ್ದರೂ, ಪತ್ರೆಯವರ ಬಗ್ಗೆ ತುಂಬಾ ಮೆಚ್ಚುಗೆ. ಆತ ಸ್ವದೇಶಕ್ಕೆ ಹಿಂತಿರುಗುವಾಗ ನಿರ್ವಾಹವಿಲ್ಲದೆ ಕೊತ್ತನಕೂಲ್ ತೋಟವನ್ನು ಮಾರಬೇಕಾದ ಪ್ರಸಂಗ ಬಂದಿತು. ಅನೇಕರಿಗೆ ಈ ಲಾಭದಾಯಕವಾದ ತೋಟದ ಮೇಲೆ ಕಣ್ಣಿತ್ತು. ಎಲ್ಲರೂ ಈ ತೋಟವನ್ನು ತಮ್ಮದನ್ನಾಗಿಸಿಕೊಳ್ಳಲು ಸಾಕಷ್ಟು ಪ್ರಯತ್ನಪಟ್ಟರು. ಆದರೆ ಕಾರ್‌ರವರು ಪತ್ರೆಯವರಿಗೆ ಕಾಫಿ ಬೆಳೆಯ ಬಗ್ಗೆ ಇದ್ದ ತಿಳಿವಳಿಕೆ, ಆಸಕ್ತಿ, ಜಾಣ್ಮೆಯನ್ನು ಅರಿತಿದ್ದರು. ತಮ್ಮ ತೋಟವನ್ನು

'ಇವರ ಕೈಗೆ ಕೊಟ್ಟರೆ ಮಾತ್ರ ತಾವಿಟ್ಟುಕೊಂಡಂತೆ ಇಟ್ಟುಕೊಳ್ಳುತ್ತಾರೆ. ಇನ್ನಾರಿಂದಲೂ ಸಾಧ್ಯವಿಲ್ಲ'ವೆಂದು ತಿಳಿದಿದ್ದ ಕಾರ್‌ರವರು 'ನಾನು ತೋಟ ಮಾರಿದರೆ ಮಿ. ಪತ್ರೆಯವರಿಗೆ ಮಾರುತ್ತೇನೆ'. ಇಲ್ಲವಾದರೆ ಸರಕಾರಕ್ಕೆ ಒಪ್ಪಿಸುತ್ತೇನೆ' ಎಂದು ಹೇಳಿ ಒತ್ತಾಯವಾಗಿ ಪತ್ರೆಯವರಿಗೇ ೧೯೨೭ ರಲ್ಲಿ ತಮ್ಮ ತೋಟವನ್ನು ಒಂದು ಲಕ್ಷ ಎಪ್ಪತ್ತೈದು ಸಾವಿರಕ್ಕೆ ಮಾರಿದರಂತೆ. ಹೀಗೆ ಪತ್ರೆಯವರು ಕೆಲವರನ್ನು ಮಾತ್ರ ತಮ್ಮ ಆಪ್ತರನ್ನಾಗಿ ಆರಿಸಿಕೊಳ್ಳುತ್ತಿದ್ದರು. ಸ್ನೇಹಿತರನ್ನಾಗಿ ಆರಿಸಿಕೊಂಡರೆ ಮುಗಿಯಿತು. ಕೊನೆಯತನಕ ಆತ್ಮೀಯತೆಯನ್ನು ಉಳಿಸಿಕೊಳ್ಳುತ್ತಿದ್ದರು. ಯಾರಿಗೂ, ಎಂದಿಗೂ, ಯಾವ ವಿಚಾರಕ್ಕೂ ಮೋಸ ಮಾಡಿದವರಲ್ಲ. ಬಡವರನ್ನು ನೋಯಿಸಿದವರಲ್ಲ, ಶೋಷಿಸಿದವರಲ್ಲ, ಅನ್ಯಾಯದಿಂದ ಆಸ್ತಿ ಗಳಿಸಿದವರಲ್ಲ. ಯಾರಲ್ಲೂ ವೈಷಮ್ಯ ಕಟ್ಟಿಕೊಂಡವರಲ್ಲ. ತರಲೆ, ತಕರಾರು ಕೋರ್ಟು-ಕಛೇರಿ ವ್ಯವಹಾರಗಳಲ್ಲಿ ತಾವೇ ಕೈಯಿಂದ ಕಳೆದುಕೊಂಡು, ಬರಬೇಕಾದುದನ್ನು ಒಮ್ಮೊಮ್ಮೆ ಬಿಟ್ಟುಕೊಟ್ಟು, ತೀರ್ಮಾನ ಮಾಡಿಕೊಂಡು ಬಿಡುತ್ತಿದ್ದರೇ ವಿನಃ ಯಾರೊಡನೆಯೂ ಜಿದ್ದು ಕಟ್ಟಿಕೊಂಡು ಪ್ರತೀಕಾರ ಮನೋಭಾವದಿಂದ ದ್ವೇಷ ಸಾಧಿಸುತ್ತಿರಲಿಲ್ಲ. ಇವರ ಚಿಕ್ಕಪ್ಪನವರಾದ ವೀರಪ್ಪಯ್ಯನವರು ಶಿವಾಧೀನರಾದಾಗ (ಹಿರಿಯ ಪೀಳಿಗೆಯ ಕೊನೆಯವರು) ಅವರ ಉತ್ತರ ಕ್ರಿಯಾದಿ ಮಾಡಿದ ದಿನ ಶ್ರೀಯುತರು ತಮಗೆ ಬರಬೇಕಾಗಿದ್ದ ಒಂದು ಲಕ್ಷೂ ಮೀರಿದ ಸಾಲದ ಹಣವನ್ನು ಆಯಾ ಜನರಿಗೆ ಮುಫತ್ತಾಗಿ ಬಿಟ್ಟು ಆಯಾ ಜನರಿಗೆ ಸಾಲ ಪತ್ರಗಳನ್ನು ವಾಪಸ್ಸು ಕೊಟ್ಟುಬಿಟ್ಟರೆಂದು ಅವರ ಸಮಕಾಲೀನರಾದ ಎನ್.ಟಿ. ಮರಿಯಪ್ಪನವರು ಹೇಳುತ್ತಾರೆ. ಇಂತಹ ಅಪರೂಪದ ಹೃದಯವಂತಿಕೆಯನ್ನು ಶ್ರೀ ಚನ್ನವೀರಪ್ಪಯ್ಯನವರಲ್ಲಿ ಕಾಣಬಹುದಿತ್ತು.

■

## ಧೀಮಂತ ವ್ಯಕ್ತಿತ್ವ

ಶ್ರೀ ಚನ್ನವೀರಪ್ಪಯ್ಯನವರು ನಿರ್ಭಯ ಸ್ವಭಾವದ ವ್ಯಕ್ತಿ. ಯಾವುದಕ್ಕೂ ಭಯಗೊಂಡವರಲ್ಲ. ಕಷ್ಟಗಳನ್ನು ಹೆದರಿಸಿ ಕಳಿಸುತ್ತಿದ್ದರೇ ವಿನಃ ಕಷ್ಟಗಳಿಗೆ ಇವರನ್ನು ಹೆದರಿಸಲಾಗಲಿಲ್ಲ. ಅರಸರ ಮನೆಯಂತಹ ಸಂಪತ್ತಿನ ಮನೆಯಲ್ಲಿ ಹುಟ್ಟಿದವರಾದರೂ ಹಿರಿಯರು ಇವರನ್ನು ಸುಖದ ಸುಪ್ಪತ್ತಿಗೆಯಲ್ಲಿ ಬೆಳೆಸಿರಲಿಲ್ಲ. ಯಾವುದಕ್ಕೂ ಕೊರತೆ ಇಲ್ಲದಿದ್ದರೂ ಸುಖಲೋಲುಪರಾಗಿ ಬೆಳೆಯಲಿಲ್ಲವಾಗಿ, ಕಷ್ಟ ಬಂದಾಗ ಎದೆಗುಂದದ ಮನೋಭಾವ ಬೆಳೆಸಿಕೊಂಡಿದ್ದರು. ಉತ್ತಮ ಮಾರ್ಗದರ್ಶನ, ಆದರ್ಶಗಳ ನಡೆ-ನುಡಿಯ ಪರಿಸರದಲ್ಲಿ ಬೆಳೆದಿದ್ದವರಾಗಿ, ಯಾವುದೇ ಸಂದರ್ಭದಲ್ಲೂ ಸಮತೋಲನವನ್ನು ಕಳೆದುಕೊಳ್ಳದೆ ಅತ್ಯಂತ ಸಮರ್ಪಕವಾದ ರೀತಿಯಲ್ಲಿ ಪರಿಸ್ಥಿತಿಯನ್ನು ತುಂಬಾ ವಿಚಕ್ಷತೆಯಿಂದ ಸರಿಯಾದ

ವಿಚಾರದಿಂದ ಎದುರಿಸಿ, ಸಮಸ್ಯೆಗಳನ್ನು ಪರಿಹರಿಸುವ ಚಾಕಚಕ್ಯತೆ ಇತ್ತು. ನೇರಮಾರ್ಗದಲ್ಲಿ ನಡೆಯುತ್ತಿದ್ದ ಇವರು ಯಾರಿಗೂ ಹೆದರುತ್ತಿರಲಿಲ್ಲ ಒಮ್ಮೆ ಹೊಸದಾಗಿ ಕಾಫಿ ತೋಟ ಕೊಂಡಾಗ, ಕೆಲವರಿಗೆ ಅಸಹನೆ ಉಂಟಾಯಿತು. ಇವರನ್ನು ಆ ತೋಟದಲ್ಲಿ ನಿಲ್ಲದಂತೆ ಮಾಡಿ, ಆ ತೋಟವನ್ನು ತಾವೇ ಕಬಳಿಸಬೇಕೆಂದು ಕೆಲವರು ಹೊಂಚು ಹಾಕಿ ತುಂಬಾ ಕಿರುಕುಳ ಕೊಟ್ಟರು. ರಾತ್ರಿ ತೋಟದ ಬಂಗಲೆಯಲ್ಲಿ ಮಲಗಿದ್ದಾಗ ಎಲ್ಲಿಂದಲೋ ಕಲ್ಲಿನ ಮಳೆ ಬಂಗಲೆಯ ಮೇಲೆ ಸುರಿಯುತ್ತಿದ್ದನ್ನು ಕಂಡು ಆಳುಗಳೂ ಹೆದರಿದರು. ಮಧ್ಯರಾತ್ರಿಯಲ್ಲಿ ಕಪ್ಪು ಮುಸುಕು ಧರಿಸಿದ ಆಕೃತಿಯೊಂದು ನಿತ್ಯವೂ ತೋಟದಲ್ಲಿ ಸಂಚರಿಸುವುದನ್ನು ನೋಡಿ, ಆಳುಗಳು ಹೌಹಾರಿ, ಸುದ್ದಿಯನ್ನು 'ಧಣಿ'ಗೆ ಮುಟ್ಟಿಸಿದರು. ವೈಜ್ಞಾನಿಕ ಮನೋಭಾವದ ಶ್ರೀಯುತರು 'ಇಲ್ಲಿ ದೆವ್ವ ಭೂತದ ಕಾಟವಿದೆಯೆಂದು ತಿಳಿದು, ಆಸ್ತಿಯನ್ನು ಆರಕ್ಕಿದ್ದುದನ್ನು ಮೂರಕ್ಕೆ ಮಾರಲಿ. ಆಗ ಅದನ್ನು ತಾವು ದಕ್ಕಿಸಿಕೊಳ್ಳಬೇಕೆಂದು' ಕೆಲವರ ಸಂಚೆಂಬುದನ್ನು ಕ್ಷಣಾರ್ಧದಲ್ಲಿ ಅರ್ಥಮಾಡಿಕೊಂಡು, ಪತ್ತೇದಾರಿ ಕಾದಂಬರಿ ರೀತಿಯಲ್ಲಿ ಅವರ ಚಿತಾವಣೆಗೆ ಪರದೆ ಎಳೆದು ವ್ಯವಹಾರ ಚಾತುರ್ಯ ತೋರಿದರಂತೆ.

ಹೊಟ್ಟೆಕಿಚ್ಚಿನ ಕೆಲವರು 'ಇವರನ್ನು ಕಡಿಸಿ ಹಾಕುತ್ತೇನೆ, ಕಾಲು ಮುರಿಸುತ್ತೇನೆ' ಎಂದು ಹೇಳಿಕೊಂಡು ಓಡಾಡುತ್ತಿದ್ದರಂತೆ. ಆಗ ಶ್ರೀಯುತರು ಒಂದು ದಿನ ಬೆಳಿಗ್ಗೆ ಕುದುರೆ ಏರಿ, ಬಂದೂಕು ಹಿಡಿದುಕೊಂಡು ಅವರ ಮನೆಗಳಿಗೆ ಹೋದರಂತೆ. ಬಾಗಿಲಲ್ಲಿ ನಿಂತು 'ನಿನಗೆ ಧೈರ್ಯವಿದ್ದರೆ ಹೊರಗೆ ಬಾ, ಕೊಲ್ಲುವಂತಿದ್ದರೆ ಕೊಲ್ಲು. ಕಾಲು ಮುರಿಯುವಂತಿದ್ದರೆ ಮುರಿ. ಇಲ್ಲದಿದ್ದರೆ ನನ್ನ ಗುಂಡಿನ ರುಚಿನೋಡು' ಎಂದು ಆಹ್ವಾನಿಸಿದಾಗ, ವಿರೋಧಿಗಳ ಮನೆಯವರೆಲ್ಲಾ ತತ್ತರಿಸಿ ಹೋದರಂತೆ. ಕ್ಷಮೆಯಾಚಿಸಿದ ಅವರು ಮುಂದೆ ಅಂತಹ ಪೊಳ್ಳು ಬೆದರಿಕೆಯ ಮಾತುಗಳಿಗೆ ಮಂಗಳ ಹಾಡಿದರಂತೆ. ಕುದುರೆ ಸವಾರಿ ಮತ್ತು ಬೇಟೆಯಲ್ಲಿ ಶ್ರೀಯುತರಿಗೆ ತುಂಬಾ ಆಸಕ್ತಿ. ಸೊಗಸಾದ ಎರಡು ಅರೇಬಿಯನ್ ಕುದುರೆಗಳನ್ನಿಟ್ಟುಕೊಂಡಿದ್ದರು. ತೋಟದಲ್ಲಿದ್ದ ದನ ಕರುಗಳಿಗೆ ತೊಂದರೆಕೊಡುತ್ತಿದ್ದ ಎರಡು ಹುಲಿಗಳನ್ನು ಬೇಟೆಯಾಡಿದ್ದರು. ಪ್ರವಾಸಪ್ರಿಯರು. ವಿದೇಶಗಳಲ್ಲೂ ಪ್ರವಾಸ ಮಾಡಿ ಬಂದಿದ್ದರು.

■

## ಸೇವಕರಿಗೆ ಪ್ರಿಯವಾದ ಧಣಿ

ಒಮ್ಮೆ ಚನ್ನವೀರಪ್ಪಯ್ಯನವರು ಕಾರಿನಲ್ಲಿ ಎಸ್ಟೇಟಿಗೆ ಹೋಗುತ್ತಿರುವಾಗ ಕಾರಿನ ಎದುರಿಗೆ ದೊಡ್ಡ ಹುಲಿಯೊಂದು ದಾರಿಯಲ್ಲಿ ಅಡ್ಡ ಬಂದು ನಿಂತಿತಂತೆ.

ಕಾರಿನಲ್ಲಿದ್ದ ಡ್ರೈವರ್ ಹಾಗೂ ಅವರ ಮಿತ್ರರ ಜಂಘಾಬಲವೇ ಉಡುಗಿ ಹೋಯಿತಂತೆ. ಆಗ ಶ್ರೀಯುತರು ಡ್ರೈವರ್‌ಗೆ ಕಾರು ನಿಲ್ಲಿಸಲು ಹೇಳಿ ಕೆಳಗಿಳಿದರು. ಡ್ರೈವರ್ ಎಷ್ಟು ತಡೆದರೂ 'ಅದು ತಾನಾಗಿಯೇ ಏನು ಮಾಡುವುದಿಲ್ಲ ತಮ್ಮಾ, ನೀನು ಸುಮ್ಮನಿರು. ಈ ದಿನ ಕೋವಿ ತಂದಿದ್ದರೆ ಚೆನ್ನಾಗಿತ್ತು' ಎಂದು ಹೇಳುತ್ತಾ ಹುಲಿಗೆ ಎಂಟು ಹತ್ತು ಅಡಿ ದೂರದಲ್ಲಿ ಹೋಗಿ ನಿಂತರಂತೆ. ಅವರ ಧೈರ್ಯ ನೋಡಿದ ಹುಲಿಯೇ ಹೆದರಿರಬೇಕು. ಅದು ಕಾಡಿನಲ್ಲಿ ಸರಿದು ಮರೆಯಾಯಿತಂತೆ. ಅದು ಹೋದ ಕಡೆಯೇ ಅದನ್ನು ಹಿಂಬಾಲಿಸಿ ಸ್ವಲ್ಪ ದೂರ ಹೋದರಂತೆ. ನಂತರ ಹಿಂದಿರುಗಿ ಕಾರಿನ ಬಳಿ ಬಂದರು. ಅಲ್ಲಿಯತನಕ ಕಾರಲ್ಲಿ ಇದ್ದವರು ಉಸಿರು ಬಿಗಿಹಿಡಿದು ಕುಳಿತಿದ್ದರಂತೆ. ಈ ಮಾತನ್ನು ಅವರ ಡ್ರೈವರ್ ಎಲ್ಲಪ್ಪ, ಘಟನೆ ಆಗತಾನೆ ನಡೆದಿದೆಯೆಂಬಂತೆ ರೋಮಾಂಚನಗೊಂಡು ಹೇಳುತ್ತಿದ್ದನು. ಎಲ್ಲಪ್ಪ ಶ್ರೀಯುತರ ಬಳಿ ಹದಿನಾರು ವರ್ಷಗಳ ಸತತ ಸೇವೆ ಮಾಡಿದನು. ಆತ ತನ್ನ ಧಣಿಗೆ ಬಹು ಭಯ ಭಕ್ತಿಯಿಂದ, ನಯ ವಿನಯದಿಂದ, ನಡೆದುಕೊಳ್ಳುತ್ತಿದ್ದನು. ತಮ್ಮ ಪರಿವಾರದ ಪರಿಧಿಯಲ್ಲಿ ಬಂದ ಪ್ರತಿಯೊಬ್ಬರನ್ನು ಅತ್ಯಂತ ಪ್ರೀತಿಯಿಂದ, ಆತ್ಮೀಯತೆಯಿಂದ ಕಾಣುತ್ತಿದ್ದುದೇ ಚನ್ನವೀರಪ್ಪಯ್ಯನವರ ಜನಪ್ರಿಯತೆಗೆ ಕಾರಣ. ಅವರು ಒಮ್ಮೊಮ್ಮೆ ಸಿಟ್ಟು ಮಾಡುತ್ತಿದ್ದರೂ ಬೇರೆಯವರು ತಪ್ಪು ಮಾಡಿದಾಗ ಮಾತ್ರ. ಅದೂ ತಿದ್ದುವ ಸಲುವಾಗಿ. ಈ ವಿಷಯ ಎಲ್ಲರಿಗೂ ಗೊತ್ತಿದ್ದುದರಿಂದ ಅವರು ಸಿಟ್ಟಾದಾಗ ಯಾರಿಗೂ ಬೇಸರವಾಗುತ್ತಿರಲಿಲ್ಲ. ಬದಲಾಗಿ ತಮ್ಮ ತಪ್ಪನ್ನು ತಿದ್ದಿಕೊಂಡು ಅವರಿಗೆ ಬೇಸರವಾಗದಂತೆ ನಡೆದುಕೊಳ್ಳಲು ಪ್ರಯತ್ನಿಸುತ್ತಿದ್ದರು. ಅವರ ಬಳಿ ಹದಿನಾರು ವರ್ಷ ಸೇವೆ ಮಾಡಿದ 'ಎಲ್ಲಪ್ಪ, ನನ್ನ ಹೇಳಿಕೆಯಲ್ಲಿ ಯಾವುದೂ ಉತ್ಪ್ರೇಕ್ಷೆ ಇಲ್ಲ. ಹದಿನಾರು ವರ್ಷ ಆ ಧಣಿಯ ಸೇವೆ ಮಾಡಿದ್ದೇನೆ. ಅಂತಹ ಸುಗುಣಿಯನ್ನು ನಾನು ಧನಿಕರಲ್ಲಿ ಕಂಡಿಲ್ಲ, ಕೇಳಿಲ್ಲ' ಎನ್ನುತ್ತಿದ್ದನು. ಅವರ ಮನೆಯಲ್ಲಿ ರೈಟರ್ ಆಗಿ ಕೆಲಸ ಮಾಡಿದ ಶ್ರೀ ಟಿ.ವಿ. ಕೃಷ್ಣಮೂರ್ತಿಯವರು, 'ಆ ಧಣಿಗೆ ನನ್ನ ಮೂವತ್ತು ವರ್ಷಗಳ ಸೇವೆ ಕೇವಲ ಸೇವೆಯಾಗಿರಲಿಲ್ಲ, ಪೂಜೆಯಾಗಿತ್ತು. ಅವರು ನೀಡಿದ ಸಂಭಾವನೆ ಕೇವಲ ಸಂಬಳವಾಗಿರಲಿಲ್ಲ. ಅನನ್ಯ ಕಾರುಣ್ಯದಾಗಿತ್ತು. ಅವರ ಸೇವೆ ನನ್ನ ಪೂರ್ವಾರ್ಜಿತ ಸುಕೃತ' ಎಂದು ಈಗಲೂ ನೆನೆಯುತ್ತಾರೆ. ಇಂತಹ ಮಾತುಗಳಿಂದ ಅವರಲ್ಲಿ ಕೆಲಸ ಮಾಡಿದವರು ಪ್ರಶಂಸಿಸಬೇಕಾದರೆ ಅವರ ಉದಾತ್ತತೆ, ಮಾನವೀಯ ಗುಣಗಳನ್ನು ಯಾರು ಬೇಕಾದರೂ ಅರ್ಥಮಾಡಿಕೊಳ್ಳಬಹುದು.

ಕಾಫೀ ತೋಟದಲ್ಲಿ ಕೆಲಸ ಮಾಡುವ ಕೂಲಿಗಳಿಗೆ ಸೌಲಭ್ಯಗಳನ್ನು ಒದಗಿಸಿಬೇಕೆಂದು ಈಚೆಗೆ ಕಾನೂನುಗಳು ರಚಿತವಾದವು. ಆದರೆ ಶ್ರೀಯುತರು ಈ ಕಾನೂನುಗಳು ಇನ್ನೂ ರಚಿತವಾಗುವ ಮೊದಲೇ, ಬಹುತೇಕ ಪ್ಲಾಂಟರುಗಳು

ಕೂಲಿಗಳನ್ನು ಶೋಷಿಸುತ್ತಿದ್ದ ಕಾಲದಲ್ಲೇ ತೋಟದ ಕೂಲಿಗಳ ಹಿತಚಿಂತನೆ ಮಾಡುತ್ತಿದ್ದರು. ಅವರು ವಾಸಿಸುತ್ತಿದ್ದ ಸ್ಥಳಗಳಿಗೆ ಹೋಗಿ ಅವರ ಸ್ಥಿತಿಗತಿಗಳನ್ನು ಕೂಲಂಕಷವಾಗಿ ತಿಳಿದುಕೊಳ್ಳುತ್ತಿದ್ದರು. ಅವರ ಕುಂದು ಕೊರತೆಗಳಿಗೆ ಲಕ್ಷ್ಯ ಕೊಡುತ್ತಿದ್ದರು. ಅವರ ಪರಿಸ್ಥಿತಿಯ ಬಗ್ಗೆ ಅರಿವಿದ್ದ ಶ್ರೀಯುತರು ಕೂಲಿಗಳ ಅನೇಕ ತಪ್ಪುಗಳನ್ನು ಉದಾರತೆಯಿಂದ ಕ್ಷಮಿಸಿಬಿಡುತ್ತಿದ್ದರು. ಯಾರಾದರೂ ಕೂಲಿಗಳು ಕಾಯಿಲೆ ಬಿದ್ದರೆ, ವೈದ್ಯರನ್ನು ಕರೆಸಿ ಔಷಧೋಪಚಾರ ಮಾಡಿಸುತ್ತಿದ್ದರು (ಈಗ ಹಾಗೆ ಮಾಡಬೇಕಾದುದು ಕಡ್ಡಾಯ. ಆಗಿನ ಕಾಲದಲ್ಲಿ ಯಾವ ನಿಯಮವೂ ಇರಲಿಲ್ಲ). ಕೂಲಿಗಳ ಮಕ್ಕಳು ಭೇಟಿಗೆ ಬಂದಾಗ ಹಣ್ಣು ಹಂಪಲನ್ನಾಗಲೀ ದುಡ್ಡು ಕಾಸನ್ನಾಗಲೀ ಕೊಡದೆ ಬರಿಗೈಲಿ ಎಂದೂ ಕಳಿಸುತ್ತಿರಲಿಲ್ಲ.

■

## ಅಣ್ಣ – ತಮ್ಮ – ಅಮ್ಮಾ . . . . ನುಡಿ

ಶ್ರೀಯುತರ ಸುಸಂಸ್ಕೃತತೆಯನ್ನು ಅವರ ಮಾತಿನಲ್ಲಿ ಕಾಣಬಹುದಿತ್ತು. ಆಳು ಕಾಳುಗಳನ್ನು 'ತಮ್ಮಾ ಬಾರಪ್ಪ' ಎಂದು ಸಂಬೋಧಿಸುತ್ತಿದ್ದರು. ಬಾರೋ, ಹೋಗೋ ಎಂದು ಅವಹೇಳನಕರ ರೀತಿಯಲ್ಲಿ ಮಾತಾಡಿಸಿದವರಲ್ಲ. ಅವರು ಯಾವ ಜಾತಿಯವರೇ ಇರಲಿ, ಯಾವ ವಯಸ್ಸಿನವರೆ ಇರಲಿ 'ತಮ್ಮಾ' ಎಂದೇ ಸಂಭೋದಿಸುತ್ತಿದ್ದರು. ಬಂಧುಗಳ, ಸ್ನೇಹಿತರ ಅಥವಾ ಪರಿಚಿತರ ಮಕ್ಕಳು, ತಮ್ಮ ಮಕ್ಕಳಷ್ಟು ಚಿಕ್ಕವರಿದ್ದರೂ, "ಏನಣ್ಣಾ" ಎಂದೇ ಮಾತಾಡಿಸುತ್ತಿದ್ದರು. ತಮ್ಮ ಹೆಣ್ಣುಮಕ್ಕಳನ್ನು ಮೊದಲ್ಗೊಂಡು ಬೇರೆಯವರ ಹೆಣ್ಣುಮಕ್ಕಳನ್ನು 'ಅಮ್ಮಾ' ಎಂದೇ ಕರೆಯುತ್ತಿದ್ದರು.

■

## ಆದರ್ಶ ಪತ್ನಿ – ಆದರ್ಶ ಗೃಹಿಣಿ

ಸತಿ-ಪತಿಗಳೊಂದಾದ ಭಕ್ತಿಯ ಮನೆತನ ಪತ್ರೆಯವರದು.ಶ್ರೀ ಚನ್ನವೀರಪ್ಪಯ್ಯನವರ ಪತ್ನಿ ಅನ್ನಪೂರ್ಣಮ್ಮನವರು ಪತ್ರೆ ಮನೆತನದ ಮಹಾದೇವಿ, ಭಾಗ್ಯವಂತೆ, ಸಜ್ಜನ ಸಂಸ್ಕೃತಿಯ ಪ್ರತೀಕ. ಅವರು ಶ್ರೀಯುತರ ಬಲಗೈಯಂತಿದ್ದರು. ಅವಶ್ಯ ಬಿದ್ದಾಗ ಸಲಹೆ-ಸಹಕಾರಗಳನ್ನೂ ನೀಡುವಂತಹ ಕುಶಲಮತಿಯವರು. ಐಶ್ವರ್ಯ ತುಂಬಿ ತುಳುಕುತ್ತಿದ್ದರೂ ಶ್ರೀಮತಿಯವರು ಎಂದೂ ವ್ಯರ್ಥವಾಗಿ ಕಾಲ ಕಳೆಯುತ್ತಿರಲಿಲ್ಲ. ದುಡ್ಡಿದೆಯೆಂದು ದುಂದು ಮಾಡುತ್ತಿರಲಿಲ್ಲ. ಸದಾ ಒಂದಲ್ಲ ಒಂದು ಕೆಲಸದಲ್ಲಿ ತೊಡಗಿರುತ್ತಿದ್ದರು. ವೃಥಾ ಹರಟೆ, ಬೆಲೆ ಇಲ್ಲದ ಮಾತುಗಳು ಇವರಿಗೆ ಸೇರುವುದಿಲ್ಲ. ಅವಶ್ಯಕವಿದ್ದುದಕ್ಕೆ ಧಾರಾಳವಾಗಿ ಖರ್ಚು

ಮಾಡುತ್ತಿದ್ದರಾದರೂ, ವ್ಯರ್ಥವಾಗಿ ಒಂದು ಪೈಸೆಯನ್ನೂ ಖರ್ಚು ಮಾಡಿದವರಲ್ಲ. ಇವರ ಈ ಗುಣ ಬಡವರಾದರೂ ಹಿಡಿತವಿಲ್ಲದ ಕೈಯಿಂದ ಸಮಸ್ಯೆಗಳಿಗೊಳಗಾಗುವ ಅನೇಕರಿಗೆ ಮಾರ್ಗದರ್ಶನ ಮಾಡುವಂತಹದಾಗಿದೆ. ಒಮ್ಮೆ ನಾನು (೧೯೫೦ ನೇ ಇಸವಿಯ ಸುಮಾರಿನಲ್ಲಿ) ಇವರ ಮನೆಗೆ ಹೋದಾಗ ಅನ್ನಪೂರ್ಣಮ್ಮನವರು ಕೈಚೀಲ ಹೊಲಿಯುತ್ತ ಕುಳಿತಿದ್ದರು. ನಾನು 'ಏನಮ್ಮಾ ಚೀಲ ಹೊಲೀತಿದೀರಲ್ಲಾ' ಎಂದಾಗ,

'ನೋಡ್ತಾಯಿ. ಸಾವ್ಕಾರ್ರು ಮೇಲಿಂದ ಮೇಲೆ ಕಾಫಿ ತೋಟಕ್ಕೆ ಹೋಗ್ತಾರೆ. ಅಲ್ಲಿ ಉಳ್ಕೊಳ್ತಾರೆ. ಆಗ ಅಡಿಗೆಗೆ ಬೇಕಾದ ಸಾಮಾನೆಲ್ಲಾ ಕಟ್ಟಿ ಹಾಕ್ಬೇಕು. ಎಷ್ಟು ಚೀಲಗಳಿದ್ರೂ ಸಾಕಾಗೋಲ್ಲ. ಸದಣ್ಣನದೊಂದು (ಅವರ ಹಿರಿಯ ಮಗ) ಪಾಯಿಜಾಮ ಹರಿದಿತ್ತು. ದಂಡ ಯಾಕ್ಮಾಡ್ಬೇಕಂತ ಚೀಲ ಹೊಲಿತಿದ್ದೀನಿ. ಸುಮ್ನೆಕೂತಿದ್ರೂ ಏನ್ಮಾಡ್ಬೇಕು' ಎಂದರು. ಅವರ ಮಿತವ್ಯಯ, ಸಮಯದ ಸದುಪಯೋಗ ನೋಡಿ, ನನಗೆ ಆಶ್ಚರ್ಯವೇ ಆಯಿತು. 'ಎಲ್ಲರೂ ಕಲಿಯ ಬೇಕಾದ ಪಾಠ' ಎಂದುಕೊಂಡೆ.

ಮತ್ತೊಂದು ದಿನ ನಾನು ಶ್ರೀಮತಿಯವರೊಡನೆ ಮಾತನಾಡುತ್ತಾ ಕುಳಿತಿದ್ದಾಗ, ಅವರ ಆಳು ಅಂಗಡಿಯಿಂದ ಮೂರು ಸಾಬೂನಿನ ಪೆಟ್ಟಿಗೆಗಳನ್ನು ತಂದು, 'ನೋಡ್ರಮ್ಮ ಇದಕ್ಕೆ ನಾಲ್ಕಾಣೆ, ಇದಕ್ಕೆ ಆರಾಣೆ, ಇದಕ್ಕೆ ಎಂಟಾಣೆ, ಎಂದ (ಆಗಿನ ಕಾಲದಲ್ಲಿ ಆಣೆಯ ಲೆಕ್ಕವಿತ್ತು ನಯಾಪೈಸೆಗಳಿರಲಿಲ್ಲ). ಆಗ ಶ್ರೀಮತಿಯವರು, 'ಸೋಪು ಇಡೋದು ತಾನೆ, ನಾಲ್ಕಾಣೆದಲ್ಲಿಟ್ರೂ ಅಷ್ಟೆ, ಎಂಟಾಣೆದಲ್ಲಿಟ್ರೂ ಅಷ್ಟೆ, ನಾಲ್ಕಾಣೆದ್ನೇ ತೊಗೊಂಡ್ಬಾರಪ್ಪಾ' ಎಂದಾಗ ನನಗೆ ಅವರ ನಿರಾಡಂಬರದ ಬಗ್ಗೆ ಎಲ್ಲಿಲ್ಲದ ಮೆಚ್ಚುಗೆಯಾಯ್ತು. ಮಿತವ್ಯಯದ ಅರಿವಿಲ್ಲದ ಜನ ಸಮಸ್ಯೆಗೆ ಏಕೆ ಒಳಗಾಗ್ತಾರೆ ಎಂಬುದರ ಅರಿವು ಆಯಿತು. ಹೀಗೆಂದು ಇವರನ್ನು ಜಿಪುಣರೆಂದು ಭಾವಿಸಲಾಗದು. ಇವರ ಸದ್ಗುಣಗಳನ್ನು ಇವರು ಮಕ್ಕಳನ್ನು ಬೆಳೆಸಿರುವ ಹಾಗೂ ಬದುಕುತ್ತಿರುವ ರೀತಿಯನ್ನು ನೋಡಿ ತಿಳಿಯಬಹುದಾಗಿದೆ. ಸರಳತೆ, ಸೌಜನ್ಯತೆ, ಸ್ನೇಹ ಪರತೆಯೇ ಅವರಲ್ಲಿ ಮನೆ ಮಾಡಿವೆ. ಅವರ ಮಕ್ಕಳೆಂದೂ ಅಹಂಕಾರದಿಂದಾಗಲೀ, ಅವಿವೇಕದಿಂದಾಗಲೀ ವರ್ತಿಸಿದವರಲ್ಲ. ಈಗ ವಿಶಾಲವಾಗಿ ಬೆಳೆದು ನಿಂತಿರುವ ಮಕ್ಕಳ, ಸೊಸೆಯರ, ಅಳಿಯಂದಿರ, ಮೊಮ್ಮಕ್ಕಳ ಬಳಗಕ್ಕೆಲ್ಲ ಒಂದೇ ಮಾತಿನಲ್ಲಿ "ಅಮ್ಮನವರು" ಎಂಬ ಗೌರವಕ್ಕೆ ಪಾತ್ರರಾಗಿರುವರು. 'ಅಕ್ಕನಬಳಗ' ಬೆಳೆಯಿಸಿ, ಸಾಮಾಜಿಕ ಕಾರ್ಯಗಳಿಗೆ ನೆರವಾಗಿ ಗೌರವ ಸಂಪಾದಿಸಿರುವರು.

■

## ಸಂಪತ್ತಿದ್ದರೂ ಶ್ರೀಸಾಮಾನ್ಯತೆ

ಚನ್ನವೀರಪ್ಪಯ್ಯನವರು ಬೀರೂರಲ್ಲಿ ಆಗಿನ ಕಾಲದಲ್ಲಿ ಒಳ್ಳೆಯ ಶಾಲೆಗಳು ಇಲ್ಲದಿದ್ದುದರಿಂದ ಕಾಫೀ ತೋಟಕ್ಕೆ ಹತ್ತಿರವಾಗಿರುವ, ಉತ್ತಮ ಶಾಲೆಗಳಿರುವ ಚಿಕ್ಕಮಗಳೂರಲ್ಲಿ ಅನೇಕ ವರ್ಷಗಳಕಾಲ ವಾಸವಾಗಿದ್ದರು. ೧೯೪೬ ರಲ್ಲಿ ಮಗಳ ಮದುವೆ ಮಾಡಬೇಕೆಂದು ಬೀರೂರಿಗೆ ಬಂದಾಗ ಅಲ್ಲಿಯೂ ಹೈಸ್ಕೂಲು ಆಗಿದ್ದುದರಿಂದ ಬೀರೂರಲ್ಲಿಯೇ ಉಳಿದರು. ಹೈಸ್ಕೂಲು ಊರ ಹೊರಗೆ ದೂರದಲ್ಲಿತ್ತು. ಶ್ರೀಯುತರು ನಿರಹಂಕಾರಿಗಳಾಗಿದ್ದರೂ ಮಕ್ಕಳು ಬಿಸಿಲಲ್ಲಿ ಅಷ್ಟು ದೂರ ಹೋಗುವುದು ಅವರಿಗೆ ಇಷ್ಟವಿರಲಿಲ್ಲ. ಹಾಗಾಗಿ ಕಾರಲ್ಲಿ ಕಳಿಸಬೇಕೆಂದು ಇಷ್ಟಪಟ್ಟರೆ, ಆ ಮಕ್ಕಳೆಂದೂ ಸ್ಕೂಲಿಗೆ ಕಾರಲ್ಲಿ ಹೋಗಲಿಲ್ಲ. ಎಲ್ಲರೊಡನೆ ನಡೆದೇ ಹೋಗುತ್ತಿದ್ದರು. ತಂದೆ–ತಾಯಿಗಳಿಂದ ಕಲಿತ ಪಾಠವನ್ನು ಮಕ್ಕಳು ಅವರಿಗೆ ಒಪ್ಪಿಸಿದರು. ಸಾಮಾನ್ಯವಾಗಿ ಕಾರಿದ್ದವರು, ಎಲ್ಲರೂ ನಡೆದು ಹೋದಾಗ, ತಾವು ಕಾರಿನಲ್ಲಿ ಭರ್ರೆಂದು ಹೋಗುವುದೇ ದೊಡ್ಡಸ್ತಿಕೆ ಎಂದು ತಿಳಿಯುತ್ತಾರೆ. ಆದರೆ ಈ ಮಕ್ಕಳಿಗೆ ಸಿಕ್ಕ ಸಂಸ್ಕಾರವೇ ಬೇರೆ. ಇದಕ್ಕೆ ತಂದೆಯ ಭಾವನೆ, ತಾಯಿಯ ತರಬೇತಿಯೇ ಕಾರಣ. ಶ್ರೀಮತಿ ಅನ್ನಪೂರ್ಣಮ್ಮನವರ ಬಾಳು ಮಹಿಳೆಯರಿಗೆ ಆದರ್ಶ. ಪತಿಯನ್ನೂ, ಮಕ್ಕಳನ್ನೂ, ಬಂಧುಗಳನ್ನೂ ಆಳುಕಾಳುಗಳನ್ನೂ ಅತ್ಯಂತ ಉತ್ತಮ ರೀತಿಯಿಂದ ನಡೆಸಿಕೊಂಡು ಹೋದ ಸದ್ಗೃಹಿಣಿ. ಮನೆಯಲ್ಲಿ ಯಾವುದೇ ಸಮಸ್ಯೆಗೆ, ವಿರಸಕ್ಕೆ ಇಂಬುಕೊಟ್ಟವರಲ್ಲ. ಒಟ್ಟುಕುಟುಂಬದಲ್ಲಿ ಅನೇಕ ರೀತಿಯ ಪರಿಸ್ಥಿತಿಗಳಿಂದ ಶ್ರೀಯುತರ ತಾಯಿಯವರಾದ ಗಂಗಮ್ಮನವರು ತುಂಬಾ ನೊಂದಿದ್ದರಂತೆ. ಅದನ್ನು ತಿಳಿದ ಚನ್ನವೀರಪ್ಪಯ್ಯನವರಿಗೆ ತಾಯಿಯ ಬಗ್ಗೆ ಅಪಾರವಾದ ಪ್ರೀತಿ, ಗೌರವ, ಅನುಕಂಪ. ತಾವು ಮನೆಯ ಯಜಮಾನಿಕೆ ವಹಿಸಿಕೊಂಡಾಗಿನಿಂದ ಹಿಡಿದು, ತಾಯಿಯವರು ತಮ್ಮ ೮೩ ನೇ ವಯಸ್ಸಿನಲ್ಲಿ ಕೈಲಾಸವಾಸಿಗಳಾಗುವತನಕವೂ ಅವರಿಗೆ ಯಾವೊಂದು ನೋವು ಇಲ್ಲದಂತೆ, ಅವರು ಬಯಸಿದಂತಹ ರೀತಿಯಲ್ಲಿ ಇರುವ ವ್ಯವಸ್ಥೆ ಮಾಡಿದರು. ಅನ್ನಪೂರ್ಣಮ್ಮನವರಾದರೂ ಅತ್ತೆಯನ್ನು ತಾಯಿಗಿಂತಲೂ ಹೆಚ್ಚಾದ ಪ್ರೀತಿ ಗೌರವಗಳಿಂದ ಕಾಣುತ್ತಿದ್ದರು. ಮುಪ್ಪಿನ ಕಾಲದಲ್ಲಿ ಮಾತೋಶ್ರೀ ಗಂಗಮ್ಮನವರು ಮಗ – ಸೊಸೆ ಮೊಮ್ಮಕ್ಕಳ ಸುಖ – ಸಂತೋಷಗಳಲ್ಲಿ ಭಾಗಿಗಳಾಗಿ ನೆಮ್ಮದಿಯಿಂದ ಇದ್ದುದೇ ಮಗನ ಮೇರು ಗುಣಕ್ಕೆ ಸಾಕ್ಷಿ. ಸಾಮಾನ್ಯವಾಗಿ ಪುರುಷರು ತಾಯಿಯನ್ನು ಸುಖಪಡಿಸಬೇಕೆಂದು ಹೆಂಡತಿಯನ್ನು ಹೀನಾಯವಾಗಿ ಕಂಡು ಮನ ನೋಯಿಸುತ್ತಾರೆ. ಇಲ್ಲವೆ ಹೆಂಡತಿಯನ್ನು ತೃಪ್ತಿಪಡಿಸಬೇಕೆಂದು ತಾಯಿಯನ್ನು ನೋವಿಗೆ ಗುರಿಪಡಿಸುತ್ತಾರೆ. ಆದರೆ ತಾಯಿ ಹೆಂಡತಿ ಇಬ್ಬರೂ ತೃಪ್ತಿ

ಸಂತೋಷಗಳಿಂದ ಬದುಕುವಂತೆ, ಇಬ್ಬರ ಬಗ್ಗೆಯೂ ತಮ್ಮ ಕರ್ತವ್ಯಕ್ಕೆ ಚ್ಯುತಿ ಬಾರದಂತೆ ನಡೆದುಕೊಂಡ ಕುಟುಂಬಜೀವಿಯಾಗಿದ್ದರು ಚನ್ನವೀರಪ್ಪಯ್ಯನವರು.

ಇವರ ಮನೆಯಲ್ಲಿ ಮಲ್ಲಪ್ಪನೆಂಬ ಹುಡುಗ ತನ್ನ ಹನ್ನೊಂದನೆಯ ವಯಸ್ಸಿನಲ್ಲಿ ಕೆಲಸಕ್ಕೆ ಸೇರಿದನು. ಶ್ರೀಯುತರು ಬದುಕಿರುವವರೆಗೂ ಅವರ ಮನೆಯಲ್ಲೇ ಇದ್ದು ಸೇವೆ ಸಲ್ಲಿಸಿದ ಅವನನ್ನು ತುಂಬಾ ಪ್ರೀತಿಯಿಂದ ಸಾಕಿ ವಯಸ್ಸಿಗೆ ಬಂದ ಮೇಲೆ ಒಳ್ಳೆಯ ಮನೆತನದ ಕನ್ಯೆ ತಂದು ವಿವಾಹ ಮಾಡಿದರು. ಅವನ ಯೋಗಕ್ಷೇಮ, ಪ್ರಗತಿ ಎಲ್ಲದರ ಬಗೆಗೂ ಕಾಳಜಿ ವಹಿಸಿ ಅವನು ಸ್ವತಂತ್ರ ಉದ್ಯೋಗ ಮಾಡಿಕೊಳ್ಳುವಂತೆ ಮಾಡಿದರು. ಅವರನ್ನು ನಂಬಿ ಅವರಲ್ಲಿದ್ದವರು ಎಂದಿಗೂ ಅನಾಥರಾಗಿ ಹೋಗಿಲ್ಲ. ಅವರು ಆರಿಸಿ ಸೂಕ್ತ ಕಂಡವರನ್ನು ಮಾತ್ರ ಸಮೀಪ ಸೇರಿಸುತ್ತಿದ್ದರು. ಒಮ್ಮೆ ಸಮೀಪ ಸೇರಿಸಿಕೊಂಡರೆ ಮುಗಿಯಿತು. ಅವರನ್ನು ಕಡೆಯತನಕ ಕೈ ಬಿಡುತ್ತಿರಲಿಲ್ಲ. ಹೀಗೆಂದು ಯಾರು ಮನಸ್ವಿ ಅವರೊಡನೆ ವರ್ತಿಸಲಿಕ್ಕಾಗಲೀ, ದುರುಪಯೋಗಪಡಿಸಿಕೊಳ್ಳಲಾಗಲೀ ಸಾಧ್ಯವಿರಲಿಲ್ಲ. ಯೋಗ್ಯರಿಗೆ ಮಾತ್ರ ಅವರಲ್ಲಿ ಸ್ಥಾನವಿತ್ತು. ಸ್ವತಂತ್ರ ನಿರ್ಧಾರ ತೆಗೆದುಕೊಳ್ಳುವ ಪ್ರವೃತ್ತಿ ಇದ್ದುದರಿಂದ ಚಾಡಿಕೋರರಿಗೆ ಶ್ರೀಯುತರಲ್ಲಿ ಸ್ಥಾನವಿರಲಿಲ್ಲ. ಸ್ವಾರ್ಥಿಗಳಿಗೆ ಹತ್ತಿರ ಸುಳಿಯಲು ಅವಕಾಶ ಕೊಡುತ್ತಿರಲಿಲ್ಲ. ಸ್ವಯಂ ಆಲೋಚನಾಶಕ್ತಿಯನ್ನು ರೂಢಿಸಿಕೊಂಡಿದ್ದರು. ಇವರ ಯಜಮಾನಿಕೆಯ ಅವಧಿಯಲ್ಲಿ ಮೂರನೆಯವರು ಮನೆತನದೊಳಗೆ ಸಮಸ್ಯೆಗಳನ್ನು ತಂದು ಹಾಕಲು ಸಾಧ್ಯವಿಲ್ಲವಾಯ್ತು.

■

## ವಾರಸುದಾರಿಕೆಯ ವಿಪತ್ತು

ಚನ್ನವೀರಪ್ಪಯ್ಯನವರು ವೈರವನ್ನಾಗಲೀ ದ್ವೇಷವನ್ನಾಗಲೀ ಎಂದೂ ಸಾಧಿಸಿದವರಲ್ಲ. ವಿರಸಸ್ಥಿತಿಗಳುಂಟಾದಾಗಲೂ, ಆಯಾ ಸಂದರ್ಭಕ್ಕಷ್ಟೇ. ಅದನ್ನೇ ಮನಸ್ಸಿನಲ್ಲಿಟ್ಟುಕೊಂಡು ವೈರ ಬೆಳೆಸುತ್ತಿರಲಿಲ್ಲ. ಶ್ರೀಯುತರ ತಂದೆ, ದೊಡ್ಡಪ್ಪಂದಿರು ಎಲ್ಲಾ ತೀರಿ ಹೋದ ನಂತರ, ಸ್ವಾಭಾವಿಕವಾಗಿಯೇ ಮನೆಯ ಪರಿಸ್ಥಿತಿಯಲ್ಲಿ ಅವ್ಯವಸ್ಥೆಗಳಾಗಿರಬೇಕು. ಹಿರಿಯರಿದ್ದ ಕಾಲದಲ್ಲಿ ಅನೇಕ ಆಪ್ತರೂ ಬಂಧುಗಳೂ ಹಿತಚಿಂತಕರೂ ಮನೆಗೆ ಬಂದು ಹೋಗುತ್ತಿದ್ದರು. ಹಿರಿಯರ ಅವಸಾನದ ನಂತರ ಹಿಂದೆ ಅಡ್ಡಾಡುತ್ತಿದ್ದ ಜನರಿಗೆ ಸ್ವಲ್ಪ ಮಾನ್ಯತೆ ಬಂತು. ಮನೆತನದ ವಾರಸುದಾರರಾದ ಚನ್ನವೀರಪ್ಪಯ್ಯನವರೂ ಮತ್ತು ಶಿವಪ್ಪಯ್ಯನವರೂ ಇನ್ನೂ ಪ್ರಬುದ್ಧಮಾನಕ್ಕೆ ಬಂದಿರಲಿಲ್ಲ. ಯಾವುದೋ ಒಂದು ಸಂದರ್ಭದಲ್ಲಿ ದೊಡ್ಡಮ್ಮಾರ (ಹಿರಿಯ ಸೊಸೆ ರುದ್ರಮ್ಮ) ಮನಸ್ಸು ಸರಿಯಿಲ್ಲದ ಸಮಯದಲ್ಲಿ 'ತಂದು ಹಾಕಿ

ತಮಾಷೆ ನೋಡುವ' ಕೆಲ ಕುತಂತ್ರಿಗಳು ದೊಡ್ಡಮ್ಮಾರ ಮನಸ್ಸಿನಲ್ಲಿ ದತ್ತು ತೆಗೆದುಕೊಳ್ಳುವ ಕುತಂತ್ರದ ವಿಷಬೀಜ ಬಿತ್ತಿದರು. ಮನೆಗೆ ವಾರಸುದಾರರಿಲ್ಲದಿರಲಿಲ್ಲ. ಆ ಮಕ್ಕಳನ್ನು ತಾವೇ ಮಕ್ಕಳಂತೆ ಬೆಳೆಸಿದ್ದರು. ಆದರೆ ಹಿತೈಷಿಗಳಂತೆ ಕಂಡ ಕೆಲವರ ಉಪದೇಶದಿಂದ ದತ್ತು ತೆಗೆದುಕೊಳ್ಳುವ ವಿಚಾರ ಮಾಡಿ, ಮೈದುನ ಬಸವಲಿಂಗಪ್ಪಯ್ಯನವರ ಮಗಳು ನಂಜಮ್ಮನವರು ಮತ್ತು ಅಳಿಯ ಶಿವಲಿಂಗಪ್ಪಯ್ಯನವರ ಮಕ್ಕಳನ್ನು ಕೇಳಿದರು. ಅವರ ಮೂರನೆಯ ಮಗ ರುದ್ರಾರಾಧ್ಯರು ಬಹಳ ಚುರುಕಾಗಿಯೂ ತೇಜಸ್ಸಿನಿಂದಲೂ ಕೂಡಿದ್ದರು. ಆ ಮಗನನ್ನು ದತ್ತು ಕೇಳಿದಾಗ ಅಳಿಯ ಶಿವಲಿಂಗಪ್ಪಯ್ಯನವರು ಎಳ್ಳಷ್ಟೂ ಇಷ್ಟ ಪಡಲಿಲ್ಲ. ಕಾರಣ, ಹಿಂದೆ ಬಸವಲಿಂಗಪ್ಪಯ್ಯನವರನ್ನು ಇವರು ದತ್ತು ತೆಗೆದುಕೊಂಡಾಗ ಅವರುಗಳು ಅಕಾಲ ಮರಣಕ್ಕೆ ತುತ್ತಾಗಿದ್ದರು. ಅಲ್ಲದೆ ಶಿವಲಿಂಗಪ್ಪಯ್ಯನವರ ಹಿರಿಯ ಮಗ ಮರುಳಯ್ಯನವರನ್ನು ಶಿವಲಿಂಗಪ್ಪಯ್ಯನವರ ಮಲ ಅಣ್ಣ ದತ್ತಕ ತೆಗೆದುಕೊಂಡಿದ್ದರಂತೆ. ಆದರೂ ಚಿಕ್ಕ ವಯಸ್ಸಿನಲ್ಲಿಯೇ ತೀರಿ ಹೋದರು. ಈ ಅನುಭವಗಳಿಂದ ಅವರಿಗೆ ತಮ್ಮ ಮಗನನ್ನು ದತ್ತಕ ಕಳಿಸುವದು ಸುತಾರಾಂ ಇಷ್ಟವಿರಲಿಲ್ಲ. ಹಿರಿಯ ಅತ್ತೆಯವರಾದ ದೊಡ್ಡಮ್ಮನವರಿಗೆ ಎಂದೂ ವಿರೋಧವಾಗಿ ಮಾತನಾಡಿದವರಲ್ಲ. ಆದರೂ ಬೇರೆಯವರ ಮೂಲಕ ತಮ್ಮ ಅಭಿಪ್ರಾಯ ತಿಳಿಸಿದರು. ನಂಜಮ್ಮನವರೂ ಸಹ, 'ಹೊಟ್ಟೆಯಲ್ಲಿ ಹುಟ್ಟಿದ ಮಗನನ್ನು ನನ್ನ ಮಗ ಅಲ್ಲ ಎಂದು ಹೇಗೆ ಬೇರೆಯವರಿಗೆ ಕೊಡಲಿ' ಎಂದರಂತೆ. ಆಗ ದೊಡ್ಡಮ್ಮಾರು 'ಪರರ ಮಕ್ಕಳನ್ನು ಎಷ್ಟೇ ಮಮತೆಯಿಂದ ಸಾಕಿದರೂ ಇಷ್ಟೇ ಅಲ್ಲವೆ? ನನ್ನ ಮಗಳಾಗಿದ್ದರೆ ಹೀಗೆ ಅನ್ನುತ್ತಿದ್ದಳೆ'? ಎಂದು ತುಂಬಾ ನೊಂದುಕೊಂಡರಂತೆ. ಆಗ ನಂಜಮ್ಮ 'ದೇವರ ಅಪ್ಪಣೆ ಕೇಳೋಣ. ಅಪ್ಪಣೆಯಾದಂತಾಗಲಿ' ಎಂದುದಕ್ಕೆ ದತ್ತಕ ಮಗನಾಗಿ ಹೋಗುವ ರುದ್ರಾರಾಧ್ಯರು ದೊಡ್ಡಮ್ಮನವರಿಗೆ ನೋವಾದೀತೆಂದು, 'ದತ್ತು ಹೋಗುವ ನನ್ನದೇ ಒಪ್ಪಿಗೆ ಇರುವಾಗ ದೇವರು, ದಿಂಡರು ಏಕೆ', ಎಂದರಂತೆ. ಅಂತೂ ಒಟ್ಟಿನಲ್ಲಿ ರುದ್ರಾರಾಧ್ಯರನ್ನು ದತ್ತಕ ತೆಗೆದುಕೊಂಡರು. ಈ ಘಟನೆಯಿಂದ ಸಹಜವಾಗಿಯೇ ಗಂಗಮ್ಮನವರು ಮುಂತಾದವರಿಗೆಲ್ಲ 'ಕೋಟ್ಯಂತರ ರೂಪಾಯಿ ಆಸ್ತಿಗಾಗಿ ಮಗನನ್ನು ದತ್ತು ಕೊಟ್ಟರು' ಎಂದು ದತ್ತಕಕ್ಕೆ ಸಂಬಂಧಪಟ್ಟವರ ಮೇಲೆಲ್ಲ ಬೇಜಾರಾಯಿತು. ಎರಡೂ ಮನೆಯ ಸಂಬಂಧ ಕಡಿಯಿತು. ಕೋರ್ಟು ಕಛೇರಿಯ ಓಡಾಟದ ನಂತರ ಪತ್ರೆ ಚನ್ನವೀರಪ್ಪಯ್ಯ ಹಾಗೂ ಶಿವಪ್ಪಯ್ಯನವರೇ ಆಸ್ತಿಗೆ ನಿಜವಾದ ಹಕ್ಕುದಾರರೆಂದು ತೀರ್ಮಾನವಾಯಿತು. ಆಸ್ತಿ ನಿಜವಾಗಿ ಯಾರಿಗೆ ದಕ್ಕ ಬೇಕಾಗಿತ್ತೋ ಅವರಿಗೆ ದಕ್ಕಿತ್ತು. ಈ ಘಟನೆಯಿಂದ ಎರಡೂ ಮನೆಯ ಸಂಬಂಧಗಳು ದೂರವಾದವು.

ಆದರೂ ಭಾವನವರಾದ ಶಿವಲಿಂಗಪ್ಪಯ್ಯನವರು ಬೀರೂರಲ್ಲಿರಲು ಬೇಸರಗೊಂಡು ಮೈಸೂರಲ್ಲೇ ಮನೆ ಮಾಡಿಕೊಂಡು ಮಡದಿ ಹಾಗೂ ಅವಿವಾಹಿತ ಹೆಣ್ಣು ಮಕ್ಕಳೊಡನೆ ಇದ್ದರು. ಚಿಂತೆಯಿಂದಲೂ ಅನಾರೋಗ್ಯದಿಂದಲೂ ಹಾಸಿಗೆ ಹಿಡಿದರು. ಈ ಸುದ್ದಿ ಚನ್ನವೀರಪ್ಪಯ್ಯನವರಿಗೆ ತಿಳಿದಾಗ ನಡುವೆ ಬಂದ ವಿರಸದ ಘಟನೆಗಳನ್ನೆಲ್ಲ ಮರೆತು ಭಾವನವರನ್ನು ನೋಡಲು ಮೈಸೂರಿನ ಮನೆಗೆ ಹೋದರಂತೆ. ಆಗ ಆರ್ಥಿಕ ತೊಂದರೆಯಲ್ಲಿದ್ದ ಶಿವಲಿಂಗಪ್ಪಯ್ಯನವರಿಗೆ ಶ್ರೀಯುತರು ಸ್ವಲ್ಪ ಹಣ ಸಹಾಯವನ್ನು ಮಾಡಿದರಂತೆ. ಇಂತಹ ವೈಷಮ್ಯ ರಹಿತರಾಗಿ ಬಾಳಿದವರು ಚನ್ನವೀರಪ್ಪಯ್ಯನವರು.

ಶ್ರೀಯುತರು ಚಿಕ್ಕಮಗಳೂರಿನ ವಾಸ್ತವ್ಯ ಮುಗಿಸಿ, ಬೀರೂರಲ್ಲಿ ನೆಲೆಸಲು ಪ್ರಾರಂಭಿಸಿದ ಹೊಸತು ಪತ್ರೆಯವರ ಮನೆಗೂ ಉಬ್ರಾಣಿಮಠದ ಮನೆಗೂ ಸ್ನೇಹ ಸಂಪರ್ಕವೇ ಕಡಿದುಹೋಗಿತ್ತು. ಈಚಿನ ಮಕ್ಕಳಿಗೆ ಒಬ್ಬರಿಗೊಬ್ಬರ ಪರಿಚಯವೇ ಇರಲಿಲ್ಲ. ಹಿರಿಯರಾದವರಿಗೆ ಅವರುಗಳ ಮನೆಯ ವಿಷಯ ಸ್ವಲ್ಪ ತಿಳಿದಿರುತ್ತಿತ್ತು. ಆ ಸಂದರ್ಭದಲ್ಲಿ ಶಿವಲಿಂಗಪ್ಪನವರ ಹಿರಿಯ ಮಗ ಶ್ರೀಕಂಠ ಶರ್ಮಾರ ಮಗಳಾದ ಈ ಲೇಖಕಿಗೆ ಆ ವರ್ಷ ಎಸ್.ಎಸ್.ಎಲ್.ಸಿ. ಪಾಸಾಯ್ತು. ಆಗಿನ ಕಾಲದಲ್ಲಿ ಅದೂ ಚಿಕ್ಕ ಊರುಗಳಲ್ಲಿ ಹೆಣ್ಣುಮಕ್ಕಳು ಅಷ್ಟು ಓದುತ್ತಿದ್ದುದೇ ಅಪರೂಪ. ಆ ಊರಿನ ಹೆಣ್ಣುಮಕ್ಕಳು ಅಷ್ಟು ಓದುತ್ತಿದ್ದುದೇ ಅಪರೂಪ. ಆ ಊರಿನ ಹೆಣ್ಣುಮಕ್ಕಳಲ್ಲಿ ಅಷ್ಟು ಓದಿದವರಲ್ಲಿ ನಾನೇ ಮೊದಲಿಗಳು. ಚನ್ನವೀರಪ್ಪಯ್ಯನವರು ಹಳೆಯ ಪೀಳಿಗೆಗೆ ಸೇರಿದವರಾದರೂ ಹೆಣ್ಣುಮಕ್ಕಳು ಓದಬೇಕು, ಮುಂದೆ ಬರಬೇಕು ಎಂಬ ಆಧುನಿಕ ವಿಚಾರವಂತರಾಗಿದ್ದರು. ಅವರಿಗೆ ತಮ್ಮ ಬಳಗದ ಹುಡುಗಿ ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಕುಳಿತ ವಿಚಾರ ತಿಳಿದಿದ್ದಿರಬೇಕು. ಫಲಿತಾಂಶ ಬಂದ ದಿನ ನನ್ನದೂ ಪಾಸಾಗಿತ್ತು. ಈಗ ಎಂ.ಎ. ಮಾಡಿದರೂ ಅಷ್ಟು ಹೆಚ್ಚಲ್ಲ. ಆಗಿನ ಕಾಲದಲ್ಲಿ ಎಸ್.ಎಸ್.ಎಲ್.ಸಿ. ಮಾಡುವುದೇ ಏನೋ ದೊಡ್ಡ ಪರೀಕ್ಷೆ ಪಾಸಾದಂತೆ ಜನರಲ್ಲಿ ಭಾವನೆ ಆಗ ಸಹಜವಾಗಿಯೆ ಈ ಲೇಖಕಿ ಖುಷಿಯಿಂದ ಹಿತ್ತಲಲ್ಲಿ ನಿಂತು ತಂದೆಯವರ ದಾರಿ ಕಾಯುತ್ತಾ ನಿಂತಿದ್ದಳು. ಪತ್ರೆಯವರ ಮನೆ ಅವರ ಮನೆಯ ಪಕ್ಕದಲ್ಲೇ ಇದೆ. ಬಾಗಿಲಲ್ಲೇ ಚನ್ನವೀರಪ್ಪಯ್ಯನವರು ನಿಂತಿದ್ದರೆ, ನನಗೆ ಅದರ ಪರಿವೆಯೇ ಇಲ್ಲ. ಆದರೆ ಹಿಂದಿನಿಂದ "ಲಲ್ತಮ್ಮಾ" ಎಂಬ ಪ್ರೀತಿ ಸಂತೋಷದಿಂದೊಡಗೂಡಿದ ಧ್ವನಿ ಕೇಳಿಸಿತು. ಅಷ್ಟು ಆತ್ಮೀಯತೆ ಇತ್ತು ; ಹೆಮ್ಮೆ ಇತ್ತು ; ಸಂತೋಷವಿತ್ತು. ಆ ಮಮತೆಯ ಶಬ್ದವನ್ನೆಂದೂ ನಾನು ಮರೆಯಲಾರೆ. ನನ್ನ ಹೆಸರು ಕರೆದ ತಕ್ಷಣ ಶಬ್ದ ಬಂದ ಕಡೆ ತಿರುಗಿದೆ. 'ಪಾಸ್?' ಎರಡೇ ಅಕ್ಷರಗಳಲ್ಲಿ ಫಲಿತಾಂಶ

ವಿಚಾರಿಸಿದರು. 'ಪಾಸ್' ಎಂದರೆ. 'ಷಹಬಾಸ್' ಎಂಬ ಧ್ವನಿ ನನ್ನ ಬೆನ್ನು ಚಪ್ಪರಿಸಿತು. ಆ ನಾಲ್ಕು ಅಕ್ಷರಗಳಲ್ಲೇ ಮೆಚ್ಚುಗೆ, ನಮ್ಮ ಹುಡುಗಿ ಎಂಬ ಅಭಿಮಾನ ಎಲ್ಲವೂ ತುಂಬಿದ್ದವು. ನನ್ನ ತಂದೆ ಪಟ್ಟಷ್ಟೇ ಆನಂದವನ್ನು ಆ ಧ್ವನಿ ಸೂಚಿಸಿತ್ತು ! ನಾನ್ಯಾರು ! ತಮ್ಮ ಆಸ್ತಿಯನ್ನು ಕಬಳಿಸಲು ಹವಣಿಸಿದವರ ಮೊಮ್ಮಗಳು ! ಆದರೆ ಅದು ಅಂದಿಗೆ ಮುಗಿಯಿತು. ಈಗ ತಮ್ಮ ಭಾವನ ಮೊಮ್ಮಗಳು ಇಷ್ಟು ಮುಂದೆ ಬಂದುದು ಅವರಿಗೆ ಹಿಡಿಸಲಾರದಷ್ಟು ಸಂತೋಷ ತಂದಿತ್ತು ಅವರ ವಿಶಾಲ ಹೃದಯಕ್ಕೆ ಇದಕ್ಕಿಂತ ಬೇರೆ ಉದಾಹರಣೆ ಬೇಕೆ ? ಅನುಕೂಲವಿದ್ದಾಗ ಸಹಾಯ ಮಾಡುವುದು ಒಳ್ಳೆಯತನ, ಅತಿಶಯೋಕ್ತಿಯಲ್ಲ. ಒಳ್ಳೆಯ ಸ್ವಭಾವವಿದ್ದವರು ಎಲ್ಲರನ್ನೂ ಗೌರವಿಸಬಹುದು. ಆಶ್ಚರ್ಯವೇನಲ್ಲ. ಆದರೆ ದ್ವೇಷವಿರುವ ಕಡೆ ಅದನ್ನು ಲವಲೇಶವಿಲ್ಲದಂತೆ ಅಳಿಸಿ ಸ್ನೇಹ ಹಸ್ತವನ್ನು ಚಾಚುವುದು ಸಾಮಾನ್ಯರಿಗೆ ಸಾಧ್ಯವಲ್ಲದ ಮಾತು. ದ್ವೇಷವಿದ್ದ ಕಡೆ ಪ್ರೀತಿ ತೋರುವ ಔದಾರ್ಯ ಶ್ರೀಯುತರಲ್ಲಿ ಮನೆ ಮಾಡಿತ್ತು.

ಚನ್ನವೀರಪ್ಪಯ್ಯನವರಿಗೆ ಗುರು-ಹಿರಿಯರಲ್ಲಿ ಗೌರವ. ಈ ಗುಣ ಈಗಿನ ಪೀಳಿಗೆಯಲ್ಲಿ ನಾಸ್ತಿ. ಕಾರಣ ಈಗ ಹಾಗೆ ನಡೆದು ತೋರಿಸುವವರೇ ಇಲ್ಲ. ಈಗಿನ ಮಕ್ಕಳಿಗೆ ಸಕಾಲದಲ್ಲಿ ಮಾರ್ಗದರ್ಶನ ಮಾಡುವವರೂ ಇಲ್ಲ. ಶ್ರೀಯುತರಿಗೆ ರೀತಿ ನೀತಿಗಳಲ್ಲಿ ನಡೆ-ನುಡಿಗಳಲ್ಲಿ ವಿವೇಕವಿರಬೇಕು. ಅದನ್ನು ತಮ್ಮ ಮಕ್ಕಳಲ್ಲಿ ಬಾಲ್ಯದಿಂದಲೇ ಸಕಾಲದಲ್ಲಿ ಹದವರಿತು ಮಾರ್ಗದರ್ಶನ ಮಾಡುತ್ತಿದ್ದರು. ತಪ್ಪು ಕಂಡರೆ ಕೂಡಲೇ ತಿದ್ದಿ ಸರಿಪಡಿಸಿಕೊಳ್ಳುತ್ತಿದ್ದರು. ಒಮ್ಮೆ ಇವರ ಅಕ್ಕನವರಾದ ವೀರಮ್ಮನವರು ತಮ್ಮನ ಮನೆಗೆ ಬಂದಿದ್ದರು. ಬಂದಾಗಲೆಲ್ಲಾ ಸೋದರ ಸೊಸೆ ಸುಶೀಲಳಿಂದ ಕಥೆ ಓದಿಸಿ ಕೇಳುತ್ತಿದ್ದರು. ಒಂದು ದಿನ ವೀರಮ್ಮನವರು ಕುಳಿತುಕೊಂಡು ಹೂವು ಕಟ್ಟುತ್ತಿದ್ದರಂತೆ. ಆಗ ಹುಡುಗಿ ಸುಶೀಲಾ ಬಂದಳು. 'ಒಂದು ಕಥೆ ಓದು ತಾಯಿ, ಯಾಕೋ ಬೇಜಾರಾಗ್ಯೆತಿ' ಎಂದರು. ಆಗ ಆಕೆ ಅಲ್ಲೇ ಇದ್ದ ಮಂಚದ ಮೇಲೆ ಕುಳಿತುಕೊಂಡು ಕಥೆ ಓದತೊಡಗಿದಳು. ಅದೆ ಸಮಯಕ್ಕೆ ತಂದೆ ಚನ್ನವೀರಪ್ಪಯ್ಯನವರು ಆ ಕೋಣೆಯ ಮೂಲಕ ಹಾದು ಹೋದರು. ತಕ್ಷಣ, 'ಬಾ ಅಮ್ಮಾ ಇಲ್ಲಿ' ಎಂದು ಮಗಳನ್ನು ಪ್ರೀತಿಯಿಂದ ಕರೆದರು. ಈಕೆ ತಂದೆಯ ಹತ್ತಿರ ಹೋದಾಗ 'ನೋಡು ನಿಮ್ಮತ್ತೆ ನಿನಗಿಂತ ಹಿರಿಯರಲ್ಲವೇ? ಅವರು ಕೆಳಗೆ ಕುಳಿತಾಗ ನೀನು ಮೇಲೆ ಕುಳಿತುಕೊಳ್ಳಬಹುದೇ? ನೀನೂ ಅವರ ಪಕ್ಕದಲ್ಲೇ ಕುಳಿತು ಕಥೆ ಓದು' ಎಂದರು. ಮೃದು ಮಾತಿನಲ್ಲೇ ಮಗಳಿಗೆ ವಿವೇಕ ಬೋಧಿಸಿದರು. ಅಕ್ಕನ ಎದುರಿಗೇ ಗದರಿಸಿ ಆಕೆಗೆ ಸಂಕೋಚವಾಗುವಂತೆ ಮಾಡಲಿಲ್ಲ. ಆ ಹುಡುಗಿ ಅಂದು ಕಲಿತ ಪಾಠವನ್ನು ಇಂದಿಗೂ ಮರೆತಿಲ್ಲ. ಮಗಳಿಗೆ

ತಿಳಿವಳಿಕೆ ಕೊಟ್ಟ ರೀತಿಯಲ್ಲಿ ಯಾವ ವಿರಸಕ್ಕಾಗಲೀ ಬೇಸರಕ್ಕಾಗಲೀ ಅವಕಾಶವಿರಲಿಲ್ಲ. ಹೀಗೆ ಎಲ್ಲ ತಂದೆ-ತಾಯಿಗಳು ಮಾಡಿದರೆ ಯಾವ ಮನೆಯಲ್ಲೂ ಸಹ ಬಹುಶಃ ವಿರಸಗಳು ಆಗುವುದಿಲ್ಲ ಎನ್ನಿಸುತ್ತದೆ ಅಲ್ಲವೇ?

■

## ಹಾಸ್ಯ ಪ್ರವೃತ್ತಿ

ಚನ್ನವೀರಪ್ಪಯ್ಯನವರದ್ದು ಗಾಂಭೀರ್ಯದ ವ್ಯಕ್ತಿತ್ವ. ಜೊತೆ ಜೊತೆಗೆ ಅವರು ರಸಿಕರೂ, ಹಾಸ್ಯ ಪ್ರಿಯರೂ, ಸರಸಿಗಳೂ ಆಗಿದ್ದರು. ಅವರ ನಿಕಟವರ್ತಿಗಳಿಗೆ ಮಾತ್ರ ಅವರ ಈ ಪ್ರವೃತ್ತಿಯ ಪರಿಚಯವಿತ್ತು. ಅವರ ಗೆಳೆಯರ ಬಳಗ ದೊಡ್ಡದು. ಅನೇಕ ಆಂಗ್ಲರು ಇವರ ಗೆಳೆಯರ ಗುಂಪಿನಲ್ಲಿದ್ದರು. ಜೆ.ಬಿ. ಮಲ್ಲಾರಾಧ್ಯರು, ಪ್ಲಾಂಟರ್ ಶ್ರೀ ನಿರ್ವಾಣಪ್ಪ ಶೆಟ್ಟರು, ದೇವರಾವ ಶಿವರಾವ ಕಂಪನಿಯ ಶ್ರೀ ದೇವರಾವ ಮುಂತಾದವರು ಇವರ ನಿಕಟವರ್ತಿಗಳು. ಇವರೆಲ್ಲರಿಗಿಂತಲೂ ರಾಮಗಿರಿಯ ಪಟ್ಟದ ದೇವರು ಪತ್ರೆಯವರ ಆತ್ಮೀಯ ಗೆಳೆಯರು. ಮನೆಯ ಒಳ ಹೊರಗೆಲ್ಲ ಸಲೀಸಾಗಿ ಓಡಾಡಿಕೊಂಡಿರುವಷ್ಟು ಸಲುಗೆಯ ಬಂಧುತ್ವವಿತ್ತು ಒಮ್ಮೆ 'ದೇವರು' ಇವರಲ್ಲಿಗೆ ಬಂದರು. ಮನೆಯವರೆಲ್ಲಾ ಬೇರೆ ಊರಿಗೆ ಹೋಗಬೇಕಾಗಿತ್ತು. ಮನೆಯಲ್ಲಿ ಶ್ರೀಯುತರು ಹಾಗೂ ಪಟ್ಟದ ದೇವರನ್ನು ಉಳಿದು ಉಳಿದವರೆಲ್ಲಾ ಹೋದರಂತೆ. ಮುಂದಿನ ಮನೆಯವರು ಬಂದಾಗ ಬಾಗಿಲಲ್ಲೇ ನಿಂತಿದ್ದ ಪತ್ರೆಯವರು ತುಂಬಾ ದುಃಖದಿಂದ ನಿಂತಿದ್ದರಂತೆ. ಇವರನ್ನು ನೋಡಿಯೇ ಬಂದವರಿಗೆಲ್ಲಾ ಮನೆಯಲ್ಲಿ ಏನೋ ಅನಾಹುತವಾಗಿದೆ ಎನ್ನುತ್ತಿದ್ದಂತೆಯೇ ಶ್ರೀಯುತರು 'ಪಟ್ಟದ ದೇವರು ಹೋಗಿಬಿಟ್ಟರು' ಎಂದು ಗದ್ಗದಿತವಾಗಿ ಹೇಳುತ್ತಾ ಕಣ್ಣೀರುಗರೆಯತೊಡಗಿದರಂತೆ. ನಿನ್ನೆ ತಾನೆ ತಾವೆಲ್ಲಾ ಹೊರಟಾಗ ಆರೋಗ್ಯವಂತರಾಗಿದ್ದ ದೇವರಿಗೆ ಇಷ್ಟು ಬೇಗ ಏನಾಯ್ತು ಎಂದು ಎಲ್ಲರೂ ಒಕ್ಕೊರಲಿನಿಂದ ಕೇಳಿದರು. ಇದ್ದಕ್ಕಿದ್ದಂತೆ ಎದೆ ನೋವು ಎಂದರು. ಡಾಕ್ಟರಿಗೆ ಹೇಳಿಕಳಿಸಿದೆ, ಅವರು ಬರುವುದರೊಳಗೆ ಎಲ್ಲಾ ಮುಗಿದಿತ್ತು. ಆಗ ಎಲ್ಲರೂ ಒಳಗೆ ಓಡಿದರು. ಮೈಕುಂದಿಲ್ಲ ಕೈಕುಂದಿಲ್ಲ, ಆದರೆ ಪ್ರಾಣ ಮಾತ್ರ ಹೋಗಿದೆ. ನಿಶ್ಚಲವಾಗಿ ಹಾಸಿಗೆಯ ಮೇಲೆ ಶವವಾಗಿ ಕುಳಿತಿದ್ದಾರೆ, ಮನೆಯವರಲ್ಲಿ ಒಬ್ಬರಂತೆ ಇದ್ದ ಪಟ್ಟದ ದೇವರು ಹೀಗೆ ಇದ್ದಕ್ಕಿದ್ದಂತೆಯೇ ಕಣ್ಮುಚ್ಚಿದುದನ್ನು ನೋಡಿ ಎಲ್ಲರಿಗೂ ದುಃಖ ಉಕ್ಕಿಬಂದು ಅಳಲು ಮೊದಲು ಮಾಡಿದಾಗ ಶ್ರೀ ಪತ್ರೆಯವರು, ಈಗ ಮೊದಲು ಅವರ ಊರಿಗೆ ಸುದ್ದಿಕಳಿಸಲು ಯಾರನ್ನಾದರೂ ಕಳಿಸಬೇಕು. ಯಾರನ್ನು ಕಳಿಸೋದು ಎನ್ನುತ್ತಿದ್ದರಂತೆಯೇ ದೇವರು. 'ಯಾರನ್ನೂ 'ಯಾರನ್ನೂ ಕಳಿಸೋದು

ಬೇಡ, ನಾನೆ ಹೋಗ್ತಿನಿಂತ' ಎದ್ದು ಬಂದಾಗ, ದುಃಖದ ಮಡುವಿನಲ್ಲಿ ಮುಳುಗಿದ್ದ ಮನೆಯೆಲ್ಲಾ ನಗೆಗಡಲಿನಲ್ಲಿ ತೇಲಾಡಲಾರಂಭಿಸಿತು.

ಒಂದು ದಿನ ದಾವಣಗೆರೆಯ ಭಾವ ಮೈದುನರು ಬಂದಿದ್ದರು. ರಾತ್ರಿ ಬಹಳ ಹೊತ್ತಿನವರೆಗೆ ಎಲ್ಲರೂ ಆತ್ಮೀಯವಾಗಿ ಮಾತನಾಡುತ್ತ ಕುಳಿತಿದ್ದರು. ಕೆಲವರ ಬಗೆಗಂತೂ ತುಂಬಾ ಪ್ರೀತಿ, ಸಲುಗೆ. ಎಲ್ಲರೂ ಕೂಡಿದಾಗ ಮನೆಯಲ್ಲಿ ತಮಾಷೆಯೇ ತಮಾಷೆ. ಎಲ್ಲರನ್ನೂ ನಗುವಿನ ಹೊಳೆಯಲ್ಲಿ ತೇಲಿಸಿ ಮನೆತುಂಬಾ ನಗೆಯ ಹೊಗೆ ತುಂಬುವಂತೆ ಮಾಡುತ್ತಿದ್ದುದು ಶ್ರೀಯುತರ ವೈಶಿಷ್ಟ್ಯ. ಅಂದು ಭಾವ ಮೈದುನ ಬಂದಾಗ ಎಲ್ಲರೂ ಮಾತು ಮುಗಿಸಿ, ತಡವಾಗಿ ಮಲಗಲು ಹೋದರು. ಬೆಳಿಗ್ಗೆ ಭಾವಮೈದುನ ಎದ್ದಾಗ ಅರ್ಧ ಮೀಸೆಯೇ ಇಲ್ಲ! ಪಾಪ ಅವರಿಗೆ ಅದು ಗೊತ್ತೇ ಇಲ್ಲ. ಅವರನ್ನು ನೋಡಿದ ಎಲ್ಲರಿಗೂ ನಗುವೋ ನಗು. ಅವರಿಗೋ ಏಕೆ ಇವರೆಲ್ಲಾ ಹೀಗೇ ನಗ್ತಾರೇಂತ ಗಾಬರಿ. ಆಗ ಶ್ರೀಯುತರು, 'ಛೇ! ಪಾಪ ರಾತ್ರಿ ಮೀಸೇನೇ ಇಲಿ ತಿಂದು ಬಿಟ್ಟಿದ್ಯಲ್ಲ', ಎಂದು ಹೇಳಿದವರೇ ಅಲ್ಲಿಂದ ಓಡಿದರಂತೆ. ಆಗ ಶ್ರೀಯುತರ ಗೊಣಗುತ್ತಿದ್ದ ಭಾವ ಮೈದುನನಿಗೆ ಇದು ಭಾವನ ಕೆಲಸವೇ ಎಂಬುದು ತಿಳಿಯಲು ಸಮಯ ಹಿಡಿಯಲಿಲ್ಲ.

ಗೆಳೆಯರನ್ನು ಗೇಲಿಮಾಡಿದ ನಿದರ್ಶನಗಳೆಷ್ಟೋ. ಆದರೆ ಅದರಲ್ಲಿ ಹೀಯಾಳಿಕೆಯಾಗಲೀ, ಅವಹೇಳನವಾಗಲೀ ಇರುತ್ತಿರಲಿಲ್ಲ. ಪ್ರೀತಿಯ ಸಲುಗೆ, ಎಲ್ಲರೂ ಕೂಡಿ ಆನಂದಿಸುವ ಉದ್ದೇಶ. ಒಮ್ಮೆ ಬೆಂಗಳೂರಿನ ದೇವರಾವ್ ಶಿವರಾವ್ ಕಂಪನಿಯ ಶ್ರೀ ದೇವರಾವ್‌ರವರು ಕಾಫೀ ತೋಟವನ್ನು ನೋಡಲು ಬೀರೂರಿಗೆ ರೈಲಿನಲ್ಲಿ ಬಂದು ಅಲ್ಲಿಂದ ಕಾರಿನಲ್ಲಿ ಶ್ರೀಯುತರ ಕುಟುಂಬದೊಂದಿಗೆ ಇದ್ದು ಕಾಫೀ ತೋಟಕ್ಕೆ ಹೋದರು. ಸುಮಾರು ಒಂದುವಾರ ಅವರುಗಳ ಜೊತೆ ಇದ್ದರು. ಒಂದು ದಿನ ದೇವರಾವ್‌ರವರು ಸಾವಿರಾರು ರೂಪಾಯಿಗಳಿದ್ದ ಹಣದ ಚೀಲವನ್ನು ಕುಳಿತಲ್ಲಿಯೇ ಬಿಟ್ಟು ಮರೆತು ಹೋದರು. ಆಳು ಕಾಳುಗಳು ಬೇಕಾದ ಹಾಗೆ ಓಡಾಡುವ ಸ್ಥಳ. ಶ್ರೀಯುತರೆಂದೂ careless ಆಗಿ ಇದ್ದವರಲ್ಲ. ಬೇರೆಯವರಿದ್ದರೂ ಅವರು ಸಹಿಸುತ್ತಿರಲಿಲ್ಲ. ಈಗ ಇವರಿಗೆ ಬುದ್ಧಿಕಲಿಸಬೇಕೆಂದು ಹಣದ ಚೀಲವನ್ನು ತಮ್ಮ ಜೇಬಿಗೆ ಇಳಿಬಿಟ್ಟರು. ಏನೂ ಕಾಣದವರಂತೆ ಸುಮ್ಮನಿದ್ದರು. ಆ ದಿನ ಸಂಜೆ ದೇವರಾವ್‌ರವರಿಗೆ ತಮ್ಮ ಹಣದ ಚೀಲದ ಜ್ಞಾಪಕ ಬಂತು. ಹುಡುಕಾಡಿದರು, ಸಿಗಲಿಲ್ಲ. ಬಹಳ ಭಯಗೊಂಡರು. ಪತ್ರೆಯವರು ಇದನ್ನೆಲ್ಲಾ ಗಮನಿಸಿಯೂ ಒಳಗೊಳಗೆ ನಗುತ್ತಾ ಏನೂ ಕಾಣದವರಂತೆ ಸುಮ್ಮನಿದ್ದರು. ದೇವರಾವ್‌ರಿಗೆ ತಮ್ಮ ಹಣದ ಚೀಲ ನಾಪತ್ತೆಯಾಗಿರುವುದು ಖಾತ್ರಿಯಾಯಿತು. ಬಾಯಿಬಿಡುವುದು ಹೇಗೆ? ಏನು ತಿಳಿದುಕೊಂಡಾರೆಂಬ

ಸಂಕೋಚ. ಆದರೆ ಹಣಕ್ಕೇನು ಮಾಡಬೇಕು, ಊರಿಗೆ ಹೋಗಲು ರೈಲು ಛಾರ್ಜಿಗೂ ಕಾಸಿಲ್ಲ. ಇವರನ್ನು ಹಣಕ್ಕಾಗಿ ಕೇಳುವುದಾದರೂ ಹೇಗೆ. ಪಾಪ ಒಳಗೇ ಒದ್ದಾಡುತ್ತಿದ್ದರು. ಅನ್ನುವಂತಿಲ್ಲ, ಅನುಭವಿಸುವಂತಿಲ್ಲ. ಮನಸ್ಸಿನ ತುಂಬೆಲ್ಲಾ ತಳಮಳ. ಆಗ ಪತ್ರೆಯವರು, 'ಯಾಕ್ರಿ ಒಂಥರಾ ಇದ್ದೀರಲ್ಲಾ, ಮೈ ಸರಿ ಇಲ್ವೆ ಏನ್ಸಮಾಚಾರ' ಎಂದು ವಿಚಾರಿಸಿದರು. 'ಏನಿಲ್ಲ ಚೆನ್ನಾಗಿದ್ದೇನೆ' ಎಂದು ಗೊಣಗಿದರು, ದೇವರಾವ್. ಮರುದಿನ ದೇವರಾವ ಊರಿಗೆ ಹೊರಡಬೇಕಿತ್ತು. ಆತ ಚಡಪಡಿಸುತ್ತಿದ್ದರು. ಆಗ ಶ್ರೀಯುತರು ಇನ್ನೂ ಸತಾಯಿಸುವುದು ಸರಿಯಲ್ಲವೆಂದು ತಿಳಿದು, ರಾವ್‌ರ ಬೆನ್ನು ತಟ್ಟಿ, 'ಗಾಬರಿಯಾಗಬೇಡಿ, ಇದೋ ನಿಮ್ಮ ಹಣದ ಚೀಲ, ಹಣ ಸರಿಯಾಗಿದೆಯೇ ಎಣಿಸಿಕೊಳ್ಳಿ' ಎಂದು ಚೀಲವನ್ನು ಅವರ ಕೈಗೆ ಕೊಟ್ಟಾಗ ರಾವ್‌ರಿಗೆ ಆಶ್ಚರ್ಯ – ಆನಂದ 'ಹೀಗೆಲ್ಲಾ ಎಲ್ಲಂದರಲ್ಲೇ ನಿಮ್ಮ ವಸ್ತುಗಳನ್ನು ಬಿಟ್ಟು ಹೋಗಬೇಡಿ. ಜೋಪಾನ' ಎಂದು ಎಚ್ಚರಿಸಿ, ತಮ್ಮ ಕಾರಲ್ಲೇ ಬೀರೂರಿಗೆ ಕರೆದುಕೊಂಡು ಹೋಗಿ ರೈಲು ಹತ್ತಿಸಿ ಬಂದ ಉದಾರಿಗಳಿವರು.

ಚನ್ನವೀರಪ್ಪಯ್ಯನವರು ಪಾಶ್ಚಿಮಾತ್ಯ ದೇಶಗಳನ್ನು ಸುತ್ತಾಡಿಕೊಂಡು ಬಂದಿದ್ದರು. ಅನೇಕ ವಿದೇಶಿ ಗೆಳೆಯರಿದ್ದರು. ಅವರು ಭಾರತಕ್ಕೆ ಬಂದಾಗ ಶ್ರೀಯುತರ ಮನೆಗೂ ಬಂದು ಆತಿಥ್ಯ ಪಡೆದು ಹೋಗುತ್ತಿದ್ದರು. ಒಮ್ಮೆ ಅಮೆರಿಕೆಯ ಕೆಲ ಮಿತ್ರರು ಅವರ ಮನೆಗೆ ಬಂದಿದ್ದರು. ಆಗ ತಮ್ಮ ಕುಟುಂಬದ ನಿಕಟ ಸ್ನೇಹಿತರಾದ ರಾಮಗಿರಿ ಪಟ್ಟದ ದೇವರೂ ಮನೆಗೆ ಬಂದಿದ್ದರು. ಅವರಿಗೆ ಮಿಂಚುವ ಕರಿಬಣ್ಣವನ್ನು ಪೂರ್ಣ ಬಳಿದು ನಿಗ್ರೋವಿನ ಹಾಗೆ ಉಡುಪು ಹಾಕಿ, ಆ ಬಿಳಿಯರಿಗೆ ಆಫ್ರಿಕಾದಿಂದ ಈ ನಿಗ್ರೋವನ್ನು ತಂದು ಸಾಕಿದ್ದೇನೆ. ಈತನಿಗೆ ಇಂಗ್ಲಿಷ್ – ಕನ್ನಡ ಭಾಷೆಗಳೂ ಬರುತ್ತವೆಂದು ತಿಳಿಸಿದರು. ಅವರೆಲ್ಲಾ ನಿಜವೆಂದು ನಂಬಿ ಈತನೊಡನೆ ಆಫ್ರಿಕಾದ ಬಗೆಗೆ ಅನೇಕ ಪ್ರಶ್ನೆಗಳನ್ನು ಕೇಳಿದಾಗ ನಿಜಾಂಶ ಗೊತ್ತಾಗಿ ಎಲ್ಲರೂ ಬಿದ್ದುಬಿದ್ದು ನಕ್ಕರು.

ಹೀಗೆ ಶ್ರೀಯುತರಲ್ಲಿ ಹಾಸ್ಯವನ್ನು ಸೃಷ್ಟಿಸುವ ಕಲೆ ಕರಗತವಾಗಿತ್ತು. ಈ ಒಂದು ಚತುರತೆಯಿಂದ ಮನೆತುಂಬಾ ಹಾಸ್ಯದ ಹೊನಲನ್ನು ಹರಿಸಿ ಎಲ್ಲರನ್ನೂ ಸಂತೋಷದ ಸಾಗರದಲ್ಲಿ ಓಲಾಡಿಸುತ್ತಿದ್ದರು. ಮನೆಯನ್ನು ಒಂದು ನಂದನವನವಾಗಿಸಿ ಆನಂದಲ್ಲಿ ತೇಲಾಡುವಂತೆ ಮಾಡುತ್ತಿದ್ದರು.

■

ಅಂಕಪರದೆ

ಪತ್ರೆ ಚನ್ನವೀರಪ್ಪಯ್ಯನವರು ತಮ್ಮ ಎಪ್ಪತ್ತೆರಡನೆಯ ವಯಸ್ಸಿನವರೆಗೂ ಚಟುವಟಿಕೆಯಿಂದಲೇ ಇದ್ದರು. ಮನೆಯ ತೋಟದ ಕೆಲಸಗಳನ್ನು ಮೊದಲಿನಂತೆಯೇ ನಿಗಾವಹಿಸಿ ತಾವೇ ನೋಡಿಕೊಳ್ಳುತ್ತಿದ್ದರು. ಆದರೂ ಇಷ್ಟರಲ್ಲಾಗಲೇ ಹಿರಿಯ ಮಗನಿಗೆ ಎಲ್ಲಾ ವಿಚಾರಗಳನ್ನು ತಿಳಿಸಿದ್ದರು ನಿರ್ವಹಣೆಯ ತರಬೇತಿಯನ್ನು ಕೊಟ್ಟಿದ್ದರು. ಕೊನೆಯ ಒಂದು ವರ್ಷದಲ್ಲಿ ಅವರು ಹೃದಯ ಮತ್ತು ಮೂತ್ರಪಿಂಡ ತೊಂದರೆಯಿಂದ ಬಳಲಿದರು. ಬೆಂಗಳೂರಿನ ಆಸ್ಪತ್ರೆಯಲ್ಲಿ ಆಗಾಗ್ಗೆ ಚಿಕಿತ್ಸೆ ಆದರೆ ಹೃದಯ ಹಾಗೂ ಮೂತ್ರ ಪಿಂಡಗಳು ದುರ್ಬಲವಾಗುತ್ತಾ ಹೋಗಿ ೧೯೭೦ನೇ ಇಸವಿ ಡಿಸೆಂಬರ್ ೩೦ನೇ ತಾರೀಖು ಕೈಲಾಸವಾಸಿಗಳಾದರು. ಆಗ ಅವರಿಗೆ ಎಪ್ಪತ್ತಮೂರು ವರ್ಷಗಳಾಗಿದ್ದವು.

ಶ್ರೀಯುತರಿಗೆ ಅನೇಕ ವಿಷಯಗಳಲ್ಲಿ ತಮ್ಮದೇ ಆದ ವಿಚಾರಗಳಿದ್ದವು. ಮನುಷ್ಯ ಸತ್ತ ನಂತರ ಶವಕ್ಕೆ ಮಂಟಪ ಕಟ್ಟಿ ಮಾವಿನ ತೋರಣ, ಬಾಳೆಕಂದುಗಳಿಂದ ಸಿಂಗರಿಸಿ, ನಾಲ್ಕು ಜನ ಹೊತ್ತುಕೊಂಡು ಹೋಗುವದು, ವಾದ್ಯ ಮಾಡಿಕೊಂಡು ಊರು ತುಂಬಾ ಮೆರವಣಿಗೆ ಮಾಡುವದು ಅವರಿಗೆ ಸರಿ ಎನ್ನಿಸುತ್ತಿರಲಿಲ್ಲ. ಆದುದರಿಂದ ತಮ್ಮ ಶವವನ್ನು ಯಾರೂ ಹೊರದೆ ವಾಹನದ ಮೇಲೆ ಮಲಗಿಸಿ ಒಯ್ಯಬೇಕಾಗಿಯೂ ತಳಿರು ತೋರಣಗಳಿಂದ ಅಲಂಕರಿಸಬಾರದೆಂದೂ, ವಾದ್ಯ ಬೇಡವೆಂದೂ, ಶವವನ್ನು ಸಮಾಧಿ ಸ್ಥಾನಕ್ಕೆ ಒಯ್ಯುವ ಬೀದಿಯಲ್ಲದೆ, ಬೇರೆ ದಾರಿಗಳಲ್ಲಿ ವೃಥಾ ಮೆರವಣಿಗೆ ಮಾಡಬಾರದೆಂದೂ ಕಟ್ಟುನಿಟ್ಟಾದ ಸೂಚನೆ ಕೊಟ್ಟಿದ್ದರಂತೆ. ಆ ಪ್ರಕಾರವೇ ಅವರ ಪುತ್ರ ಶವಸಂಸ್ಕಾರಕ್ಕೆ ವ್ಯವಸ್ಥೆ ಮಾಡಿದ್ದರು. ನಾಡಿನ ಪುಣ್ಯಪುರುಷರೊಬ್ಬರನ್ನು ಕಳೆದುಕೊಂಡ ಕನ್ನಡ ಜನ ಕಣ್ಣೀರಿಟ್ಟರು. ಬಂಧು ಬಳಗದವರು ದುಃಖದಲ್ಲಿ ಮುಳುಗಿದರು. ಮನುಷ್ಯರ ಜೀವನದಲ್ಲಿ ಸಾವೇ ಅಂತ್ಯ ನಿಜ. ಆದರೆ ಶ್ರೀಚನ್ನವೀರಪ್ಪಯ್ಯನವರಂತೆ ಬದುಕನ್ನು ಗೆದ್ದು, ಸಾವನ್ನು ಗೆದ್ದ ಪುಣ್ಯಾತ್ಮರು ವಿರಳ. ಅಂಥವರೇ ಸಮಾಜದ ಪುಣ್ಯಪುರುಷರು, ಪ್ರಾತಃಸ್ಮರಣೀಯರು.

ಸತ್ಪುತ್ರರಾದ ಸದಾಶಿವನ್ ತಮ್ಮ ತಂದೆಯವರ ಸಮಾಧಿಯ ಮೇಲೆ ಬಸವಣ್ಣನ ವಿಗ್ರಹ ಸ್ಥಾಪಿಸಿ, ದಿನವೂ ಪೂಜೆ ಮಾಡುವ ಏರ್ಪಾಟು ಮಾಡಿದ್ದಾರೆ. ಪೂಜೆ ಮಾಡುವ ಜಂಗಮರಿಗೆ ಬಟ್ಟೆ, ಭತ್ಯೆ, ಪ್ರಸಾದದ ಏರ್ಪಾಟು ಮಾಡಿ, ಸತತ ಪೂಜೆಯ ವ್ಯವಸ್ಥೆ ಮಾಡಿದ್ದಾರೆ. ಪ್ರತಿವರ್ಷ ಡಿಸೆಂಬರ ಮೂವತ್ತರಂದು ಮಕ್ಕಳು, ಮೊಮ್ಮಕ್ಕಳು, ಸೊಸೆಯಂದಿರು ಅಳಿಯಂದಿರೂ ಎಲ್ಲರೂ ಕೂಡಿ ಚನ್ನವೀರಪ್ಪಯ್ಯನವರ ಪುಣ್ಯ ತಿಥಿಯನ್ನು ಆಚರಿಸುವ ಸತ್ಸಂಪ್ರದಾಯವನ್ನು

ಸದಾಶಿವನ್ ಹಾಕಿಕೊಂಡಿದ್ದಾರೆ. ಇದರಿಂದ ತಮ್ಮ ಬಂಧುಬಳಗದವರೆಲ್ಲಾ ವರ್ಷಕ್ಕೊಮ್ಮೆ ಒಂದೆಡೆ ಸೇರುವ ಅವಕಾಶವನ್ನು ಕಲ್ಪಿಸಿದ್ದಾರೆ. ಅಲ್ಲದೆ ಆ ಪುಣ್ಯದಿನಕ್ಕೆ ಎರಡು ಮೂರು ದಿನ ಮೊದಲೇ ಚನ್ನವೀರಪ್ಪಯ್ಯ-ಕಲ್ಯಾಣ ಮಂಟಪದ ಟ್ರಸ್ಟಿನ ವತಿಯಿಂದ ಊರಿನ ಜನಕ್ಕೆ ಉಪಕಾರವಾಗುವಂತಹ ಕಾರ್ಯಕ್ರಮವೊಂದನ್ನು ಹಮ್ಮಿಕೊಳ್ಳುತ್ತಾರೆ. ಒಮ್ಮೆ ಮೋದಿಯವರನ್ನು ಕರೆಸಿ 'ಕಣ್ಣಿನ ಶಿಬಿರ'ವನ್ನೇರ್ಪಡಿಸಿದ್ದರು. ಆಗ ಇವರ ಮನೆಯ ಮಕ್ಕಳೆಲ್ಲಾ ಸ್ವಯಂ ಸೇವಕರಾಗಿ ಆಪರೇಷನ್ ಆದ ಕಣ್ಣಿನ ರೋಗಿಗಳ ಆರೈಕೆ ಮಾಡಿದರು. ಮತ್ತೊಮ್ಮೆ ಕಿವಿ, ಮೂಗು, ಗಂಟಲು ತಪಾಸಣೆ ಹಾಗೂ ಚಿಕಿತ್ಸೆಯ ವ್ಯವಸ್ಥೆ ಮಾಡಿದ್ದರು. ಇನ್ನೊಮ್ಮೆ ಊರಿನ ಶಾಲೆಗಳ ಎಲ್ಲಾ ಬಡಮಕ್ಕಳಿಗೆ ಉಚಿತ ಉಡುಪನ್ನು ಹಂಚುವ ಯೋಜನೆ ಹಾಕಿ ಕೊಂಡಿದ್ದರು. ಟ್ರಸ್ಟಿನ ಹಣ ಅರ್ಧ ಖರ್ಚಿಗೂ ಸಾಧ್ಯವಿಲ್ಲ. ಆಗ ಪ್ರತಿ ವರ್ಷವೂ ಸಾವಿರಾರು ರೂಪಾಯಿಗಳನ್ನು ಸದಾಶಿವನ್‌ರವರೇ ಖರ್ಚುಮಾಡಿ ಯೋಜಿತ ಕಾರ್ಯವೂ ಯಶಸ್ವಿಯಾಗುವಂತೆ ಮಾಡುತ್ತಾರೆ. ಸದಾಶಿವನ್‌ರವರ ಈ ಎಲ್ಲ ಕೆಲಸಗಳಲ್ಲೂ ಸೋದರ ವಿನಾಯಕ ಅಣ್ಣನಿಗೆ ಬೆಂಬಲವಾಗಿ ನಿಂತುಕೊಂಡಿರುತ್ತಾರೆ. ಹೀಗೆ ಚನ್ನವೀರಪ್ಪಯ್ಯನವರ ಪುತ್ರರು ಮನೆತನದ ಖ್ಯಾತಿಯನ್ನು, ಘನತೆ, ಗೌರವಗಳನ್ನು ಹೆಚ್ಚಿಸುವ ಸತ್ಪುತ್ರರಾಗಿ ಬಾಳುತ್ತಿದ್ದಾರೆ. ಬೀರೂರು ಪ್ರಾಂತದ ಜನಸಾಮಾನ್ಯರೂ, ಶ್ರೀಮಂತರೂ, ಮಧ್ಯಮ ವರ್ಗದವರೂ ಈ ಎಲ್ಲ ಕಾರ್ಯಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿರುವರು. ಪುತ್ರ ಶ್ರೀ ಸದಾಶಿವನ್ ಹಾಗೂ ಪುತ್ರ ಶ್ರೀ ವಿನಾಯಕರು, ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ರಂಗದಲ್ಲಿ ಜನರೊಡನೆ ಬೆರೆತು ಬಾಳುತ್ತಿರುವ ರೀತಿ, ಗೌರವಾನ್ವಿತವಾದುದು, ಅನುಕರಣೀಯವಾದುದು.

■

## ಸತ್ಪುತ್ರರಾದ ಸದಾಶಿವನ್ – ವಿನಾಯಕ

ಶ್ರೀ ಚನ್ನವೀರಪ್ಪಯ್ಯನವರ ಜ್ಯೇಷ್ಠ ಪುತ್ರರಾದ ಸದಾಶಿವನ್‌ರವರು ತಂದೆ ಹೆಮ್ಮೆ ಪಡುವಂತಹ, ಮನೆತನಕ್ಕೆ ಗೌರವ ತರುವಂತಹ ಸತ್ಪುತ್ರ. ಅವರು ಸದ್ಗುಣಗಳಲ್ಲಿ ತಂದೆಯನ್ನು ಮೀರಿಸುವಂತಹವರಾಗಿದ್ದಾರೆ. 'ಶಿಷ್ಯಾದಿಚ್ಛೇತ್ ಪರಾಜಯಃ, ಎಂದು ಶ್ರೇಷ್ಠನಾದ ಗುರು, ತನ್ನ ಶಿಷ್ಯನು ಪಾಂಡಿತ್ಯದಲ್ಲಿ ತನ್ನನ್ನು ಸೋಲಿಸಿದಾಗ ಹೆಮ್ಮೆಪಟ್ಟುಕೊಳ್ಳುತ್ತಾನೆ. ತನ್ನ ಶಿಷ್ಯನಿಂದಾದ ತನ್ನ ಸೋಲು ತನಗೆ ಗೌರವ ಎಂದು ಭಾವಿಸುತ್ತಾನೆ. ಹಾಗೆ ತಂದೆಗೆ ತನ್ನ ಮಕ್ಕಳು ತನಗಿಂತ ಮಿಗಿಲಾಗಿ ಬಾಳಿದರೆ ತಂದೆಗೆ ಆಗುವ ಸಂತೋಷ ಮತ್ತಾವುದರಿಂದಲೂ ಆಗುವದಿಲ್ಲ. ಅಂತಹ ಸಂತೋಷ ತಂದೆಗೆ ಉಂಟು ಮಾಡುವ ಹೆಗ್ಗಳಿಕೆ ಸದಾಶಿವನ್‌ರದ್ದು. ಕುಟುಂಬ ಹಾಗೂ ಸಮಾಜ ಎರಡರಲ್ಲೂ ತುಂಬಾ ಉನ್ನತವಾಗಿ ಬಾಳುತ್ತಿರುವ

ವ್ಯಕ್ತಿ ಇವರು. ಗುಣ ಹಾಗೂ ಐಶ್ವರ್ಯ ಎರಡೂ ಒಂದೆಡೆ ಸೇರುವುದು ಸುಕೃತವಿದ್ದವರಿಗೆ ಮಾತ್ರ ಧಾರ್ಮಿಕ ವಿಚಾರಗಳಲ್ಲಿ ತಂದೆಗಿಂತ ಮಿಗಿಲಾದ ಆಸಕ್ತಿ ಉಳ್ಳವರು. ಚನ್ನವೀರಪ್ಪಯ್ಯನವರು ತಮ್ಮ ಮಗನನ್ನು ಉತ್ತಮ ರೀತಿಯಿಂದ ಪೋಷಿಸಿದಂತೆ ಇವರೂ ಸಹ ತಮ್ಮ ಏಕಮಾತ್ರ ಪುತ್ರ ದೇವದತ್ತನನ್ನು ಬಹಳ ಶ್ರೇಷ್ಠದರ್ಜೆಯ ವ್ಯಕ್ತಿಯನ್ನಾಗಿ ರೂಪಿಸಿದ್ದಾರೆ. ಇದರಲ್ಲಿ ಅವರ ಪತ್ನಿ ಶೈಲಜಾರವರೂ ಸಹಭಾಗಿಗಳು. ಜನರು ರಾಷ್ಟ್ರಕ್ಕೆ ಬೇರೆಯಾದ ರೀತಿಯಲ್ಲಿ ಸೇವೆ ಮಾಡಲು ಸಾಧ್ಯವಿಲ್ಲದಿದ್ದರೂ ಸಮಾಜ ಕಂಟಕರಾದ ಕುಪುತ್ರರನ್ನು ಸಮಾಜಕ್ಕೆ ಕೊಡದಿದ್ದರೆ ಮಹದುಪಕಾರ. ಸಮಾಜದ ಏಳ್ಗೆಗೆ ಸಹಾಯಕರಾಗುವ ಸುಪುತ್ರರನ್ನು ಕೊಟ್ಟರೆ, ಅದಕ್ಕಿಂತ ದೇಶಸೇವೆ ಮತ್ತೊಂದಿಲ್ಲ. ಪತ್ರೆಯ ಮನೆತನ ಕೇವಲ ತಮ್ಮ ಹಿತಕ್ಕಷ್ಟೇ ಸೀಮಿತವಾಗದೆ ದೇಶದ, ಸಮಾಜದ ಉನ್ನತಿಗೂ ಸಹಕಾರಿಯಾಗುವ ಮಕ್ಕಳನ್ನು ಸಮಾಜಕ್ಕೆ ಅರ್ಪಿಸುತ್ತಿರುವುದು ಸಮಾಜದ ಪುಣ್ಯ, ನಾಡಿನ ಭಾಗ್ಯ.

ಚನ್ನವೀರಪ್ಪಯ್ಯನವರು ಕುಳಿತಲ್ಲಿಂದಲೇ ಧಾರಾಳವಾಗಿ ಧನ ಸಹಾಯ ಮಾಡುತ್ತಿದ್ದರು. ತಮಗೆ ಆಪ್ತರಾದವರನ್ನು ಮನೆಗೆ ಕರೆಸಿಕೊಂಡು ಮಾತನಾಡುತ್ತಿದ್ದರೇ ವಿನಃ ಸಾರ್ವಜನಿಕವಾಗಿ ಎಲ್ಲಿಯೂ ಹೋಗುತ್ತಿರಲಿಲ್ಲ. ದೊಡ್ಡ ಮನೆತನದವರು ಹಾಗಿರುತ್ತಿದ್ದುದು ಆಗಿನ ಸಮಾಜದ ರೀತಿಯಾಗಿತ್ತು. ಆದರೆ ಬರುಬರುತ್ತಾ, ಅದರಲ್ಲೂ ಸ್ವಾತಂತ್ರ್ಯ ನಂತರ ಸಮಾಜದ ರೀತಿ ನೀತಿಗಳಲ್ಲಿ ಬದಲಾವಣೆಗಳಾದವು ಪ್ರಜಾರಾಜ್ಯ ಸ್ಥಾಪನೆಯಾದ ಮೇಲಂತೂ ಬಡವ-ಬಲ್ಲಿದ ಮಾಲಿಕ-ಸೇವಕ, ಹಿರಿಯ-ಕಿರಿಯ, ವಿದ್ಯಾವಂತ-ಅವಿದ್ಯಾವಂತ ಮುಂತಾದವುಗಳ ನಡುವಿದ್ದ ತಾರತಮ್ಯಗಳಿಲ್ಲವಾದವು. ರೀತಿ ನೀತಿಗಳಲ್ಲೂ ಬೃಹತ್ ಬದಲಾವಣೆ ಬೆಳೆದು ಬಂದವು. ನಿಜವಾದ ಸುಸಂಸ್ಕೃತ ಮನುಷ್ಯ ಕಾಲಾನುಕಾಲಕ್ಕೆ ಆಗುವ ಬದಲಾವಣೆಗಳಿಗೆ ಸಹಜವಾದ ರೀತಿಯಲ್ಲಿ ಸ್ಪಂದಿಸುತ್ತಾನೆ. ಘರ್ಷಣೆ ಇಲ್ಲದೆ, ತನ್ನ ತತ್ವಕ್ಕೂ ಚ್ಯುತಿಬರದ ರೀತಿಯಲ್ಲಿ ತನ್ನಲ್ಲೂ ಬದಲಾವಣೆ ಮಾಡಿಕೊಳ್ಳುತ್ತಾನೆ. ಹಾಗೆ ಹೊಂದಿಕೊಳ್ಳಲಾರದವರು ಅನೇಕ ತೊಂದರೆಗಳಿಗೆ, ಸಮಸ್ಯೆಗಳಿಗೆ ಒಳಗಾಗುತ್ತಾರೆ. ಆದರೆ ಮೊದಲಿನಿಂದಲೂ ಬದುಕಿನಲ್ಲಿ ಸರಳತೆಯನ್ನು ಮೆಚ್ಚಿಕೊಂಡಿದ್ದ ಈ ಪತ್ರೆಯವರ ಕುಟುಂಬಕ್ಕೆ ಬದಲಾವಣೆಗೆ ಹೊಂದಿಕೊಳ್ಳುವದು ಕಷ್ಟವಾಗಲಿಲ್ಲ. ಈಗಿನ ಪೀಳಿಗೆಯವರಲ್ಲಿ ಹಿಂದಿನ ಪೀಳಿಗೆಗೆ ಸೇರಿದ ರಾಜಠೀವಿಯಲ್ಲಿ ಬದುಕಿದ ಅನ್ನಪೂರ್ಣಮ್ಮನವರೂ ಹಿಂದೆ ಅವರನ್ನು ನೋಡಿದ್ದವರು ಆಶ್ಚರ್ಯಪಡುವ ರೀತಿಯಲ್ಲಿ, ಇಂದು ಸಾರ್ವಜನಿಕ ಜೀವನಕ್ಕೆ ಹೊಂದಿಕೊಂಡಿರುವದು ಅಚ್ಚರಿಪಡುವಂತಿದೆ, ಅನುಕರಿಸುವಂತಿದೆ. ಪತ್ರೆ ಶಿವಪ್ಪಯ್ಯನವರ ಪತ್ನಿಯೂ ಅನ್ನಪೂರ್ಣಮ್ಮನವರ ಖಾಸಾ ತಂಗಿಯೂ ಆದ ಪಾರ್ವತಮ್ಮನವರು ಸ್ವಭಾವದಲ್ಲಿ ರೀತಿ ನೀತಿಗಳಲ್ಲಿ ಸರಳತೆಯೇ ಮೂರ್ತಿವೆತ್ತಂತೆ

ಇದ್ದಾರೆ. ಇಂತಹ ಮೌಲ್ಯಗಳಲ್ಲಿ ಬದುಕಿದ ಈ ಮನೆಯವರು ಬದಲಾದ ಸಮಾಜದಲ್ಲಿಯೂ (ಅವರು ಶ್ರೀಮಂತರಿದ್ದರೆ ಅವರಿತ್ತ್ಯಾರೆ. ನಮ್ಗೇನು ಎನ್ನುವಂತಹ" ಎಲ್ಲರಿಂದ ಗೌರವಾದರಗಳನ್ನು ಪಡೆಯುತ್ತಿದ್ದಾರೆ. ಸದಾಶಿವನ್‌ರಿಗೆ ದೊಡ್ಡ ದೊಡ್ಡ ಶ್ರೀಮಂತರ, ಉನ್ನತ ಸ್ಥಾನದ ಗೆಳೆಯರಿದ್ದಂತೆ, ಅತ್ಯಂತ ಬಡವರೂ ಮಧ್ಯಮ ವರ್ಗಕ್ಕೆ ಸೇರಿದವರೂ ಅವರ ಆಪ್ತ ವರ್ಗದಲ್ಲಿ ಸೇರಿದ್ದಾರೆ. ಅವರ ಮನೆಯ ಅಡಿಗೆಯ ಕೆಲಸದಲ್ಲಿದ್ದ ಮಲ್ಲಪ್ಪನ ಮಗಳ ಮದುವೆಯಾದಾಗ, ಅವರ ಮನೆಯ ಮದುವೆಗೆ ಹೋಗಿ, ಆ ಪುಟ್ಟ ಮನೆಯಲ್ಲಿ ಮೂಲೆಯಲ್ಲಿದ್ದ ಚೀಲವೊಂದರ ಮೇಲೆ ಕುಳಿತು ಕೈಲಿ ಪ್ಲೇಟು ಹಿಡಿದುಕೊಂಡು ಊಟ ಮಾಡಿ ಬರುವಷ್ಟು ಸರಳತನಕ್ಕೆ ತಾಯಿ ತಂದೆಯರು ಪೋಷಿಸಿದ ರೀತಿಯೇ ಕಾರಣ.

ಸದಾಶಿವನ್‌ರವರು ತಮ್ಮ ಶ್ರೀ ವಿನಾಯಕ ಸಾಹಿತ್ಯ, ನಾಟಕ, ಸಂಗೀತ, ಫೋಟೋಗ್ರಾಫಿ ಮುಂತಾದ ಕಲೆಗಳಲ್ಲಿ ಅಭಿರುಚಿ ಉಳ್ಳವರು. ಚಿಕ್ಕ ವಯಸ್ಸಿನಿಂದಲೂ ಗೆಳೆಯರ ಬಳಗ ಕಟ್ಟಿಕೊಂಡು ತಮ್ಮ ಮನೆಯಲ್ಲೇ ಪ್ರಾಕ್ಟೀಸ್ ಮಾಡಿ ನಾಟಕಗಳನ್ನಾಡಿಸುತ್ತಿದ್ದುದುಂಟು. ಆಗ ತಾವೂ ಅನೇಕ ಪಾತ್ರಗಳನ್ನು ಉಚ್ಚ ಕಲಾವಿದರ ಮಟ್ಟದಲ್ಲಿ ವಹಿಸಿ, ಕೀರ್ತಿ ಪಡೆದಿದ್ದಾರೆ. ಅವರ ತಂದೆಯವರು ಇಂತಹ ಚಟುವಟಿಕೆಗಳಿಗೆ ಪ್ರೋತ್ಸಾಹ ಕೊಡುತ್ತಿದ್ದರು. ಮಗಳು ಸುಶೀಲಮ್ಮಗೆ ಮೊದಲಿನಿಂದಲೂ ಚಿತ್ರಕಲೆಯಲ್ಲಿ ಬಹು ಆಸಕ್ತಿ. ಮಕ್ಕಳ ಈ ಸುಪ್ತ ಕಲೆಗಳ ವಿಕಸನಕ್ಕೆ ತಂದೆ ಪ್ರೋತ್ಸಾಹಿಸುತ್ತಿದ್ದರು. ವಿನಾಯಕರವರ ಎಚ್ಚಮನಾಯಕನ ಪಾತ್ರ, ಥ್ಯಾಕರೆಯ ಪಾತ್ರ ನೋಡಿದವರ ಮನಸ್ಸಿನಲ್ಲಿ ಅಚ್ಚಳಿಯದೇ ಸದಾ ಉಳಿಯುವಂತಹುಗಳು. ನುರಿತ ನಟನ ಪಾತ್ರದಂತಿತ್ತೆಂದು ನೋಡಿದವರೆಲ್ಲರ ಪ್ರಶಂಸೆ. ಅವರ ಈ ಕಲಾಪ್ರೇಮ ಕೇವಲ ನಾಟಕವಾಡುವುದರಲ್ಲಿ, ಆಡಿಸುವದರಲ್ಲೇ ಮುಗಿಯಲಿಲ್ಲ. ಸಿನೇಮಾ ತೆಗೆಯುವವರೆಗೂ ಮುಂದುವರಿದು, ಪೂರ್ಣಚಂದ್ರ ತೇಜಸ್ವಿಯವರ ಅಬಚೂರು ಪೋಸ್ಟಾಫೀಸು ಎಂಬ ಚಿತ್ರವನ್ನು ನಿರ್ಮಾಣ ಮಾಡಿದರು. ಅದು ಉತ್ತಮ ಕನ್ನಡ ಚಿತ್ರವೆಂದು ಪರಿಗಣಿಸಲ್ಪಟ್ಟು ರಾಷ್ಟ್ರಪತಿಯವರ ರಜತ ಪದಕ ಗಿಟ್ಟಿಸಿದೆ. ಈ ಸಿನೇಮಾದಲ್ಲಿ ವಿನಾಯಕ ಹಳ್ಳಿಯ ಬಸ್ಸಿನ ಡ್ರೈವರನ ಒಂದು ಸಣ್ಣ ಪಾತ್ರವನ್ನು ವಹಿಸಿದ್ದಾರೆ. ಹೀಗೆ ಅನೇಕ ಕಲೆಗಳ ಸಂಬಂಧಿ ಚಟುವಟಿಕೆಗಳಲ್ಲಿ ಆಸಕ್ತಿ ಇರುವ ಇವರ ವಾಸ್ತವ್ಯ ಬೆಂಗಳೂರಲ್ಲಿ. ತಮ್ಮನ ಈ ಆಸಕ್ತಿಗೆ ಅಣ್ಣನ ಪ್ರೋತ್ಸಾಹ ಅಣ್ಣನ ಸಾರ್ವಜನಿಕ ಕಾರ್ಯಗಳಲ್ಲಿ ತಮ್ಮನ ಸಹಕಾರ. ಸಾಮಾನ್ಯವಾಗಿ ಮನೆತನಗಳಲ್ಲಿ ಹುಟ್ಟುತ್ತಾ ಹುಟ್ಟುತ್ತಾ ಅಣ್ಣತಮ್ಮಂದಿರಾಗಿ ಬೆಳೆದವರು ಬೆಳೆಯುತ್ತಾ ಬೆಳೆಯುತ್ತಾ ದಾಯಾದಿಗಳಾಗುತ್ತಾರೆ. ಒಬ್ಬರಿಗೊಬ್ಬರು ಹೊಟ್ಟೆಕಿಚ್ಚು ಪಡುತ್ತಾರೆ. ಮೋಸ ಮಾಡುತ್ತಾರೆ! ಆದರೆ ಈ ಅಣ್ಣತಮ್ಮಂದಿರು ಇಂದಿಗೂ ಅಣ್ಣತಮ್ಮಂದಿರಾಗಿಯೇ ಉಳಿದಿದ್ದಾರೆ. ವಿನಾಯಕರವರು ಕಲೆಯ ಕೆಲಸಗಳಲ್ಲಿ

ಮುಳುಗಿದಾಗ ಆಸ್ತಿಯ ಮೇಲ್ವಿಚಾರಣೆಗೆ ಅವಕಾಶವೆಲ್ಲಿ? ಆಗ ಸದಾಶಿವನ್‌ರವರು ತಮ್ಮನ ಆಸ್ತಿಯ ಮೇಲ್ವಿಚಾರಣೆಯನ್ನು ತಾವೇ ನೋಡಿಕೊಳ್ಳುತ್ತಾ, ತಮ್ಮನ ಕಲಾಸಕ್ತಿಗೆ ಎಷ್ಟು ಬೇಕೋ ಅಷ್ಟು ಪ್ರೋತ್ಸಾಹವನ್ನು ಕೊಡುತ್ತಾ, ಸಂಪೂರ್ಣವಾಗಿ ತಮ್ಮನ ಆಸಕ್ತಿ ಕಲೆಯ ಕೆಲಸದಲ್ಲಿಯೇ ಮುಳುಗಿ ಹೋಗದಂತೆಯೂ ತಡೆಯುತ್ತಾ ತಮ್ಮನ ನೆಮ್ಮದಿಯ ಜೀವನಕ್ಕೆ ಬಹು ಸಹಕಾರಿಗಳಾಗಿದ್ದಾರೆ. ವಿನಾಯಕ ಸಹ ಅಣ್ಣನ ಸದ್ಭಾವನೆಯನ್ನು ಅರಿತವರಾಗಿ ಅವರ ಸಲಹೆ, ಹಿತವಚನಗಳಿಗೆ ಬೆಲೆಕೊಟ್ಟು, ಮನೆತನದ ಗೌರವಕ್ಕೆ ಕೋಡು ಮೂಡಿಸಿದ್ದಾರೆನ್ನಬಹುದು. ಎಷ್ಟೋ ಜನರು ಕಲೆ ಮುಂತಾದವುಗಳ ಆಸಕ್ತಿಯಲ್ಲಿ ತಲ್ಲೀನರಾಗಿ ಐಶ್ವರ್ಯವನ್ನೆಲ್ಲ ಕಳೆದುಕೊಂಡು ಸಮಸ್ಯೆಯ ಜೀವನ ಮಾಡಿಕೊಂಡಿದ್ದಾರೆ. ವಿನಾಯಕರವರ ವಿವೇಕಯುತ ನಡತೆಯಿಂದಲೂ ಸದಾಶಿವನ್‌ರವರ ಸದ್ಭಾವನೆಯಿಂದಲೂ ಎಲ್ಲಾ ರೀತಿಯಲ್ಲೂ ಒಳಿತಾಗುವಂತಾಗಿದೆ. ಬಹಳಷ್ಟು ಕುಟುಂಬಗಳಲ್ಲಿ ಸೋದರರನ ಮಾತಿಗೆ ಬೆಲೆಕೊಡದೆ ಮನಸ್ಸಿಗೆ ಬಂದಂತೆ ನಡೆದಿರುವ, ಆಸ್ತಿಯ ಕಡೆ ಅಲಕ್ಷ್ಯವಿರುವ ಸೋದರರನ ಆಸ್ತಿಯನ್ನು ಜಾಣತನದಿಂದ ಕಬಳಿಸಿರುವ ಸಂದರ್ಭಗಳೇ ಹೆಚ್ಚು. ಈ ರೀತಿಯಲ್ಲಿಯೂ ಪತ್ರೆಯವರು ಮನೆತನದವರು ಬೇರೆಯ ಕುಟುಂಬಗಳ ಸೋದರರಿಗೆ ಆದರ್ಶವಂತಾಗಿ ಬದುಕಿದ್ದಾರೆ.

■

## ಉದಾರಹೃದಯಿಗಳು

ಒಂದು ಸಾರಿ ೧೯೭೨ ರಲ್ಲಿ ಸದಾಶಿವನ್‌ರ ಮನೆಗೆ ಕುಮಾರನೆಂಬೊಬ್ಬ ಹುಡುಗ ಕೆಲಸಕ್ಕೆ ಬಂದ. ಹುಡುಗ ಚೂಟಿಯಾಗಿದ್ದ. ಕೆಲಸಗಳನ್ನು ಚಾಕಚಕ್ಯತೆಯಿಂದ ಮಾಡುತ್ತಿದ್ದ. ಅವನ ಜಾಣತನ ನೋಡಿ ಮನೆಯವರಿಗೆಲ್ಲಾ ಮೆಚ್ಚುಗೆ. ಬರುಬರುತ್ತಾ ಮನೆಯ ಒಳಹೊರಗೆಲ್ಲಾ ಇವನೇ. ಅವನ ಬಟ್ಟೆ ಬರೆ ಮುಖದ ಕಳೆ ನೋಡಿದರೆ ಇವರ ಮನೆಯ ಹುಡುಗನೇನೋ ಎಂದುಕೊಳ್ಳಬೇಕು. ಅಷ್ಟು ಠಾಕುಠೀಕಾಗಿರುತ್ತಿದ್ದ. ಇವರುಗಳು ಮನೆಯ ಹುಡುಗನಂತೆಯೇ ಕಾಣುತ್ತಿದ್ದರು. ಅವನಿಗೆ ಕೆಲಸಮಾಡಬೇಕಾಗಿತ್ತು ಅಷ್ಟೆ. ಅವರ ಮನೆಯಲ್ಲಿ ಅವನಿಗಿದ್ದ ಸ್ಥಾನಮಾನ ನೋಡಿ ಊರಿನವರೂ ಸಹ ಅವನನ್ನು ಗೌರವದಿಂದ ಕಾಣುತ್ತಿದ್ದರು, ಒಂದು ಸಾರಿ ಸದಾಶಿವನ್ ಬಟವಾಡೆ ಮಾಡಬೇಕೆಂದು ಒಂದು ಬ್ರೀಫ್‌ಕೇಸ್ ತುಂಬಾ ನೋಟುಗಳನ್ನಿಟ್ಟುಕೊಂಡು ಕಾಫಿ ತೋಟಕ್ಕೆ ಹೋದರು. ಆದರೆ ಏನೋ ಕಾರಣದಿಂದ ಆದಿನ ಬಟವಾಡೆ ಮಾಡಲಾಗದೆ ವಾಪಸ್ಸು ಬಂದರು. ಬೆಳಿಗ್ಗೆ ಕಪಾಟು ತೆಗೆದುನೋಡಿದಾಗ ಬ್ರೀಫ್‌ಕೇಸ್ ಇಟ್ಟಂತಿರಲಿಲ್ಲ. ತೆಗೆದು ಹಣ ಎಣಿಸಿದರು. ಎರಡು ಸಾವಿರ ರೂಪಾಯಿ ಕಡಿಮೆ ಇತ್ತು. ಹೇಗಾಯ್ತು ?

ಎಲ್ಲಿ ಹೋಯ್ತು ? ಮನೆಯಲ್ಲಂತೂ ಬೇರೆ ಯಾರಿಲ್ಲ. ಆಳು ಕಾಳುಗಳು ಕಸಹೊಡೆಯುವವರ ಹೊರತು ಯಾರೂ ಆ ರೂಮಿಗೆ ಹೋಗುವುದಿಲ್ಲ. ಕಾಫೀ ತೋಟದಲ್ಲೇ ಯಾರಾದರೂ ಕೈಕೊಟ್ಟಿರಬಹುದೇ ಎನ್ನಿಸಿ, ಅಲ್ಲಿಗೆ ಹೋದಾಗಿನಿಂದ ಹಿಡಿದು ಅಲ್ಲಿಂದ ಬರುವವರೆಗಿನ ತವಕದ ಸ್ಥಿತಿಯನ್ನೆಲ್ಲಾ ನೆನಪಿಸಿಕೊಂಡರು. ಅಲ್ಲಿ ಆಗಿಲ್ಲವೆಂಬುದು ಖಚಿತವಾಯ್ತು. ಇನ್ನು ಮನೆಯಲ್ಲಿ ಕುಮಾರನ ಹೊರತಾಗಿ ಆ ಕೋಣೆಗೆ ಯಾರೂ ಬಂದಿಲ್ಲ. ಆಗ ಅವನನ್ನು ಸೂಕ್ಷ್ಮವಾಗಿ ಗಮನಿಸತೊಡಗಿದರು. ಆದಿನ ಅವನು ಬ್ಯಾಂಕಿಗೆ ಹೋಗಿದ್ದುದು ತಿಳಿಯಿತು. ನಂತರ ಬ್ಯಾಂಕ್‌ನಲ್ಲಿ ಅವನು ಅಕೌಂಟ ಇಟ್ಟಿರುವ ವಿಷಯ ಪತ್ತೆಯಾಯಿತು. ಅದೇ ದಿನವೇ ಅವನು ೨ ಸಾವಿರ ರೂಪಾಯಿ ಬ್ಯಾಂಕಿಗೆ ಜಮಾಮಾಡಿದ್ದೂ ಗೊತ್ತಾಯಿತು. ಇದಕ್ಕಿಂತ ಪುರಾವೆ ಇನ್ನೇನು ಬೇಕು ? ಹಿಡಿದು ಕೇಳಿದಾಗ ಒಪ್ಪಿಕೊಂಡ. ಇಷ್ಟೇ ಅಲ್ಲ, ಅನೇಕ ಬಾರಿ ಸಾವಿರಾರು ರೂಪಾಯಿ ಹಾರಿಸಿದ್ದ ವಿಚಾರವೂ ಬೆಳಕಿಗೆ ಬಂತು. ಇಷ್ಟೆಲ್ಲಾ ತಿಳಿದ ಮೇಲೆ ಬೇರೆ ಯಾರಾದರೂ ಆಗಿದ್ದಿದ್ದರೆ ಪೋಲೀಸ್ ವಶಕ್ಕೆ ಒಪ್ಪಿಸಿ ಕಂಬಿ ಎಣಿಸುವಂತೆ ಮಾಡುತ್ತಿದ್ದರು. ಆದರೆ ಸದಾಶಿವನ್‌ವರು ಎಲ್ಲಿಯಾದರೂ ಸಿಟ್ಟಿಗೆದ್ದು ಮಾತನಾಡಿದರೆ ಹೆದರಿ ಎಲ್ಲಿ ಪ್ರಾಣಾಪಾಯ ಮಾಡಿಕೊಳ್ಳುತ್ತಾನೋ ಎಂದು, ಅವನೊಡನೆ ಹೆಚ್ಚು ಮಾತನಾಡದೆ, ಅವರ ಹಳ್ಳಿಗೆ ಕಾರು ಕಳಿಸಿ ಕುಮಾರನ ತಂದೆಯನ್ನು ಕರೆಸಿದರು. ಅವರ ಹುಡುಗನನ್ನು ಅವರಿಗೆ ಒಪ್ಪಿಸಿ ಜವಾಬ್ದಾರಿ ಕಳೆದುಕೊಂಡರು. ಈಗಿನ ಕಾಲದಲ್ಲಿ ಪ್ರಭಾವೀ ವ್ಯಕ್ತಿಗಳು ಕೊಲೆಮಾಡಿಸಿ ದಕ್ಕಿಸಿಕೊಳ್ಳುತ್ತಾರೆ. ಆದರೆ ಸುಸಂಸ್ಕೃತರಾದ ಸದಾಶಿವನ್ ಕುಮಾರ ಮಾಡಿದ ವಿಶ್ವಾಸ ದ್ರೋಹಕ್ಕೆ ಕೊಟ್ಟ ಶಿಕ್ಷೆ ಎಂದರೆ, ಅವರ ಮನೆಯ ಕೆಲಸದಿಂದ ತೆಗೆದು ಹೊರಹಾಕಿದರು. ಅಷ್ಟು ಪ್ರೀತಿಯಿಂದ ಕಂಡರೂ ಕೃತಘ್ನನಾಗಿ ನಡೆದುಕೊಂಡ ಕೆಲಸದವನನ್ನು ಬೇರೆ ಯಾರೂ ಕ್ಷಮಿಸುತ್ತಿರಲಿಲ್ಲ. ಮನೆತನದ ಘನತೆಗೆ ಇದೊಂದು ಸಣ್ಣ ಉದಾಹರಣೆ.

■

### ತಂದೆಗೆ ತಕ್ಕ ಮಕ್ಕಳು

ಅನೇಕ ರಾಜಕೀಯ ವ್ಯಕ್ತಿಗಳು, ಮಂತ್ರಿಗಳು ಶ್ರೀ ಸದಾಶಿವನ್ ಅವರ ಮನೆಗೆ ಅತಿಥಿಗಳಾಗಿ ಬರುವುದುಂಟು. ಆಗ ರಾಜೋಚಿತ ಸತ್ಕಾರ ಮಾಡಿಸುತ್ತಾರೆ. ಒಮ್ಮೆ ಒಬ್ಬ ಅತಿಥಿಗಳು ಕುಡಿತದ ವ್ಯವಸ್ಥೆಗಾಗಿ ಬಾಯ್ಬಿಟ್ಟು ಕೇಳಿದಾಗ ಸದಾಶಿವನ್ 'ನಮ್ಮ ಮನೆಯಲ್ಲಿ ಆ ಪದ್ಧತಿ ಇಲ್ಲ' ಎಂದರಂತೆ. ಎಷ್ಟು ಸೌಜನ್ಯವೋ ಅಷ್ಟೇ ನಿಷ್ಠುರವಾದಿಯೂ ಹೌದು. ಇದು ಪತ್ರೆಯವರು, ಮಕ್ಕಳಿಗೆ ಹಾಕಿಕೊಟ್ಟಿರುವ ಮಾರ್ಗ.

ಪತ್ರೆಯವರ ಕುಟುಂಬದವರು, ಕಲೆ, ಸಾಹಿತ್ಯ, ಆಟ, ನಾಟಕ ಸಂಗೀತ ಪ್ರೇಮಿಗಳು. ನಾಟಕ ಸಂಘಗಳಿಗೆ, ಸಂಗೀತ ಸಂಸ್ಥೆಗಳಿಗೆ ಉದಾರವಾದ ದೇಣಿಗೆ ಕೊಟ್ಟವರು. ಪತ್ರೆ ಶಿವಪ್ಪಯ್ಯನವರ ಹಿರಿಯ ಮಗ ರುದ್ರಮೂರ್ತಿಯವರೂ ಚನ್ನವೀರಪ್ಪಯ್ಯನವರ ಮಗಳು ಸುಶೀಲಮ್ಮ, ಇಬ್ಬರೂ ಹವ್ಯಾಸಿ ಚಿತ್ರಕಾರರು. ಚಿತ್ರಕಲೆಯ ಯಾವ ವಾತಾವರಣವೂ ಇಲ್ಲದೆ, ಯಾರ ಪ್ರೋತ್ಸಾಹವೂ ಇಲ್ಲದೆ ಹುಟ್ಟಿನಿಂದ ಬಂದ ಆಸಕ್ತಿಯಿಂದ ಇವರಿಬ್ಬರೂ ಚಿತ್ರಕಲೆಯನ್ನು ಬೆಳೆಸಿಕೊಂಡರು. ಪತ್ರೆ ಸಹೋದರರು ತಮ್ಮತಂದೆಯವರ ಹೆಸರಿನಲ್ಲಿ ಅನೇಕ ಕ್ರೀಡಾಕೂಟಗಳನ್ನು ನಡೆಸುತ್ತಾರೆ. ಸಾಹಿತ್ಯ ಸಂಘ, ಯುವಕ ಸಂಘಗಳ ಸದಸ್ಯರಾಗಿ ಊರಿನ ಸಾಹಿತ್ಯ ಚಟುವಟಿಕೆಗಳ ವಿಕಸನಕ್ಕೆ ಕಾರಣರಾಗಿದ್ದಾರೆ. ಅವರ ಮನೆಯ ಹೆಣ್ಣುಮಕ್ಕಳು ಊರಿನಲ್ಲಿ ಅಕ್ಕನ ಬಳಗದ ಸದಸ್ಯರಾಗಿ, ಪ್ರೆಸಿಡೆಂಟಾಗಿ, ಆ ಸಂಬಂಧದ ಅನೇಕ ಚಟುವಟಿಕೆಗಳ ಪೋಷಕರಾಗಿದ್ದಾರೆ.

ಸದಾಶಿವನ್‌ರವರ ಪತ್ನಿ ಶೈಲಜಾರವರು ಚಿಕ್ಕ ವಯಸ್ಸಿನಲ್ಲಿಯೇ ಈ ಮನೆಯ ಸೊಸೆಯಾಗಿ ಬಂದು, ಅನ್ನಪೂರ್ಣಮ್ಮನವರಿಂದ ಮನೆತನಕ್ಕೆ ಬೇಕಾದ ಸದ್ಗುಣಗಳನ್ನು ಬೆಳೆಸಿಕೊಂಡು, ಮನೆತನದ ಗೌರವ ಹೆಚ್ಚುವಂತಹ ರೀತಿಯಲ್ಲಿ ಬಾಳುತ್ತಿದ್ದಾರೆ. ಸದಾಶಿವನ್ ತಂದೆಯನ್ನು ಮೀರಿಸಿ ಬಾಳುತ್ತಿರುವಂತೆ ಶೈಲಜಾ ಅತ್ತೆ ಮೆಚ್ಚುವಂತೆ ಗೃಹಕೃತ್ಯದಲ್ಲೂ ಸಮಾಜಜೀವನದಲ್ಲೂ ಬಹಳ ದಕ್ಷರಾಗಿ, ಗೌರವಾನ್ವಿತ ವ್ಯಕ್ತಿಯಾಗಿ, ಪತ್ರೆ ಮನೆತನದ ಹೆಮ್ಮೆಯ ಸೊಸೆಯಾಗಿ ಬದುಕುತ್ತಿದ್ದಾರೆ. ವಿನಾಯಕರವರ ಪತ್ನಿ ಸುಧಾ ಸೌಮ್ಯವತಿ. ಹಿರಿಯರ ಮಾರ್ಗದರ್ಶನದಲ್ಲಿ ಎಲೆಮರೆಯ ಕಾಯಂತೆ ಬಾಳುತ್ತಿದ್ದಾರೆ. ಆಕೆಯೂ ಚಿತ್ರಕಲೆ, ಬಾಟಿಕ್ ವರ್ಕ್ಸ್‌ನಲ್ಲಿ ಪರಿಣತೆ. ಮಾತು ಮತ್ತು ಮನಸ್ಸು ಮೃದು. ಗೌರವಾನ್ವಿತ ಮಹಿಳೆ. ಇದಕ್ಕೆಲ್ಲ ಪತ್ರೆ ಚನ್ನವೀರಪ್ಪಯ್ಯನವರ ಮತ್ತು ಅನ್ನಪೂರ್ಣಮ್ಮನವರ ಶ್ರೇಷ್ಠ ವ್ಯಕ್ತಿತ್ವ, ಆದರ್ಶ ಜೀವನ, ಮಾರ್ಗದರ್ಶನ ಹಾಗೂ ತರಬೇತಿಗಳೇ ಕಾರಣ.

ಚಿಕ್ಕಮಗಳೂರಲ್ಲಿ ನಡೆದ ಐದನೆಯ ಸರ್ವಧರ್ಮ ಸಮ್ಮೇಳನದಲ್ಲಿ ಸದಾಶಿವನ್‌ರವರಿಗೆ 'ದಾನರತ್ನ' ಎಂಬ ಉಪಾಧಿ ಇತ್ತು ಜನತೆ ಗೌರವಿಸಿತು. ಕೋಡಿಮಠದ ಶ್ರೀಗಳವರು 'ಧರ್ಮಶೇಖರ' ಎಂಬ ಬಿರುದು ನೀಡಿ ಆಶೀರ್ವದಿಸಿದರು. ಚಿಕ್ಕಮಗಳೂರಿನಲ್ಲಿ ಚನ್ನವೀರಪ್ಪಯ್ಯನವರ ಮಗಳು ಸುಶೀಲಮ್ಮನವರಿಗೆ ಶಾಲುಹೊದಿಸಿ ಕಲಾರತ್ನ ಎಂಬ ಬಿರದು ಹಾಗೂ ಚಿನ್ನದ ಪದಕ ನೀಡಿ ಸನ್ಮಾನಿಸಿದರು.

■

## ಪತ್ರೆಯವರ ಕೊಡುಗೆಗಳು

ಪತ್ರೆ ಶ್ರೀ ಚನ್ನವೀರಪ್ಪಯ್ಯನವರ ಹಿರಿಯರು ಕೊಡುಗೈದೊರೆಗಳು. ಬಡ-ಬಗ್ಗರಿಗೆ, ಸಂಘ-ಸಂಸ್ಥೆಗಳಿಗೆ, ಸಮಾಜಕ್ಕೆ, ಸಾರ್ವಜನಿಕರಿಗೆ, ಮಠ-ಮಾನ್ಯಗಳಿಗೆ ಸತತವಾಗಿ ದಾನ ಧರ್ಮಮಾಡಿಕೊಂಡು ಬಂದವರು. ಬೀರೂರಿನಲ್ಲಿ ಇಂದಿಗೂ ಪ್ರಸಿದ್ಧವಾಗಿರುವ ಭೋಗಮಲ್ಲೇಶ್ವರ ದೇವಸ್ಥಾನದ ಜೀರ್ಣೋದ್ಧಾರಕ್ಕಾಗಿ ಉದಾರವಾದ ಧನ ಸಹಾಯವನ್ನು ಚನ್ನವೀರಪ್ಪಯ್ಯನವರ ದೊಡ್ಡಪ್ಪನವರಾದ ರುದ್ರಪ್ಪಯ್ಯನವರು ಮಾಡಿದರಲ್ಲದೆ, ಆಗಿನ ಕಾಲದಲ್ಲಿ ಬೀರೂರಿನಲ್ಲಿ ಶಾಲೆ ಇರಲಿಲ್ಲವಾಗಿ, ಇಂಗ್ಲಿಷ್ ಸ್ಕೂಲನ್ನು (ಬ್ರಿಟಿಷರ ಕಾಲದಲ್ಲಿ ಇಂಗ್ಲೀಷ್ ಶಿಕ್ಷಣಕ್ಕೆ ಪ್ರಾಮುಖ್ಯತೆ ಇತ್ತು) ಕಟ್ಟಿಸಿಕೊಟ್ಟರು. ಆ ಕಟ್ಟಡವನ್ನು ಈಗ ಉರ್ದುಶಾಲೆಗಾಗಿ ಉಪಯೋಗಿಸಿಕೊಳ್ಳುತ್ತಿದ್ದಾರೆ. ಅವರ ಕಾಲದಲ್ಲಿಯೇ ಚಿತ್ರದುರ್ಗದ ಮುರುಘಾಮಠಕ್ಕೂ, ಬಾಳೆ ಹೊನ್ನೂರು ಮಠಕ್ಕೂ ಬೆಳ್ಳಿಯ ಪಲ್ಲಕ್ಕಿಗಳನ್ನು ಮಾಡಿಸಿಕೊಟ್ಟರು. ಶ್ರೀಯುತರ ಚಿಕ್ಕಪ್ಪಂದಿರಾದ ವೀರಪ್ಪಯ್ಯನವರು ಸಂಸ್ಕೃತ ಪಾಠಶಾಲೆ ಪ್ರಾರಂಭಿಸಿದರು. ಇದು ಇತ್ತೀಚಿನವರೆಗೆ ಅನೇಕ ವೀರಶೈವವಟುಗಳು ಇಲ್ಲಿ ಸಂಸ್ಕೃತಾಭ್ಯಾಸವನ್ನು, ಪೌರೋಹಿತ್ಯವನ್ನು ವೈದಿಕ ಶಿಕ್ಷಣವನ್ನು ಪಡೆಯುತ್ತಿದ್ದರು. ಆದರೆ ಬರುಬರುತ್ತಾ ಜನರ ಒಲವು ಆಂಗ್ಲ ಶಿಕ್ಷಣ ಮತ್ತು ಆಧುನಿಕ ಶಿಕ್ಷಣದ ಕಡೆಗೆ ತಿರುಗಿ, ಪಾಠಶಾಲೆಯನ್ನು ನಡೆಸಲು ಸಾಕಷ್ಟು ವಿದ್ಯಾರ್ಥಿಗಳಿಲ್ಲದ ಕಾರಣ ನಿಂತುಹೋಯಿತು. ಶ್ರೀಯುತ ಚನ್ನವೀರಪ್ಪಯ್ಯನವರು ಆ ಕಾಲದಲ್ಲಿಯೇ ಮರಣಕ್ಕೀಡಾದ ಮಗಳು ಸುವರ್ಣಮ್ಮನ ಹೆಸರಿನಲ್ಲಿ ಬೀರೂರಿನಲ್ಲಿ ಹೆಣ್ಣುಮಕ್ಕಳ ವಿದ್ಯಾಭ್ಯಾಸದ ಸಲುವಾಗಿ ಸುವರ್ಣಮ್ಮ ಬಾಲಿಕಾ ಪಾಠಶಾಲೆ ಕಟ್ಟಿಸಿದ್ದಾರೆ. ತಮ್ಮ ತಾಯಿ ಗಂಗಮ್ಮನವರ ಹೆಸರಿನಲ್ಲಿ ಹೆರಿಗೆ ಆಸ್ಪತ್ರೆಯನ್ನು ನಿರ್ಮಿಸಿದ್ದಾರೆ. ತಮ್ಮನವರಾದ ಶಿವಪ್ಪಯ್ಯನವರ ಜ್ಞಾಪಕಾರ್ಥ ಜನರಲ್ ಆಸ್ಪತ್ರೆಯ ನಿರ್ಮಾಣವಾಗಿದೆ. ಚನ್ನವೀರಪ್ಪಯ್ಯನವರ ಕಾಲಾನಂತರ ಅವರ ಮಕ್ಕಳು ತಮ್ಮ ತಂದೆಯ ಹೆಸರಿನಲ್ಲಿ ಈ ಆಸ್ಪತ್ರೆಯ ಆಡಳಿತ ವಿಭಾಗವನ್ನು ಕಟ್ಟಿಸಿಕೊಟ್ಟಿದ್ದಾರೆ. ಅಲ್ಲದೆ ಪತ್ರೆ ಚನ್ನವೀರಪ್ಪಯ್ಯನವರ ಆಸೆಯಾಗಿ ಉಳಿದಿದ್ದ ಕಲ್ಯಾಣಮಂಟಪವೂ ಸಾರ್ವಜನಿಕರ ಬೆಂಬಲದಿಂದ ಅವರ ಮಕ್ಕಳ ಉದಾರ ಕೊಡುಗೆಯಿಂದ ಭವ್ಯವಾಗಿ ರೂಪ ತಳೆದುನಿಂತಿದೆ.

ಚನ್ನವೀರಪ್ಪಯ್ಯನವರು ಮುರುಘರಾಜೇಂದ್ರ ಸ್ವಾಮಿಯವರಿಗೆ ಒಂದು ಕಾರನ್ನು ಕಾಣಿಕೆಯಾಗಿ ಇತ್ತಿದ್ದರು. ಇವರು ಅನೇಕ ಸಂಘ ಸಂಸ್ಥೆಗಳಿಗೆ, ಪತ್ರಿಕೋದ್ಯಮಕ್ಕೆ, ಕ್ರೈಸ್ತ ಸಂಸ್ಥೆಗಳಿಗೆ, ಜೈನ ಮುನಿಗಳಿಗೆ (ಬೀರೂರಿಗೆ ಜೈನ ಮುನಿಗಳು ಬಂದಾಗ್ಗೆ ಅವರನ್ನು ಪರಿವಾರ ಸಮೇತ ತಮ್ಮ ಮನೆಗೆ ಕರೆಯಿಸಿ

ಆದರಿಸಿ, ಸತ್ಕರಿಸಿ, ಕಾಣಿಕೆಗಳನ್ನಿತ್ತು ಕಳುಹಿಸಿದರು), ರಾಜಕೀಯ ಪಕ್ಷಗಳಿಗೆ, ಶಿಕ್ಷಣದ ಕೆಲಸಗಳಿಗೆ ನಿರಂತರವಾಗಿ ನೂರಾರು, ಸಾವಿರ ರೂಗಳಂತೆ, ಪ್ರತಿ ವರ್ಷವೂ ಹಣ ಸಹಾಯ ಮಾಡುತ್ತಲೇ ಬಂದರು. ಅದರ ಲೆಕ್ಕ ಪತ್ರಗಳನ್ನು ಸಾದ್ಯಂತ ಪರಿಶೀಲಿಸಿದರೆ ಅದೊಂದು ದೊಡ್ಡ ಪಟ್ಟಿಯೇ ಆದೀತು. ಅವರ ಮಕ್ಕಳು ಸಹ ಆ ಪರಂಪರೆಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ.

ಇದಲ್ಲದೆ ಅವರ ಮಕ್ಕಳು ಅನೇಕ ಸಾಹಿತ್ಯ ಸಂಘಗಳಿಗೆ, ಕ್ರೀಡಾಟೂರ್ನಮೆಂಟುಗಳಿಗೆ ಪೋಷಕರಾಗಿದ್ದಾರೆ. ಬೀರೂರಿನ ಯುವ ಸಂಘ, ಅಕ್ಕಮಹಾದೇವಿ ಸಂಘಗಳಲ್ಲಿ ಪತ್ರೆಯವರು ಸಕ್ರಿಯವಾಗಿ ಪಾಲ್ಗೊಳ್ಳುವುದಲ್ಲದೆ ಆರ್ಥಿಕವಾಗಿಯೂ ಬೆಂಬಲಕೊಟ್ಟಿದ್ದಾರೆ.

ಬೀರೂರಲ್ಲಿ ಪತ್ರೆಯ ಮನೆತನದವರು ನಿರ್ಮಿಸಿರುವ ಜನರಲ್ ಆಸ್ಪತ್ರೆಯು ಆ ಭಾಗದ ಜನರಿಗೆ ವರಪ್ರಸಾದವಾಗಿದೆ. ಬೀರೂರು ಒಂದು ತಾಲ್ಲೂಕು ಸ್ಥಳ ಸಹ ಆಗದಿದ್ದರೂ, ಇವರ ಕೊಡುಗೆಯಿಂದಾಗ ಜಿಲ್ಲಾ ಕೇಂದ್ರದ ಆಸ್ಪತ್ರೆಯಲ್ಲಿ ದೊರೆಯಬಹುದಾದಂತಹ ಸೌಲಭ್ಯಗಳು ಬೀರೂರು ಹಾಗೂ ಸುತ್ತಮುತ್ತಲ ಊರಿನ ಜನರಿಗೆ ದೊರೆಯುವುದು ಸಾಧ್ಯವಾಗುವಂತೆ ಮಾಡಿದ್ದಾರೆ. ಕಲ್ಯಾಣ ಮಂಟಪ ಊರಿನ ಕಲೆ ಹಾಗೂ ಸಾಹಿತ್ಯ ಚಟುವಟಿಕೆಗಳಿಗೂ ವಿವಾಹಾದಿ ಮಂಗಲಕಾರ್ಯಗಳಿಗೂ ಬಹಳ ಅನುಕೂಲವಾದ ಒಂದು ಕೊಡುಗೆಯಾಗಿದೆ. ಚನ್ನವೀರಪ್ಪಯ್ಯನವರ ಸತ್ಪುತ್ರರಾದ ಸದಾಶಿವನ್ ಅವರು ಈ ಒಂದು ಕೆಲಸವನ್ನು ಮಾಡಬೇಕೆಂಬ ಸಂಕಲ್ಪ ಮಾಡಿ ಅಹರ್ನಿಸಿ ದುಡಿದರು. ಮನೆಯವರನ್ನೆಲ್ಲಾ ಇದರ ಕೆಲಸಗಳಲ್ಲಿ ಸಾಧ್ಯವಾದ ರೀತಿಯಲ್ಲಿ ತೊಡಗಿಸಿದರು. ಊರವರ ಸಹಾಯ ಸಹಕಾರಗಳನ್ನು ಪಡೆದು, ಆ ಕೆಲಸ ಪೂರ್ಣವಾಗುವವರೆಗೂ, ಯಾವ ಸಮಸ್ಯೆ ಬಂದರೂ ಜಗ್ಗದೆ, ದೃಢಸಂಕಲ್ಪದಿಂದ, ತಮ್ಮ ಸ್ವಂತ ಮನೆ ಕಟ್ಟಿಸುವಂತಹ ಆಸಕ್ತಿಯಿಂದ ಅದರ ಪ್ರತಿಯೊಂದು ಅಂಶದ ಬಗ್ಗೆಯೂ ವಿಚಾರಮಾಡಿ ಕೆಲಸ ಮುಗಿಸಿದುದರಿಂದ, ಇಂದು ಬೀರೂರಿಗೊಂದು ಭವ್ಯವಾದ ಸುಂದರವಾದ ಮಂಗಲ ಮಂದಿರ ಸಾಧ್ಯವಾಗಿದೆ. ವಿವಾಹದ ಕೆಲಸಕ್ಕೆ ಅನೇಕ ಜನರ ಸಹಾಯ ಬೇಕು. ಎಷ್ಟೋ ಸಾಮಾನುಗಳನ್ನು ಹಲವಾರು ಕಡೆಗಳಿಂದ ಒದಗಿಸಬೇಕು. ಈ ಎಲ್ಲ ಕೆಲಸಗಳಿಗೆ ಜನ, ಧನ, ಸಮಯ ಎಲ್ಲವೂ ಹೇರಳವಾಗಿ ಬೇಕು. ಈಗಿನ ಕಾಲದಲ್ಲಿ ಹಣ ಕೊಟ್ಟರೂ ಕೆಲಸಮಾಡುವವರು ಸಿಗುವುದು ಕಷ್ಟ. ಕೆಲಸದವರು ಸಿಕ್ಕರೂ ಅವರಿಂದ ಕೆಲಸತೆಗೆದುಕೊಳ್ಳುವುದು ಇನ್ನೂ ಕಷ್ಟ. ಹೇಗೆ ಬೇಕೆಂದರೆ ಹಾಗೆ ಹಣ ಖರ್ಚು ಮಾಡವುದು ಎಲ್ಲರಿಗೂ ಸಾಧ್ಯವಿಲ್ಲ. ಸಮಯವಂತೂ ಈಗಿನ ಕಾಲದಲ್ಲಿ ಎಲ್ಲಕ್ಕಿಂತ ಅಮೂಲ್ಯ. ಇಂತಹ ಈ ಪರಿಸ್ಥಿತಿಯಲ್ಲಿ ಬೇಕಾದ

ಎಲ್ಲ ಸಾಮಾನುಗಳು, ಒಂದೆಡೆಯೇ ಸಮಯಕ್ಕೆ ಸರಿಯಾಗಿ ದೊರೆಯುವಂತೆ ಮಾಡಿರುವ ಈ ವ್ಯವಸ್ಥೆ ಆ ಭಾಗದ ಜನರಿಗೊಂದು 'ವರಪ್ರಸಾದ'ವೆಂದೇ ಹೇಳಬೇಕು. ಈ ಕಲ್ಯಾಣ ಮಂಪಟದ ಪ್ರಯೋಜನವನ್ನು ಬೀರೂರಿನವರೇ ಅಲ್ಲದೆ, ನೆರೆಯೂರಿನವರು ಸಹ ಪಡೆದುಕೊಳ್ಳುತ್ತಿರುವುದು ಪತ್ರೆಯವರ ದೂರದೃಷ್ಟಿ ಸಮಾಜಕಲ್ಯಾಣ ಭಾವನೆಗೆ ಉದಾಹರಣೆಯಾಗಿದೆ. ಸಾರ್ವಜನಿಕರು ಕಲ್ಯಾಣ ಮಂಟಪದಿಂದ ಪ್ರಯೋಜನ ಪಡೆಯುತ್ತಾ ಕಟ್ಟಿಸಿದವರ ಶ್ರಮ ಸಾರ್ಥಕ ಮಾಡುತ್ತಿದ್ದಾರೆ.

ಶ್ರೀ ಪತ್ರೆ ಚನ್ನವೀರಪ್ಪಯ್ಯನವರು, ಅವರ ಮಕ್ಕಳು, ಅವರ ಮನೆತನದ ಇತಿಹಾಸವೇ ಸಮಾಜ ಕಲ್ಯಾಣಕ್ಕೊಂದು ದಾರಿದೀಪ, ಅವರು ಕಟ್ಟಿಸಿದ ಬೀರೂರಿನ ವೀರಶೈವ ಕಲ್ಯಾಣ ಮಂಟಪ, ಜನಕಲ್ಯಾಣದ ಕೇಂದ್ರ.

■



ಚನ್ನವೀರಪ್ಪಯ್ಯನವರ ಸಮಾಧಿ, ಬೀರೂರು



ಶ್ರೀ ಪತ್ರೆ ಕೆ. ಚೆನ್ನವೀರಪ್ಪಯ್ಯ ಕಲ್ಯಾಣ ಮಂದಿರ, ಬೀರೂರು

# ಮಕ್ಕಳ ಶಿಕ್ಷಣ : ಚಿಂತನೆಗಳು

ಲಲಿತಾಂಬಾ ವೃಷಭೇಂದ್ರ ಸ್ವಾಮಿ

ಮಹಿಳಾ ಸಾಹಿತ್ಯಿಕಾ
ನವನಗರ, ಹುಬ್ಬಳ್ಳಿ

ಮಕ್ಕಳ ಶಿಕ್ಷಣ : ಚಿಂತನೆಗಳು

ಲಲಿತಾಂಬಾ ವೃಷಭೇಂದ್ರಸ್ವಾಮಿ
ಶಿವಪ್ರಸಾದ, ೮ನೆಯ ಅಡ್ಡರಸ್ತೆ,
ಕಲ್ಯಾಣನಗರ, ಧಾರವಾಡ – ೭.

೧೯೯೭

ಬೆಲೆ : ೪೦ ರೂ.

ಪುಟಗಳು : VIII + 155

ಪ್ರತಿಗಳು : ೧೦೦೦



ಪ್ರಕಾಶಕರು : ಮಹಿಳಾ ಸಾಹಿತ್ಯಿಕಾ, ನವನಗರ, ಹುಬ್ಬಳ್ಳಿ.

ಸಲಹಾ ಸಮಿತಿ : ಡಾ. ಚೆನ್ನಕ್ಕ ಎಲಿಗಾರ (ಸಾಹಿತ್ಯ ಸಲಹೆ)
ಡಾ. ಮಲ್ಲಿಕಾ ಘಂಟಿ (ಸಾಹಿತ್ಯ ಸಲಹೆ)
ಹನುಮಾಕ್ಷಿ ಗೋಗಿ (ಸಾಹಿತ್ಯ ನಿರ್ದೇಶನ)
ಜಿ. ನಾಗವೇಣಿ (ಅರ್ಥ ನಿರ್ವಹಣೆ)

ಮುದ್ರಕರು :

ವಿನೋದ ಪಾಟೀಲ
ಮಯೂರ ಪ್ರಿಂಟರ್ಸ್
ನಿರ್ಮಲನಗರ, ಧಾರವಾಡ – ೫೮೦ ೦೦೩.
ದೂರವಾಣಿ : (೦೮೩೬) ೪೫೫೪೦

## ಪ್ರಕಾಶಕರ ನುಡಿ

ಮಹಿಳಾ ಸಾಹಿತ್ಯದ ಅಧ್ಯಯನ, ಪ್ರಕಾಶನಗಳಿಗೆ ಮೀಸಲಾದ ಸಂಸ್ಥೆಯಾಗಿ ಮೊದಲ ಹೆಜ್ಜೆಗಳನ್ನಿಡುತ್ತಲಿದೆ "ಮಹಿಳಾ ಸಾಹಿತ್ಯಿಕಾ". ಕನ್ನಡದ ಎಲ್ಲ ಲೇಖಕಿಯರ ಎಲ್ಲ ಪ್ರಕಾರಗಳಿಗೆ ಧ್ವನಿಯಾಗುವ ಮಹದಾಕಾಂಕ್ಷೆಯನ್ನು ಹೊಂದಿದ ಈ ಸಂಸ್ಥೆ, ಮಹಿಳಾ ಲೇಖಕಿಯರ ಸಾಹಿತ್ಯವನ್ನು ಮಹಿಳಾ ಪ್ರಕಾಶಕಿಯರೆ ಪ್ರಕಟಿಸುವ ವಿನೂತನ ಯೋಜನೆಯನ್ನು ಹೊಂದಿದೆ. ಸ್ತ್ರೀವಾದಿ ಚಿಂತನೆ ಕ್ರಿಯಾರೂಪ ಸಾಧಿಸಲು ಇದು ಪ್ರಬಲ ಶಕ್ತಿಯಾಗಿ ಬೆಳೆಯುವ ಸಂಕಲ್ಪವನ್ನು ಹೊಂದಿದೆ.

ಮಹಿಳಾ ಸಾಹಿತ್ಯಕಾ ಮುಂಬರುವ ವರ್ಷಗಳಲ್ಲಿ ಮಹಿಳೆಯರಿಂದ ರಚಿತಗೊಂಡ ಸೃಜನ – ವಿಮರ್ಶನ – ಸಂಶೋಧನಾ – ಅನುವಾದ – ಆಕರ, ಇತ್ಯಾದಿ ಎಲ್ಲಂದದ ಮೌಲಿಕ ಸಾಹಿತ್ಯವನ್ನು ಪ್ರಕಟಿಸುತ್ತದೆ. ಪ್ರಾರಂಭದಲ್ಲಿ ವರ್ಷಕ್ಕೆ ಸಾವಿರ ಪಟುಗಳಷ್ಟು ಸಾಹಿತ್ಯವನ್ನು ಪ್ರಕಟಿಸುವ, ನಂತರದ ಅವಧಿಯಲ್ಲಿ ಪುಟಸಂಖ್ಯೆಯನ್ನು ಹೆಚ್ಚಿಸುತ್ತ ಹೋಗುವ ಇಚ್ಛೆ ಸಂಸ್ಥೆಗಿದೆ.

ಮಹಿಳಾ ಸಾಹಿತ್ಯಿಕಾ ಪ್ರಕಾಶನ ಸಂಸ್ಥೆಯ ಹನ್ನೊಂದನೆಯ ಪುಸ್ತಕವಾಗಿ ಪ್ರಕಟಗೊಳ್ಳುತ್ತಲಿದೆ ಶ್ರೀಮತಿ ಲಲಿತಾಂಬಾ ವೃಷಬೇಂದ್ರಸ್ವಾಮಿ ಅವರ ಮಕ್ಕಳ ಶಿಕ್ಷಣ : ಚಿಂತನೆಗಳು ಎಂಬ ಲೇಖನಗಳ ಸಂಕಲನಾಕೃತಿ. ಶಿಕ್ಷಣ ಕಾಲೇಜಿನ ಪ್ರಾಧ್ಯಾಪಕಿಯಾಗಿ ೩೦ ವರ್ಷಗಳ ಕಾಲ ಸೇವೆ ಸಲ್ಲಿಸಿ ಪಡೆದ ಅನುಭವದ ಆಧಾರದ ಮೇಲೆ ವಿವಿಧ ಕಾಲಾಘಟ್ಟದಲ್ಲಿ ಇಲ್ಲಿಯ ಲೇಖನಗಳು ರೂಪುಗೊಂಡಿವೆ. ಮಕ್ಕಳು ಮತ್ತು ಶಿಕ್ಷಣಗಳನ್ನೇ ಕೇಂದ್ರಬಿಂದುವಾಗಿಟ್ಟುಕೊಂಡ ಈ ಕೃತಿಯನ್ನು ನಮ್ಮ ಪ್ರಕಾಶನಸಂಸ್ಥೆಯಿಂದ ಪ್ರಕಟಿಸಲು ಒಪ್ಪಿಗೆ ನೀಡಿದುದಕ್ಕಾಗಿ ಅವರಿಗೆ ನಮ್ಮ ಅನಂತ ಕೃತಜ್ಞತೆಗಳು.

"ಮಹಿಳಾ ಸಾಹಿತ್ಯಿಕಾ" ಪ್ರಕಾಶನ ಸಂಸ್ಥೆಗೆ ಬೆನ್ನ ಹಿಂದಿನ ಬೆಳಕಾಗಿ ನಿಂತವರು. ಸಂಸ್ಥೆಯ ಸಮಸ್ತರೂಪುರೇಷೆಗಳನ್ನು ಹಾಕಿಕೊಟ್ಟವರು, ಸ್ಫೂರ್ತಿಯ ಸೆಲೆಯಾದವರು ವಿದ್ಯಾಗುರುಗಳಾದ ಡಾ. ಎಂ.ಎಂ. ಕಲಬುರ್ಗಿಯವರು. ಸಾಹಿತ್ಯಿಕ ಸಲಹೆಗಾರರಾಗಿ ಸಹಕರಿಸಿದವರು ಡಾ. ಚೆನ್ನಕ್ಕ ಎಲಿಗಾರ ಮತ್ತು ಡಾ. ಮಲ್ಲಿಕಾ ಘಂಟಿಯವರು. ಇವರಿಗೆಲ್ಲ ಮಹಿಳಾ ಸಾಹಿತ್ಯಿಕಾ ತುಂಬು ಹೃದಯದ ಕೃತಜ್ಞತೆಗಳನ್ನು ಅರ್ಪಿಸುತ್ತದೆ.

ಸುಂದರವಾಗಿ ಮುದ್ರಿಸಿಕೊಟ್ಟ ಮಯೂರ ಪ್ರಿಂಟರ್ಸ್‌ನ ವಿನೋದ ಪಾಟೀಲರಿಗೂ ಮತ್ತು ಡಾ. ಎಸ್. ಪಿ. ಪಾಟೀಲರಿಗೂ ಕೃತಜ್ಞತೆಗಳನ್ನು ಸೂಚಿಸುತ್ತದೆ.

ಕರ್ನಾಟಕದ ಹೆಮ್ಮೆಯ ಮಹಿಳಾ ಅಧ್ಯಯನದ ಪ್ರಕಾಶನ ಸಂಸ್ಥೆಯಾಗಿ ಬೆಳೆಯುವ ಸಂಕಲ್ಪ ಹೊಂದಿರುವ "ಮಹಿಳಾ ಸಾಹಿತ್ಯಿಕಾ" ಕ್ಕೆ ನಾಡಿನ ಕೊಂಡು ಓದುವ ಸಹೃದಯರ ಸಹಾಯ ಸಹಕಾರಗಳನ್ನು ಅಪೇಕ್ಷಿಸುತ್ತೇವೆ.

ಹನುಮಾಕ್ಷಿ ಗೋಗಿ
ಸಾಹಿತ್ಯಿಕ ನಿರ್ದೇಶಕಿ

■

## ಲೇಖಕಿಯ ನುಡಿಗಳು

ನನಗೆ ಚಿಕ್ಕ ವಯಸ್ಸಿನಿಂದಲೂ ಮಕ್ಕಳ ಶಿಕ್ಷಣದ ಬಗ್ಗೆ ತುಂಬಾ ಆಸಕ್ತಿ. ಅದಕ್ಕೆ ಪೋಷಕವಾಗುವಂತೆ ನನ್ನ ವೃತ್ತಿಯೂ ಶಿಕ್ಷಕ ವೃತ್ತಿಯಾಯಿತು. ಶಿಕ್ಷಣ ಕಾಲೇಜಿನ ಪ್ರಾಧ್ಯಾಪಕಿಯಾಗಿ ನನಗೆ ಹೈಸ್ಕೂಲು ಶಿಕ್ಷಕರು ಹಾಗೂ ಮಾಧ್ಯಮಿಕ ಶಾಲೆಯ ಮಕ್ಕಳ ಸಂಪರ್ಕ ಹೆಚ್ಚಾಗಿ ಬರುತ್ತಿತ್ತು. ಒಬ್ಬ ಗೃಹಣಿಯಾಗಿಯೂ ಮಕ್ಕಳ ಬೆಳವಣಿಗೆಯ ಹಂತಗಳನ್ನು ನಿರುಕಿಸುವ ಅನುಭವ, ಹೀಗಾಗಿ ಮಕ್ಕಳ ಶಿಕ್ಷಣದ ಬಗ್ಗೆ ಅನೇಕ ಸಂದರ್ಭಗಳಲ್ಲಿ ಸಮಸ್ಯೆಗಳನ್ನು ಕಂಡಾಗ ಮನಸ್ಸಿನಲ್ಲಿ ಚಿಂತನ–ಮಂಥನಗಳು ನಡೆಯುತ್ತಿದ್ದವು. ಹೀಗೆ ನನ್ನ ಬರಹಗಳು ನನ್ನ ಅಭ್ಯಾಸ, ಅನುಭವ, ಚರ್ಚೆ, ಚಿಂತನ–ಮಂಥನಗಳ ಫಲವಾಗಿ ಮೂಡಿದ ವೈಚಾರಿಕ ಲೇಖನಗಳಾಗಿವೆ. ಅನೇಕ ವಿಷಯಗಳ ಬಗೆಗೆ ಲೇಖನಗಳನ್ನು ಬರೆದಿರುವೆನಾದರೂ, ಶಿಕ್ಷಣದ ಬಗ್ಗೆಯೇ ಹೆಚ್ಚಾಗಿ ಬರೆದಿದ್ದೇನೆ. ಹಾಗೆ ಬರೆದ ಮೇಲೆ ಈ ನನ್ನ ವಿಚಾರಗಳನ್ನು ಪಾಲಕರ–ಶಿಕ್ಷಕರ ಮುಂದಿಟ್ಟರೆ ಒಳ್ಳೆಯದೆನಿಸಿ, ಪತ್ರಿಕೆಗಳಿಗೆ ಲೇಖನಗಳನ್ನು ಕಳಿಸಲು ಪ್ರಾರಂಭಿಸಿದೆ.

ಸುಧಾ ವಾರಪತ್ರಿಕೆಯಲ್ಲಿ ಇಂಗ್ಲಿಷ್ ಯಾರಿಗೆ, ಏಕೆ? ಎಷ್ಟು? ಎಂಬ ನನ್ನ ಮೊದಲು ಲೇಖನ ೧೯೬೮ರಲ್ಲಿ ಪ್ರಕಟವಾಯ್ತು. ನಂತರ ಇಲ್ಲಿಯವರೆಗೆ ಅನೇಕ ಲೇಖನಗಳು ಸುಧಾ, ವನಿತಾ, ಸಂಯುಕ್ತ ಕರ್ನಾಟಕ, ಮಕ್ಕಳ ಮನೆ, ಮಾನವಿಕ ಭಾರತಿ ಮತ್ತು ಧಾರವಾಡ ಬಿ.ಎಡ್. ಕಾಲೇಜಿನ ಜರ್ನಲ್‌ಗಳಲ್ಲಿ ಪ್ರಕಟವಾಗಿವೆ. 'ಮಕ್ಕಳಿಗೆ ಆಟಿಕೆಗಳು' ಎಂಬ ನನ್ನ ಭಾಷಣ ಮೊದಲು ಇಆಕಾಶವಾಣಿಯಲ್ಲಿ ಪ್ರಸಾರವಾಗಿತ್ತು. ನಂತರ 'ವನಿತಾ'ದಲ್ಲೂ ಪ್ರಕಟವಾಗಿದೆ. 'ಚಾರಿತ್ರ್ಯ' ನಿರ್ಮಾಣಕ್ಕಾಗಿ ಮಕ್ಕಳಿಗೆ ಕಥೆಗಳು ಎಂಬ ಲೇಖನವು ಆಕಾಶವಾಣಿಯಲ್ಲಿ ಪ್ರಸಾರವಾಗಿತ್ತು. ಅದೇ ವಿಶ್ವ ವಿದ್ಯಾಲಯದ ಶಿಕ್ಷಣ ಮಹಾವಿದ್ಯಾಲಯದ ಜರ್ನಲ್‌ನಲ್ಲೂ ಪ್ರಕಟವಾಗಿದೆ.

ಈಗ ಅನೇಕ ವರ್ಷಗಳ ಹಿಂದೆ ಆಕಾಶವಾಣಿಯವರು ಶ್ರೀ ಮತ್ತು ಶ್ರೀಮತಿ ಎಂಬ ಮಾಲಿಕೆಯನ್ನು ಪ್ರಸಾರ ಮಾಡಿದಾಗ 'ಶಿಕ್ಷಣ ಸಲ್ಲಾಪ'ದ ಸರದಿ ನನ್ನ ಹಾಗೂ ನಮ್ಮವರದಾಗಿತ್ತು. ಆ ಸಲ್ಲಾಪದಲ್ಲಿ ಶಿಕ್ಷಣಕ್ಕೆ ಸಂಬಂಧಿಸಿದ ಅನೇಕ ಸಮಸ್ಯೆಗಳನ್ನು ಕುರಿತು ಸಲ್ಲಾಪಿಸಿದ್ದೆವು. ಅದರ ಆಧಾರದಿಂದ ಶ್ರೀ ಮತ್ತು ಶ್ರೀಮತಿ ಶಿಕ್ಷಣ ಸಲ್ಲಾಪ ಎಂಬ ಲೇಖನ ರೂಪುಗೊಂಡಿತ್ತು.

ಮಕ್ಕಳ ಭವಿಷ್ಯ ನಿರ್ಮಾಣದಲ್ಲಿ ಪಾಲಕರ ಪಾಲು ಎಂಬ ಲೇಖನವನ್ನು ಅನೇಕ ಪಾಲಕರು ಬೇಜವಾಬ್ದಾರಿಯಿಂದ ಮಕ್ಕಳೊಡನೆ ವರ್ತಿಸುತ್ತಾ ಫೀ ಕೊಟ್ಟು ಶಾಲೆಗೆ ಮಕ್ಕಳನ್ನು ಕಳಿಸಿಬಿಟ್ಟರೆ ತಮ್ಮ ಜವಾಬ್ದಾರಿ ಮುಗಿಯಿತೆಂಬಂತೆ ಬದುಕುವುದನ್ನು ನೋಡಿದಾಗ ಶಿಕ್ಷಕಿಯಾಗಿ ತಿಳಿದುಕೊಂಡಿದ್ದ ನನ್ನ ಅಭ್ಯಾಸದ, ಅನುಭವದ, ಚಿಂತನೆಯ ಜ್ಞಾನವನ್ನು ಹಿನ್ನೆಲೆಯಾಗಿಟ್ಟುಕೊಂಡು ಬರೆದಿರುವೆ.

'ಶಾಲೆಗಳು ಗ್ಯಾಂಗ್‌ಗಳ ಉಗಮಸ್ಥಾನಗಳೇ?' ಎಂಬ ಲೇಖನ ಬರೆಯಲು ನಮ್ಮ ಮನೆಯಲ್ಲಿದ್ದ ನಮ್ಮ ಬಂಧುಗಳ ಹುಡುಗನ ಅನಿಸಿಕೆ ಅನುಭವಗಳಿಂದ ಪ್ರೇರಿತವಾದದ್ದು, 'ಮನೆಯೆ ಮಗುವಿನ ರೂವಾರಿ' 'ಶಾಲೆಗೊಂದು ಸಂಪರ್ಕ ಸೇತುವೆ' 'ಮಕ್ಕಳೊಡನಾಟ ಕಲಿಸಬಲ್ಲದು ಪಾಠ' ಎಂಬ ಲೇಖನಗಳು ನನ್ನ ಅನುಭವ ಅನಿಸಿಕೆಗಳ ಪ್ರತೀಕಗಳಾಗಿವೆ.

'ಜಾಣ ಮಕ್ಕಳಿಗೊಂದು ರಾಷ್ಟ್ರೀಯ ಯೋಜನೆ' ಎಂಬ ಲೇಖನವನ್ನು ಸುಮಾರು ಇಪ್ಪತ್ತು ವರ್ಷಗಳ ಹಿಂದೆಯೇ ಬರೆದಿದ್ದೆ, ಸಾರ್ವಜನಿಕ ಜೀವನದಲ್ಲಿ ಮಕ್ಕಳೆಲ್ಲರಿಗೂ ಸರಿಯಾದ ಅವಕಾಶ ಸಿಕ್ಕದೆ, ರಾಷ್ಟ್ರಕ್ಕೆ ಒಂದು ದೊಡ್ಡ 'ಕೊಡುಗೆ'ಯಾಗಬೇಕಾದ ಅವರ ಜಾಣ್ಮೆ ವ್ಯರ್ಥವಾಗಿ ಹೋಗುವುದನ್ನು ಗಮನಿಸಿದಾಗ, ಅಂತಹ ಮಕ್ಕಳು ಹತಾಶರಾಗಿದ್ದುದನ್ನು ನೋಡಿದಾಗ ಮನಸ್ಸಿಗೆ ಬಂದ ವಿಚಾರಗಳನ್ನು ಬರೆದಿಟ್ಟೆ. ಆ ಜಾಣ ಮಕ್ಕಳು ಬಡವರಾದರಂತೂ, ಅವಕಾಶವೇ ದೊರೆಯದೆ ಅವರ ಜೀವನ ವ್ಯರ್ಥವಾಗುವುದನ್ನು ನೋಡಿ ಮನಸ್ಸಿಗೆ ಕಸಿವಿಸಿ ಎನ್ನಿಸುತ್ತಿತ್ತು. ಹಣದ ಕೊರತೆಯಿಂದ ಮಕ್ಕಳ ಭವಿಷ್ಯ ಹಾಗೂ ವಿದ್ಯಾಭ್ಯಾಸದ ಮೇಲೆ ಎಂತಹ ದುಷ್ಪರಿಣಾಮ ಉಂಟಾಗುತ್ತದೆ ಎಂದು ಊಹಿಸಿದಾಗ ಕರುಳಲ್ಲಿ ಕತ್ತರಿಯಾಡಿಸಿದಂತಾಗುತ್ತಿತ್ತು. ಆಗ ಮೂಡಿದ ನನ್ನ ಭಾವಣೆಗಳನ್ನು ಬರೆದು ಪ್ರಕಟಿಸಿದರೆ, ಓದಿದ ಕೆಲವರಾದರೂ ಈ ದಿಶೆಯಲ್ಲಿ ಯೋಚಿಸಿ ಎಚ್ಚರವಾಗಬಹುದೆಂಬ ಅನಿಸಿಕೆಯಿಂದ ಬರೆದೆ. "ಮಕ್ಕಳಿಗೆ ಪಾಕೆಟ್ ಮನಿ ಕೊಡಬೇಕೆ-ಬೇಡವೆ" ಎಂಬ ಬಗ್ಗೆ ಕೆಲವು ತಾಯಂದಿರು ನನ್ನನ್ನು ಕೇಳಿದಾಗ, ಅವರಿಗೆ ಉತ್ತರಿಸಿದ ಅಂಶಗಳನ್ನು ಲೇಖನ ರೂಪದಲ್ಲಿ ಹಿಡಿದಿಟ್ಟೆ.

'ಬಾಲಾಪರಾಧ ಒಂದು ಆಧುನಿಕ ವಿವೇಚನೆ' ಎಂಬ ಲೇಖನವು ಇಂಗ್ಲಿಷಿನಲ್ಲಿ 'ದಿ ಎಜ್ಯುಕೇಶನಲ್ ರಿವ್ಯೂ' ಎಂಬ ಮ್ಯಾಗಜಿನ್‌ನಲ್ಲಿ ಪ್ರಕಟವಾಗಿತ್ತು. ಅದನ್ನು ಓದಿದ ನನಗೆ, ಈ ಬಗ್ಗೆ ಪಾಲಕರೆಲ್ಲರೂ ತಿಳಿದಿದ್ದರೆ ಒಳ್ಳೆಯದೆನ್ನಿಸಿ, ಆ ಪತ್ರಿಕೆಯವರ ಒಪ್ಪಿಗೆ ತರಿಸಿಕೊಂಡು ಅದನ್ನು ಅನುವಾದಿಸಿದೆ. ಇದು ಕರ್ನಾಟಕ ವಿಶ್ವವಿದ್ಯಾಲಯದ 'ಮಾನಸಿಕ ಭಾರತಿಯಲ್ಲಿ ೧೯೭೭ರಲ್ಲಿ ಪ್ರಕಟವಾಗಿದೆ. 'ಮಕ್ಕಳಿಗೆ ನೀತಿ ಶಿಕ್ಷಣ';

'ವಿದ್ಯಾರ್ಥಿಗಳಲ್ಲಿ ಅಶಿಸ್ತು' ಎಂಬ ಲೇಖನಗಳು ಆಕಾಶವಾಣಿಯಲ್ಲಿ ನಡೆಸಿಕೊಟ್ಟ ಶಿಕ್ಷಣದ ಬಗೆಗಿನ ಚರ್ಚೆಯ ಫಲಗಳಾಗಿವೆ.

ಇದಲ್ಲದೆ ಶಿಕ್ಷಣದ ಸಮಸ್ಯೆಗಳಾದ ಮೀಸಲಾತಿ, ವೃತ್ತಿ ಶಿಕ್ಷಣ, ವಯಸ್ಕರ ಶಿಕ್ಷಣ, ಗ್ರಾಮೀಣ ಮಹಿಳೆಯರಿಗೆ ಶಿಕ್ಷಣ, ಶಿಕ್ಷಣ ತಜ್ಞೆಯರು, ಭಾರತದಲ್ಲಿ ಮಹಿಳಾ ಶಿಕ್ಷಣ, ಭಾಷೆ ಕಲಿಯುವಲ್ಲಿ ಆಡು ಮಾತಿನ ಮಹತ್ವ, ಹಿಂದಿ ಸಂಪರ್ಕ ಭಾಷೆಯಾಗಿ, ಇಂಗ್ಲಿಷ್ ಮಾಧ್ಯಮದ ಶಾಲೆಗಳು ಕನ್ನಡಿಗರಿಗೆ ಅವಶ್ಯಕವೆ ಮುಂತಾದ ಅನೇಕ ವಿಷಯಗಳ ಬಗೆಗೆ ಲೇಖನಗಳು ಪ್ರಕಟನೆಗೆ ಸಿದ್ಧವಾಗಿವೆ. ಇನ್ನೊಂದು ಸಾರಿ ಅವನ್ನು ಪ್ರಕಟಿಸುವ ಆಸೆ ಇದೆ.

ಈ ಪುಸ್ತಕಗಳು ಪಾಲಕರ ಹಾಗೂ ಶಿಕ್ಷಕರಿಗೆ ಮಕ್ಕಳ ದೃಷ್ಟಿಯಿಂದ ತುಂಬಾ ಉಪಯುಕ್ತವೆಂದು ನನ್ನ ಅನಿಸಿಕೆ. ಇದರ ಪ್ರಯೋಜನವನ್ನು ಅವರು ಪಡೆದುಕೊಂಡು ಉತ್ತಮ ಪ್ರಜೆಗಳಾಗಿ ರೂಪುಗೊಳ್ಳುವಲ್ಲಿ ಈ ಲೇಖನಗಳು ಸ್ವಲ್ಪವಾದರೂ ಉಪಯುಕ್ತವೆನ್ನಿಸಿದರೆ ನನ್ನ ಶ್ರಮ ಸಾರ್ಥಕವಾಗುತ್ತದೆ.

ಈ ಲೇಖನಗಳನ್ನು ಬರೆದು ಅನೇಕ ವರ್ಷಗಳಾಗಿದ್ದರೂ ಕಾರಣಾಂತರಗಳಿಂದ ಇದುವರೆಗೂ ಅವು ಪುಸ್ತಕ ರೂಪದಲ್ಲಿ ಪ್ರಕಟವಾಗಿರಲಿಲ್ಲ. 'ಮಹಿಳಾ ಸಾಹಿತ್ಯಿಕಾ' ಇದನ್ನು ಪ್ರಕಟಿಸಲು ಮುಂದೆ ಬಂದು, ಅನೇಕ ವರ್ಷಗಳಿಂದ ಮೂಲೆಯಲ್ಲಿ ಕುಳಿತಿದ್ದ ಲೇಖನಗಳು ಪ್ರಕಟನೆಗೊಳ್ಳಲು ಸಾಧ್ಯವಾಗುವಂತೆ ಮಾಡಿದೆ. ಆ ಸಂಘಕ್ಕೂ, ಸಂಘದ ಪದಾಧಿಕಾರಿಗಳಿಗೂ ನನ್ನ ಅಭಿನಂದನೆಗಳು.

ಲಲಿತಾಂಬಾ ವೃಷಭೇಂದ್ರಸ್ವಾಮಿ

■

## ಪರಿವಿಡಿ

## ೧. ಮಕ್ಕಳಿಗೆ ಆಟಿಕೆಗಳು

ಆಟ ಎಂದರೆ ಮಗುವಿಗೆ ಪಂಚಪ್ರಾಣ. ಆಟವಾಡದ ಮಗುವಿಲ್ಲ. ಮಗು ಆಟವನ್ನು ಆಟಿಗೆಯೊಂದಿಗೂ ಆಡುತ್ತದೆ. ಆಟಿಗೆ ಇಲ್ಲದೆಯೆ ಆಡುತ್ತದೆ. ಆದರೆ ಆಟಿಗೆಗಳೆಂದರೆ ಮಕ್ಕಳಿಗೆ ಬಹಳ ಇಷ್ಟ. ಅವರ ಇಷ್ಟಕ್ಕೆ ತಕ್ಕಂತೆ ಮನೆಯವರು ಆಟಿಗೆ ತಂದುಕೊಟ್ಟರೆ ಅವುಗಳೊಡನೆ ಆಡುತ್ತಾರೆ. ಇಲ್ಲದಿದ್ದರೆ ಮನೆಯಲ್ಲಿ ಇರುವ ಸಾಮಾನುಗಳನ್ನೇ ಆಟಿಗೆಗಳನ್ನಾಗಿ ತಾವೇ ಮಾಡಿಕೊಂಡು ಆಡುತ್ತಾರೆ. ಮಕ್ಕಳ ಬೆಳವಣಿಗೆಯಲ್ಲಿ ಆಸ್ಥೆವಹಿಸುವ ಪಾಲಕರೂ, ಹಣವಂತರೂ ಮಕ್ಕಳಿಗೆ ಆಟಿಗೆ ತಂದುಕೊಡುತ್ತಾರೆ. ಆದರೆ ಅನೇಕ ಮಕ್ಕಳಿಗೆ ಅಂತಹವು ಸಿಗದಿದ್ದಾಗ, ಒಂದು ಕೋಲನ್ನೇ ಕುದುರೆ ಮಾಡಿಕೊಂಡು ಆಡುವುದನ್ನೂ ನಾವು ಗಮನಿಸಬಹುದು. ಮನೆಯಲ್ಲಿರುವ ಡಬ್ಬಿ, ಡಬ್ಬಿ ಮುಚ್ಚಳ, ಲಟ್ಟಣಿಗೆ, ಹರಿದ ಬಟ್ಟೆಯಲ್ಲಿ ಮಾಡಿದ ಚೆಂಡುಗಳನ್ನು ಆಟಿಕೆಗಳನ್ನಾಗಿ ಮಾಡಿಕೊಂಡು ಮಕ್ಕಳು ಆಡುತ್ತವೆ. ಇದನ್ನು ನೋಡಿದರೆ ಮಕ್ಕಳಿಗೆ ಆಟಿಕೆಗಳೆಂದರೆ ಬಹಳ ಇಷ್ಟ ಎಂದು ತಿಳಿಯುತ್ತದೆ. ಈಜಿಪ್ಟಿನ ಪಿರಮಿಡ್ಡುಗಳಲ್ಲಿ, ಪರ್ಷಿಯಾದ ಪುರಾತನ ಸಮಾಧಿಗಳಲ್ಲಿ ಆಟಿಕೆಗಳು ದೊರೆತಿರುವ ಅಂಶ, ಸಾವಿರಾರು ವರ್ಷಗಳ ಹಿಂದೆಯೂ ಆಟಿಕೆಗಳನ್ನು ಬಳಸುತ್ತಿದ್ದುದು ಗೋಚರವಾಗುತ್ತದೆ. ಆದರೆ ಬಹುಶ: ಆಟಿಕೆಗಳನ್ನು ಇಂದಿನ ಉದ್ದೇಶದಿಂದ ಆಗಿನ ಕಾಲದಲ್ಲಿ ಬಳಸುತ್ತಿಲ್ಲದಿರಬಹುದು, ಇಂದು ಆಟ ಮತ್ತು ಆಟಿಕೆಗಳು ಮಗುವಿನ ಬೆಳವಣಿಗೆಯಲ್ಲಿ ಬಹುಮುಖ್ಯ ಪಾತ್ರ ವಹಿಸುತ್ತವೆ ಎಂಬುದರಲ್ಲಿ ಸಂಶಯವಿಲ್ಲ.

ಈ ಆಟಿಕೆಗಳಿಂದ ಮಗುವಿಗೆ ಮಾನಸಿಕವಾಗಿ ಸಂತೋಷವಾಗುವುದಲ್ಲದೇ ಅನೇಕ ರೀತಿಯ ಪ್ರಯೋಜನಗಳೂ ದೊರೆಯುತ್ತವೆ. ಬೇರೆ-ಬೇರೆಯ ಆಟಿಗೆಗಳ ಮೂಲಕ ಅನೇಕ ರೀತಿಯ ಆಟಗಳಾಡುವಂತೆ ಮಾಡಿ ಮಕ್ಕಳ, ದೈಹಿಕ, ಬೌದ್ಧಿಕ ಅಭಿವೃದ್ಧಿಗೆ ಸಹಾಯಕವಾಗಬಹುದು, ಇವುಗಳ ಉಪಯೋಗದಿಂದ ಅವರ ಬುದ್ಧಿಶಕ್ತಿಯನ್ನೂ, ವಿಚಾರಶಕ್ತಿಯನ್ನೂ ಹೆಚ್ಚಿಸಬಹುದು. ಜ್ಞಾನೇಂದ್ರಿಯಗಳನ್ನೂ ಚುರುಕುಗೊಳಿಸಬಹುದು, ಕೌಶಲ್ಯಯುತ ಚಟುವಟಿಕೆಗಳಿಗೆ ಸಿದ್ಧಗೊಳಿಸಬಹುದು. ನರಮಂಡಲದ ಹಾಗೂ ಸ್ನಾಯುಗಳ ಹತೋಟಿ ಬರುವಂತೆ ಮಾಡಬಹುದಲ್ಲದೆ,

ಸಾಮಾಜಿಕವಾಗಿ ಅಪೇಕ್ಷಣೀಯವಾದ ಸಹಕಾರ, ಸಹಾಯ, ಪ್ರೀತಿ, ವಿಶ್ವಾಸ ತೋರುವ ಮನೋಭಾವ ಮುಂತಾದುವುಗಳನ್ನು ಪ್ರಾರಂಭದಿಂದಲೇ ಮಕ್ಕಳಲ್ಲಿ ಮೊಳೆಯಿಸಬಹುದು. ಇಷ್ಟೇ ಅಲ್ಲದೆ ಅವರು ಸ್ವಾಲಂಬಿಗಳಾಗುವಂತಹ ಮನೋಭಾವವನ್ನು ಮೂಡಿಸುವುದಲ್ಲದೆ, ಪ್ರಯತ್ನಿಸುವಂತೆಯೂ ಮಾಡಬಹುದು. ಇದೇ ತತ್ವದ ಆಧಾರದ ಮೇಲೆಯೇ ಮ್ಯಾಡಂ ಮಾಂಟೆಸೊರಿಯು ಪ್ರಯೋಗ ಮಾಡಿ ಮಾಂಟೆಸೊರಿ ಶಿಕ್ಷಣ ಪದ್ಧತಿಯನ್ನೇ ರೂಪಿಸಿದರು. ಆ ಪದ್ಧತಿಯಲ್ಲಿ ಜ್ಞಾನೇಂದ್ರಿಯಗಳನ್ನು ಚುರುಕುಗೊಳಿಸಲು ಸಹಾಯವಾಗುವ ಅತೀ ಸರಳ ಆಟಿಕೆಗಳನ್ನು ಬಳಸಲಾಗುತ್ತದೆ. ಶಾಸ್ತ್ರೀಯವಾಗಿ, ಕ್ರಮಬದ್ಧವಾಗಿ ಅವುಗಳನ್ನು ಮಕ್ಕಳಿಗೆ, ವಯಸ್ಸಿಗೆ ಅನುಗುಣವಾಗಿ ಆಟದಲ್ಲಿ ಉಪಯೋಗಿಸಲು ಕೊಟ್ಟರೆ, ಒಳ್ಳೆಯ ರೀತಿಯಲ್ಲಿ ಮಕ್ಕಳ ಬೆಳವಣಿಗೆಯಾಗುವುದರಲ್ಲಿ ಸಂಶಯವಿಲ್ಲ. ಆದುದರಿಂದ ಮಕ್ಕಳ ಬೆಳವಣಿಗೆಗೆ ಅನುಗುಣವಾಗಿ ಆಟಿಕೆಗಳನ್ನು ಕಾಲಕಾಲಕ್ಕೆ ಒದಗಿಸುವುದರ ಮೂಲಕ ಮಕ್ಕಳ ಸಹಜವಾದ ಬೆಳವಣಿಗೆಗೆ ಸಹಾಯಕವಾಗಬಹುದು, ಅಲ್ಲದೆ ತಮ್ಮ ಜ್ಞಾನೇಂದ್ರಿಯಗಳನ್ನು ಸರಿಯಾಗಿ ಉಪಯೋಗಿಸಿ ಅವುಗಳ ಸಂಪೂರ್ಣ ಪ್ರಯೋಜನ ಪಡೆಯಲು ಶಕ್ತರಾಗುತ್ತಾರೆ.

ಆದುದರಿಂಗ ಕುಟುಂಬದ ಜನರು ಮಕ್ಕಳಿಗೆ ಆಟಿಕೆಗಳನ್ನು ಆರಿಸುವಾಗ ಅನೇಕ ಅಂಶಗಳನ್ನು ಗಮನಿಸಬೇಕಾಗುತ್ತದೆ. ಆರು ತಿಂಗಳವರೆಗಿನ ಮಕ್ಕಳಿಗೆ ಕಾರು, ಗಾಡಿ, ಮಣಿಯಕಟ್ಟು ಇಂತಹವು ಪ್ರಯೋಜನವಿಲ್ಲ. ಆಗ ಅತ್ಯಂತ ಆಕರ್ಷಕ ಬಣ್ಣದ ವಸ್ತುಗಳು, ಮಿದುವಾದ ಚಂಡಿನಂತಹ ವಸ್ತುಗಳು, ದಾರಕ್ಕೆ ಕಟ್ಟಿದ ಬಣ್ಣ ಬಣ್ಣದ ಬಲೂನುಗಳು ಬಹಳ ಉಪಯೋಗ, ಇವುಗಳನ್ನು ಮಗುವಿನ ಕಣ್ಣಿನ ನೇರಕ್ಕೆ, ಕೈಚಾಚಿದರೆ ಸಿಕ್ಕುವ ಅಂತರದಲ್ಲಿ ಕಟ್ಟಿದರೆ ಮಗುವು ಬರುಬರುತ್ತಾ ಅದರ ಬಣ್ಣದ ಕಡೆಗೆ ಆಕರ್ಷಿಸಲ್ಪಡುತ್ತದೆ. ಅವು ಗಾಳಿಗೆ ಅಲುಗಾಡಿವಾಗ ಮಕ್ಕಳಿಗೆ ಖುಷಿಯಾಗಿ ಆ–ಊ್ಣ ಎಂದು ಆಡಲು ಪ್ರಾರಂಭಿಸುತ್ತವೆ, ಆ ಸಂತೋಷದಲ್ಲಿ ಕೈಕಾಲನ್ನು ಆಡಿಸುತ್ತವೆ. ಹೀಗಾಗಿ ಮಗುವಿನ ದೈಹಿಕ ಬೆಳವಣಿಗೆಗೆ ಬೇಕಾದ ವ್ಯಾಯಾಮ ದೊರೆಯುತ್ತದೆ, ಮನಸ್ಸು ಪ್ರಫುಲ್ಲವಾಗಿ ಒಂದು ರೀತಿಯ ಮಾನಸಿಕ ಆನಂದದಲ್ಲಿ ಮಗುವಿನ ಬೆಳವಣಿಗೆಯಾಗುತ್ತದೆ. ಬಣ್ಣದ ಚಲುವನ್ನು, ಆಟಿಕೆಯ ಚಲಿಸುವಿಕೆಯನ್ನು ಗುರ್ತಿಸುವ ಕಲೆಯಿಂದಾಗಿ ದರ್ಶನೇಂದ್ರಿಯದ ತರಬೇತಿಯೂ ದೊರೆಯುತ್ತದೆ. ಮಗು ಬೆಳೆದಂತೆ, ಅದನ್ನು ಹಿಡಿಯಬೇಕೆಂಬ ಆಸೆಯಾಗಿ ಅದನ್ನು ಪಡೆಯಲು ಕೈಚಾಚಬೇಕೆಂಬ ತಿಳಿವಳಿಕೆ ಮೂಡಿ ಕೈಚಾಚಿ ಹಿಡಿಯಲು ಪ್ರಯತ್ನ ಮಾಡುತ್ತದೆ. ಸ್ವಲ್ಪ ಸ್ವಲ್ಪ ಚಾಚುತ್ತ ಕಡೆಗೆ ಅದನ್ನು ಮುಟ್ಟುತ್ತದೆ. ಆದರೆ ಅದನ್ನು ಹಿಡಿಯಲಿಕ್ಕೆ ಬೇಕಾದ ಸ್ನಾಯುಗಳ ಮೇಲಿನ ಹಿಡಿತ, ಬೆರಳುಗಳನ್ನು ತನಗೆ ಬೇಕಾದಂತೆ ಉಪಯೋಗಿಸುವ ಕೌಶಲ್ಯ ಇರುವುದಿಲ್ಲ. ನಂತರ ಅದನ್ನು

ಹಿಡಿಯಬೇಕೆಂಬ ಆಸೆಯಿಂದಾಗಿ ತನ್ನ ಅವಯವಗಳ ಮೇಲೆ ನಿಯಂತ್ರಣವಿಟ್ಟುಕೊಳ್ಳುವುದನ್ನೂ ಕಲಿತು ತನಗೆ ಸಿಕ್ಕುವ ಅಂತರದಲ್ಲಿ ಕಟ್ಟಿದ ಆಟಿಗೆಯನ್ನು ಮುಟ್ಟಲು, ಅದನ್ನು ಹೊಡೆದು ಅಲುಗಿಸಲು, ಕೈಲಿ ಹಿಡಿದುಕೊಳ್ಳಲು ಕಲಿಯುತ್ತದೆ. ಈ ವಯಸ್ಸಿನಲ್ಲಿ ಉಪಯೋಗಿಸಬಹುದಾದ ಮತ್ತೊಂದು ಆಟಿಕೆಯೆಂದರೆ ಗಿಲಿಗಿಂಜಿ. ಇದರ ಇಂಪಾದ ಸಪ್ಪಳವೂ ಮಗುವಿನ ಗಮನ ಸೆಳೆಯುತ್ತದೆ, ಅದರ ಶ್ರವಣೇಂದ್ರಿಯದ ತರಬೇತಿಗೆ ಸಹಾಯವಾಗುತ್ತದೆ. ನಮ್ಮ ಮನೆಗಳಲ್ಲಿ ಮಗುವಿನ ತೊಟ್ಟಿಲಿಗೆ ಕಟ್ಟಿದ ಬಣ್ಣದ ಗುಬ್ಬಿಚಟ್ಟು ಅನೇಕ ಬಾರಿ ಗಾಜಿನವುಗಳಾಗಿರುತ್ತವೆ. ಅಥವಾ ಪ್ಲಾಸ್ಟಿಕ್‌ನವುಗಳಾಗಿರುತ್ತವೆ, ಅದನ್ನೂ ಸಹ ಮಗುವಿನ ಕೈಗೆ ಎಟುಕದಂತಹ ಅಂತರದಲ್ಲಿ ಕಟ್ಟಿರುತ್ತಾರೆ. ಇದು ಸರಿಯಲ್ಲ. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ ಆ ಆಟಿಕೆಗಳು ಮೊನಚಾಗಿರಬಾರದು, ಮೃದುವಾಗಿರಬೇಕು. ಮುರಿಯುವಂತಿರಬಾರದು. ತೊಳೆದು ಸ್ವಚ್ಛ ಮಾಡುವಂತಿರಬೇಕು. ಮಗು ಕೈ ಚಾಚಿದರೆ ಸಿಕ್ಕುವ ಅಂತರದಲ್ಲಿರಬೇಕು.

ಇದಾದ ಮೇಲೆ ಆರು ತಿಂಗಳ ನಂತರದ ವಯಸ್ಸಿನ ಮಕ್ಕಳಿಗೆ ಎಂತಹ ಆಟಿಕೆ ಬೇಕು ಎನ್ನುವುದನ್ನು ವಿಚಾರಿಸಬೇಕು. ಈ ವಯಸ್ಸಿಗೆ ಅದರ ದೈಹಿಕ ಬೆಳವಣಿಗೆಯಲ್ಲಿನ ಮಾರ್ಪಾಟನ್ನು ಗಮನಿಸಿದರೆ ಈಗಾಗಲೇ ಕೆಲವು ಮಕ್ಕಳು ಸರಿಯಾಗಿ ಕುಳಿತುಕೊಳ್ಳಲು ತೊಡಗಿರುತ್ತವೆ. ಈಗ ಮಕ್ಕಳಿಗೆ ಮೃದುವಾದ ವಸ್ತುವಿನಿಂದ ಮಾಡಿದ ಮುದ್ದಾದ ಆಕರ್ಷಕ ಬೊಂಬೆ. ಉಣ್ಣೆಯಿಂದ ಮಾಡಿದ ಪ್ರಾಣಿಗಳು ಇಷ್ಟ. ಈ ಮಕ್ಕಳಿಗೆ ಅವುಗಳನ್ನು ಮುಟ್ಟುವುದು, ಮುದ್ದಾಡುವುದೆಂದರೆ ಬಹಳ ಪ್ರೀತಿ. ಮಕ್ಕಳ ಸ್ನಾನದ ಸಮಯದಲ್ಲಿ ನೀರಿನಲ್ಲಿ ತೇಲುವ ಆಟಿಕೆಗಳು ಬಹಳ ಉಪಯೋಗ, ಎಂಟು ಹತ್ತು ತಿಂಗಳ ಮಕ್ಕಳನ್ನು ಕೂರಿಸಿ ಸ್ನಾನ ಮಾಡಿಸುತ್ತೇವೆ, ಆಗ ಬಹಳಷ್ಟು ಮಕ್ಕಳು ತುಂಬಾ ಅಳುತ್ತವೆ. ಆ ಸಮಯದಲ್ಲಿ ಒಂದು ಅಗಲವಾದ ಎತ್ತರವಿಲ್ಲದ ಪಾತ್ರೆಯಲ್ಲಿ ನೀರು ಹಾಕಿ ತೇಲುವ ಆಟಿಕೆಗಳನ್ನು ಹಾಕಿದರೆ, ಅವನ್ನು ನೋಡುತ್ತಾ, ನೀರಲ್ಲಿ ಮಳುಗಿಸಲು ಪ್ರಯತ್ನಿಸುತ್ತಾ ಮಗು ನಗು ನಗುತ್ತಾ ಸ್ನಾನ ಮಾಡುವುದನ್ನು ಕಲಿಯುತ್ತದೆ. ಅಲ್ಲದೆ ಕೈಕಾಲಿನ ಉಪಯೋಗ ಮಾಡುವಿಕೆಯಿಂದ ಸ್ನಾಯುಗಳು ಬಲಯುತ್ತವಾಗುತ್ತವೆ. ಇದಾದ ನಂತರ ಪ್ಲಾಸ್ಟಿಕ್‌ನ, ಕಟ್ಟಿಗೆಯ ಅಥವಾ ರಬ್ಬರಿನ ಸಣ್ಣ ಸಣ್ಣ, ಬೇರೆ ಬೇರೆ ಅಳತೆಯ ಪಡಿಯಚ್ಚುಗಳು ಬಹಳ ಉಪಯೋಗ. ಇವುಗಳೊಡನೆ ಮಕ್ಕಳು ಮೊದಮೊದಲು ಗುರಿ ಇಲ್ಲದೆ ಮನಸ್ಸಿಗೆ ಬಂದಂತೆ ಆಡುತ್ತಿರುತ್ತವೆ. ಆದರೆ ಬರಬರುತ ಅವನ್ನು ಎಸೆದು, ಜೋಡಿಸಿ, ಕೂಡಿಸಿ, ಬಿಡಿಸಿ ಆಡಲು ತೊಡಗುತ್ತವೆ, ಇವು ಸಾಕಾಯ್ತೆನ್ನಿಸಿದಾಗ ಬಟ್ಟೆ ಅಥವಾ ಪ್ಲಾಸ್ಟಿಕ್‌ನಿಂದ ಮಾಡಿದ ಚಿತ್ರ ಪುಸ್ತಕಗಳನ್ನು ಕೊಡಬಹುದು. ಕಾಗದದ ಪುಸ್ತಕಗಳಾದರೆ ಬೇಗ ಹರಿದು ಹಾಕಿ ಬಿಡುತ್ತವೆ. ಈ ವಯಸ್ಸಿನ ಮಕ್ಕಳಿಗೆ

ಆಟಿಕೆಗಳನ್ನು ಕೊಡುವಾಗ ಗಮನಿಸಬೇಕಾದ ಮತ್ತೊಂದು ಮುಖ್ಯ ಅಂಶವೆಂದರೆ, ಅವುಗಳನ್ನು ಮಗು ಬಾಯಿಯೊಳಗೆ ಹಾಕಿಕೊಳ್ಳಲಾರದಷ್ಟು ದೊಡ್ಡವಿರಬೇಕು. ಹಾಗೂ ಹಗುರಾಗಿರಬೇಕು.

ಮಗು ನಡೆಯುವ ವಯಸ್ಸಿಗೆ ಬಂದಾಗ ಬೇರೆ ಆಟಿಕೆಗಳೇ ಅದಕ್ಕೆ ಬೇಕು. ಈಗ ಅವರಿಗೆ ಹೊಸಜಗತ್ತು ಮುಂದಿರುತ್ತದೆ, ಅವರ ಆಟದ ಪರಿವಿಧಿಯೂ ವಿಶಾಲಗೊಳ್ಳುತ್ತದೆ. ಈಗ ಎಳೆದರೆ, ಹಿಸುಕಿದರೆ, ನಾದಮಾಡುವ ವಟಗುಟ್ಟುವ, ವಿಧವಿಧದ ಶಬ್ದಮಾಡುವ ಪ್ರಾಣಿಗಳ, ಪಕ್ಷಿಗಳ ಆಟಿಕೆಗಳು ಮಕ್ಕಳಿಗೆ ಸೇರುತ್ತವೆ, ಇನ್ನೂ ಕೆಲವು ತಿಂಗಳಾದರೆ, ಗಾಲಿ ಇರುವ ಎಳೆದುಕೊಂಡು ಹೋಗಲು ಬರುವ ಆಟಿಕೆಗಳು ಮಕ್ಕಳಿಗೆ ಮೋಜನ್ನುಂಟು ಮಾಡುತ್ತವೆ, ಚಂಡುಗಳು ವಯಸ್ಸಿಗೆ ತಕ್ಕಂತಹ ಸೈಜಿನಲ್ಲಿ ಎಲ್ಲಾ ವಯಸ್ಸಿನ ಮಕ್ಕಳಿಗೂ ಇಷ್ಟ. ಈಗ ಪ್ಲಾಸ್ಟಿಕ್‌ನ ಸಣ್ಣ ಸಲಿಕೆ, ಬುಟ್ಟಿಯೂ, ದೊಡ್ಡವರು ಮಾಡಿದಂತೆ ಮಾಡಿ ಮುದಗೊಳ್ಳಲು ಸಹಾಯಕವಾಗಿರುತ್ತವೆ, ಸಂಗೀತದ ನಾದ ಮಾಡುವ ಸಣ್ಣ ಸಣ್ಣ ವಾದ್ಯಗಳೂ ಬಹುಳ ಪ್ರಿಯವೆನ್ನಿಸುತ್ತವೆ, ಇಷ್ಟೂ ಸಾಲದೆ ಮನೆಯ ಸಾಮಾನುಗಳನ್ನು ತಮ್ಮ ಆಟಕ್ಕೆ ಮಕ್ಕಳು ತೆಗೆದುಕೊಳ್ಳುತ್ತಾರೆ.

ಮಕ್ಕಳಿಗೆ ಮನೆಯಲ್ಲಿ ತಮ್ಮ ಆಟಿಕೆಗಳನ್ನು ಇಡಲಿಕ್ಕೆ ಒಂದು ನಿರ್ದಿಷ್ಟವಾದ ಜಾಗವನ್ನು ಗೊತ್ತುಮಾಡುವುದು ಒಳಿತು. ಹಾಗೆ ಮಾಡಿದರೆ ಮಕ್ಕಳು ಬೇಕಾದಾಗ ಆ ಸಾಮಾನುಗಳನ್ನು ತೆಗೆದುಕೊಂಡು ಆಡಿ ಮತ್ತೆ ಅದೇ ಸ್ಥಳಕ್ಕೆ ಇಡುವ ರೂಢಿಯನ್ನು ಬೆಳೆಸಿಕೊಳ್ಳುತ್ತಾರೆ. ಆ ಜಾಗ ಮಗುವಿನ ಕೈಗೆ ಎಟುಕುವಂತಿರಬೇಕು.

ಎರಡರಿಂದ ನಾಲ್ಕು ವರ್ಷದ ಮಕ್ಕಳಿಗೆ ನೂಕುವ, ಎಳೆಯುವ ಆಟಿಕೆಗಳು ಬಹಳ ಇಷ್ಟ. ಈಗ ಮೂರುಗಾಲಿಯ ಗಾಡಿ, ಸೈಕಲ್ಲು, ಸಾಮಾನನ್ನು ಹಾಕಲು ಚಕ್ರವುಳ್ಳ ವ್ಯಾಗನ್, ಇಂತಹವುಗಳನ್ನು ಕೊಡಬಹುದು. ಚಕ್ರಗಳುಳ್ಳ ಪ್ರಾಣಿಗಳು, ಕಾರು, ಟ್ರಕ್ಕು, ರೈಲು ಇಂತಹುಗಳನ್ನು ಇಷ್ಟಪಡುತ್ತಾರೆ. ಮನೆಯಲ್ಲೇ ಕುಳಿತುಕೊಂಡು ಆಡುವ ದೊಡ್ಡದಾದ ಕಾರು, ಕಟ್ಟಿಗೆಯ ಕುದುರೆ, ಕಟ್ಟಿಗೆಯ ಮೆಟ್ಟಲುಗಳಂತಹ ಆಟಿಕೆಗಳು ಸಹ ಒಂದು ರೀತಿಯ ಸಾಹಸ ಪ್ರವೃತ್ತಿಗೆ ತೃಪ್ತಿಯನ್ನು ಕೊಡಬಲ್ಲವು, ಮಗು ಬರಬರುತ್ತಾ ಬಹು ಚುರುಕಾಗುವ ವಯಸ್ಸಿದು. ಅಂತಹ ಚುರುಕುತನಕ್ಕೆ ಆಟಿಕೆಗಳು ಈಗ ಬೇಕು. ಜಾರುಬಂಡೆ, ಸೀಸಾ, ಉಯ್ಯಾಲೆ ಈ ವಯಸ್ಸಿನ ಮಕ್ಕಳಿಗೆ ಆಪ್ಯಾಯಮಾನ. ಇವು ಅವರ ದೈಹಿಕ ಹಾಗೂ ಮಾನಸಿಕ ಆರೋಗ್ಯವರ್ಧನೆಗೆ ಸಹಾಯಕವಾಗುತ್ತವೆ, ಕರಕೌಶಲ್ಯವನ್ನು ಬೆಳೆಸಲು, ಮೆಚ್ಚುಗೆಯ ಮನವನ್ನು ರೂಪಿಸಲು ಬಣ್ಣ ಹಾಗೂ ಕುಂಚಗಳನ್ನು ಅವರಿಗೆ ತಿಳಿದಂತೆ ಬಳಸಲು ಆಸ್ಪದ ಮಾಡಿಕೊಡಬೇಕು. ಕೈ ಕೆಸರಾಗದಂತೆ ಉಪಯೋಗಿಸಬಹುದಾದ ಪ್ಲಾಸ್ಟಿಸಿನ್

ಕೊಟ್ಟರೆ ಮೊದಮೊದಲು ಅದನ್ನು ಮುದ್ದೆಮಾಡುತ್ತಾ, ಉದ್ದ ಮಾಡುತ್ತಾ ಸಂತೋಷಿಸುವ ಮಕ್ಕಳು ಬರುಬರುತ್ತಾ ಅದರಿಂದ ಚಂಡು, ಬಟ್ಟಲು, ದಾಂಡು, ಕುರ್ಚಿ, ಸೌಟು ಮಣೆ ಮುಂತಾದ ವಸ್ತುಗಳನ್ನು ಮಾಡಲು ತೊಡಗುತ್ತಾರೆ, ಉಸುಕಿನಲ್ಲಿ ಗುಬ್ಬಚ್ಚಿಗೂಡು, ಸೇತುವೆ, ಸುರಂಗಮಾರ್ಗಗಳನ್ನು ಮಾಡಿ ಆನಂದಿಸುತ್ತಾರೆ.

ಈಗ ಸ್ನಾಯುಗಳ ಸಹಕಾರ ಅತೀ ಚುರುಕಾಗುವುದರಿಂದ, ಕೈಚಳಕಕ್ಕೆ ಆಸ್ಪದವಿರುವ ಆಟಿಕೆಗಳು ಬೇಕು. ಮಕ್ಕಳು ಈಗ ಹೆಚ್ಚಿನ ಕೌಶಲದಿಂದ ಅವುಗಳನ್ನು ಉಪಯೋಗಿಸಬಲ್ಲರು, ಬಿಡಿಸುವ, ಜೋಡಿಸುವ ಕಟ್ಟುವ ಹೊಂದಿಸಲು ಬರುವ ಪ್ಲಾಸ್ಟಿಕ್ ಸಾಮಾನುಗಳು ಬಹಳ ಉಪಯೋಗ ಕೆಲವು ಒರಟಾಗಿದ್ದರೂ ಒಳ್ಳೆಯದು. ಆದ್ದರಿಂದ ಬಿಲ್ಡಿಂಗ್ ಬ್ಲಾಕ್ಸ್‌ನ ಸೆಟ್ಟುಕೊಟ್ಟರೆ ಒಳಿತು, ನಾಲ್ಕನೆಯ ವರ್ಷದ ಸುಮಾರಿನ ಮಕ್ಕಳು ಕಾಲ್ಪನಿಕ ಹಾಗೂ ಅನುಕರಣೀಯ ಆಟಗಳನ್ನು ಆಡಲು ಇಚ್ಚಿಸುತ್ತಾರೆ. ಹೆಣ್ಣುಮಕ್ಕಳಿಗೆ ಆಟದ ಸೈಜಿನ ಅಡಿಗೆಯ, ಊಟದ ಸೆಟ್ ಕೊಡಬಹುದು. ಎಲ್ಲ ಮಕ್ಕಳಿಗೂ ಆಟಿಕೆಯ ಸ್ಟೆತಾಸ್ಕೋಪ್, ಇಂಜೆಕ್ಷನ್ ಟ್ಯೂಬ್, ಬೆತ್ತ, ಬೋರ್ಡ್ ಮುಂತಾದ ಅವರ ಪರಿಸರಕ್ಕನುಗುಣವಾದ ಆಟಿಕೆಗಳನ್ನು ಕೊಡಬಹುದು.

ನಾಲ್ಕರ ನಂತರದ ಮಕ್ಕಳಿಗೆ ವಿಧ ವಿಧದ ಆಹಾರದ ಬಿಲ್ಡಿಂಗ್ ಸೆಟ್‌ಗಳನ್ನು ಕೊಡಬಹುದು. ಇದರಲ್ಲಿ ಅದರ ಪರಿಸರದಲ್ಲಿ ಬರುವಂತಹವುಗಳನ್ನು ರೂಪಿಸಲು ಅನುಕೂಲವಾಗುವಂತಿರಬೇಕು. ವಾಹನಗಳು ತೋಟಗಾರಿಕೆಗೆ ಬೇಕಾದ ವಸ್ತುಗಳು, ರಸ್ತೆ, ರೈಲ್ವೆಸ್ಟೇಷನ್, ಪೋಸ್ಟ್ ಆಫೀಸ್ ಮುಂತಾದವುಗಳನ್ನು ನಿರ್ಮಿಸಲು ಸಹಾಯಕವಾಗುವ ಆಟಿಕೆಗಳು ಅವರ ಕಾಲ್ಪನಿಕ ಶಕ್ತಿಯನ್ನು, ವಿಚಾರ ಶಕ್ತಿಯನ್ನು, ನೆನಪಿನ ಶಕ್ತಿಯನ್ನು ಕುದುರಿಸಲು ಸಹಾಯಕ.

ಬರುಬರುತ್ತಾ ಮಕ್ಕಳಲ್ಲಿ ಹೆಚ್ಚಿನ ಕೌಶಲವನ್ನು ಬೆಳೆಸುವಂತಹ ಆಟಿಕೆಗಳು ಬೇಕಾಗುತ್ತವೆ. ಪ್ಯಾರಲಲ್ ಬಾಕ್ಸ್, ರಿಂಗ್ಸ್‌ಗಳು, ಹಗ್ಗದಾಟಕ್ಕೆ ಹಗ್ಗ ಇವುಗಳನ್ನು ಒದಗಿಸಬೇಕು, ಸಾಮಾನುಗಳನ್ನು ಜೋಡಿಸಲು ಸಹಾಯಕವಾಗುವ ಉಪಕರಣಗಳ ಕಟ್ಟನ್ನು ಕೊಟ್ಟರೆ ಸಾಮಾನುಗಳನ್ನು ಸರಿಪಡಿಸಲು ಪ್ರಯತ್ನಿಸುತ್ತಾರೆ. ಸ್ಕ್ರೂಗಳನ್ನು ಜೋಡಿಸುವ, ಬಿಚ್ಚುವಂತಹ ಸೂಕ್ಷ್ಮ ಕೆಲಸಗಳನ್ನು ಜಾಗರೂಕತೆಯಿಂದ ಮಾಡಲು ಕಲಿಯುತ್ತಾರೆ.

ಹೀಗೆ ವಯಸ್ಸಿಗೆ ತಕ್ಕಂತೆ ಅದರ ಮಾನಸಿಕ, ದೈಹಿಕ ಬೆಳವಣಿಗೆಗೆ ಅನುಗುಣವಾಗಿ ಆಟಿಕೆಗಳನ್ನು ಕೊಡುವುದರ ಮೂಲಕ ಮಕ್ಕಳನ್ನು ಮುಂದಿನ

ಶಾಲಾಜೀವನಕ್ಕೆ ಸುಲಭವಾಗಿ ಅಣಿಗೊಳಿಸಬಹುದು. ಆಗ ಮಕ್ಕಳಿಗೆ ಕಲಿಯುವಿಕೆಯು ಒಂದು ಹಿಂಸೆಯಾಗದೆ ಆಟವೆನ್ನಿಸುತ್ತದೆ. ಕಲಿಸುವವರಿಗೂ ಕಲಿಯುವವರಿಗೂ ಅನುಕೂಕವಾಗುತ್ತದೆ. ಹಾಗಾಗಿಯೇ ಈಗ ಪೂರ್ವ ಪ್ರಾಥಮಿಕ ಶಿಕ್ಷಣದ ಶಾಲೆಗಳು ಬಹಳ ಜನಪ್ರಿಯವಾಗುತ್ತಿವೆ. ತಂದೆ-ತಾಯಿಯರು ಎಷ್ಟೇ ಖರ್ಚಾದರೂ ಅಡ್ಡಿ ಇಲ್ಲ. ಪುಟ್ಟ ಮಕ್ಕಳನ್ನು ಪೂರ್ವ ಪ್ರಾಥಮಿಕ ಶಾಲೆಗಳಿಗೇ ಕಳಿಸಬೇಕೆನ್ನುತ್ತಾರೆ. ಆದರೆ ದುರದೃಷ್ಟದಿಂದ ಈ ಶಾಲೆಗಳಲ್ಲಿಯೂ ಮೂಲ ಉದ್ದೇಶವನ್ನೇ ಕಡೆಗಣಿಸಿ, ಓದು-ಬರಹಕ್ಕೆ ಈ ಕಂದಮ್ಮಗಳನ್ನು ತೊಡಗಿಸುತ್ತಾರೆ. ಇಷ್ಟೇ ಅಲ್ಲ. ಈ ಪುಟ್ಟ ಮಕ್ಕಳಿಗೆ ಅಕ್ಷರಗಳನ್ನು ಕಲಿತುಕೊಂಡು ಬರಲು, ಅಂಕೆ ಹೇಳಲು, ಬರೆಯಲು ಅಭ್ಯಾಸ ಮಾಡಲು ಮನೆಗೆಲಸ ಬೇರೆ ಕೊಡುತ್ತಾರೆ. ಈ ವಯಸ್ಸಿನಲ್ಲಿ ಆಟಿಕೆಗಳೇ ಮಕ್ಕಳ ಪಠ್ಯಗಳೆಂಬುದನ್ನು ಮರೆಯಬಾರದು. ಈ ಹಸುಳೆಗಳಲ್ಲಿ ಇಂತಹ ಬಾಲವಾಡಿಗಳಿಂದ ಶಾಲೆಯ ಬಗ್ಗೆ ಬೇಸರಿಕೆಯನ್ನು ತೋರಿಸುವಂತಹ ಪ್ರವೃತ್ತಿ ಬೆಳೆಯತೊಡಗಿದೆ. ಈ ಬಗ್ಗೆ ಪೂರ್ವ ಪ್ರಾಥಮಿಕ ಶಾಲೆಗಳಿಗೆ ಸಂಬಂಧಿಸಿದವರು ಗಮನ ಹರಿಸುವುದು ಅಗತ್ಯ.

■

## ೨. ಚಾರಿತ್ರ್ಯ ನಿರ್ಮಾಣಕ್ಕಾಗಿ ಮಕ್ಕಳಿಗೆ ಕಥೆಗಳು

ಒಂದೂರಲ್ಲಿ ಒಬ್ಬ ಅಡಗೂಲಜ್ಜಿ ಇದ್ದಳು. ಅವಳು ದೋಸೆ ಮಾಡಿ, ಮಾರಿ ಜೀವಿಸುತ್ತಿದ್ದಳು. ಆಕೆ ಎಂದೂ ಒಬ್ಬರಿಗೂ ಉಪಕಾರ ಮಾಡಿದವಳಲ್ಲ, ಒಂದು ದಿನ ಒಬ್ಬ ದೇವತೆ ಪುಟ್ಟ ಹುಡುಗಿಯಾಗಿ ಅಜ್ಜಿಯ ಹತ್ತಿರ ಬಂದಳು, "ಅಜ್ಜೀ, ಅಜ್ಜೀ ನನಗೊಂದು ದೋಸೆ ಕೊಡಜ್ಜಿ" ಎಂದು ತನ್ನ ಪುಟ್ಟ ಕೈ ಚಾಚಿದಳು. "ಕಾಸು ಕೊಟ್ಟರೆ ದೋಸೆ" ಎಂದಳು ಅಜ್ಜಿ. ಹುಡುಗಿ ಎಷ್ಟೇ ಕಾಡಿ ಬೇಡಿದರೂ ಅಜ್ಜಿ ದೋಸೆ ಕೊಡಲಿಲ್ಲ. ಆಗ ದೇವತೆ ಅಜ್ಜಿಗೆ ಒಂದು ಚೀಲ ಕೊಟ್ಟು, 'ಇದನ್ನು ಮನೆಗೆ ತೆಗೆದುಕೊಂಡು ಹೋಗು ಮತ್ತೊಮ್ಮೆ ಬಂದು ನಾನು ಕೇಳಿದಾಗ ಕೊಡಬೇಕು, ಮನೆಗೆ ಹೋಗುವ ಮೊದಲೇ ನೋಡಿದರೆ ನೀನು ಹಕ್ಕಿಯಾಗುತ್ತಿ' ಎಂದು ಹೇಳಿ ಮಾಯವಾದಳು. ಆ ಮುದುಕಿ ತನ್ನೆಲ್ಲಾ ಮಾರಾಟ ಮುಗಿಸಿಕೊಂಡು ಮನೆಯಕಡೆ ಹೊರಟಳು. ದಾರಿಯಲ್ಲಿ ಆಕೆಗೆ ಚೀಲದಲ್ಲಿ ಏನಿದೆ ಎಂದು ನೋಡಬೇಕೆನ್ನಿಸಿತು. ಕುತೂಹಲ ತಡೆಯಲಾಗಲಿಲ್ಲ. ಯಾರೂ ಇಲ್ಲದ ಸಮಯ ನೋಡಿ ಚೀಲ ಬಿಚ್ಚಿದಳು. ಅದರಿಂದ ಹಾವು, ಚೇಳು, ಚಿಟ್ಟೆ, ಹುಳು ಮುಂತಾದ ಕ್ರಿಮಿಕೀಟಗಳು ಬುಳಬುಳನೆ ಹೊರಟು ಸಂದಿ-ಗೊಂದಿಗಳಲ್ಲಿ ಸೇರಿಕೊಂಡು ಬಿಟ್ಟವು, ಮುದುಕಿ ಅವನ್ನು ಹಿಡಿದು ಚೀಲದಲ್ಲಿ ತುಂಬಬೇಕೆಂದು ಪ್ರಯತ್ನಿಸುತ್ತಿದ್ದಂತೆಯೇ ಹಕ್ಕಿಯಾಗಿ ಬಿಟ್ಟಳು. ಆದರೂ ಮುದುಕಿ ಹುಳು ಹುಪ್ಪಡಿಗಳನ್ನು ತನ್ನ ಕೊಕ್ಕಿನಿಂದ ಆರಿಸುವುದನ್ನು ಬಿಡಲಿಲ್ಲ. ಅದೇ ಮರಕುಟಿಕದ ಹಕ್ಕಿ, ಸಂದಿಯಲ್ಲಿರುವ ಹುಳುಗಳನ್ನೆಲ್ಲಾ ಆರಿಸಲೆಂದೇ ಮರಕುಟಿಕಕ್ಕೆ ಅಷ್ಟೊಂದು ಉದ್ದ ಕೊಕ್ಕು.

ಈ ಕಥೆಯನ್ನು ಕೇಳುವ ಮಕ್ಕಳು ತಲ್ಲೀನರಾಗಿ ಕೇಳಿಬಿಡುತ್ತಾರೆ. ಅಲ್ಲಿ ಸತ್ಯಾಸತ್ಯತೆಯ, ಸಾಧ್ಯಾಸಾಧ್ಯತೆಯ ಪ್ರಶ್ನೆ ಬರುವುದಿಲ್ಲ. ಇಲ್ಲಿ ಮನರಂಜನೆಯೇ ಮುಖ್ಯ ಉದ್ದೇಶ. ಮತ್ತೊಂದು ಕಥೆ ನೋಡಿ.

ಒಂದು ಬೇಲಿ ಮೇಲೆ ಒಂದು ಕೋತಿ ಕುಳಿತಿತ್ತಂತೆ, ಅದರ ಬಾಲ ಬೇಲಿಯ ಸಂದಿಯಲ್ಲಿ ಸಿಕ್ಕಿಕೊಂಡಿತಂತೆ, ಅದೇ ಸಮಯಕ್ಕೆ ಸರಿಯಾಗಿ ಒಬ್ಬ ಮನುಷ್ಯ ಚೂರಿ ಹಿಡಿದುಕೊಂಡು ಹೋಗುತ್ತಿದ್ದನಂತೆ, ಆಗ ಆ ಕೋತಿ, 'ಅಪ್ಪಾ, ಅಪ್ಪಾ

ನಿನ್ನ ಚೂರಿಯಿಂದ ನನ್ನ ಬಾಲವನ್ನು, ಈ ಮುಳ್ಳು ಬೇಲಿಯಿಂದ ಬಿಡಿಸಪ್ಪಾ' ಎಂದಿತಂತೆ. ಆಗ ಅವನು ಮುಳ್ಳನ್ನು ಕತ್ತರಿಸಲು ಹೋಗಿ ಬಾಲವನ್ನೇ ಕೊಯ್ದುಬಿಟ್ಟನಂತೆ. ಕೋತಿ ಸುಮ್ಮನಾದೀತೆ? 'ನನ್ನ ಬಾಲವನ್ನು ಮೊದಲಿದ್ದಂತೆ ಮಾಡು ಇಲ್ಲದಿದ್ದರೆ ನಿನ್ನ ಚೂರಿ ಕೊಡು' ಎಂದಿತಂತೆ, ಪಾಪ ಅವನು ಚೂರಿ ಕೊಟ್ಟು ಹೋದನಂತೆ, ಚೂರಿ ತೆಗೆದುಕೊಂಡು ಕೋತಿ ಮುಂದೆ ಹೋಗುತ್ತಿತ್ತಂತೆ, ದಾರಿಯಲ್ಲಿ ಒಬ್ಬ ಹಲಸಿನ ಹಣ್ಣನ್ನು ತನ್ನ ಕೈಯಿಂದ ಬಿಡಿಸಲು ಹೆಣಗಾಡುತ್ತಿದ್ದನಂತೆ, ಆಗ ಕೋತಿ, 'ಯಾಕಪ್ಪ ಕಷ್ಟಪಡ್ತಿ, ಈ ಚೂರಿ ತಗೊ, ಹಣ್ಣನ್ನು ಹೆಚ್ಚು' ಎಂದು ಚಾಕು ಕೊಟ್ಟಿತಂತೆ, ಅವನು ಹಣ್ಣನ್ನು ಹೆಚ್ಚುತ್ತಿರುವಾಗ ಚೂರಿ ಮುರಿದು ಹೋಯಿತಂತೆ, ಆಗ ಕೋತಿ, 'ನನ್ನ ಚೂರಿ ಕೊಡ್ತಿಯೋ, ನಿನ್ನ ಹಣ್ಣು ಕೊಡ್ತಿಯೊ' ಎಂದಿತಂತೆ. ಆಗ ಆ ಮನುಷ್ಯ ಹಣ್ಣನ್ನೇ ಕೊಟ್ಟನಂತೆ. ಕೋತಿ ಹಣ್ಣು ತೆಗೆದುಕೊಂಡು ಮುಂದೆ ಹೋಗುತ್ತಿರುವಾಗ ಒಂದು ಹೊಲ ಸಿಕ್ಕಿತಂತೆ, ಅಲ್ಲೇ ಹಣ್ಣು ಇಟ್ಟು ಕೋತಿ ಆಕಡೆ ಹೋಗಿತ್ತಂತೆ, ಅಷ್ಟರಲ್ಲಿ ಒಬ್ಬ ತನ್ನ ಎತ್ತಿನೊಡನೆ ಅಲ್ಲಿಗೆ ಬಂದ, ಎತ್ತು ಹಣ್ಣನ್ನು ತಿಂದುಬಿಟ್ಟಿತು. ಆಗ ಕೋತಿ ಬಂದು, 'ನನ್ನ ಹಣ್ಣು ಕೊಡ್ತಿಯೋ, ನಿನ್ನ ಎತ್ತು ಕೊಡ್ತಿಯೋ' ಎಂದಿತಂತೆ, ಅವನು ಎತ್ತು ಕೊಟ್ಟನಂತೆ, ಹೀಗೆಯೇ ಕಥೆ ಮುಂದೆ ಬೆಳೆದು, ಕೊನೆಯಲ್ಲಿ ಕೋತಿಗೆ ತಮಟೆ ಸಿಗುತ್ತದೆ. ಆಗ ಕೋತಿ,

ಬಾಲ ಹೋಯ್ತು ಚೂರಿ ಬಂತು ಡುಂ, ಡುಂ
ಚೂರಿ ಹೋಯ್ತು ಹಣ್ಣು ಬಂತು ಡುಂ ಡುಂ
ಹಣ್ಣು ಹೋಯ್ತು ಎತ್ತು ಬಂತು ಡುಂ, ಡುಂ
ಎತ್ತು ಹೋಯ್ತು ಎಣ್ಣೆ ಬಂತು ಡುಂ, ಡುಂ
ಎಣ್ಣೆ ಹೋಯ್ತು ದೋಸೆ ಬಂತು ಡುಂ, ಡುಂ
ದೋಸೆ ಹೋಯ್ತು ತಮಟೆ ಬಂತು ಡುಂ, ಡುಂ
ಎಂದು ತನ್ನ ತಮಟೆಯಿಂದ ಬಾರಿಸುತ್ತಾ ಹೋಯ್ತಂತೆ,

ಮಗು ಈ ಕಥೆ ಕೇಳಿ ಡುಂ, ಡುಂ ಪದ್ಯ ಹೇಳುತ್ತಾ ಚಪ್ಪಾಳೆ ಹಾಕುತ್ತಾ ಕುಣಿದಾಡಿಬಿಡುತ್ತದೆ. ಮಗುವಿಗೆ ಮಾತನಾಡುವ ಶಕ್ತಿ ಬರುತ್ತಲೇ ಕಥೆಯ ಬಗ್ಗೆ ಆಸಕ್ತಿಯೂ ಬೆಳೆಯುತ್ತದೆ. ಈ ಆಸಕ್ತಿಯನ್ನು ಮಕ್ಕಳ ಶಿಕ್ಷಣದ ಅಮೂಲ್ಯ ಸಾಧನವನ್ನಾಗಿ ಬಳಸಿಕೊಳ್ಳಬಹುದು. ಹೀಗೆ ಏಳು ವರ್ಷದೊಳಗಿನ ಮಕ್ಕಳಿಗೆ ಕಥೆಗಳು ಮನರಂಜನೆಯನ್ನುಂಟು ಮಾಡುವ, ತುಂಬಾ ಉದ್ದವಾಗಿಲ್ಲದೆ ಅವರ ಮನೋಮಾನಸಿಕ್ಕನುಗುಣವಾದ ವಿಷಯ ಹಾಗೂ ಸರಳ ಭಾಷೆಯನ್ನೊಳಗೊಂಡಿರಬೇಕು, ಪುನರುಕ್ತಿ, ಪ್ರಾಸ, ಮಕ್ಕಳಿಗೆ ಬಹಳ ಇಷ್ಟ ಸಂವಾದ ರೂಪದ ಕಥೆಗಳು ಅವರಿಗೆ ಹೆಚ್ಚು ಪ್ರೀತಿ, ಮಕ್ಕಳಿಗಾಗಿ ಕಥೆಗಳನ್ನು

ಆರಿಸುವಾಗ ಬಹು ಎಚ್ಚರಿಕೆ ಅವಶ್ಯ. ಪುಟ್ಟಮಕ್ಕಳಿಗೆ ಭಯ ಹಾಗೂ ನೋವನ್ನುಂಟುಮಾಡುವ ಕಥೆಗಳು ಇಷ್ಟವಾಗುವುದಿಲ್ಲ. ಶೃಂಗಾರ ರಸದ ಸನ್ನಿವೇಶಗಳು ಹಿಡಿಸುವುದಿಲ್ಲ. ಆದ್ದರಿಂದ ಅವರಿಗೆ ಹಿಡಿಸುವಂತಹ ಕಾಗಕ್ಕ, ಗುಬ್ಬಕ್ಕನಂತಹ ಕಥೆಗಳನ್ನು ಹೇಳಿ ಅವರ ಮೂಲ ಪ್ರವೃತ್ತಿಗಳನ್ನು ಉದಾತ್ತೀಕರಿಸಬಹುದು, ಎಂದರೆ ಅವರಲ್ಲಿರುವ ಚೇಷ್ಟೆ ಸ್ವಭಾವವನ್ನು ಕಡಿಮೆಮಾಡಬಹುದು, ಅವರಲ್ಲಿರುವ ಕುತೂಹಲವನ್ನು ಕೆರಳಿಸಿ, ಆಸಕ್ತಿಯನ್ನುಂಟುಮಾಡಿ ಚಿತ್ತೇಕಾಗ್ರತೆಯನ್ನು ಕುದುರಿಸಬಹುದು, ಮಕ್ಕಳು ಕಲಿತ ಕಥೆಗಳನ್ನು ಅವರ ಬಾಯಿಂದಲೇ ಹೇಳುವುದರ ಮೂಲಕ ಅವರ ಬುದ್ಧಿಶಕ್ತಿಯನ್ನು ಜ್ಞಾಪಕ ಶಕ್ತಿಯನ್ನೂ, ಕಲ್ಪನಾಶಕ್ತಿಯನ್ನೂ ಚುರುಕುಗೊಳಿಸಬಹುದು, ತಮ್ಮ ವಿಚಾರಗಳನ್ನು ಸರಳವಾಗಿ ಹಾಗೂ ಸ್ಪಷ್ಟವಾಗಿ ಇತರರಿಗೆ ಹೇಳುವ ಕಲೆಯನ್ನು ಅವರಲ್ಲಿ ಬೆಳೆಸಬಹುದು. ಅಲ್ಲದೆ ಇದರಿಂದ ಮಕ್ಕಳಲ್ಲಿ ಓದುವ ಅಭಿರುಚಿಯನ್ನು ಉಂಟುಮಾಡುವುದೂ ಸುಲಭವಾಗುತ್ತದೆ.

ಬೀರಬಲ್ಲನ ಕಥೆಗಳು, ತೆನಾಲಿ ರಾಮಕೃಷ್ಣನ ಕಥೆಗಳು, ಗಾಂಪರೊಡೆಯರ ಕಥೆಗಳು, ದಡ್ಡರ ಕಥೆಗಳು ಮುಂತಾದವು ಮನರಂಜನೆ ಒದಗಿಸುವುದರಲ್ಲಿ ಬಹಳ ಸಹಕಾರಿಯಾಗಿವೆ. ಆದರೆ ಯಾವುದೇ ಕಥೆಯಾದರೂ ಹೇಳುವವರಿಗೆ, ಹೇಳುವ ಕಲೆ ಗೊತ್ತಿರಬೇಕು. ಮಕ್ಕಳು ಕಥೆಯಲ್ಲಿ ತಲ್ಲೀನರಾಗಿ ತಮ್ಮನ್ನೇ ತಾವು ಮರೆತು ಕೇಳುವಂತೆ ಕಲೆಗಾರಿಕೆ ಮುಖ್ಯ. ಅದನ್ನು ಸ್ವಾರಸ್ಯವಿಲ್ಲದಂತೆ, ಯಾಂತ್ರಿಕವಾಗಿ ವಿಷಯ ಬೋಧಿಸುವಂತೆ ಹೇಳಿದರೆ, ಕಥೆಗಳ ಬಗ್ಗೆ ಅವರ ಆಸಕ್ತಿಯೇ ಉಡುಗಿ ಹೋಗಿ ಬಿಡುತ್ತದೆ.

ಮಕ್ಕಳಲ್ಲಿ ಉತ್ತಮಗುಣಗಳನ್ನು ಬೆಳೆಸುವಲ್ಲಿ ಸಣ್ಣ ಕಥೆಗಳು ಮಹತ್ವದ ಪಾತ್ರವಹಿಸಬಲ್ಲವು. ಉದಾ: ಒಬ್ಬ ರೈತನಿದ್ದನಂತೆ, ಅವನು ಬಹು ಕಷ್ಟ ಪಟ್ಟು ದುಡಿದು ಬಹಳಷ್ಟು ಆಸ್ತಿ ಸಂಪಾದಿಸಿದ್ದ, ಅವನಿಗೆ ನಾಲ್ಕುಜನ ಮಕ್ಕಳಿದ್ದರು, ಅವರು ಯಾವಾಗಲೂ ತಮ್ಮ ತಮ್ಮಲ್ಲಿ ಜಗಳವಾಡುತ್ತಿದ್ದರು, ಅವರಲ್ಲಿ ಪ್ರೀತಿ-ವಿಶ್ವಾಸಗಳನ್ನುಂಟುಮಾಡಲು, ಒಗ್ಗಟ್ಟನ್ನು ಬೆಳೆಸಲು ಬಹಳಷ್ಟು ಪ್ರಯತ್ನಪಟ್ಟರೂ ಸಾಧ್ಯವಾಗಲಿಲ್ಲ. ಆದ್ದರಿಂದ ತಂದೆಗೆ ತುಂಬಾ ದು:ಖವಾಗುತ್ತಿತ್ತು. ಅಂತೂ ಹೇಗೋ ಅವರನ್ನೆಲ್ಲಾ ಕಟ್ಟಿಕೊಂಡು ಸಂಸಾರ ಸಾಗಿಸುತ್ತಿದ್ದ, ತಂದೆ ಮುದುಕನಾದ, ಸಾಯುವ ಕಾಲ ಸಮೀಪಿಸಿತು, ತಾನು ಸತ್ತನಂತರ ತಮ್ಮ ತಮ್ಮಲ್ಲೇ ಜಗಳವಾಡಿಕೊಂಡು ಎಲ್ಲವನ್ನೂ ಕಳೆದುಕೊಳ್ಳುತ್ತಾರೆ ಎಂಬ ಅಂಶದಲ್ಲಿ ಅವನಿಗೆ ಎಳ್ಳಷ್ಟೂ ಸಂಶಯವಿರಲಿಲ್ಲ. ಈ ವಿಚಾರದಿಂದ ಅವನಿಗೆ ತುಂಬಾ ದು:ಖವಾಗುತ್ತಿತ್ತು. ಏನಾದರೂ ಮಾಡಿ ಹೀಗಾಗದಿರುವಂತೆ ಮಾಡಬೇಕೆಂದು ಯೋಚಿಸಿ, ಸಾಯುವ

ಮೊದಲು ಮಕ್ಕಳೆಲ್ಲರನ್ನೂ ಸಮೀಪಕ್ಕೆ ಕರೆದ, ಅವರಿಗೂ ತಂದೆಯ ಅಂತ್ಯ ಸಮಯದಲ್ಲಿ ತಂದೆಯ ಬಗ್ಗೆ ಬಹಳ ಪ್ರೇಮ ಉಕ್ಕಿ ಬಂದಿತ್ತು. ಬಹಳ ದು:ಖವಾಗಿತ್ತು. ಆಗ ತಂದೆಯು ಮಕ್ಕಳ ತಲೆ ಸವರಿ ಒಂದು ಕಟ್ಟಿಗೆ ಹೊರೆ ತರಲು ಹೇಳಿದ, ತಂದರು. ಆ ಹೊರೆಯನ್ನು ಹೊರೆಯಾಗಿಯೇ ಮುರಿಯಲು ಹೇಳಿದ, ಒಬ್ಬೊಬ್ಬರೇ ಪ್ರಯತ್ನಿಸಿದರು, ಆಗಲಿಲ್ಲ. ಕಡೆಗೆ ಎಲ್ಲರೂ ಕೂಡಿಯೂ ಪ್ರಯತ್ನಿಸಿದರು, ಸಾಧ್ಯವಾಗಲಿಲ್ಲ. ಆಗ ತಂದೆಯು ಆ ಹೊರೆಯಲ್ಲಿದ್ದ ಕಟ್ಟಿಗೆಗಳನ್ನು ಒಂದೊಂದನ್ನೇ ಬೇರೆಯಾಗಿ ಮಾಡಲು ಹೇಳಿದ, ಮಕ್ಕಳು ಹಾಗೆಯೇ ಮಾಡಿದರು. ನಂತರ ಒಂದೊಂದನ್ನೇ ಮುರಿಯಲು ಹೇಳಿದ, ಮಕ್ಕಳು ಸರಾಗವಾಗಿ ಕಟ್ಟಿಗೆಗಳನ್ನೆಲ್ಲಾ ಮುರಿದಿಟ್ಟರು. ಆಗ ತಂದೆಯು ಮಕ್ಕಳಿಗೆ 'ನೀವು ಒಗ್ಗಟ್ಟಾಗಿಲ್ಲದೆ ಒಂಟಿಯಾಗಿದ್ದರೆ ಯಾರು ಬೇಕಾದರೂ ನಿಮ್ಮನ್ನು ನಿಮ್ಮ ಸಂಪತ್ತನ್ನೂ ನಾಶಮಾಡಬಹುದು, ಇಲ್ಲದೇ ಒಗ್ಗಟ್ಟಾಗಿದ್ದರೆ ಯಾರೂ ನಿಮ್ಮ ಕೂದಲನ್ನೂ ಕೊಂಕಿಸಲು ಸಾಧ್ಯವಾಗುವುದಿಲ್ಲ' ಎಂದು ಹೇಳಿದಾಗ ಮಕ್ಕಳಿಗೆ ತಮ್ಮ ತಪ್ಪಿನ ಅರಿವಾಗಿ ಅಂದಿನಿಂದ ಪ್ರೀತಿಯಿಂದ ಇರತೊಡಗಿದರು. ತಂದೆಯೂ ನೆಮ್ಮದಿಯಿಂದ ಪ್ರಾಣಬಿಟ್ಟ, ಮಕ್ಕಳೆ ತಂದೆಗಿಂತ ಹೆಚ್ಚು ಆಸ್ತಿಗಳಿಸಿ ಸುಖವಾಗಿದ್ದರು. ಈ ಕಥೆಯನ್ನು ಮನನೀಯವಾಗಿ ಹೇಳಿ ಮಕ್ಕಳಲ್ಲಿ ಒಗ್ಗಟ್ಟಿನ ಮನೋಭಾವವನ್ನು ರೂಪಿಸಬಹುದು.

ಮತ್ತೊಂದು ಕಥೆ ಒಬ್ಬ ತಂದೆ ಸೋಮಾರಿಗಳಾದ ಮಕ್ಕಳಿಗೆ ದುಡಿಯುವ ಮಹತ್ವದ ಅರಿವನ್ನುಂಟುಮಾಡಲು, ತಾನು ಸಾಯುವ ಮುನ್ನ ತನ್ನ ಹೊಲದ ಒಂದು ಮೂಲೆಯಲ್ಲಿ ಹೇರಳವಾದ ಬಂಗಾರವನ್ನೂ, ಹಣವನ್ನೂ, ಹೂತಿಟ್ಟಿರುವುದಾಗಿ ಹೇಳಿದ. ಅವನು ಸತ್ತನಂತರ ಮಕ್ಕಳು ಕಷ್ಟಪಡದೆ ಹೇರಳ ಹಣವನ್ನು ಪಡೆದು ಐಷಾರಾಮಿಯಾಗಿ ಜೀವನ ಮಾಡಲು ಹೊಲದ ಮೂಲೆಯನ್ನು ಅಗೆದರು, ನಿಧಿ ಸಿಗಲಿಲ್ಲ. ಆ ಮೂಲೆಯಲ್ಲಿರಬಹುದು ಈ ಮೂಲೆಯಲ್ಲಿರಬಹುದೆಂದು ಇಡೀ ಹೊಲವನ್ನೆಲ್ಲಾ ಅಗೆದರು. ನಿಧಿ ಸಿಗಲೇ ಇಲ್ಲ. ಹೇಗೂ ಅಗೆದಾಗಿದೆಯೆಂದು ಬೀಜ ಬಿತ್ತಿದರು. ಉತ್ಕೃಷ್ಟವಾದ ಬೆಳೆಯಾಗಿ ಹೇರಳವಾಗಿ ಹಣ ದೊರೆಯಿತು. ಆಗ ಆ ಮಕ್ಕಳು ದುಡಿಮೆಯ ಮಹತ್ವವನ್ನು ಸ್ವತ: ಮನಗಂಡು ಕಷ್ಟಪಟ್ಟು ದುಡಿಯತೊಡಗಿ ಸುಖವಾಗಿದ್ದರು ಎಂಬ ಕಥೆ ಮಕ್ಕಳಲ್ಲಿ ಕಷ್ಟಪಟ್ಟು ಕೆಲಸ ಮಾಡುವ ಪ್ರವೃತ್ತಿಯನ್ನು ಬೆಳೆಸಬಲ್ಲದು.

ಒಳ್ಳೆಯಮಕ್ಕಳು ಸಹ ದುಷ್ಟ ಸಹವಾಸದಿಂದ ಕೆಟ್ಟುಹೋಗಿ ಘಾತುಕರಾಗುವಂತಹದು ಸರ್ವೇ ಸಾಮಾನ್ಯ. ಅದನ್ನು ನಿರೂಪಿಸುವ ಕಥೆ ಹೀಗಿದೆ. ಒಂದು ಕಾಡಿನಲ್ಲಿ ಒಂದು ಗಿಳಿ ಎರಡು ಮೊಟ್ಟೆಯನ್ನು ಇಟ್ಟಿತು. ಅವು ಮರಿಯಾದುವು. ಒಮ್ಮೆ ತಾಯಿಗಿಳಿ ಹೊರಗೆ ಹೋದಾಗ ಈ ಮರಿಗಳು ಪೊಟರೆಯಿಂದ

ಹೊರಬಂದು ಕಾಡಿನಲ್ಲಿ ಹಾರಾಡತೊಡಗಿದವು. ಆಗ ಒಂದು ಮರಿ ಋಷಿಗಳ ಕೈಗೂ, ಮತ್ತೊಂದು ಮರು ಕಟುಕನಿಗೂ ದೊರೆಯಿತಂತೆ, ಎಷ್ಟೋ ಕಾಲದ ಮೇಲೆ ಅವೆರಡೂ ಅಲ್ಲಿಂದ ತಪ್ಪಿಸಿಕೊಂಡು ಕಾಡಿಗೆ ಬಂದುವಂತೆ, ಬೇರೆ ಬೇರೆ ಮರದ ಮೇಲೆ ಕುಳಿತಿದ್ದುವು. ಒಬ್ಬ ದಾರಿಹೋಕ ವಿಶ್ರಮಿಸಿಕೊಳ್ಳಬೇಕೆಂದು ಮರದ ಕೆಳಗೆ ಮಲಗಿಕೊಂಡ ಆ ಮರದ ಮೇಲಿದ್ದ ಕಟುಕನ ಅಂಗಡಿಯಿಂದ ತಪ್ಪಿಸಿಕೊಂಡು ಬಂದಿದ್ದ ಗಿಳಿ. 'ಯಾರಲೇ ನೀನು? ಕುರಿಮಾಂಸ ಒಂದು ಸೇರಿಗೆ ನಾಲ್ಕಾಣೆ, ಕೋಳಿ ಮಾಂಸ ಎರಡಾಣೆ, ಬೇಕಾದನ್ನು ತೆಗೆದುಕೊಂಡು ಕೂಡಲೇ ಇಲ್ಲಿಂದ ಹೊರಡು' ಎಂದಿತಂತೆ. ಈ ದುಷ್ಟ ಮಾತುಗಳಿಂದ ಅಸಮಾಧಾನಗೊಂಡ ಆ ಪ್ರಯಾಣಿಕ ಮತ್ತೊಂದು ಮರದ ಕೆಳಗೆ ಹೋಗಿ ವಿಶ್ರಮಿಸಿಕೊಂಡನಂತೆ, ಆ ಮರದ ಮೇಲಿದ್ದ ಋಷ್ಯಾಶ್ರಮದಿಂದ ಬಂದಿದ್ದ ಗಿಳಿಯು 'ಬನ್ನಿಸ್ವಾಮಿ, ಮರದ ನೆರಳು ತಂಪಾಗಿದೆ. ವಿಶ್ರಮಿಸಿಕೊಂಡು ಶ್ರಮಪರಿಹಾರ ಮಾಡಿಕೊಳ್ಳಿ, ಹಣ್ಣುಗಳಿವೆ, ತಿಂದು ಹಸಿವನ್ನು ತಣಿಸಿಕೊಳ್ಳಿ' ಎಂಬ ಪ್ರೀತಿಯ ಮಧುರ ಮಾತುಗಳನ್ನಾಡಿತು. ಗಿಳಿಯನ್ನು ನೋಡಿ ಪ್ರಯಾಣಿಕನು ಇದು ಏಕೆ ಎಂದು ಪ್ರಶ್ನಿಸಿದ. ಆಗ ಗಿಳಿಯು ತಾವಿಬ್ಬರೂ ಅಣ್ಣತಮ್ಮಂದಿರೆಂಬ ಸಂಗತಿಯನ್ನೂ, ತಾವು ಬೆಳೆದ ರೀತಿಯನ್ನು, ಅಲ್ಲಿ ದೊರೆತ ಸಂಗವೇ ಇದಕ್ಕೆ ಕಾರಣವೆಂದು' ಹೇಳಿತು. ಈ ಕಥೆಯಿಂದ ಮಕ್ಕಳಿಗೆ ಸತ್ಸಂಗ ಹಾಗೂ ದುಸ್ಸಂಗ ಹೇಗೆ ಪರಿಣಾಮ ಬೀರಿ ತಮ್ಮನ್ನು ಕೆಟ್ಟವರನ್ನಾಗಿಯೂ ಒಳ್ಳೆಯವರನ್ನಾಗಿಯೂ ಮಾಡುತ್ತದೆ ಎಂಬ ಅಂಶವನ್ನು ಮನಗಾಣಿಸಬಹುದು.

ಹಾಗೆಯೇ ರಾಮಾನುಜಾಚಾರ್ಯ- ಕನಕದಾಸರ ಕಥೆಯಿಂದ ಜಾತಿಯಲ್ಲ ಗುಣಮುಖ್ಯ ಎಂಬ ಅಂಶವನ್ನು ತಿಳಿಸಬಹುದು. ಆಯ್ದುಕ್ಕಿ ಲಕ್ಕಮ್ಮನ ಕಥೆಯಿಂದ ಮಾನವ ಸಮಾನತೆಯ ಮಹತ್ವವನ್ನೂ, ಮಕ್ಕಳೇ ಅರಿಯುವಂತೆ ಮಾಡಬಹುದು. ದುಷ್ಟರಿಂದ ದೂರವಿರು, ಕಷ್ಟಪಟ್ಟರೆ ಫಲವುಂಟು, ಕಷ್ಟಕಾಲದಲ್ಲಿ ಜಾಣ್ಮೆಯಿಂದ ನಡೆ, ಸಿರಿಬಂದಾಗ ಹಿಗ್ಗಬೇಡ, ಕಷ್ಟ ಬಂದಾಗ ಕುಗ್ಗಬೇಡ, ದುಡುಕು, ಕೋಪ, ಅನರ್ಥದ ಮೂಲ, ಸಹನೆಯೇ ಮುಂತಾದ ಸದ್ಗುಣ, ಗುರುಹಿರಿಯರಲ್ಲಿ ಗೌರವದಿಂದ ನಡೆ, ಸರ್ವಧರ್ಮಗಳೂ ಸಮಾನ ಹೀಗೆ ಅನೇಕ ಉನ್ನತ ಮೌಲ್ಯಗಳನ್ನು ರೂಪಿಸುವ ಕಥೆಯ ಪುಸ್ತಕಗಳು ಈಗೀಗ ಹೇರಳವಾಗಿ ಬರುತ್ತಿವೆ.

ಮಕ್ಕಳ ವ್ಯಕ್ತಿತ್ವ ರೂಪಿಸುವ ಹೊಣೆಗಾರಿಕೆಯನ್ನು ಹೊತ್ತ ಪ್ರತಿಯೊಬ್ಬರೂ ಕಥೆಗಳ ಮೂಲಕ ಅವರ ಆರೋಗ್ಯಕರ ಬೆಳವಣಿಗೆಗೆ ಸಹಾಯಕ ಆಗಬಹುದು. ಏಳರಿಂದ ಹದಿನಾಲ್ಕು ವರ್ಷ ವಯಸ್ಸಿನ ಮಕ್ಕಳಿಗೆ ಜೀವನ ಮೌಲ್ಯಗಳ ಮಹತ್ವವನ್ನು ಕಥೆಗಳ ಮೂಲಕ ಮನದಟ್ಟುವಂತೆ ಮಾಡುವುದು ಸುಲಭ. ಕಥೆಗಳು ನೀತಿಯನ್ನು

ಬೋಧಿಸಬಾರದು, ರೂಪಿಸಬೇಕು. ಚೈತ್ರದ ಹೊಸ ಹನಿಯಂತೆ ನವ ವಸಂತ ಹೊಮ್ಮಿಸಬೇಕು. ಪ್ರಾರಂಭಿಕ ಹಂತದಲ್ಲಿ ಪ್ರಾಣಿಗಳ ಹಾಗೂ ಪಕ್ಷಿ ಕಥೆಗಳು ಯೋಗ್ಯ. ಏಳೆಂಟು ವರ್ಷ ವಯಸ್ಸಿನ ಮಕ್ಕಳಲ್ಲಿ ಹೆಚ್ಚಾಗಿ ಪ್ರಾಣಿಗಳು ಬೇರೆ ಮನುಷ್ಯರು ಬೇರೆ ಎಂದು ಆಳವಾಗಿ ವಿಚಾರ ಮಾಡುವುದಿಲ್ಲ. ಪ್ರಾಣಿ, ಪಕ್ಷಿಗಳ ಕಥೆಗಳನ್ನು ಸತ್ಯವೆಂಬುವಷ್ಟು ರೀತಿಯಿಂದ ಆಲಿಸುತ್ತಾರೆ. ಇದಕ್ಕೆ ಪಂಚತಂತ್ರದ ಕಥೆಗಳು ಈಸೋಪನ ನೀತಿ ಕಥೆಗಳು ಸೂಕ್ತ ಉದಾಹರಣೆಗಳಾಗಿವೆ, ಏಳರನಂತರದ ವಯಸ್ಸಿನಲ್ಲಿ ಕುತೂಹಲ ಪ್ರವೃತ್ತಿ ಹೆಚ್ಚಾಗಿರುತ್ತದೆ. 'ಕುತೂಹಲ ಜ್ಞಾನಾರ್ಜನೆಯ ಹೆಬ್ಬಾಗಿಲು' ಎಂಬ ಅಂಶ ಎಲ್ಲರಿಗೂ ಗೊತ್ತು. ಕಥೆ ಮೂಲಕ ಕುತೂಹಲವನ್ನು ಕೆರಳಿಸಿ ಜ್ಞಾನದಾಹವನ್ನು ಹೆಚ್ಚಿಸಬಹುದು. ಈ ವಯಸ್ಸಿನಲ್ಲಿ ಅವರಿಗೆ ರಾಜರಾಣಿಯರ ಕಥೆ, ಜನಪದಕತೆ, ಸಾಹಸದ ಕತೆ, ಮಹಾಪುರುಷರ ಕತೆ ಬಹಳ ರಂಜನೀಯವಾಗಿರುತ್ತದೆ.

ಚಂದಮಾಮಾದಲ್ಲಿ ಬರುವ ರಾಜರಾಣಿಯರ, ದೇವತೆಗಳ, ವೀರರ ಶೂರರ ಕತೆಗಳನ್ನು ನಿಜವೆಂದೇ ನಂಬಿ ತಮ್ಮನ್ನೇ ನಾಯಕ ನಾಯಕಿಯರನ್ನಾಗಿ ಕಲ್ಪಿಸಿಕೊಂಡು ತನ್ಮಯರಾಗಿಬಿಡುತ್ತಾರೆ. ಈ ಅನುಭವ ಮುಂದೆ ಅವರು ನಿಜಜೀವನದಲ್ಲಿ ಬರುವಂತಹ ಕೊರತೆಗಳನ್ನು ಸಹಿಸಿಕೊಂಡು ನೆಮ್ಮದಿ ಜೀವನವನ್ನು ನಡೆಸುವ ಶಕ್ತಿಯನ್ನು ತಂದುಕೊಡುತ್ತದೆ. ದುಷ್ಟರಿಗೆ ಶಿಕ್ಷೆದೊರೆತು, ಯೋಗ್ಯರು, ಸತ್ಯವಂತರು, ನೀತಿವಂತರು ಅನೇಕ ಕಷ್ಟಕ್ಕೆ ಒಳಗಾದರೂ ಕೊನೆಗೆ ಸುಖ ಪಡುತ್ತಾರೆ ಎಂಬ ಅಂಶ ನಿರೂಪಿಸುವ ಕತೆಗಳು ಮಕ್ಕಳು ತಮ್ಮಲ್ಲಿ ಉದಾತ್ತಗುಣಗಳನ್ನು ಬೆಳೆಸಿಕೊಂಡು ಅದಕ್ಕೆ ಅಂಟಿಕೊಂಡಿರುವ ಮನೋಭಾವವನ್ನು ತಂದುಕೊಡುತ್ತವೆ. ಮುಂದೆ ತಮ್ಮ ಜೀವನದಲ್ಲಿ ಕಷ್ಟ ಬಂದಾಗ ಎದೆಗುಂದದೆ, ಒಂದಲ್ಲ ಒಂದುದಿನ ತಮ್ಮ ಪ್ರಾಮಾಣಿಕ, ದಕ್ಷತೆ, ನಿಷ್ಠೆಗೆ ಪುರಸ್ಕಾರ ಸಿಕ್ಕಿಯೇ ಸಿಗುತ್ತದೆ ಎಂಬ ಭರವಸೆಯಿಂದ ಕಷ್ಟಗಳನ್ನು ಎದುರಿಸುವ ಶಕ್ತಿಯನ್ನು ಪಡೆಯುತ್ತಾರೆ. ತೊಂದರೆಗಳಿಗೆ ಹೆದರಿ ತಮ್ಮ ಮೌಲ್ಯಗಳನ್ನು ಗಾಳಿಗೆ ತೂರುವ ಹೇಡಿಗಳಾಗುವುದಿಲ್ಲ; ಸ್ವಾರ್ಥಸಾಧಕರಾಗುವುದಿಲ್ಲ.

ಸಿಂಡ್ರೆಲಾ, ಸತ್ಯಹರಿಶ್ಚಂದ್ರ, ನಳದಮಯಂತಿ, ಪಾಂಡವ–ಕೌರವರ ಕತೆ, ರಾಮ–ರಾವಣರ ಕತೆಗಳು ಈ ದಿಸೆಯಲ್ಲಿ ಬಹು ಉಪಯುಕ್ತ. ಪಂಚತಂತ್ರದ ಕತೆಗಳು ಮಕ್ಕಳಿಗೆ ಓದಲು ಅನುಕೂಲವಾಗುವಂತೆಯೆ ಸಣ್ಣವಾಗಿವೆಯಲ್ಲದೆ ನೀತಿ ಬೋಧಕಗಳಾಗಿವೆ. ಇಲ್ಲಿ ನಿಜ ಜೀವನದಲ್ಲಿ ಬರಬಹುದಾದ ಸನ್ನಿವೇಶಗಳನ್ನು ಪ್ರಾಣಿಜೀವನದ ಮೂಲಕ ಕತೆಯ ರೂಪದಲ್ಲಿ ತಿಳಿದುಕೊಂಡು, ಅವರು ದೊಡ್ಡವರಾದ ಮೇಲೆ ಅಂತಹ ಸನ್ನಿವೇಶಗಳು ಬಂದಾಗ ಸಮರ್ಥವಾಗಿ ಎದುರಿಸುವ

ಜಾಣ್ಮೆಯನ್ನು ಪಡೆದುಕೊಳ್ಳುತ್ತಾರೆ. ಉದಾಹರಣೆಗೆ ಕಾಗೆ-ನರಿಯ ಕತೆಯನ್ನೇ ತೆಗೆದುಕೊಳ್ಳೋಣ. ಕಾಗೆಯ ಬಾಯಿಲ್ಲಿ ಮಾಂಸವಿದ್ದುದರಿಂದ ನರಿ ಕಾಗೆಯ ಬಳಿಬರುತ್ತದೆ. ಆ ಮಾಂಸದ ತುಂಡನ್ನು ಕಬಳಿಸಲು ಉಪಾಯ ಹುಡುಕಿ ಕುರೂಪಿಯಾದ ಹಾಗೂ ಕರ್ಕಶ ಧ್ವನಿಯ ಕಾಗೆಯ ಅಂದ – ಚಂದವನ್ನು ವರ್ಣಿಸುತ್ತದೆ. ಧ್ವನಿ ಬಹು ಇಂಪೆಂದು ಬಣ್ಣಿಸುತ್ತದೆ. ಪೆದ್ದ ಕಾಗೆ ಕುತಂತ್ರಿಯೂ, ಸ್ವಾರ್ಥಿಯೂ ಆದ ನರಿ ತನ್ನನ್ನು ಮೋಸಗೊಳಿಸುತ್ತಿದೆಯೆಂಬುದನ್ನು ಅರ್ಥಮಾಡಿಕೊಳ್ಳದೆ, ಹೊಗಳಿಕೆಗೆ ಉಬ್ಬಿಬಿಡುತ್ತದೆ. ಸಂತೋಷದಿಂದ ಹಾಡಲು ಬಾಯ್ತೆರದ ತಕ್ಷಣ ಮಾಂಸದ ತುಂಡು ಕೆಳಗೆ ಬೀಳುತ್ತದೆ. ಕೂಡಲೇ ಜಾಣನರಿ ಅದನ್ನು ಕಚ್ಚಿಕೊಂಡು ಓಡಿ ಹೋಗುತ್ತದೆ. ಈ ಕತೆಯ ಮೂಲಕ ಪ್ರತಿಯೊಬ್ಬರೂ ತಮ್ಮ ಇತಿಮಿತಿಗಳನ್ನು ಅರಿತಿರಬೇಕು. ಬೇರೆಯವರು ಹೊಗಳಿದಾಗ ಅದು ನಿಜವೇ ಸುಳ್ಳೇ ಎಂದು ಪರಿಶೀಲಿಸಬೇಕು. ತಮ್ಮಲ್ಲಿಲ್ಲದ ಗುಣಗಳನ್ನು ವರ್ಣಿಸಿದಾಗ ಇದು ಸ್ವಾರ್ಥ ಸಾಧನೆಯ ಉಪಾಯವೆಂಬುದನ್ನು ತಿಳಿಯಬೇಕು. ಹಾಗೆಯೇ ದುಷ್ಟರಾದವರು ಎಷ್ಟೇ ಒಳ್ಳೆಯವರಂತೆ ನಟಿಸಿದರೂ ಎಂದಿಗೂ ನಂಬಬಾರದು. ಎಂಬ ಎಚ್ಚರಿಕೆಯನ್ನೂ, ಹೊಗಳಿಕೆಗೆ ಉಬ್ಬಬಾರದು ಎಂಬ ವ್ಯವಹಾರವನ್ನು ಕಲಿಯಬಹುದಾಗಿದೆ. ಹೀಗೆ ಇವು ಮಕ್ಕಳಿಗೆ ಜೀವನದ ರೀತಿ-ನೀತಿಯ ಪರಿಚಯ ಮಾಡಿಕೊಡಬಲ್ಲವು. ಜಾನಪದ ಕತೆಗಳು ನಮ್ಮ ಮಕ್ಕಳ ಪಿತ್ರಾರ್ಜಿತ ಆಸ್ತಿ ಎನ್ನಬಹುದು, ಇಲ್ಲಿಯೂ ಕಾಲ್ಪನಿಕಾಂಶಗಳು ತುಂಬಿರುತ್ತವೆ. ಇಲ್ಲಿ ಸಾಮಾನ್ಯವಾಗಿ ಮಕ್ಕಳು ಆಶಿಸುವಂತೆಯೆ ಸುಖಾಂತವಾಗಿರುತ್ತವೆ. ಕಥಾನಾಯಕ ಅಥವಾ ನಾಯಕಿಗೆ ಎಲ್ಲೆಡೆಯೂ ಜಯ, ಮನ್ನಣೆ ದೊರೆಯುತ್ತದೆ. ಕೊನೆಯಲ್ಲಿ ಒಳ್ಳೆಯವರಿಗೆ ಸುಖ, ದುಷ್ಟರಿಗೆ ಶಿಕ್ಷೆಯಾಗುತ್ತದೆ.

ಕಥೆಗಳನ್ನು ಹೇಳುತ್ತಾ ಮಕ್ಕಳಲ್ಲಿ ಸಾಮಾಜಿಕವಾಗಿ ಅಪೇಕ್ಷಣೀಯವಾದ ದಯೆ, ಧಾರಾಳ ಮನೋಭಾವ, ಪ್ರಾಮಾಣಿಕತೆ, ಶ್ರದ್ಧೆ, ಕಷ್ಟಪಟ್ಟು ಕೆಲಸ ಮಾಡುವಿಕೆ, ನಿಷ್ಠೆ, ದೇಶಪ್ರೇಮ, ಶೌರ್ಯ, ಧೈರ್ಯ ಮುಂತಾದ ಮೌಲ್ಯಗಳ ಮಹತ್ವವನ್ನು ಅವರಿಗೆ ಮನದಟ್ಟು ಮಾಡಬಹುದು, ಹಾಗೆಯೇ ಕಥೆಯ ಬೆಳವಣಿಗೆಯಲ್ಲಿ ದುರಾಸೆ, ಹೊಟ್ಟೆಕಿಚ್ಚು, ವಂಚನೆ, ಮೋಸ, ದ್ರೋಹ, ಅಹಂಕಾರ, ಸುಳ್ಳು, ಕಳ್ಳತನ, ಹೇಡಿತನ ಮುಂತಾದ ದುಷ್ಟ ಗುಣಗಳುಳ್ಳವರಿಗೆ ಕಷ್ಟ ತಪ್ಪಿದ್ದಲ್ಲ ಎಂಬ ಅಂಶವನ್ನು ಮನದಟ್ಟು ಮಾಡಬೇಕು. ಆಗ ಇಂತಹ ದುಷ್ಟಗುಣಗಳು ತಮ್ಮ ಹತ್ತಿರ ಬಾರದಂತೆ ಮಕ್ಕಳು ನೋಡಿಕೊಳ್ಳುತ್ತಾರೆ.

ಶಿವಾಜಿಗೆ ಬಾಲ್ಯದಲ್ಲಿ ತಾಯಿಯು ವೀರರ, ದೇಶಪ್ರೇಮಿಗಳ ಕಥೆಗಳನ್ನು ಹೇಳುತ್ತಿದ್ದುದರಿಂದ ಅವನು ಧೀರನೂ, ರಾಷ್ಟ್ರಪ್ರೇಮಿಯೂ ಅದನು,

ಪುತಲಿಬಾಯಿಯವರು ಗಾಂಧೀಜಿಗೆ ಬಾಲ್ಯದಲ್ಲಿ ಸತ್ಯ, ಅಹಿಂಸೆ, ನೀತಿ ಪ್ರಧಾನವಾದ ರಾಮಾಯಣ, ಮಹಾಭಾರತದ ಕಥೆಗಳನ್ನು ಹೇಳುತ್ತಿದ್ದುದರಿಂದ ಅವರು ಈ ಮೌಲ್ಯಗಳಿಗಾಗಿಯೇ ತಮ್ಮ ಜೀವನವನ್ನು ಮುಡುಪಿಟ್ಟು, ನ್ಯಾಯ, ಸತ್ಯ ಮತ್ತು ಅಹಿಂಸಾ ಮಾರ್ಗದಿಂದಲೇ ಸ್ವಾತಂತ್ರ್ಯಗಳಿಸಿದರು, ಹೀಗೆ ಕಥೆಗಳ ಶಕ್ತಿ ಅದ್ಭುತ.

ಕೌಮಾರ್ಯಾವಸ್ಥೆಯಲ್ಲಿ ಎಂದರೆ ಹದಿನಾಲ್ಕರ ನಂತರದಲ್ಲಿ ಮಕ್ಕಳು ಕಲ್ಪನಾ ಜಗತ್ತಿನಿಂದ ವಾಸ್ತವ ಜಗತ್ತಿಗೆ ಬರುತ್ತಾರೆ. ತಮ್ಮ ದೈನಂದಿನ ಜೀವನಕ್ಕೆ ಮಾರ್ಗದರ್ಶನ ನೀಡಬಲ್ಲ ಕಥೆಗಳು, ತಮ್ಮ ಪ್ರಚಲಿತ ಸಮಸ್ಯೆಗಳಿಗೆ ಪರಿಹಾರವನ್ನು ಕೊಡಬಲ್ಲ ಕಥೆಗಳು ಅವರಿಗೆ ರುಚಿ ಎನ್ನಿಸುತ್ತವೆ, ಪರಾಕ್ರಮ ಪ್ರಧಾನವಾದ ಕಥೆಗಳು ಇಷ್ಟ, ಸೈದ್ಧಾಂತಿಕ ತರಬೇತಿಯನ್ನು ಕೊಡುವಂತಹ ಕಥೆಗಳು ಸೂಕ್ತ. ವಲ್ಲಭಬಾಯಿ ಪಟೇಲ್, ಲಾಲ್ ಬಹಾದ್ದೂರಶಾಸ್ತ್ರಿ, ಗಾಂಧೀಜಿ, ಸರ್, ಸಿ.ವಿ. ರಾಮನ್, ಸರ್.ಎಂ. ವಿಶ್ವೇಶ್ವರಯ್ಯ ಮುಂತಾದವರ ಜೀವನ, ಹಾಗೂ ಜೀವನದ ಮುಖ್ಯ ಘಟನೆಗಳನ್ನು ರೂಪಿಸುವ ಕಥೆಗಳ ಮೂಲಕ ಕಿತ್ತೂರ ಚೆನ್ನಮ್ಮ ಸಂಗೊಳ್ಳಿರಾಯಣ್ಣ, ಝೂನ್ಸಿ ಲಕ್ಷ್ಮೀಬಾಯಿ, ವುಡ್ರೋ ವಿಲ್ಸನ್, ಅಬ್ರಾಹಂ ಲಿಂಕನ್ ಮುಂತಾದ ಮಹಾವ್ಯಕ್ತಿಗಳ ಐತಿಹಾಸಿಕ ಕಥೆಗಳ ಮೂಲಕ ಅವರಲ್ಲಿ ದೇಶಪ್ರೇಮ, ವಿಶ್ವಬಂಧುತ್ವ, ಅನುಕಂಪ, ಪರಾಕ್ರಮ, ನಿಷ್ಠೆ ನಿಸ್ವಾರ್ಥತೆ ಮುಂತಾದ ಗುಣಗಳ ಬೀಜ ಬಿತ್ತಬಹುದು.

ಕಥೆಗಳೆಂದರೆ ಎಲ್ಲರಿಗೂ ಪ್ರಿಯ. ಮಕ್ಕಳಿಂದ ಮುದುಕರವರೆಗೆ ಎಲ್ಲರೂ ಕಥೆಗಳನ್ನು ಇಷ್ಟಪಡುತ್ತಾರೆ. ಮಕ್ಕಳಿಗಂತೂ ಕಥೆಗಳೆಂದರೆ ಪಂಚಪ್ರಾಣ, ಹಾಲು ಸಕ್ಕರೆಗಿಂತ ರುಚಿ, ಹಾಲು ದೈಹಿಕ ಪುಷ್ಟಿಕೊಟ್ಟರೆ, ಕಥೆಗಳು ಅವರಿಗೆ ಬೌದ್ಧಿಕ 'ದೃಷ್ಟಿ' ಕೊಡುತ್ತವೆ, ಬಾಲ್ಯದಲ್ಲಿ ಮಕ್ಕಳಿಗೆ ಕಥೆಯ ಆಸೆ ತೋರಿಸಿ ತಾಯಿಂದಿರು ಊಟ ಮಾಡಿಸುತ್ತಾರೆ. ಸ್ನಾನಮಾಡಿಸುತ್ತಾರೆ. ತಮಗೆ ಬೇಕಾದ ಎಲ್ಲಕ್ಕೂ ಅವರ ಮನ ಒಲಿಸುತ್ತಾರೆ. ಕಥೆಗಾಗಿ, ತಮಗೆ ಬೇಡವಾದ ಅನೇಕ ವಿಷಯಗಳಿಗೆ ಮಕ್ಕಳು ತಲೆಬಾಗುತ್ತಾರೆ. ಮಗು ಹಟತೆಗೆದಾಗ ಕಥೆ ಹೇಳುತ್ತಾ ಹೇಳುತ್ತಾ ಹಟನಿಲ್ಲಿಸಿ ನಿದ್ದೆ ಹೋಗುವಂತೆ ಮಾಡಬಹುದು. ಇವು ಮಕ್ಕಳ ಮನಕ್ಕೆ ಮೋದವನ್ನೂ ಬುದ್ಧಿಗೆ ಬೋಧವನ್ನೂ ಕೊಡುತ್ತವೆ. ಶಾಲಾ ಶಿಕ್ಷಣದಲ್ಲಿ ಕಥೆಗಳನ್ನು ಅಳವಡಿಸಿಕೊಂಡರೆ ಕಲಿಯುವಿಕೆಯಲ್ಲಿ ಇಣುಕಬಹುದಾದ ನೀರಸತೆಯನ್ನು ಹೋಗಲಾಡಿಸಿ ಆಸಕ್ತಿಯನ್ನು ಕುದುರಿಸಬಹುದು. ಮಕ್ಕಳಲ್ಲಿ ಶ್ರೇಷ್ಠ ವ್ಯಕ್ತಿತ್ವವನ್ನೇ ರೂಪಿಸಬಹುದು.

## ೩. ಮಕ್ಕಳಿಗೆ ನೀತಿ ಶಿಕ್ಷಣ

ಈಗಿನ ಸಮಾಜದಲ್ಲಿ ಎಲ್ಲೆಲ್ಲೂ ಅಶಾಂತಿ, ಅತೃಪ್ತಿ, ಅಸಮಾಧಾನಗಳು ಹಬ್ಬಿವೆ. ಮೋಸ, ದ್ವೇಷ ಕುತಂತ್ರ, ಅಸಹನೆ, ಅಪ್ರಾಮಾಣಿಕತೆ, ಸ್ವಾರ್ಥ, ಹೊಟ್ಟೆಕಿಚ್ಚು ಮುಂತಾದ ದುರ್ಗುಣಗಳು ಜನಜೀವನದಲ್ಲಿ ಹಾಸುಹೊಕ್ಕಾಗಿ ಬಿಟ್ಟಿವೆ. ಉತ್ತಮ ಮೌಲ್ಯಗಳನ್ನು ಹೊಂದಿ ಬದುಕುವುದು ಕಠಿಣ ಎನ್ನುವಷ್ಟರ ಮಟ್ಟಿಗೆ ಮೌಲ್ಯಗಳ ಅಪಮೌಲ್ಯವಾಗಿರುವುದನ್ನು ಎಲ್ಲೆಡೆ ಕಾಣುತ್ತಿದ್ದೇವೆ. ಇಂಥ ಪರಿಸ್ಥಿತಿಯಲ್ಲಿ ಜನಜೀವನ ದುಸ್ತರ. ಯಾರೂ ನೆಮ್ಮದಿಯ ಜೀವನವನ್ನು ಬದುಕುವುದು ಅಸಾಧ್ಯ ಎನ್ನುವಂಥ ಪರಿಸ್ಥಿತಿ ದಿನ ದಿನಕ್ಕೂ ವಿಸ್ತಾರಗೊಳ್ಳುತ್ತ ಹೋಗುತ್ತಿದೆ.

ನಮ್ಮಲ್ಲಿಯ ಧಾರ್ಮಿಕ, ರಾಜಕೀಯ, ಸಾಮಾಜಿಕ ಮುಂತಾದ ಎಲ್ಲ ಅಭಿವೃದ್ಧಿ ಕಾರ್ಯಕ್ರಮಗಳು ವಿಫಲವಾಗುವುದಕ್ಕೆ ಜನರ ನೀತಿಬಾಹಿರವಾದ ರೀತಿಯೇ ಕಾರಣ, ಮನುಷ್ಯ ಎಷ್ಟೇ ಬುದ್ಧಿವಂತನಿದ್ದರೂ ನೀತಿಯುಕ್ತ ನಡವಳಿಕೆ ಇಲ್ಲದಿದ್ದರೆ ನೆಮ್ಮದಿಯುತ ಬದುಕು ಬದುಕಲು ಸಾಧ್ಯವಿಲ್ಲ. ಮಾನವ ಈಗ ಹಿಮಾಲಯದ ತುದಿಯನ್ನು ತಲುಪಿ ಬಂದಿದ್ದಾನೆ. ಸಾಗರದ ತಳವನ್ನೂ ಜಾಲಾಡಿ ಬಂದಿದ್ದಾನೆ. ಚಂದ್ರ ಲೋಕದಲ್ಲಿ ಧ್ವಜಊರಿ ಬಂದಿದ್ದಾನೆ. ಸಾವಿರಾರು ಮೈಲು ದೂರದಲ್ಲಿದ್ದರೊಡನೆ ಮಾತನಾಡಬಹುದಾಗಿದೆ. ಅವರನ್ನು ನೋಡಲೂಬಹುದಾಗಿದೆ. ಅಲ್ಲದೇ ಇನ್ನೂ ಅನೇಕ ಅಸಾಧ್ಯಗಳನ್ನು ಸಾಧ್ಯವಾಗಿಸಬಲ್ಲ ಸಂಶೋಧನೆಗಳನ್ನು ಮಾಡಿದ್ದಾನೆ. ಇವ್ಯಾವೂ ಜನರಲ್ಲಿ ನೆಮ್ಮದಿಯನ್ನಾಗಲಿ, ಆತ್ಮವಿಶ್ವಾಸವನ್ನಾಗಲಿ ಉಂಟುಮಾಡಲು ಶಕ್ತವಾಗಿಲ್ಲ. ಸಹನೆ, ಪ್ರಾಮಾಣಿಕತೆ, ಸಹಕಾರ, ಪ್ರೀತಿ ವಿಶ್ವಾಸ, ಕಷ್ಟುಪಟ್ಟು ದುಡಿಯುವ ಮನೋಭಾವ, ಭ್ರಾತೃಭಾವ, ಕೃತಜ್ಞತಾ ಭಾವನೆ, ಪರೋಪಕಾರ ಮುಂತಾದ ಮೌಲ್ಯಗಳನ್ನು ಅಳವಡಿಸಿಕೊಂಡರೆ ಮಾತ್ರ ಮಾನವನಲ್ಲಿರುವ ಬುದ್ಧಿವಂತಿಕೆಯು ಸದುಪಯೋಗವಾಗುತ್ತದೆ. ಸುಪ್ರಯತ್ನಗಳು ಸಫಲವಾಗುತ್ತವೆ. ಇಂತಹ ಸುದ್ಗುಣಗಳಿಂದ ಕೂಡಿದ ಪೀಳಿಗೆಯು ಅಣುಬಾಂಬನ್ನು ಎಂದಿಗೂ ಸರ್ವನಾಶಕ್ಕಾಗಿ ಉಪಯೋಗಿಸುವುದಿಲ್ಲ. ಜನಾಂಗದ ಉದ್ಧಾರಕ್ಕೆ ಮಾತ್ರ ಬಳಸಲು ಬದ್ಧಕಂಕಣವಾಗುತ್ತದೆ. ಆದ್ದರಿಂದ ನೀತಿವಂತ ಪೀಳಿಗೆಯ ನಿರ್ಮಾಣ ಅಗತ್ಯ.

ಯಾವುದೇ ಕೆಲಸ ನೀತಿಯ ನೆಲೆಗಟ್ಟಿನ ಮೇಲೆ ನಿಂತಿದ್ದರೆ ಮಾತ್ರ ಅದು ಉತ್ತಮ ಫಲಿತಾಂಶ ತರಬಲ್ಲದು. ಇಲ್ಲದಿದ್ದಲ್ಲಿ ಇಂದಲ್ಲ ನಾಳೆ ವಿನಾಶ ಖಂಡಿತ. ಇಂದಿನ ಪೀಳಿಗೆಯಲ್ಲಿ ಹೆಚ್ಚಾಗಿ ಬೇಜವಾಬ್ದಾರಿಯ ನಡವಳಿಕೆಯನ್ನು ಕಾಣುತ್ತಿದ್ದೇವೆ. ಕೊಲೆ ಸುಲಿಗೆಗಳಲ್ಲಿ, ಡಕಾಯಿತಿ ದರೋಡೆಯಲ್ಲಿ ಹೆಚ್ಚಾಗಿ ಇಪ್ಪತ್ತರಿಂದ ಇಪ್ಪತ್ತೈದು ವರ್ಷದ ವಯಸ್ಸಿನ ಯುವಕರಿರುವುದನ್ನು ಗಮನಿಸಿದರೆ ನೀತಿಯುತ ಮಾರ್ಗದರ್ಶನವಿಲ್ಲದೆ ಪೀಳಿಗೆಯ ನಿರ್ಮಾಣವಾಗಿರುವುದು ಸ್ಪಷ್ಟವಾಗಿ ಗೋಚರವಾಗುತ್ತದೆ. ಈ ಕಾರಣಗಳಿಂದ ಸಾಮಾಜಿಕ, ಅಶಾಂತಿ, ಭಯದ ವಾತಾವರಣ, ಅನಿಶ್ಚಿತ ಪರಿಸ್ಥಿತಿಗಳು ಉಂಟಾಗಿವೆ. ಬಹಳಷ್ಟು ವಿದ್ಯಾರ್ಥಿಗಳು ಗುರಿಇಲ್ಲದ ಅಡ್ಡಾಟದಲ್ಲಿ, ಮಾದಕದ್ರವ್ಯ ಸೇವನೆಯಲ್ಲಿ, ಅನೀತಿಯುತ ಚಲನಚಿತ್ರ ನೋಡುವಲ್ಲಿ ಹೆಚ್ಚು ಆಸಕ್ತರಾಗಿದ್ದಾರೆ. ಅಭ್ಯಾಸ ಮಾಡುವ ರೂಢಿ ಇಲ್ಲವಾಗಿದೆ. ಗುರುಹಿರಿಯರಲ್ಲಿ, ನಮ್ಮ ಸಂಸ್ಕೃತಿ ಸಂಪ್ರದಾಯಗಳಲ್ಲಿ ಗೌರವ ಇಲ್ಲದವರಾಗಿದ್ದಾರೆ. ಬೇಜವಾಬ್ದಾರಿಯುತ ನಡೆನುಡಿ ಅವರ ಸಾಮಾನ್ಯ ಲಕ್ಷಣವಾಗಿದೆ. ಇದಕ್ಕೆ ಕಾರಣಗಳು ಅನೇಕ ಪಾಲಕರಲ್ಲಿ ಸಮಾಜದಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಮಕ್ಕಳಿಗೆ ಮಾರ್ಗದರ್ಶನವಾಗಬಲ್ಲ ಉತ್ತಮ ನಡುವಳಿಕೆಯುಳ್ಳ ಜನರ ಉದಾಹರಣೆ ವಿರಳವಾಗಿದೆ. ಎಲ್ಲೆಡೆ ಲಂಚಗುಳಿತನ, ಸ್ವಾರ್ಥ, ಅಪ್ರಮಾಣಿಕತೆ, ಶೋಷಣೆ ನಡೆದಿದೆ. ಚಾಣಾಕ್ಷನಾದ ಧೂರ್ತ ವ್ಯಕ್ತಿ ಯಶಸ್ವಿಯಾಗಿ ಜೀವನ ಮಾಡಬಲ್ಲವನಾಗಿದ್ದಾನೆ, ಯೋಗ್ಯ, ಸಂಭಾವಿತ ವ್ಯಕ್ತಿಗೆ ಹೆಜ್ಜೆ ಹೆಜ್ಜೆಗೂ ತೊಡಕುಗಳು, ಸಮಸ್ಯೆಗಳೂ ಎದುರಾಗುತ್ತಿವೆ. ಉತ್ತಮ ಮೌಲ್ಯಗಳನ್ನು ಬಾಳುವ ಪ್ರಯತ್ನದಲ್ಲಿ ಅವನು ಅನೇಕ ಕಷ್ಟ ನಷ್ಟಗಳಿಗೆ ಗುರಿಯಾಗುವ ಪರಿಸ್ಥಿತಿ ಉಂಟಾಗಿದೆ. ಮೌಲ್ಯಗಳಿಲ್ಲದ ವ್ಯಕ್ತಿ ತನ್ನ ಚಾಣಾಕ್ಷತನದಿಂದ ಸಮಾಜ, ಸಂಸ್ಥೆಗಳಿಗೆ ಮೋಸ ಮಾಡುತ್ತ ಮೇಲೆ ಮೇಲೆ ಏರಬಲ್ಲವನಾಗಿದ್ದಾನೆ. ಪುರಸ್ಕಾರಗಳನ್ನು ಪಡೆಯಬಲ್ಲವನಾಗಿದ್ದಾನೆ. ಬುದ್ಧಿವಂತರಾದ, ನಿಷ್ಠಾವಂತರಾದ, ಉತ್ತಮ ಚಾರಿತ್ರ್ಯವುಳ್ಳ ಮಕ್ಕಳಿಗೆ ಗೌರವ ಸಿಗದ ಸ್ಥಿತಿ ಅನೇಕ ಕಡೆ ಉಂಟಾಗಿದೆ. ಇಂಥ ಪರಿಸ್ಥಿತಿಯಲ್ಲಿ ಯೋಗ್ಯ ಪೀಳಿಗೆಯ ನಿರ್ಮಾಣ ಹೇಗೆ ಸಾಧ್ಯ? ಸಮಾಜದಲ್ಲಿ ಎಂತಹ ಜನ ಯಶಸ್ವಿಯಾಗಿ ಬದುಕುತ್ತಾರೋ ಅಂತಹ ಜನರ ಗುಣಗಳನ್ನು ಮಾತ್ರ ಪೀಳಿಗೆಯು ಅಳವಡಿಸಿಕೊಳ್ಳಲು ಪ್ರಯತ್ನಿಸುತ್ತದೆ.

ಜೀವನ ಅಶಾಂತಿ, ಅತೃಪ್ತಿ, ಅಸೂಯೆಗಳ ಮಡುವಾಗದೇ ನ್ಯಾಯ, ನೀತಿ, ಪ್ರೀತಿಯ ಆಗರವಾಗಬೇಕೆಂಬುದು ಎಲ್ಲರ ಇಚ್ಛೆಯಾಗಿದೆ, ಪ್ರಾಚೀನ ಕಾಲದಲ್ಲಿ ಸಹ ಬೋಧನೆಯಲ್ಲಿ ಚಾರಿತ್ರ್ಯ ನಿರ್ಮಾಣಕ್ಕೆ ಎಲ್ಲಕ್ಕಿಂತ ಹೆಚ್ಚು ಮಹತ್ವ ಕೊಡುತ್ತಿದ್ದರು. ಆಗಿನ ಶಿಕ್ಷಣ ಪದ್ಧತಿಯಲ್ಲಿ ವಿದ್ಯಾರ್ಥಿಗಳು ಧಾರ್ಮಿಕ ಗ್ರಂಥಗಳ ಪಠಣ - ವಿಮರ್ಶೆ, ಗುರುಗಳ ಸೇವೆ ಧಾರ್ಮಿಕ ಹಬ್ಬಗಳ ಆಚರಣೆ ಗುರುಕುಲದ ನಿಯಮಗಳ

ಪರಿಪಾಲನೆ ಇವುಗಳ ಮೂಲಕ ನೀತಿಯ ನಡೆನುಡಿಗಳನ್ನು ತಮ್ಮ ಅರಿವಿಲ್ಲದಂತೆಯೇ ಅಳವಡಿಸಿಕೊಂಡು ಬಿಡುತ್ತಿದ್ದರು. ಇಂಥ ವ್ಯಕ್ತಿತ್ವ ಅವನ ಬದುಕಿಗೆ ಬುನಾದಿಯಾಗತ್ತದೆ. ನಿಜವಾದ ನೀತಿಯುತ ಮನುಷ್ಯ ತನ್ನ ಕರ್ತವ್ಯಗಳನ್ನು ನಿಷ್ಠೆಯಿಂದ ಮಾಡುವ ಸ್ವಭಾವದವನಾಗಿರುತ್ತಾನೆ. ಇತರರಿಗೆ ತನ್ನಿಂದಾಗುವ ಸಹಾಯ ಮಾಡುತ್ತಾನೆ. ಸಮಾಜಕ್ಕೆ, ರಾಷ್ಟ್ರಕ್ಕೆ ವಿಶ್ವಕ್ಕೆ ತನ್ನ ಕೈಲಾದ ಸೇವೆಯನ್ನು ಸಲ್ಲಿಸುತ್ತಾನೆ. ನುಡಿದಂತೆ ನಡೆಯುತ್ತಾನೆ. ಪರರ ಅಭಿವೃದ್ಧಿ ಕಂಡು ಕರುಬದೇ ಸಂತೋಷಪಡುತ್ತಾನೆ. ಉಪಕಾರ ಮಾಡಿದವರ ಬಗ್ಗೆ ಉಪಕಾರ ಸ್ಮರಣೆಯಿಂದ ಪ್ರತಿಗೌರವ ತೋರಿಸುತ್ತಾನೆ. ನೈಜ ಮಾರ್ಗಗಳಿಂದ ಅಭಿವೃದ್ಧಿ ಹೊಂದಲು ಪ್ರಯತ್ನಿಸುತ್ತಾನೆ. ಯಾರಿಗೂ ಅನ್ಯಾಯ ಮಾಡುವುದೂ ಇಲ್ಲ; ತನಗೆ ಅನ್ಯಾಯವಾದಾಗ ಸಹಿಸುವುದೂ ಇಲ್ಲ. ಸಮಾಜದ ತುಂಬೆಲ್ಲಾ ಇಂತಹ ವ್ಯಕ್ತಿಗಳಿದ್ದರೆ, ಸುಖ, ಸಂತೋಷ ತೃಪ್ತಿ, ನೆಮ್ಮದಿ ಎಲ್ಲೆಲ್ಲೂ ತಾಂಡವವಾಡುತ್ತದೆ.

ನೆಮ್ಮದಿಯ ಜೀವನಕ್ಕೆ ಸಚ್ಚಾರಿತ್ರ್ಯ ಉಳ್ಳ ಸಮಾಜ ತಾರಕ. ಸಚ್ಚಾರಿತವುಳ್ಳ ಸಮಾಜಕ್ಕೆ ಸಚ್ಚಾರಿತ್ರ್ಯ ಉಳ್ಳ ಪೀಳಿಗೆ ಅಗತ್ಯ. ಸಚ್ಚಾರಿತ್ರ್ಯ ಉಳ್ಳ ಪೀಳಿಗೆ ನಿರ್ಮಾಣವಾಗಬೇಕಾದರೆ ಮನೆ, ಸಮಾಜ, ಶಿಕ್ಷಣ ಸಂಸ್ಥೆಗಳು ಈ ದಿಶೆಯಲ್ಲಿ ಪ್ರಯತ್ನ ಪಡಬೇಕು. ಮುಖ್ಯವಾಗಿ ಶಾಲೆಯಲ್ಲಿ ಮಗುವಿಗೆ ಬಾಲ್ಯದಿಂದಲೂ ಆಯಾ ವಯಸ್ಸಿಗೆ ತಕ್ಕಂತಹ ನೈತಿಕ ಶಿಕ್ಷಣ ದೊರೆಯುವಂತಾಗಬೇಕು. ತನ್ಮೂಲಕ ಮಕ್ಕಳು, ಪ್ರಜ್ಞಾವಂತರೂ, ಉತ್ತಮ ಚಾರಿತ್ರ್ಯದ ಹೊಣೆಗಾರ ವ್ಯಕ್ತಿಗಳೂ ಆಗಿ ರೂಪಿತವಾಗುವಂತೆ ಮಾಡಬಹುದು. ಆದುದರಿಂದಲೇ ಎಲ್ಲಾ ಶಿಕ್ಷಣ ಆಯೋಗಗಳು, ಶಿಕ್ಷಣ ತಜ್ಞರು, 'ನೀತಿ ಶಿಕ್ಷಣ' ದ ಮಹತ್ವವನ್ನು ಎತ್ತಿಹಿಡಿದು, ಆ ಬಗ್ಗೆ ಅನೇಕ ರೀತಿಯ ಶಿಫಾರಸುಗಳನ್ನು ಮಾಡಿವೆ.

ಕ್ರಿ.ಶ. ೧೮೮೨ರ ಆಯೋಗವು, ಶಿಕ್ಷಣ ಸಂಸ್ಥೆಗಳು, ನೈತಿಕ ಶಿಕ್ಷಣವನ್ನು ಕೊಡಬಹುದೆಂದೂ, ಪಠ್ಯಪುಸ್ತಕಗಳನ್ನು ವಾಸ್ತವ ಸಾರ್ವತ್ರಿಕ, ಧಾರ್ಮಿಕ ಮೌಲ್ಯಗಳ ಆಧಾರದ ಮೇಲೆ ರಚಿಸಬೇಕೆಂದೂ ಸೂಚಿಸಿದೆ. ಸರ್ ರಾಧಾಕೃಷ್ಣ ಆಯೋಗವೂ ಸಹ ನೈತಿಕ ಹಾಗೂ ಧಾರ್ಮಿಕ ಶಿಕ್ಷಣಕ್ಕೆ ಬೋಧನಾ ಕ್ರಮದಲ್ಲಿ ಸೂಕ್ತ ಸ್ಥಾನ ಕೊಡಬೇಕೆಂದು ಸಲಹೆಮಾಡಿದೆ. ಗಾಂಧೀಜಿಯವರು ಸರ್ವಧರ್ಮಗಳಲ್ಲಿ ಕಂಡುಬರುವ ಸಾರ್ವತ್ರಿಕ ಮೌಲ್ಯಗಳನ್ನು ಶಾಲೆ-ಕಾಲೇಜುಗಳಲ್ಲಿ ಬೋಧಿಸಬೇಕಾದ ಅಗತ್ಯವನ್ನು ಎತ್ತಿಹಿಡಿದಿರುವರು. ಶ್ರೀ ಪ್ರಕಾಶ ಸಮಿತಿ, ಡಾ: ಸಂಪೂರ್ಣಾನಂದ ಸಮಿತಿಗಳೂ ಕೂಡ ಧಾರ್ಮಿಕ ಶಿಕ್ಷಣದ ಅಗತ್ಯ ಕುರಿತು ವಿವರಣೆ ನೀಡಿವೆ. ಕೊಠಾರಿ ಆಯೋಗವು ನೈತಿಕ, ಸಾಮಾಜಿಕ, ಹಾಗೂ ಆಧ್ಯಾತ್ಮಿಕ ಮೌಲ್ಯಗಳು ಶಿಕ್ಷಣದ ಅವಿಭಾಜ್ಯ ಅಂಗವಾಗಬೇಕೆಂದು ಸಲಹೆ ಇತ್ತಿದೆ. ಅಲ್ಲದೆ ಶಾಲಾ

ವೇಳಾಪತ್ರಿಕೆಯಲ್ಲಿ ನೈತಿಕ ಶಿಕ್ಷಣಕ್ಕಾಗಿಯೇ ಕೆಲವೊಂದು ಅವಧಿಗಳನ್ನು ಮೀಸಲಿಸಬೇಕೆಂದು ನಿರ್ದಿಷ್ಟ ಸಲಹೆಯನ್ನು ಕೊಟ್ಟಿದೆ. ಈ ಶಿಕ್ಷಣಕ್ಕೆ ಬೇಕಾದ ಸೂಕ್ತ ಪಠ್ಯಗಳನ್ನು ರಾಷ್ಟ್ರಮಟ್ಟದಲ್ಲಿ ಸಿದ್ಧಪಡಿಸಬೇಕೆಂದೂ ಇದಕ್ಕೆ ಸಂಬಂಧಿಸಿದ ಬೋಧನಾಕ್ರಮಗಳು, ಪಠ್ಯಕ್ರಮಗಳು, ದೇಶಾದ್ಯಂತ ಏಕಪ್ರಕಾರವಾಗಿ ಇರಬೇಕೆಂದೂ ಸಹ ಸೂಚಿಸಿದೆ. ಕರ್ನಾಟಕದಲ್ಲಿ ಕ್ರಿ.ಶ. ೧೯೬೯-೭೦ ರಿಂದ ನೈತಿಕ ಶಿಕ್ಷಣವನ್ನು ಮಾಧ್ಯಮಿಕ ಶಾಲೆಗಳಲ್ಲಿ ಬೋಧಿಸಬೇಕೆಂಬ ನಿಯಮವನ್ನು ಜಾರಿಗೆ ತರಲಾಗಿದೆ. ಅದರಂತೆ ಶಾಲೆಗಳಲ್ಲಿ ನೈತಿಕ ಶಿಕ್ಷಣದ ಅವಧಿಯನ್ನೂ ವೇಳಾಪತ್ರಿಕೆಯಲ್ಲಿ ಕೊಡಮಾಡಲಾಗಿದೆ. ಯಾವುದೇ, ಸೂಕ್ತಪಠ್ಯವನ್ನು ಆಯಾ ವಯಸ್ಸಿಗೆ ತಕ್ಕಂತೆ ಸೂಚಿಸಲಾಗಿಲ್ಲ, ಸೂಕ್ತ ಪಠ್ಯ ಪುಸ್ತಕಗಳೂ ಕನ್ನಡ ಶಾಲೆಗಳಲ್ಲಿ ಕಾಣಬರುತ್ತಿಲ್ಲ, ಅಲ್ಲದೆ ಅದು ಪರೀಕ್ಷೆಯ ವಿಷಯವೂ ಆಗಿಲ್ಲದ ಕಾರಣ ಬಹಳಷ್ಟು ಶಾಲೆಗಳು, ಅದು ಅನಗತ್ಯ ವಿಷಯವೆಂಬಂತೆ ಪರಿಗಣಿಸಿ ಆ ಅವಧಿಗಳನ್ನು ಬೇರೆ ಯಾವುದೋ ವಿಷಯಗಳಿಗಾಗಿ ಉಪಯೋಗಿಸಿಕೊಳ್ಳುತ್ತಿವೆ ಅಥವಾ ಈ ವಿಷಯವೇನು ಮಹತ್ವದ್ದಲ್ಲ ಎಂಬಂತೆ ಶಿಕ್ಷಕರು ಒಮ್ಮೆಮ್ಮೊ ಆ ಕ್ಲಾಸಿಗೂ ಹೋಗುವುದಿಲ್ಲ. ಹೋದರು ಬೇರೇನೋ ಕೆಲಸ ಮಾಡಿಕೊಂಡು ಕುಳಿತುಕೊಳ್ಳುವ ಉದಾಹರಣೆಗಳೂ ಅನೇಕ. ಕೆಲವರು ಯಾವುದೇ ಗುರಿ ಇಲ್ಲದ ಕಥೆ ಅಥವಾ ಹಾಡುಗಳನ್ನು ಹೇಳಿಸುತ್ತಾ ಅವಧಿಯನ್ನು ಮುಗಿಸುತ್ತಾರೆ. ಶಿಕ್ಷಕರಿಗೆ ನೀತಿಬೋಧನೆಯ ಬಗ್ಗೆ ಇರುವ ಈ ರೀತಿಯ ಧೋರಣೆಗಳಿಂದ, ವಿದ್ಯಾರ್ಥಿಗಳಿಗೆ ನೀತಿಬೋಧನೆಯ ಪೀರಿಯಡ್ ಎಂದರೆ ಉಪಯೋಗವಿಲ್ಲದುದು, ವ್ಯರ್ಥವಾದುದು ಎಂಬ ಭಾವನೆ ಬೆಳೆಯಲು ಕಾರಣವಾಗಿದೆ. ಈ ಬಗ್ಗೆ ಆಯೋಗಗಳನ್ನು ರಚಿಸಿ, ಪರಿಣತರ ಸಲಹೆಯಂತೆ ಆ ವಿಷಯವನ್ನು ಶಾಲಾ ಪಠ್ಯದಲ್ಲಿ ಸೇರಿಸಿದಾಗಲೂ ಅದರ ಸ್ಥಿತಿ ಹೀಗಾದರೆ, ಅದಕ್ಕಾಗಿ ಮಾಡಿದ ಖರ್ಚು, ವಹಿಸಿದ ಶ್ರಮ, ಉಪಯೋಗಿಸಿದ ಬುದ್ಧಿ ಎಲ್ಲ ವ್ಯರ್ಥವಾದಂತಾಗುತ್ತದೆ. ಶಿಕ್ಷಕರು ಮಕ್ಕಳಿಗೆ ನೀತಿ ಶಿಕ್ಷಣದ ಮಹತ್ವ ಅರಿವಾಗುವಂತಹ ಧೋರಣೆ ತೋರಿಸದಿದ್ದರೆ, ಅದನ್ನು ಶಾಲಾ ಪಠ್ಯದಲ್ಲಿ ಸೇರಿಸಿದುದರ ಉದ್ದೇಶವೇ ವ್ಯರ್ಥವಾಗಿಬಿಡುತ್ತದೆ. ಮಕ್ಕಳಲ್ಲಿ ನೀತಿಯುತ ನಡವಳಿಕೆಯನ್ನುಂಟುಮಾಡುವ ಜವಾಬ್ದಾರಿ ನೈತಿಕ ಶಿಕ್ಷಕನೊಬ್ಬನಿಂದಲೇ ಅಥವಾ ಆ ವಿಷಯ ಬೋಧಿಸುವುದರಿಂದ ಮಾತ್ರ ಆಗುವುದಿಲ್ಲ. ಶಾಲೆಯ ಎಲ್ಲ ಶಿಕ್ಷಕರು ಯಾವ ವಿಷಯ ಬೋಧಿಸಿದರೂ ಸಂದರ್ಭ ಸಿಕ್ಕಾಗಲೆಲ್ಲ ಮೌಲ್ಯಗಳ ಬಗ್ಗೆ ಹೇಳುತ್ತಿರಬೇಕು. ಮಕ್ಕಳ ಮನಸ್ಸು ಆ ಬಗ್ಗೆ ಆಸಕ್ತವಾಗುವಂತೆ ಸತತವೂ ಪ್ರಯತ್ನಿಸುತ್ತಿರಬೇಕು. ಶಾಲಾ ಚಟುವಟಿಕೆಗಳ ಮೂಲಕ ಉತ್ತಮ ಮೌಲ್ಯಗಳನ್ನು ಅಳವಡಿಸಿಕೊಳ್ಳಲು ಸಾಧ್ಯವಾಗುವ ಅವಕಾಶಗಳು ಸಿಗುವಂತೆ ಮಾಡಬೇಕು.

ಕೆಲವು ಶಾಲೆಗಳಲ್ಲಿ ತರಗತಿಗಳಿಗೆ ಶಿಕ್ಷಕರು ವೇಳೆಗೆ ಸರಿಯಾಗಿ ಹೋಗುವುದಿಲ್ಲ. ಕೆಲವರು ತಡವಾಗಿ ಹೋಗುತ್ತಾರೆ. ಅಥವಾ ಕ್ಲಾಸಿನಿಂದ ಬೇಗ ಬಂದು ಬಿಡುತ್ತಾರೆ. ಕೆಲವೊಂದು ಸಾರಿ ಹೋಗದೆಯೂ ಇರುತ್ತಾರೆ. ಹೋದರೂ ಬೇರೇನೋ ತಮ್ಮ ಕೆಲಸ ಮಾಡಿಕೊಳ್ಳುತ್ತಾರೆ. ಇದರಿಂದಲೂ ಮಕ್ಕಳಲ್ಲಿ ಅಶಿಸ್ತು, ಅನೈತಿಕತೆ ಬೆಳೆಯುತ್ತದೆ. ಇಂತಹ ಪರಿಸ್ಥಿತಿಗಳಿಂದ ಮಕ್ಕಳು ತಪ್ಪು ಮಾಡುವ, ಬೇಜವಾಬ್ದಾರಿಯಿಂದ ವರ್ತಿಸುವ ರೀತಿ ಬೆಳೆಸಿಕೊಳ್ಳುತ್ತಾರೆ. ಇಂತಹ ಸಂದರ್ಭಗಳಲ್ಲಿ ಶಿಕ್ಷಕರು ತಮ್ಮ ತಪ್ಪಿನ ಅರಿವು ಮಾಡಿಕೊಳ್ಳದೆ, ಮಕ್ಕಳನ್ನೇ ದುಡುಕಿನಿಂದ ದಂಡಿಸಬಹುದು, ಮತ್ತೆ ಕೆಲವರು ಕೆಲವು ಮಕ್ಕಳಿಗೆ ಪ್ರೋತ್ಸಾಹ ಕೊಡುವುದು ಅಥವಾ ಏನೇ ತಪ್ಪು ಮಾಡಿದರೂ ಅವರ ಬಗ್ಗೆ ಪಕ್ಷಪಾತ ಮನೋಭಾವದಿಂದ ಶಿಕ್ಷಿಸದಿರುವುದೂ ಅಲ್ಲದೆ ಬೇರೆ ಮಕ್ಕಳನ್ನು ಅಲಕ್ಷಿಸುವುದು, ಸಣ್ಣಕಾರಣಕ್ಕಾಗಿ ಹೀಯಾಳಿಸುವುದು ಮುಂತಾದ ಪಕ್ಷಪಾತ ರೀತಿಯ ಮನೋಭಾವದಿಂದ ವಿದ್ಯಾರ್ಥಿಗಳಲ್ಲಿ ಅಸಮಾಧಾನ, ಅತೃಪ್ತಿ ಉಂಟಾಗಿ ಅವರಲ್ಲಿ ಸಮತೋಲನದ ವ್ಯಕ್ತಿತ್ವ ಬೆಳೆಯದಾಗುತ್ತದೆ. ಬೇಜವಾಬ್ದಾರಿಯಿಂದ ವರ್ತಿಸುವ ಸುಳ್ಳು ಹೇಳುವ, ಬೇರೆಯವರಿಗೆ ಹಿಂಸೆ ಕೊಡುವ ಗದ್ದಲ ಮಾಡುವ, ಗುಂಪುಕಟ್ಟಿಕೊಂಡು ದಾದಾಗಿರಿ ಮಾಡುವಂತಹ ಇನ್ನೂ ಅನೇಕ ರೀತಿಯ ದುಷ್ಟ ಗುಣಗಳು ಬೆಳೆಯುತ್ತವೆ. ಹೀಗಿರುವ ಶಾಲೆಗಳಲ್ಲಿ ನೈತಿಕ ಶಿಕ್ಷಣದ ಒಂದು ಪ್ರತ್ಯೇಕ ಅವಧಿ ವ್ಯರ್ಥವೆಂದೇ ಹೇಳಬೇಕಾಗುವುದು. ಆದುದರಿಂದ ಶಾಲೆಗಳು ಈ ದಿಶೆಯಲ್ಲಿ ತಮ್ಮ ಕರ್ತವ್ಯವನ್ನು ಜವಾಬ್ದಾರಿಯಿಂದ ನಿರ್ವಹಿಸುವುದು ಅತ್ಯಗತ್ಯ.

ಶಾಲೆಯೊಂದೇ ಈ ದಿಸೆಯಲ್ಲಿ ಹೆಜ್ಜೆ ಇಟ್ಟರೆ ಸಾಲದು, ಮನೆ ಸಮಾಜ ಸರಕಾರಗಳೂ ಶಿಕ್ಷಣ ಸಂಸ್ಥೆಗಳೊಂದಿಗೆ ಸಹಕರಿಸಿದಾಗ, ಪೀಳಿಗೆಯನ್ನು ನಿರೀಕ್ಷಿತ ರೀತಿಯಲ್ಲಿ ನಿರ್ಮಿಸಲು ಸಾಧ್ಯ. ಪಾಲಕರು ಮನೆಯಲ್ಲಿ ಮಕ್ಕಳಿಗೆ ಯೋಗ್ಯ ವಾತಾವರಣ ನಿರ್ಮಿಸಿ. ಮಕ್ಕಳು ನೀತಿಯುತ ನಡೆಗಳನ್ನು ಪಡೆಯಲು ಸಹಾಯಕವಾಗಬೇಕು. ಮನೆಯಲ್ಲಿಯ ಜನರು ಸ್ವತ: ತಾವೇ ನೀತಿವಂತರಾಗಿ ಬಾಳಿ ಉತ್ತಮ ನಿದರ್ಶನ ಕೊಡಬೇಕು. ಮನೆಯಲ್ಲಿ ಮಕ್ಕಳು ಕುಟುಂಬದ ನಿಯಮಗಳನ್ನು ಪಾಲಿಸುವಂತೆ, ಹಿರಿಯರನ್ನು ಗೌರವಿಸುವಂತೆ, ತಮ್ಮ ಕರ್ತವ್ಯಗಳನ್ನು ಜವಾಬ್ದಾರಿಯಿಂದ ನಿರ್ವಹಿಸುವಂತೆ, ಉಪಕರಿಸಿದವರನ್ನು ಸ್ಮರಿಸುವಂತೆ, ಅಸಹಾಯಕರಿಗೆ ನೆರವು ನೀಡುವಂತೆ, ಸತ್ಸಂಪ್ರದಾಯಗಳನ್ನು ಗೌರವಿಸುವಂತೆ ನೋಡಿಕೊಂಡು, ಶಾಲೆಯೊಡನೆ ಸಹಕರಿಸುತ್ತಾ ತಮ್ಮ ಮಕ್ಕಳಲ್ಲಿ ಉತ್ತಮ ಚಾರಿತ್ರ್ಯ ನಿರ್ಮಾಣ ಉಂಟಾಗುವಂತಹ ಮಹತ್ವದ ಪಾತ್ರವಹಿಸಬೇಕು.

ಈಗಿನ ಸಮಾಜದಲ್ಲಿ ಉತ್ತಮ ಮೌಲ್ಯಗಳಿಲ್ಲದಂತಾಗುತ್ತಿವೆ. ಸಜ್ಜನ,

ನಿರುಪಯೋಗಿ ಎಂಬ ಭಾವನೆಯುಂಟಾಗಿ ಅಂತಹವನಿಗೆ ಗೌರವಿಲ್ಲದ ಪರಿಸ್ಥಿತಿ ಉಂಟಾಗಿದೆ. ದುಷ್ಟನಿಗೆ, ಅಧಿಕಾರವಿದ್ದವನಿಗೆ; ಲಾಭವಮಾಡಿಕೊಳ್ಳಲು ಸಹಕಾರಕೊಡುವವನಿಗೆ ಮಾನ್ಯತೆ ದೊರೆಯುವಂತಾಗಿದೆ. ಹಾಗಾಗಿ ಎಲ್ಲರೂ ಏನಕೇನ ಪ್ರಕಾರೇಣ ಅವುಗಳನ್ನು ಪಡೆಯಲು ಪ್ರಯತ್ನಿಸುವುದುನ್ನು ನಾವು ಕಾಣುತ್ತಿದ್ದೇವೆ. ಏಕೆಂದರೆ ಸಮಾಜದಲ್ಲಿ ಯಾವ ನಡತೆಗೆ, ಗೌರವವಿದೆಯೋ ಅದನ್ನು ಮನುಷ್ಯ ಅಳವಡಿಸಿಕೊಳ್ಳುತ್ತಾನೆ. ಯಾವುದನ್ನು ಪಡೆಯುವುದರಿಂದ ತನಗೆ ಮಾನ್ಯತೆ ಬರುತ್ತದೋ ಅದನ್ನು ಪಡೆದುಕೊಳ್ಳಲು ಹವಣಿಸುತ್ತಾನೆ. ಆದುದರಿಂದ ಸಮಾಜದಲ್ಲಿ ಒಳ್ಳೆಯದಕ್ಕೆ ಮಾನ್ಯತೆ ದೊರೆಯುವ ಪರಿಸ್ಥಿತಿ ಉಂಟಾಗಬೇಕು. ದುಷ್ಟನಿಗೆ ಬೆಲೆ ದೊರೆಯದಂತಾಗಬೇಕು. ಕೆಟ್ಟದನ್ನು ಖಂಡಿಸುವ ಸ್ಥಿತಿ ಬರಬೇಕು. ಒಳ್ಳೆಯದನ್ನು ಗೌರವಿಸುವ ಎತ್ತಿ ಹಿಡಿಯುವ ಮನೋಭಾವ ಜನರಲ್ಲಿ ಮೂಡಬೇಕು. ಆಗ ಸಮಾಜ ತಾನೇ ತಾನಾಗಿ ಸುಧಾರಿಸಲ್ಪಡುತ್ತದೆ.

ಮೇಲಿನ ಸ್ಥಿತಿಯ ನಿರ್ಮಾಣಕ್ಕೆ ಸರ್ಕಾರ ಅಶ್ಲೀಲವಾದ ಕ್ರೌರ್ಯ, ಹಿಂಸೆಗಳನ್ನು ಬಿಂಬಿಸುವ ಸಾಹಿತ್ಯ ಪ್ರಕಟಣೆಗೆ, ಪ್ರಚಾರ ಮಾಧ್ಯಮಗಳ ಉಪಯೋಗವಾಗದಂತೆ ಕಡು ನಿಯಮಗಳನ್ನು ನಿರ್ಮಿಸಿ, ಅದನ್ನು ಚಾಚೂ ತಪ್ಪದೆ ಪಾಲಿಸುವಂತೆ ನೋಡಿಕೊಳ್ಳುವುದಗತ್ಯ. ಮೌಲ್ಯಾಧಾರಿತ ವಿಷಯಗಳ ಪ್ರಚಾರಕ್ಕೆ ಸಾಕಷ್ಟು ಪ್ರೋತ್ಸಾಹ ಕೊಡಬೇಕು. ನೀತಿಬಾಹಿರ ನಡವಳಿಕೆಗೆ ಆಸ್ಪದವಿಲ್ಲದಂತಹ ಕಾನೂನುಗಳನ್ನು ಜಾರಿಗೆ ತರುವುದಲ್ಲದೆ, ಶಿಕ್ಷಣ ನೀತಿಯಲ್ಲಿ ಎಲ್ಲ ರೀತಿಯ ಬದಲಾವಣೆ ತರಬೇಕು. ಮಕ್ಕಳ ನೈತಿಕಾಭಿವೃದ್ಧಿಗೆ ಸಹಾಯಕವಾಗುವ ಚಿತ್ರಗಳಿಗೆ ಪ್ರೋತ್ಸಾಹ ನೀಡಬೇಕು.

ಶಾಲೆಯಲ್ಲಿ ಮಕ್ಕಳ ದೈಹಿಕ, ಮಾನಸಿಕ, ಬೌದ್ಧಿಕ, ಭಾವನಾತ್ಮಕ, ನೈತಿಕ ಕ್ರಿಯಾಶೀಲಾತ್ಮಕವಾದ ಮಗುವಿನ ಸರ್ವತೋಮುಖವಾದ ಬೆಳವಣಿಗೆಗೆ ಗಮನಕೊಟ್ಟು, ಅವರಲ್ಲಿ ತುಲನಾತ್ಮಕ ವ್ಯಕ್ತಿತ್ವ ರೂಪಿತವಾಗಲು ಸಹಾಯಕವಾಗಬೇಕು. ವಿವಿಧ ವಿಷಯಗಳ ಮೂಲಕ ಜ್ಞಾನಾಭಿವೃದ್ಧಿಗೆ ಅವಕಾಶ ಮಾಡಿಕೊಡುತ್ತ, ಜೊತೆ ಜೊತೆಯಲ್ಲೇ ಸಂದರ್ಭೋಚಿತವಾಗಿ, ಉಳಿದ ಅಂಶಗಳ ಬೆಳವಣಿಗೆಗೆ ಲಕ್ಷ್ಯಕೊಡಬಹುದಾಗಿದೆ, ಶಾಲೆಗಳು ಕೇವಲ ಜ್ಞಾನವನ್ನು ವಿಕ್ರಯಿಸುವ ಅಥವಾ ಉದ್ಯೋಗವನ್ನು ಪಡೆಯುವ ಸಾಧನಗಳಾಗದೆ, ಮಾನವ ಜನಾಂಗದ ಅಭಿವೃದ್ಧಿಗೆ ಸಹಾಯಕವಾಗುವ ದಕ್ಷ, ಯೋಗ್ಯ ವ್ಯಕ್ತಿಗಳನ್ನು ರೂಪಿಸುವ ರೂವಾರಿಗಳಾಗಬೇಕು. ಏಕೆಂದರೆ ಒಳ್ಳೆಯ ಚಾರಿತ್ರ್ಯವನ್ನು ಹೊಂದಿದ ಜನರು ತಮ್ಮ ಹಾಗೂ ರಾಷ್ಟ್ರದ ಉನ್ನತಿಯನ್ನು ಸಾಧಿಸಬಲ್ಲರು.

ಶಿಕ್ಷಕರು ನೀತಿ ಬೋಧನೆಯನ್ನು ಆ ಅವಧಿಗಷ್ಟೇ ಸೀಮಿತಗೊಳಿಸಿ

ಕೊಳ್ಳಬಾರದು. ವಿವಿಧ ವಿಷಯಗಳನ್ನು ಬೋಧಿಸುವಾಗ, ಶಾಲೆಯ ಇತರ ಕಾರ್ಯಕ್ರಮಗಳನ್ನು ನಡೆಸುವಾಗ, ಆಟ ಆಡಿಸುವಾಗ ಅನೇಕ ಅವಕಾಶಗಳು ದೊರೆಯುತ್ತವೆ. ಆಗ ಪ್ರತಿಯೊಂದು ಸುಸಂಧಿಯನ್ನು ಬಳಸಿಕೊಂಡು ಮಕ್ಕಳಲ್ಲಿ ಸಚ್ಚಾರಿತ್ರ್ಯವನ್ನು ಮೊಳೆಸಬಹುದು. ಆದರೆ ಬಹಳಷ್ಟು ಶಾಲೆಗಳಲ್ಲಿ ಮಾಡುವುದೇ ಇಲ್ಲ. ಇಲ್ಲಿಯೂ ಶಿಕ್ಷಕರ ಮಾರ್ಗದರ್ಶನ ಮೇಲ್ವಿಚಾರಣೆ ಆಟದ ಸಮಯದಲ್ಲಿ ಶಿಕ್ಷಕರ ಪಾತ್ರದ ಅವಶ್ಯಕವಿಲ್ಲವೆನ್ನುವಂತೆ, ಶಿಕ್ಷಕರು ಆಟಗಳ ಮೇಲ್ವಿಚಾರಣೆ ಅತ್ಯಗತ್ಯ. ಹಾಗೆ ಮಾಡದಿದ್ದರೆ ಆಟದ ಬಯಲು ಅನಾಚ್ಛಾದಿತಶಾಲೆಯಾಗದೆ, ಅನೀತಿಯುತರಾದ ಮಕ್ಕಳ ಬೆಳವಣಿಗೆಗೆ ಸಹಾಯಕವಾಗುವ ಕಮ್ಮಟವಾಗುತ್ತದೆ. ಆಟದ ಬಯಲಿನಲ್ಲಿ ಮಕ್ಕಳಿಗೆ ಸಕಾಲದಲ್ಲಿ ಸೂಕ್ತ ಸಲಹೆ ಕೊಟ್ಟು ಅಪೇಕ್ಷಣೀಯ ಹಾಗೂ ಅಗತ್ಯ ಗುಣಗಳಾದ ಸಹಕಾರ, ನಿಯಮಪಾಲನೆ, ನಾಯಕನಿಗೆ ವಿಧೇಯನಾಗಿ ನಡೆಯುವಿಕೆ, ಸ್ವಇಚ್ಛೆಯಿಂದ ಕೆಲಸ ಮಾಡಲು ಮುಂದೆ ಬರುವ ಮನೋಭಾವ, ಸೋಲು-ಗೆಲುವುಗಳನ್ನು ಸಮಾನಭಾವದಿಂದ ಸ್ವೀಕರಿಸುವ ಸಮತೋಲನ ಸ್ವಭಾವ, ಸೂಕ್ತ ಸಮಯದಲ್ಲಿ ಯೋಗ್ಯ ನಿರ್ಣಯ ತೆಗೆದುಕೊಳ್ಳಬಲ್ಲ ಚುರುಕಾದ ಬುದ್ಧಿಮತ್ತೆ, ಸಮಯಪ್ರಜ್ಞೆ, ಜವಾಬ್ದಾರಿಯುತ ನಡೆ-ನುಡಿ, ಸಂಘ-ಸಂಸ್ಥೆಗಳ ಬಗ್ಗೆ ಅಭಿಮಾನ, ದೇಶಪ್ರೇಮ, ಗುರು-ಹಿರಿಯರ ಬಗ್ಗೆ ಗೌರವ, ಉಪಕಾರ ಸ್ಮರಣೆ, ಕಷ್ಟದಲ್ಲಿರುವವರಿಗೆ ಸಹಾಯ ಮಾಡುವಿಕೆ ಮುಂತಾದ ಉತ್ತಮೋತ್ತಮ ಗುಣಗಳನ್ನು ಮಕ್ಕಳು ತಮ್ಮ ವ್ಯಕ್ತಿತ್ವದಲ್ಲಿ ಅಳವಡಿಸಿಕೊಳ್ಳು ಸಹಾಯಕವಾಗಬಹುದು.

ಮೇಲೆ ಹೇಳಿದಂತೆ ಸಾಂದರ್ಭಿಕ ಸನ್ನಿವೇಶಗಳಲ್ಲಿ ನೈತಿಕ ಶಿಕ್ಷಣ ಕೊಡುವುದಲ್ಲದೆ, ಪ್ರತ್ಯಕ್ಷ ಬೋಧನೆಯನ್ನು ನೀತಿ ಬೋಧನಾ ಅವಧಿಯಲ್ಲಿ ಮಾಡಬೇಕು. ಚಿಕ್ಕಮಕ್ಕಳಿಗೆ ನೀತಿಬೋಧನೆಯಲ್ಲಿ ಕತೆಗಳನ್ನು ಸಮ್ಮೋನಾಹನಾಸ್ತ್ರದಂತೆ ಬಳಸಬಹುದು. ಮಹಾಭಾರತ, ರಾಮಾಯಣ ಕತೆಗಳು, ಭಾಗವತಗಳು, ಭಗವದ್ಗೀತೆಗಳ ಮೂಲಕ ಸದ್ಗುಣಗಳನ್ನು ಬೆಳೆಸಬಹುದು. ಪಂಚತಂತ್ರದ ಕಥೆ, ಈಸೋಪನ ನೀತಿಕಥೆಗಳ ಮೂಲಕ ವಿಮರ್ಶಾತ್ಮಕ ಶಕ್ತಿಯನ್ನು, ಒಳಿತು ಕೆಡಕುಗಳ ಕಲ್ಪನೆಯನ್ನು ಜೀವನದ ವಿವಿಧ ಪ್ರಸಂಗಗಳಲ್ಲಿ ನಡೆದುಕೊಳ್ಳಬೇಕಾದ ಉತ್ತಮ ಮಟ್ಟದ ರೀತಿ-ನೀತಿಗಳನ್ನು, ಧೈರ್ಯ ಸಾಹಸಗಳನ್ನು, ಕಷ್ಟಸಮಯದಲ್ಲಿ ಜಾಣ್ಮೆಯಿಂದ, ಧೈರ್ಯಸ್ಥೈರ್ಯದಿಂದ ಜೀವನವನ್ನು ಎದುರಿಸುವ ಮಾರ್ಗದರ್ಶನವನ್ನು ಪಡೆಯಬಹುದಾಗಿದೆ. ಶ್ರೇಷ್ಠ ವ್ಯಕ್ತಿಗಳ ಜೀವನ ಚರಿತ್ರೆ, ಅವರ ಜೀವನದ ಮಹತ್ವ ಘಟನೆಗಳು, ಅವರುಗಳು ಬಾಳಿದ ಪವಿತ್ರ ಜೀವನ, ಪರೋಪಕಾರಕ್ಕಾಗಿ ಅವರು ನೀಡಿದ ಸಹಾಯ, ಮಾಡಿದ ಸೇವೆ, ತ್ಯಾಗ ಮುಂತಾದವುಗಳ ಬಗೆಗೆ ಮನಂಬುಗುವಂತೆ ವರ್ಣನೆ ಮಾಡಬಹುದು. ಈ

ವಿಷಯಗಳನ್ನು ಬೋಧಿಸುವ ಶಿಕ್ಷಕ, ಹೇಳುವ ವಿಚಾರಗಳು ಮಕ್ಕಳ ಮನಸ್ಸಿನ ಮೇಲೆ ಆಳವಾಗಿ ಪರಿಣಾಮ ಮಾಡುವಂತಹ ರೀತಿಯಲ್ಲಿ ಬೋಧಿಸಬಲ್ಲವನೂ ನೀತಿವಂತನೂ, ಶ್ರದ್ಧಾವಂತನೂ ಆಗಿರಬೇಕು, ಸ್ವತ: ನೈತಿಕ ಜೀವನವನ್ನು ಬಾಳುವಂತಹವನಾಗಿರಬೇಕು. ಹೇಳುವುದೊಂದು ಬಾಳುವುದೊಂದಾಗಿರುವ ವ್ಯಕ್ತಿಯ ಮಾತುಗಳ ಬಗೆಗೆ ಮಕ್ಕಳಿಗೆ ಗೌರವವಿರುವುದಿಲ್ಲ ಎಂಬ ವಿಷಯವನ್ನು ಶಿಕ್ಷಕ ಸದಾ ನೆನಪಿನಲ್ಲಿಟ್ಟುಕೊಳ್ಳುವುದಗತ್ಯ.

ಶಾಲೆಯಲ್ಲಿ ನೀತಿ ಶಿಕ್ಷಣ ಕೊಡುವುದರ ಮೂಲಕ ಸಮಾಜದ ಪ್ರತಿಯೊಂದು ಮನೆಗೂ ನೀತಿ ಶಿಕ್ಷಣವನ್ನು ಮುಟ್ಟಿಸಬಹುದಾಗಿದೆ. ಯಾವ ಕಾನೂನು, ಯಾವ ಸರ್ಕಾರವೂ ಮಾಡಲು ಅಸಾಧ್ಯವಾದ ಕಾರ್ಯವನ್ನು ನಿಷ್ಠಾವಂತನಾದ ಶಿಕ್ಷಕ ಶ್ರದ್ಧೆಯಿಂದ ತನ್ನ ಕೆಲಸವನ್ನು ಮಾಡುವ ಮೂಲಕ, ಸಮಾಜವನ್ನೇ ಏಕೆ, ರಾಷ್ಟ್ರವನ್ನೇ ನೀತಿಯುತವನ್ನಾಗಿ ಮಾಡಲು ಶಕ್ತನಾಗಿದ್ದಾನೆ.

■

## ೪. ಮಕ್ಕಳ ಭವಿಷ್ಯ ನಿರ್ಮಾಣದಲ್ಲಿ ಪಾಲಕರ ಪಾಲು

ಪ್ರತಿಯೊಬ್ಬ ತಂದೆ-ತಾಯಂದಿರೂ, ತಮ್ಮ ಮಕ್ಕಳು ಉತ್ತಮ ರೀತಿಯಿಂದ ಬೆಳೆಯಬೇಕು, ವಿದ್ಯಾವಂತರಾಗಬೇಕು, ದಕ್ಷರಾಗಬೇಕು, ಜೀವನದಲ್ಲಿ ಒಳ್ಳೆಯವರಾಗಿ ಚೆನ್ನಾಗಿ ಬದುಕಬೇಕು ಎಂಬ ಆಸೆ ಉಳ್ಳವರಾಗಿರುತ್ತಾರೆ. ಆದರೆ ಕೇವಲ ಆಸೆಯಿಂದ ಮಕ್ಕಳು ಇವನ್ನೆಲ್ಲಾ ಪಡೆಯಲು ಸಾಧ್ಯವಿಲ್ಲ. ಅವರು ಚೆನ್ನಾಗಿ ಬದುಕಬೇಕಾದರೆ ಉತ್ತಮ ವ್ಯಕ್ತಿತ್ವ ಪಡೆದಿರಬೇಕು. ಉತ್ತಮ ವ್ಯಕ್ತಿತ್ವ ಪಡೆಯಬೇಕಾದರೆ ಪಾಲಕರು ಪ್ರಾರಂಭದಿಂದಲೂ ಆ ಬಗ್ಗೆ ಕಾಳಜಿ ವಹಿಸಬೇಕಾಗುತ್ತದೆ. ಒಬ್ಬ ರೈತನು ಒಳ್ಳೇ ಫಸಲನ್ನು ಪಡೆಯಬೇಕಾದರೆ ಬೀಜ ಬಿತ್ತುವ ಕಾಲದಿಂದಲೂ ಅದಕ್ಕೆ ಬೇಕಾದ ನೀರು - ಗೊಬ್ಬರಗಳನ್ನು ಕಾಲ - ಕಾಲಕ್ಕೆ ಕೊಡಬೇಕಾಗುತ್ತದೆ. ಕೀಟಗಳಿಂದ, ರೋಗಗಳಿಂದ, ದನಗಳಿಂದ, ಸುತ್ತಮುತ್ತ ಬೆಳೆಯುವ ಕಳೆಗಳಿಂದ ಗಿಡಕ್ಕೆ ಹಾನಿಯಾಗದಂತೆ ರಕ್ಷಿಸಿ, ಸಸಿ ಬೆಳೆದು ದೊಡ್ಡದಾಗುವಂತೆ ನೋಡಿಕೊಂಡಾಗ ಮಾತ್ರ ಅದು ಪರಿಪಕ್ವತೆಗೆ ಬಂದಕಾಲದಲ್ಲಿ ಉತ್ತಮಫಲವನ್ನು ವಿಪುಲವಾಗಿ ಕೊಡುತ್ತದೆ. ಹಾಗೆಯೇ ಪಾಲಕರೂ ಮೊದಲಿನಿಂದಲೂ ಮಗುವಿನ ಬುದ್ಧಿ, ಸದ್ಗುಣ ಹಾಗೂ ದೇಹದ ಬೆಳವಣಿಗೆಗೆ ಅವಶ್ಯಕವಾದುದನ್ನು ಕಾಲ ಕಾಲಕ್ಕೆ ಒದಗಿಸಬೇಕಾಗುತ್ತದೆ. ಅಲ್ಲದೆ ಮಗುವು ರೋಗಗಳಿಗಾಗಲೀ, ದುಷ್ಟ ಸಹವಾಸಕ್ಕಾಗಲೀ ಒಳಗಾಗದಂತೆ ಮನಸ್ಸು ಮುದುಡದೆ ಬೆಳೆಯುವಂತೆ ನಿಗಾವಹಿಸುವುದೂ ಅಷ್ಟೆ ಅವಶ್ಯಕ. ಸರ್ವರೀತಿಯಿಂದಲೂ ಮಗು ದೈಹಿಕವಾಗಿ, ಮಾನಸಿಕವಾಗಿ, ಬೌದ್ಧಿಕವಾಗಿ, ನೈತಿಕವಾಗಿ, ಭಾವನಾತ್ಮಕವಾಗಿ ಸಮತೋಲನವಾದ ರೀತಿಯಲ್ಲಿ ರೂಪುಗೊಳ್ಳಲು ಅನುಕೂಲವಾದ ವಾತಾವರಣ, ಆಹಾರ, ಪ್ರೀತಿ ( ಆಹಾರದಷ್ಟೇ ಮುಖ್ಯವಾದುದ್ದು) ಮಾರ್ಗದರ್ಶನ, ಶಿಕ್ಷಣ ಸ್ವತ: ಉದಾಹರಣೆಯಾಗಬಲ್ಲ ನಡವಳಿಕೆ ಇತ್ಯಾದಿಗಳ ಬಗೆಗೆ ಪಾಲಕರು ಎಚ್ಚರದ ಗಮನಕೊಡಬೇಕು.

ಇಂದಿನ ಮಕ್ಕಳು ನಾಳಿನ ಪ್ರಜೆಗಳು, ನಮ್ಮದು ಪ್ರಜಾಪ್ರಭುತ್ವ ರಾಷ್ಟ್ರ. ಯಾರು ಬೇಕಾದರೂ ಯಾವುದೇ ಹುದ್ದೆಗೆ ಬರುವ ಅವಕಾಶವಿದೆ. ಪ್ರತಿಯೊಬ್ಬ ಪ್ರಜೆಯೂ ಒಂದಲ್ಲ ಒಂದು ರೀತಿಯಲ್ಲಿ ರಾಷ್ಟ್ರದ ಆಗು ಹೋಗುಗಳಿಗೆ ಪಾಲುಗಾರನಾಗುತ್ತಾನೆ. ಆದುದರಿಂದ ಎಲ್ಲ ಮಕ್ಕಳೂ ಒಳ್ಳೆಯವರಾಗಿ ರೂಪಗೊಳ್ಳುವುದರ ಜೊತೆಗೆ, ಹೊಣೆಗಾರ ಪ್ರಜೆಗಳಾಗಿಯೂ ರೂಪುಗೊಳ್ಳುವುದು

ಅವಶ್ಯಕ. ದೇಶದಲ್ಲಿ ಜವಾಬ್ದಾರಿಯುತರಾಗಿ ಬದುಕ ಬೇಕಾದರೆ, ಮೊದಲು ತನ್ನ ಕುಟುಂಬದಲ್ಲಿ ಹೊಣೆಗಾರ ವ್ಯಕ್ತಿಯಾಗಿ ಬಾಳುವುದನ್ನು ಕಲಿತಿರಬೇಕು. ಇಲ್ಲಿ ಸಲ್ಲುವವನು ಅಲ್ಲಿಯೂ ಸಲ್ಲುವನು ಎಂಬ ಮಾತನ್ನು ಇಹ–ಪರಗಳಿಗೆ ಸಂಬಂಧಿಸಿ ವಚನಕಾರರು ಹೇಳಿರುವರಾದರೂ, ಈ ಸಂದರ್ಭಕ್ಕೂ ಅದು ಹೊಂದಿಕೆಯಾಗುತ್ತದೆ. ಕುಟುಂಬದಲ್ಲಿ ಹೊಣೆಯರಿತು ಬದುಕಿದ ವ್ಯಕ್ತಿ. ಸಮಾಜಜೀವನದಲ್ಲೂ, ರಾಷ್ಟ್ರಜೀವನದಲ್ಲೂ ಜವಾಬ್ದಾರಿಗಳನ್ನು ಸಮರ್ಥವಾಗಿ ನಿರ್ವಹಿಸಬಲ್ಲ, ಒಟ್ಟಿನಲ್ಲಿ ಹೇಳಬೇಕೆಂದರೆ, ಕುಟುಂಬ, ಸಮಾಜ ಹಾಗೂ ರಾಷ್ಟ್ರದಲ್ಲಿ ಶಾಂತಿ, ಸಮಾಧಾನ, ಸುವ್ಯವಸ್ಥೆಗಳು ನೆಲಸಬೇಕಾದರೆ, ಪ್ರಗತಿ ಉಂಟಾಗಬೇಕಾದರೆ, ನೆಮ್ಮದಿ, ತೃಪ್ತಿ ದೊರೆಯಬೇಕಾದರೆ ಉತ್ತಮ ಪ್ರಜೆಗಳು ರೂಪುಗೊಳ್ಳಬೇಕು.

**ಇಂದಿನ ಸಮಾಜವನ್ನು ನಂಬಿ ಕುಳಿತುಕೊಳ್ಳುವಂತಿಲ್ಲ.**

ಮಕ್ಕಳ ವ್ಯಕ್ತಿತ್ವದ ಬೆಳವಣಿಗೆಯಲ್ಲಿ ಸಮಾಜ, ಶಾಲೆ, ಮನೆ ಪ್ರಮುಖ ಪಾತ್ರ ವಹಿಸುತ್ತವೆ. ಆದರೆ ಇಂದಿನ ಸಮಾಜ ಗೊಂದಲಮಯವಾಗಿದೆ. ಸಮಾಜದ ಪ್ರಭಾವ, ಮಕ್ಕಳಲ್ಲಿ ಉತ್ತಮ ವ್ಯಕ್ತಿತ್ವರೂಪಿಸಬಹುದೆಂಬ ನಂಬಿಕೆ ಇಟ್ಟುಕೊಳ್ಳುವಂತಿಲ್ಲ. ಈಗಂತೂ ಹೊರಗಿನ ಪ್ರಭಾವ ಒಳ್ಳೆಯವರನ್ನು ಕೆಟ್ಟ ಹಾದಿಗೆ ಎಳೆಯುವಂತಹ ಮಟ್ಟದ್ದಾಗಿದೆ. ಆದುದರಿಂದ ಮಕ್ಕಳ ಉತ್ತಮ ಬೆಳವಣಿಗೆಗೆ ಸಮಾಜವನ್ನು ನಂಬಿ ಕುಳಿತುಕೊಳ್ಳುವಂತಿಲ್ಲ. ಹಿಂದಿನ ಕಾಲದಂತೆ ಉದಾಹರಣೆಗಾಗಿ ತೋರಿಸಲು ಸಮಾಜದಲ್ಲಿ ಆದರ್ಶ ವ್ಯಕ್ತಿಗಳೇ ಇಲ್ಲವಾಗುತ್ತಿದ್ದಾರೆ. ಇದ್ದವರೂ, ಮೂಲೆಗುಂಪಾಗಿರುವ ಉದಾಹರಣೆಗಳೇ ಇವೆ. ಒಬ್ಬರನ್ನು ನೋಡಿ ಮತ್ತೊಬ್ಬರು ಕೆಟ್ಟದ್ದನ್ನು ಕಲಿಯುವ ಉದಾಹರಣೆಗಳೇ ಹೆಚ್ಚು, ಹಾಗಾಗಿ ಸಮಾಜದ ಪ್ರಭಾವವನ್ನು ಮಕ್ಕಳ ವ್ಯಕ್ತಿತ್ವ ರೂಪಿಸಲು ಆಶಿಸುವಂತಿಲ್ಲ.

**ವ್ಯಕ್ತಿತ್ವ ರೂಪಿಸುವಲ್ಲಿ ಶಾಲೆಗಳ ಮೇಲೆ ಭರವಸೆ ಇಡಬಹುದೇ?**

ಎರಡನೆಯದಾಗಿ ಶಾಲೆಗಳು ಮಕ್ಕಳ ವ್ಯಕ್ತಿತ್ವ ರೂಪಿಸುವಲ್ಲಿ ಮಹತ್ವದ ಪಾತ್ರ ವಹಿಸುತ್ತವೆ. ವಹಿಸಬೇಕು ಕೂಡ, ಆದರೆ ಈಗಿನ ಶಾಲೆಗಳ ಸ್ಥಿತಿ ಶೋಚನೀಯ. ಉತ್ತಮ ಮಟ್ಟದ ಶಾಲೆಗಳು ಇಡೀ ರಾಷ್ಟ್ರದಲ್ಲಿ ಅಲ್ಲೊಂದು ಇಲ್ಲೊಂದು, ಅವೂ ಗಗನ ಕುಸುಮಗಳು, ಅತ್ಯಂತ ಶ್ರೀಮಂತರಿಗೆ ಮಾತ್ರ ಎಟುಕುವಂತಹವುಗಳು. ಈಚೆಗಂತೂ ಶಾಲಾಮಟ್ಟದಲ್ಲಿ, ಮಕ್ಕಳಿಗೆ ನೀಗಲಾರದಷ್ಟು ಪಠ್ಯವನ್ನು ಇಡಲಾಗಿದೆ. ಕಲಿಯುವ ವಿಷಯಗಳು ಅನೇಕ. ಪ್ರತೀ ವಿಷಯದಲ್ಲೂ ಆ ವಯಸ್ಸಿನ ಮಗು ನೆನಪಿನಲ್ಲಿಟ್ಟುಕೊಳ್ಳಲಾರದಷ್ಟು ಮಾಹಿತಿ. ಇವುಗಳನ್ನು ಕಲಿಯಲಿಕ್ಕೆ ಇರುವ ಅವಧಿ ಸಾಕಷ್ಟಿಲ್ಲ. ಆ ಅವಧಿಯಲ್ಲೂ ಮುಷ್ಕರಗಳು ನಡೆದುಬಿಟ್ಟರೆ, ಕಲಿಸುವ ಅಥವಾ ಕಲಿಯುವಿಕೆಯ ಅವಧಿ ಇನ್ನೂ ಕಡಿಮೆ ಆಗಾಗ್ಗೆ ನಡೆಯುವ ಪರೀಕ್ಷೆಗಳು,

ಸಮಾರಂಭಗಳು, ಹಬ್ಬಗಳು, ಜಾತ್ರೆಗಳು, ಮುಖಂಡರು ನಿಧನರಾದುದಕ್ಕೆ ರಜೆಗಳು, ಗಲಭೆ–ಗೊಂದಲಗಳು ಊರಲ್ಲಿ ಉಂಟಾದಾಗ ಕೊಡುವ ರಜೆಗಳಿಂದಾಗಿ, ಕಲಿಯುವ ಅವಧಿಯಲ್ಲಿ ಮತ್ತೂ ಕಡಿತ. ತಮಗೆ ಸಿಕ್ಕುವ ಕಡಿಮೆ ಅವಧಿಯಲ್ಲಿಯೇ ಶಿಕ್ಷಕರು ಹೇಗೋಮಾಡಿ ತಾವು ಕಲಿಸಬೇಕಾದ ಪಠ್ಯವನ್ನು ಮುಗಿಸಿದ ಶಾಸ್ತ್ರ ಮಾಡಿಬಿಡುತ್ತಾರೆ. ಹೀಗಾಗಿ ಪಠ್ಯ ಕಲಿಸದೇ ಸಾಕಷ್ಟು ಸಮಯ ಸಿಗದಿರುವಾಗ ಶಿಕ್ಷಕರು, ಮಕ್ಕಳ ನಡೆ–ನುಡಿಗಳ ಬಗ್ಗೆ, ನೈತಿಕ ಬೆಳವಣಿಗೆಯ ಬಗ್ಗೆ ಉದಾತ್ತ ವಿಚಾರಗಳನ್ನು ಅವರಲ್ಲಿ ಮೂಡಿಸುವ ಬಗ್ಗೆ ಸಮಯವನ್ನೆಲ್ಲಿಂದ ತರಬೇಕು? ಹಾಗಾಗಿ ಶಿಕ್ಷಣದ ಈ ಗುರಿಗಳು ಕೇವಲ ಹಾಳೆಗಳ ಮೇಲೆ ಇರುತ್ತವೆಯಷ್ಟೆ.

ಶಾಲೆಗಳು ಎದುರಿಸುತ್ತಿರುವ ಮತ್ತೊಂದು ಸಮಸ್ಯೆ ಜನಸಂಖ್ಯಾ ಸ್ಫೋಟ ಹಾಗೂ ಸಾರ್ವತ್ರಿಕ ಕಡ್ಡಾಯ ಶಿಕ್ಷಣದಿಂದುಂಟಾದ ಪರಿಣಾಮ, ಈ ಕಾರಣದಿಂದಾಗಿ ತರಗತಿಗಳಲ್ಲಿ ಮಕ್ಕಳ ಸಂಖ್ಯೆ ವಿಪರೀತ. ಸಂಖ್ಯೆಗನುಗುಣವಾಗಿ ಶಾಲೆಗಳ ಅಥವಾ ತರಗತಿಗಳ ಸಂಖ್ಯೆಯನ್ನು ಹೆಚ್ಚಿಸಲು ಶಿಕ್ಷಣಕ್ಕೆ ಮಿಸಲಿರುವ ಆರ್ಥಿಕ ಮಿತಿಯ ಅಡ್ಡಿ. ಹೀಗಾಗಿ ಕೆಲವು ಕಿರಿಯ ಹಾಗೂ ಹಿರಿಯ ಮಾಧ್ಯಮಿಕ ತರಗತಿಗಳಲ್ಲಿ ನೂರರಿಂದ ನೂರಿಪ್ಪತ್ತರವರೆಗೂ ವಿದ್ಯಾರ್ಥಿಗಳಿರುವ ಉದಾಹರಣೆಗಳಿವೆ, ಪ್ರಾಥಮಿಕ ಹಾಗೂ ಪೂರ್ವ ಪ್ರಾಥಮಿಕ ತರಗತಿಗಳಲ್ಲೂ ಎಪ್ಪತ್ತು ಎಂಭತ್ತು ಮಕ್ಕಳಿರುತ್ತಾರೆಂದ ಮೇಲೆ ಈ ಪರಿಸ್ಥಿತಿಯಲ್ಲಿ ಶಿಕ್ಷಕರು ಸಾಕಷ್ಟು ವೈಯಕ್ತಿಕ ಗಮನ ಕೊಡಬೇಕಾದ ವಯಸ್ಸಿನಲ್ಲೂ ಸಾಕಷ್ಟು ಗಮನ ಕೊಡಲು ಸಾಧ್ಯವಿಲ್ಲದ ಪರಿಸ್ಥಿತಿ, ಇಷ್ಟಲ್ಲದೆ ನಮ್ಮಲ್ಲಿ ಅನೇಕ ಏಕೋಪಾಧ್ಯಾಯ ಶಾಲೆಗಳು, ಒಂದೇ ಕೊಠಡಿಯಲ್ಲಿ ಎರಡು ಮೂರು ತರಗತಿಗಳನ್ನು ನಡೆಸಬೇಕಾದ ಪರಿಸ್ಥಿತಿಯೂ ಇರುವಾಗ ಶಿಕ್ಷಕರಿಗೆ ಇಡೀ ದಿನ ಮಕ್ಕಳನ್ನು ಗದ್ದಲ ಹಾಕದಂತೆ ನೋಡಿಕೊಳ್ಳುವುದರಲ್ಲೇ ಸಮಯ ಮುಗಿದು ಬಿಡುತ್ತದೆ. ಬಹಳ ಕಷ್ಟಪಟ್ಟು ಪಾಠ ಹೇಳಲಿಕ್ಕೆ ಸಮಯ ಮಾಡಿಕೊಳ್ಳಬೇಕಾಗುತ್ತದೆ. ಇನ್ನು ಅವರಿಗೆ ಸರಿಯಾಗಿ ಕಲಿಸುವುದಕ್ಕಾಗಲೀ, ಯೋಗ್ಯ ರೀತಿ–ನೀತಿಗಳ ಮಾರ್ಗದರ್ಶನ ಮಾಡಲಿಕ್ಕಾಗಲೀ, ಎಲ್ಲಿ ಸಾಧ್ಯ? ಅದಕ್ಕಾಗಿ ಬಹಳಷ್ಟು ಶಾಲೆಗಳಲ್ಲಿ ಪ್ರತೀ ಪಾಠಕ್ಕೆ ಸಂಬಂಧಿಸಿ, ಸಾಕಷ್ಟು ಮನೆಗೆಲಸ ಕೊಟ್ಟೇಬಿಡುತ್ತಾರೆ. ಅದಕ್ಕೆ ಉತ್ತರ ಕಲಿಸುವುದು ಮನೆಯಲ್ಲಿ ಪಾಲಕರ ಜವಾಬ್ದಾರಿ, ಮತ್ತೆ ಕೆಲವು ಶಾಲೆಗಳಲ್ಲಿ ಉತ್ತರಗಳನ್ನು ಕರಿಹಲಗೆಯ ಮೇಲೆ ಬರೆದುಬಿಡುತ್ತಾರೆ. ಕೆಲವು ಸಾರಿ, ಮಕ್ಕಳು ಅದನ್ನು ತಪ್ಪಾಗಿ ಕಾಪಿ ಮಾಡಿಕೊಂಡು ಹೋಗಿ ತಪ್ಪು ತಪ್ಪನ್ನೇ ಬಾಯಿಪಾಠ ಮಾಡಿಕೊಂಡು ಬರುವುದುಂಟು, ಮಕ್ಕಳು ಸರಿಯಾಗಿ ಕಲಿತಿದ್ದಾರೆಯೇ ಇಲ್ಲವೆ ಎಂಬುದನ್ನು

ನೋಡಲೂ ಶಿಕ್ಷಕರಿಗೆ ವೇಳೆಯ ಅಭಾವ, ಹೀಗಿರುವಾಗ ಶಾಲೆಯಲ್ಲಿ ಮಕ್ಕಳು ಸ್ವಂತ ವಿಚಾರ ಮಾಡುವ ಪ್ರವೃತ್ತಿಯನ್ನು ಹೇಗೆ ತಾನೆ ಬೆಳೆಸಿಕೊಳ್ಳಲು ಸಾಧ್ಯ?

ಶಾಲೆಯಲ್ಲಿ ಇತ್ತೀಚಿನ ದಿನಗಳಲ್ಲಿ ಮತ್ತೊಂದು ಪ್ರವೃತ್ತಿ ಹಬ್ಬಿದೆ. ಎಂದರೆ ಮಕ್ಕಳು ಪರೀಕ್ಷೆಯಲ್ಲಿ ಹೆಚ್ಚು ಅಂಕಗಳಿಸುವಂತೆ ಪ್ರೇರೇಪಿಸುವುದು. ಏಕೆಂದರೆ ಮಕ್ಕಳ ಭವಿಷ್ಯ ಅವರು ಗಳಿಸುವ ಅಂಕಗಳನ್ನು ಅವಲಂಬಿಸಿದೆ. ಅವರು ಉತ್ತಮ ಕೋರ್ಸ್‌ಗಳಿಗೆ ಪ್ರವೇಶ ಪಡೆಯಬೇಕಾದರೆ, ನೌಕರಿ ಪಡೆಯಬೇಕಾದರೆ, ಅವರು ಗಳಿಸಿರುವ ಅಂಕಗಳನ್ನೇ ಅಳತೆಗೋಲನ್ನಾಗಿ ಮಾಡಿದ್ದಾರೆ. ಹಾಗಾಗಿ ಶಾಲೆಯಲ್ಲಿ ಶಿಕ್ಷಕರು ಮನೆಯಲ್ಲಿ ಪಾಲಕರು, ಮಕ್ಕಳು ಹೆಚ್ಚೆಚ್ಚು ಅಂಕಗಳಿಸಲೆಂದು, ಪರೀಕ್ಷೆಯಲ್ಲಿ ಬರಬಹುದಾದ ಪ್ರಶ್ನೆಗಳನ್ನು ಊಹಿಸಿ, ಅವುಗಳಿಗೆ ಉತ್ತರವನ್ನು ಬರೆಯಿಸಿ ಅವುಗಳನ್ನು ಕಲಿಯುವುದರಲ್ಲೇ ಅವರ ವೇಳೆ ವ್ಯಯವಾಗುವಂತೆ ಮಾಡುತ್ತಾರೆ. ಆಗ ಮಕ್ಕಳು ಉಳಿದುದೇನನ್ನೂ ಕಲಿಯಲು ಅಸಮರ್ಥರಾಗಿ, ಉತ್ತರಗಳನ್ನು ಅರ್ಥಮಾಡಿಕೊಳ್ಳದೇ ಗೋಕ್ ಹಾಕುವುದರಲ್ಲೇ ತಮ್ಮ ಸಮಯವನ್ನು ವಿನಿಯೋಗಿಸುತ್ತಾರೆ. ಇದರ ಜೊತೆಗೆ ಕೆಲವು ಕೆಟ್ಟ ಗುಣಗಳನ್ನು ಕಲಿಯಲು ಈ ಹೆಚ್ಚು ಅಂಕಗಳಿಸುವ ಹುಚ್ಚು ಪ್ರೋತ್ಸಾಹಿಸುತ್ತದೆ. ಪರೀಕ್ಷೆಯಲ್ಲಿ ಕಳ್ಳತನದಿಂದ ಬೇರೆಯವರು ಬರೆದುದನ್ನು ಕಾಫಿಮಾಡುವುದು, ಉತ್ತರಗಳನ್ನು ಬರೆದುಕೊಂಡು ಹೋಗಿ ಪರೀಕ್ಷೆಯಲ್ಲಿ ಗುಟ್ಟಾಗಿ ನೋಡಿಕೊಳ್ಳುವುದು, ಪ್ರಶ್ನೆಪತ್ರಿಕೆ ಬರೆದವರನ್ನು ಪತ್ತೆ ಹೆಚ್ಚಿ, ಲಂಚಕೊಟ್ಟು ಪ್ರಶ್ನೆಗಳನ್ನು ಪಡೆಯುವುದು, ಪೇಪರ್ ತಿದ್ದುವ ಮಾಸ್ತರರನ್ನು ಒಳಗೆ ಮಾಡಿಕೊಂಡು ಹೆಚ್ಚು ಅಂಕ ಹಾಕಿಸಿಕೊಳ್ಳುವುದು ಮುಂತಾದ ದುಶ್ಚಟಗಳನ್ನು ಬೆಳೆಸಿಕೊಂಡು ಮುಂದೆ ತಾವೆಲ್ಲಿದ್ದರೂ ಸುಳ್ಳುತನ ಮೋಸ, ವಂಚನೆ, ಭ್ರಷ್ಟಾಚಾರದ ಮಾರ್ಗಗಳಿಂದ ಬದುಕುವ ಜೀವನ ಕ್ರಮ ಕಲಿಯುತ್ತಾರೆ. ಶಿಕ್ಷಕರ ಆಯ್ಕೆಯ ಕ್ರಮದಲ್ಲಿರುವ ಅನೇಕ ಲೋಪದೋಷಗಳಿಂದ ಅದಕ್ಷ ಶಿಕ್ಷಕರು ನೇಮಕಗೊಳ್ಳುವುದು ಇನ್ನೊಂದು ಕಾರಣ. ಹೀಗೆ ಇನ್ನು ಅನೇಕ ಪರಿಸ್ಥಿತಿಗಳ ಕಾರಣ, ಮಕ್ಕಳಲ್ಲಿ ಉತ್ತಮ ವ್ಯಕ್ತಿತ್ವ ರೂಪಿಸಲು ಇಂದಿನ ದಿನಗಳಲ್ಲಿ ಶಾಲೆಯು ಅಸಮರ್ಥವಾಗಿದೆ ಎಂದು ಹೇಳಬಹುದು.

**ಪಾಲಕರ ಪಾಲಿಗೆಷ್ಟು ?**

ಹೀಗೆ ಇಂದಿನ ಶಾಲೆಗಳು ನಮ್ಮ ಮಕ್ಕಳನ್ನು ಉತ್ತಮ ಪ್ರಜೆಗಳನ್ನಾಗಿ ರೂಪಿಸುವಲ್ಲಿ ಅಸಮರ್ಥವಾಗಿರುವ ಕಾರಣ ಪಾಲಕರೇ ಆ ಬಗ್ಗೆ ಹೆಚ್ಚು ಕಾಳಜಿ ವಹಿಸುವುದಗತ್ಯ. ಹೀಗಾಗಿ ಮಕ್ಕಳನ್ನು ಬೆಳೆಸುವಲ್ಲಿ ಪಾಲಕರ ಜವಾಬ್ದಾರಿ ಇಂದಿನ ದಿನಗಳಲ್ಲಿ ಮೊದಲಿಗಿಂತಲೂ ಹೆಚ್ಚು. ಹಿಂದಿನ ಕಾಲದಲ್ಲಿ ಬಹಳಷ್ಟು ಪಾಲಕರು ಅವಿದ್ಯಾವಂತರಾಗಿದ್ದರೂ, ಜೀವನ ನಿರ್ವಹಣೆಯ ಕೆಲಸದಲ್ಲಿ ಅವರಿಗೆ ಮಕ್ಕಳ

ಕಡೆ ಲಕ್ಷ್ಯ ಕೊಡಲು ಅಸಾಧ್ಯವಾಗಿದ್ದರೂ, ಸಾಮಾಜಿಕ ಸ್ಥಿತಿ ಉತ್ತಮವಾಗಿದ್ದುದರಿಂದ, ಸಾಮಾನ್ಯ ಕುಟುಂಬದ ಮಕ್ಕಳೂ ಸಾಮಾಜಿಕ ವ್ಯವಸ್ಥೆಯಲ್ಲಿದ್ದ ಆದರ್ಶಗಳ ಕಾರಣ, ಉನ್ನತ ವ್ಯಕ್ತಿತ್ವವನ್ನು ಪಡೆಯಲು ಸಾಧ್ಯವಾದ ಉದಾಹರಣೆಗಳು ಅನೇಕ. ಅಂತಹವುಗಳಲ್ಲಿ ಎದ್ದು ಕಾಣುವಂತಹ ಹೆಸರುಗಳು ಲಾಲ್‌ಬಹಾದ್ದೂರ್ ಶಾಸ್ತ್ರಿ, ವಲ್ಲಭಭಾಯ್ ಪಟೇಲ್, ಈಶ್ವರ ಚಂದ್ರ ವಿದ್ಯಾಸಾಗರ್, ಸರ್. ಎಸ್. ರಾಧಾಕೃಷ್ಣನ್ ರ್‍ಯಾಂಗ್ಲರ್ ಡಿ.ಸಿ. ಪಾವಟೆ ಮುಂತಾದವುಗಳು. ಆದರೆ ಈಗ ಅಂತಹ ಪರಿಸ್ಥಿತಿ ಇಲ್ಲ. ಮಕ್ಕಳು ಒಳ್ಳೆಯ ಮೌಲ್ಯಗಳನ್ನು ರೂಢಿಸಿಕೊಳ್ಳಲು ಬೇಕಾದ ಪರಿಸರವಾಗಲೀ, ಮಾರ್ಗದರ್ಶನವಾಗಲೀ ಉದಾಹರಣೆಯಾಗಲೀ ಸಮಾಜದಲ್ಲಿಲ್ಲ. ಒಳ್ಳೆಯತನವನ್ನು ಗುರುತಿಸಿ ಪ್ರೋತ್ಸಾಹಿಸುವವರು ಕಾಣುವುದು ಕಷ್ಟ. ದುಷ್ಟತನ ಮಾಡಿ ದಕ್ಕಿಸಿಕೊಳ್ಳುವವನು ಪ್ರಶಂಸೆಗೆ ಗುರಿಯಾಗುವ ಪರಿಸ್ಥಿತಿ, ಆದುದರಿಂದ ಪಾಲಕರೇ ತಮ್ಮ ಮಕ್ಕಳು ಪ್ರಜಾಪ್ರಭುತ್ವದ ಯೋಗ್ಯ ಪ್ರಜೆಗಳಾಗಿ ರೂಪುಗೊಳ್ಳಲು ಲಕ್ಷ್ಯಕೊಡಬೇಕಾಗಿದೆ. ಪ್ರಜಾಪ್ರಭುತ್ವದ ರಾಷ್ಟ್ರದಲ್ಲಿ ಪ್ರತಿಯೊಬ್ಬ ಪ್ರಜೆಯೂ ಜವಾಬ್ದಾರಿ ಅರಿತ ವ್ಯಕ್ತಿಯೂ, ಪ್ರಜಾಸತ್ತಾತ್ಮಕ ಆಡಳಿತ ವ್ಯವಸ್ಥೆಯ ಯಶಸ್ಸಿಗೆ ಸಹಾಯಕವಾದ ಮನೋಭಾವ ಉಳ್ಳವನೂ ಆಗಿರಬೇಕಾಗುತ್ತದೆ. ಅವನು ತನ್ನ ಪಾಲಿನ ಕರ್ತವ್ಯವನ್ನು ಕುಟುಂಬ, ಸಮಾಜ ಹಾಗೂ ರಾಷ್ಟ್ರದಲ್ಲಿ ಸಮರ್ಥವಾಗಿ, ಗೊಂದಲಗಳಿಗೆ ಆಸ್ಪದವಿಲ್ಲದಂತೆ, ನಿರ್ವಹಿಸಲು ಸಾಧ್ಯವಾಗುವಂತಹ ರೀತಿಯಲ್ಲಿ ಬೆಳೆಯಬೇಕು. ಅವನ ನಡೆ, ನುಡಿ ಎಲ್ಲೆಡೆಯೂ, ಎಲ್ಲ ಪ್ರಸಂಗಗಳಲ್ಲೂ ಶಿಸ್ತಿನಿಂದ ಕೂಡಿರಬೇಕು, ಇಲ್ಲದಿದ್ದಲ್ಲಿ ಪರಿಸ್ಥಿತಿ ಹದಗೆಟ್ಟು, ಅರಾಜಕತೆ ಎಲ್ಲೆಲ್ಲೂ ತಲೆ ಎತ್ತಿ, ಭ್ರಷ್ಟಾಚಾರಿಗಳಿಂದ, ಭ್ರಷ್ಟಾಚಾರವೇ ಶಿಷ್ಟಾಚಾರ ಎನ್ನುವಂತಾಗಿ, ಮೌಲ್ಯಗಳು ಮೂಲೆಗುಂಪಾಗಿ, ಜನತೆಗೆ ನೆಮ್ಮದಿಯಾಗಲೀ, ಶಾಂತಿಯಾಗಲೀ ಇಲ್ಲವಾಗುತ್ತದೆ. ಆದುದರಿಂದ ಪಾಲಕರು ಮಕ್ಕಳ ಬಗ್ಗೆ ಬಾಲ್ಯದಿಂದಲೇ ನಿಗಾವಹಿಸಿ ಉತ್ತಮ ರೀತಿಯ ಪರಿಸರವನ್ನು ಮಾರ್ಗದರ್ಶನವನ್ನು ಅನುಭವಗಳನ್ನು ಆಯಾ ವಯಸ್ಸಿಗೆ ತಕ್ಕಂತೆ ಹಂತಹಂತವಾಗಿ, ದೊರೆಯುವಂತೆ ಮಾಡಿ, ಸಮತೋಲನವಾದ ದಕ್ಷ ವ್ಯಕ್ತಿತ್ವ ರೂಪುಗೊಳ್ಳುವಂತೆ ಮಾಡಬೇಕು. ಆಗ ಮಕ್ಕಳು ಕುಟುಂಬದಲ್ಲಿ ತಾವು ನೆಮ್ಮದಿಯಿಂದ ಇರುತ್ತಾ, ಇತರರ ನೆಮ್ಮದಿಗೂ ಸಹಕರಿಸುತ್ತಾ ಬಾಳುವುದಲ್ಲದೆ ಸಮಾಜ ಹಾಗೂ ರಾಷ್ಟ್ರ ಜೀವನದಲ್ಲೂ ಸಮಸ್ಯೆಗಳಿಲ್ಲದಂತಹ ಸುವ್ಯವಸ್ಥೆ ಉಂಟಾಗುವಲ್ಲಿ ಸಹಾಯಕರಾಗಬಲ್ಲರು. ಇಲ್ಲದಿದ್ದರೆ, ಸಮಸ್ಯೆಗಳಿಲ್ಲದೆಡೆ ಸಮಸ್ಯೆಗಳನ್ನು ಹುಟ್ಟುಹಾಕುತ್ತಾ ಎಲ್ಲರ ನೆಮ್ಮದಿಗೆ ಭಂಗ ತರುವಂತಹವರಾಗುತ್ತಾರೆ.

**ಪಾಲಕರ ಜವಾಬ್ದಾರಿಗಳು.**

ಮಕ್ಕಳು ಶಾಲೆಯಲ್ಲಿ ತಮ್ಮ ಓದನ್ನು ಸುಗಮವಾಗಿ ಸಮರ್ಥವಾಗಿ ಕಲಿಯಲು

ಪಾಲಕರು ಸಹಾಯಕರಾಗಬೇಕಲ್ಲದೆ, ಮಕ್ಕಳು ತಮ್ಮನ್ನು ತಾವೇ ಅರಿತುಕೊಳ್ಳುವ ಆತ್ಮನಿರೀಕ್ಷಣೆ ಮಾಡಿಕೊಳ್ಳುವ ಮನೋಭಾವ ಮೂಡಿಸಬೇಕು. ಅಂದರೆ ತಮ್ಮಲ್ಲಿರುವ ದೋಷಪೂರಿತ ನಡತೆಗಳೇನಾದರೂ ಇದ್ದಲ್ಲಿ ಅದನ್ನು ತಾವೇ ಗುರುತಿಸಿಕೊಂಡು, ಅವುಗಳನ್ನು ಸರಿಪಡಿಸಿಕೊಳ್ಳುವ ಮನೋಭಾವ ಉಳ್ಳವರಾಗಬೇಕು. ಯಾರಾದರೂ ಅವರ ದೋಷಗಳ ಕಡೆಗೆ ಗಮನಸೆಳೆದರೆ, ಅವು ನಿಜವಾಗಿದ್ದಲ್ಲಿ ಕುಪಿತರಾಗದೆ, ಅವನ್ನು ಹೋಗಲಾಡಿಸಿಕೊಳ್ಳಲು ಪ್ರಯತ್ನಿಸುವಂತಾಗಬೇಕು- ದೋಷಗಳನ್ನು ಒಪ್ಪಿಕೊಳ್ಳುವ ಮನೋಭಾವ, ಅವರು ದೊಡ್ಡ ವ್ಯಕ್ತಿತ್ವ ಪಡೆದುಕೊಳ್ಳುವ ಮೊದಲ ಮೆಟ್ಟಿಲು, ಮಕ್ಕಳು ಯಾವುದೇ ಕೆಲಸಕ್ಕೆ ಸಹಕರಿಸುವ ಸಕಾರಾತ್ಮಕ ಗುಣ ರೂಢಿಸಿಕೊಳ್ಳಬೇಕು. ಬೇರೆಯವರಲ್ಲಿ ಇರುವ ಒಳಿತನ್ನು ನೋಡಿ ಹೊಟ್ಟೆಕಿಚ್ಚು ಪಡದೆ, ಸಂತೋಷಪಡುವ ದೊಡ್ಡಗುಣವಿದ್ದು ತಾನೂ ಹಾಗೆ ಆಗಬೇಕೆಂಬ ಆರೋಗ್ಯಕರ ಸ್ಪರ್ಧಾಗುಣವನ್ನು ಅಳವಡಿಸಿಕೊಳ್ಳುವುದಗತ್ಯ. ಕೆಲಸಗಳನ್ನು ಅಚ್ಚುಕಟ್ಟಾಗಿ ವೇಳೆಗೆ ಸರಿಯಾಗಿ ಮಾಡಬಲ್ಲ ಮಗು ಮುಂದೆ ಜೀವನದಲ್ಲಿ ಯಶಸ್ಸು ಪಡೆಯಬಲ್ಲನು. ಜವಾಬ್ದಾರಿ ಕೆಲಸಗಳನ್ನು ಹಿಂಜರಿಕೆ ಇಲ್ಲದೆ ತಾನೇ ಸ್ವಇಚ್ಛೆಯಿಂದ ಮುಂದಾಗಿ ಹೋಗಿ ಹೊರಬಲ್ಲವನು ನಾಯಕನಾಗಬಲ್ಲನು, ಎಂತಹ ಕಷ್ಟ ಸಮಯದಲ್ಲೂ ಸಮತೋಲನವನ್ನು ಕಳೆದುಕೊಳ್ಳದೆ, ಭಾವಾವೇಗಗಳನ್ನು ನಿಯಂತ್ರಣದಲ್ಲಿ ಇಟ್ಟುಕೊಳ್ಳಲು ಸಮರ್ಥನಾದವನು, ತಪ್ಪಿಗೆ ಆಸ್ಪದವಿಲ್ಲದಂತೆ ಬದುಕಲು ಸಾಧ್ಯ. ಅತಿಯಾದ ಸಂತೋಷ ಹಾಗೂ ದು:ಖದ ಸಮಯಗಳಲ್ಲಿ ಮನುಷ್ಯ ತನ್ನ ಮೇಲಿನ ನಿಯಂತ್ರಣ ಕಳೆದುಕೊಳ್ಳುತ್ತಾನೆ. ಆದರೆ, ಸರಿಯಾದ ಮಾರ್ಗದರ್ಶನದಲ್ಲಿ ಬೆಳೆದ ವ್ಯಕ್ತಿ, ಎಂತಹ ಸಮಯದಲ್ಲೂ ಅವಿಚಾರಿಯಾಗಿ ವರ್ತಿಸದೆ ಸಂಯಮದಿಂದಿರಬಲ್ಲನು, ಒಳಿತು ಕೆಡಕುಗಳ ವಿಮರ್ಶಾಶಕ್ತಿಯು, ಯಾವುದೇ ರೀತಿಯ ಅನ್ಯಾಯಕ್ಕಾಗಲೀ, ಅಪವ್ಯಯಕ್ಕಾಗಲೀ ಆಸ್ಪದಕೊಡುವುದಿಲ್ಲ. ಕುಂದು-ಕೊರತೆಗಳಿಲ್ಲದ, ತಂತ್ರ-ಕುತಂತ್ರಗಳಿಲ್ಲದ, ಕುಟಿಲನೀತಿ ಇಲ್ಲದ ಸುಸಂಸ್ಕೃತ, ಸರಳ ವ್ಯಕ್ತಿಯಾಗುತ್ತಾನೆ. ಇಂತಹವನಿಂದ ಸುಳ್ಳು, ನಟನೆ, ದ್ವೇಷ, ಹೊಟ್ಟೆಕಿಚ್ಚು ಮುಂತಾದ ಸಣ್ಣತನಗಳು ಯಾವಾಗಲೂ ದೂರ, ಹೀಗೆ ಸದ್ಗುಣಗಳನ್ನು ಅಳವಡಿಸಿಕೊಂಡ ವ್ಯಕ್ತಿಗಳು ಸಮಾಜದಲ್ಲಿ ತುಂಬಿದಲ್ಲಿ ಎಲ್ಲರ ಹಿತವೂ ಸಾಧಿತವಾಗುತ್ತದೆ. ಇವುಗಳನ್ನು ಸರಿಯಾಗಿ ಅರಿತುಕೊಂಡು ಅವುಗಳು ಮಕ್ಕಳಲ್ಲಿ ಒಳಗೊಳ್ಳುವಂತೆ ಬೆಳೆಸಬೇಕು.

**ಪಾಲಕರು ಗಮನದಲ್ಲಿಡಬೇಕಾದ ಅಂಶಗಳು:**

ಈ ರೀತಿಯಾಗಿ ಮಕ್ಕಳನ್ನು ಬೆಳೆಸಬೇಕಾದರೆ, ಪಾಲಕರು, ಕೇವಲ ಆಹಾರ ಉಡುಗೆಗಳನ್ನು ಒದಗಿಸಿ, ಶಾಲೆಗೆ ಬೇಕಾದ ಫೀ ಕೊಟ್ಟು ಕಳಿಸಿದರೆ ಸಾಲದು,

ಎಲ್ಲವನ್ನೂ ಹಿತ–ಮಿತವರಿತು ಮಾಡಬೇಕು. ಕೆಲವು ಪಾಲಕರು ಸಾಕಷ್ಟು ಸಮಯವಾಗಲೀ, ಹಣವಾಗಲೀ ತಿಳಿವಳಿಕೆಯಾಗಲೀ ಇಲ್ಲದ ಕಾರಣ, ಮಕ್ಕಳ ಬೆಳವಣಿಗೆಗೆ ಯಾವುದೇ ಮಹತ್ವಕೊಡದೆ, ಪ್ರಾಣಿಗಳು ತಮ್ಮ ಮರಿಗಳನ್ನು ಸಾಕಿದಂತೆ ಸಾಕುತ್ತಾರೆ. ಆದರೆ ಕೆಲವರು ಇದ್ದವರೂ ಸಹ ಮಕ್ಕಳನ್ನು ಸರಿಯಾಗಿ ಬೆಳೆಸದ ಉದಾಹರಣೆಗಳೂ ಅನೇಕ. ಅತಿಯಾದ, ಪೌಷ್ಟಿಕಾಂಶವಿರುವ ಸತತವಾದ ಆಹಾರ ಸೇವನೆ, ಸಾಕಷ್ಟು ಆಹಾರವಿಲ್ಲದೇ ಪೌಷ್ಟಿಕಾಂಶದ ಕೊರತೆಯಿಂದ ಬಳಲುವ ಮಗುವಿಗಿಂತಲೂ ಹೆಚ್ಚಿನ ತೊಂದರೆಗಳಿಗೆ ಈಡುಮಾಡುತ್ತದೆ. ತಮ್ಮ ಮಗು ಬಹಳ ಬುದ್ಧಿವಂತನಾಗಬೇಕೆಂಬ ದುರಾಸೆಯಿಂದ ಕೆಲವು ಪಾಲಕರು ಮಕ್ಕಳ ಸಹಜ ಬೆಳವಣಿಗೆಗೆ ಅವಶ್ಯಕವಾದ ಮೂಲಭೂತ ಸ್ವಾತಂತ್ರ್ಯಕ್ಕೆ ಆಸ್ಪದವಿಲ್ಲದಷ್ಟು ರೀತಿಯಲ್ಲಿ ಎಳೇಕಂದಮ್ಮಗಳಿಗೆ ಇಲ್ಲದ ನಿಯಮಗಳನ್ನು ಹೇರುತ್ತಾರೆ. ಒಳಿತು–ಕೆಡಕುಗಳ ತಿಳಿವಳಿಕೆ ಇನ್ನೂ ಮೊಳೆಯದ ಅವಧಿಯಲ್ಲಿ ಅತಿಯಾದ ಶಿಕ್ಷೆ, ಅತಿಯಾದ ಶಿಸ್ತು, ಮಕ್ಕಳ ಮಾನಸಿಕ ಆರೋಗ್ಯಕ್ಕೆ ಕಾಲಾನುಕ್ರಮದಲ್ಲಿ ಧಕ್ಕೆಯನ್ನುಂಟುಮಾಡಬಹುದು, ಮಕ್ಕಳ ವೈಯಕ್ತಿಕ ಬೆಳವಣಿಗೆಗೆ ಆಸ್ಪದವಿಲ್ಲದ ರೀತಿಯಲ್ಲಿ ಪ್ರತಿಯೊಂದು ವಿಷಯದಲ್ಲೂ ಬಲಾತ್ಕಾರಮಾಡುವ, ತಮ್ಮ ಅನಿಸಿಕೆಗಳನ್ನೇ ಹೇರುವ ಪಾಲಕರು ಮಗುವಿಗೆ ಒಳತಿಗಿಂತ ಹೆಚ್ಚಾಗಿ ಕೇಡನ್ನೇ ಮಾಡುತ್ತಾರೆ. ಕೆಲವು ಪಾಲಕರು ತಾವು ಮಾತ್ರ ಮನಬಂದಂತೆ ಅಶಿಸ್ತಿನಿಂದ ಬಾಳುತ್ತ, ಮಗುವಿಗೊಂದು ಕೆಟ್ಟ ಉದಾಹರಣೆಯಂತೆ ಜೀವಿಸುತ್ತಾ, ಮಗು ಮಾತ್ರ ಅತ್ಯುತ್ತಮ ರೀತಿಯಿಂದ ತಾವು ಯಾವಾಗ, ಹೇಗೆ ನಿರೀಕ್ಷಿಸುತ್ತಾರೊ ಆ ರೀತಿ ಇರಬೇಕೆಂದು  ಬಯಸುತ್ತಾರೆ. ಸ್ವಾತಂತ್ರ್ಯಾಭಿವ್ಯಕ್ತಿಗೆ ಅವಕಾಶವಿಲ್ಲದಂತೆ ಮನಸ್ಸನ್ನು ಮೇಲಿಂದ ಮೇಲೆ ಹತ್ತಿಕ್ಕುತ್ತಾ ಮಗುವನ್ನು ಬೆಳೆಸಿದರೆ, ಆ ಮಗು ಸಮಸ್ಯಾತ್ಮಕ ವ್ಯಕ್ತಿಯಾಗಿ ರೂಪುಗೊಳ್ಳುತ್ತದೆ. ಅಂತಹ ವ್ಯಕ್ತಿ ಮುಂದೆ ತಾನೂ ಅನೇಕ ಸಮಸ್ಯೆಗಳಿಂದ ಒದ್ದಾಡುತ್ತಾ, ಇತರರಿಗೂ ಸಮಸ್ಯೆಗಳನ್ನುಂಟುಮಾಡುತ್ತಾ ನೆಮ್ಮದಿ ಸಿಗದಂತಹ ವಾತಾವರಣ ಸೃಷ್ಟಿಸುತ್ತಾನೆ. ಕೆಲವು ತಾಯಂದಿರು ತಮಗೆ ಸಿಟ್ಟುಬಂದಾಗ ಮಗುವನ್ನು ವಿನಾಕಾರಣ ಹೊಡೆಯುವ ಮೂಲಕ, ಬಯ್ಯುವ ಮೂಲಕ ಮಾನಸಿಕ ಹಿಂಸೆಗೆ ಗುರಿಮಾಡಿ, ಮಗುವಿನ ಮನಸ್ಸು ಸಂದಿಗ್ಧತೆಗೆ, ಅಸಹಾಯಕತೆಗೆ ಒಳಗಾಗುವಂತೆ ಮಾಡುತ್ತಾರೆ. ಆಗ ಮಗು ಮನಸ್ಸನ್ನು ಹತ್ತಿಕ್ಕಿಕೊಂಡು, ಮುದುಡಿಕೊಂಡು, ಏನು ಮಾಡಲೂ ಧೈರ್ಯವಿಲ್ಲದೆ ಆತ್ಮವಿಶ್ವಾಸವನ್ನೇ ಕಳೆದುಕೊಳ್ಳುತ್ತದೆ. ಏನನ್ನೂ ಸಾಧಿಸಲಾರದವನಾಗುತ್ತದೆ. ಮಕ್ಕಳು ಎಷ್ಟೇ ಬುದ್ಧಿವಂತರಿದ್ದರೂ, ಆತ್ಮ ವಿಶ್ವಾಸವಿಲ್ಲದಿದ್ದರೆ ಅವರ ಬುದ್ಧಿವಂತಿಕೆ, ದಕ್ಷತೆಗಳು ಇದ್ದಲ್ಲಿಯೇ ಕಮರಿ ಕೆಲಸಕ್ಕೆ ಬಾರದಂತಹವುಗಳಾಗುತ್ತವೆ. ಕೆಲವು ಕುಟಿಲನೀತಿಯ ಮಹಿಳೆಯರು ತಿಳಿವಳಿಕೆಯೇ ಇನ್ನೂ ಬೆಳೆಯದ ಮಗುವನ್ನು ತಮ್ಮ ತಂತ್ರಗಳನ್ನು

ಕಾರ್ಯರೂಪಕ್ಕೆ ತರಲು ಸಾಧನವನ್ನಾಗಿ ಉಪಯೋಗಿಸಿಕೊಂಡಾಗ, ಇದರ ಅರ್ಥವೇ ಗೊತ್ತಿಲ್ಲದ ಮಗು ತಬ್ಬಿಬ್ಬಾಗಿ, ಸಂದಿಗ್ಧತೆಯಿಂದ ನರಳಿ ಮನೋರೋಗಿಯಾಗುವ ಸಂಭವವೂ ಉಂಟು. ಅನೇಕಸಾರಿ ಸಿಟ್ಟುಗೊಂಡ ತಾಯಿ, ಮಗುವಿನ ಮೇಲೆ ತನ್ನ ಸಿಟ್ಟನ್ನು ವಿನಾಕಾರಣ ತೋರಿಸಿದಾಗ, ತಾನು ಮಾಡಿದ ತಪ್ಪೇನೆಂದು ಅರಿಯದ ಅದರ ಮನಸ್ಸು ಘಾಸಿಗೊಳ್ಳುತ್ತದೆ. ಇಂತಹ ಪರಿಸ್ಥಿತಿಗಳು ಕಾಲೇಜುಗಳಲ್ಲಿರುವ ರ್‍ಯಾಗಿಂಗ್ ಪದ್ಧತಿಗಳಿಗಿಂತ ಅಮಾನವೀಯ.

ಕೆಲವು ಪಾಲಕರು ತಮ್ಮ ಮಕ್ಕಳು ಬೇರೆಯ ಮಕ್ಕಳೊಡನೆ ಆಡುವುದರಿಂದ ಕೆಟ್ಟಗುಣ ಕಲಿಯುತ್ತಾರೆಂದು ಮನೆಯಲ್ಲೇ ಕೂಡಿಟ್ಟುಬಿಡುತ್ತಾರೆ. ಇದರಿಂದ ಸಮವಯಸ್ಕರ ಸಹವಾದವಿಲ್ಲದ ಮಗು ಒಂಟಿತನದ ಅನುಭವದಿಂದ ಬಳಲುತ್ತದೆ. ಎಲ್ಲರೊಡನೆ ಕೂಡಿ ಬೆಳೆಯುವ, ಸ್ನೇಹಯುತ ನಡವಳಿಕೆಯನ್ನು ಪಡೆಯುವ ಅವಕಾಶದಿಂದ ಆ ಮಗು ವಂಚಿತವಾಗಿ, ಅಷ್ಟರಮಟ್ಟಿನ ಕೊರತೆಯು ಮಗುವಿನ ವ್ಯಕ್ತಿತ್ವದಲ್ಲಿ ಉಳಿಯುವಂತಾಗುತ್ತದೆ. ಕೆಲಸವಿಲ್ಲದ ಕೆಲವು ತಾಯಂದಿರು, ಮಗುವನ್ನು ಒಂದು ಕ್ಷಣವೂ ಬಿಡದೆ ಮಗುವಿನ ಎಲ್ಲ ಚಟುವಟಿಕೆಗಳನ್ನು ಗಮನಿಸುತ್ತಾ, ಪ್ರತಿಕ್ಷಣವೂ ಅದನ್ನು ನಿಯಂತ್ರಿಸುತ್ತಾ, ನಿಯಮಗಳನ್ನು ಹೇರುತ್ತಾ, ಸ್ವತಂತ್ರವಾದ ಅನಿಸಿಕೆಗಳಿಗೆ ಕಲಿಯುವಿಕೆಗೆ ಅವಕಾಶವಿಲ್ಲದಂತೆ ಮಾಡುವುದಲ್ಲದೆ, ಮಗುವಿಗೆ ಮಾನಸಿಕ ಹಿಂಸೆಯಾಗುವಂತೆ ಮಾಡುತ್ತಾರೆ. ಇದರಿಂದ ಅದಕ್ಕೆ ಒಳಿತಿಗಿಂತ, ಕೆಡುಕೆ ಆಗುತ್ತದೆ. ಮಗು ತನ್ನ ಅಸಮಾಧಾನವನ್ನು ಅಸಹಾಯಕತೆಯಿಂದ ಭಾವನೆಗಳನ್ನು ಹತ್ತಿಕ್ಕಿಕೊಂಡರೂ, ಅದು ನಂತರ ಅನಪೇಕ್ಷಿತ ರೀತಿಯಲ್ಲಿ ವ್ಯಕ್ತವಾಗುತ್ತದೆ. ಮಗುವಿನ ನಡವಳಿಕೆ ಇತರರಿಗೆ ಬೇಸರ ತರುತ್ತದೆ. ಆದುದರಿಂದ ಪಾಲಕರಾದವರು ತಮ್ಮ ಉದ್ದೇಶ ಒಳಿತಾಗಿದ್ದರೂ ಅದನ್ನು ಸಾಧಿಸಲು ಅನುಸರಿಸುವ ರೀತಿ ಸರಿಯೇ, ತಪ್ಪೇ ಎಂಬುದನ್ನು ಮೊದಲು ಅರ್ಥಮಾಡಿಕೊಳ್ಳಬೇಕು. ತಪ್ಪು ಅನುಸರಿಸುವ ಮಾರ್ಗಗಳ ಪರಿಣಾಮ ಏನಾಗುತ್ತದೆಯೆಂಬ ಸರಿಯಾದ ತಿಳಿವಳಿಕೆ ಹೊಂದಿರಬೇಕು. ಮಕ್ಕಳಲ್ಲಿ ಶಿಸ್ತುಂಟಾಗಬೇಕು. ಅವರು ತಪ್ಪು ಮಾಡದಂತೆ ಎಚ್ಚರ ವಹಿಸಬೇಕು; ತಪ್ಪಾದಾಗ ತಿದ್ದಬೇಕು, ಆದರೆ ಅವುಗಳನ್ನು ಮಾಡುವಾಗ ಎಚ್ಚರದಿಂದ, ಮಗುವಿನ ಮನಸ್ಸು ಮುದುಡದಂತೆ, ಮಗುವಿನ ಮನಸ್ಸಿಗೆ ಒಪ್ಪಿಗೆಯಾಗುವಂತೆ, ಆಯಾ ವಯಸ್ಸಿಗೆ ಸೂಕ್ತವಾದ ರೀತಿಯಲ್ಲಿ ಪ್ರೀತಿಯ ಮೂಲಕ ಕಾರ್ಯಗತ ಮಾಡುವುದು ಅತ್ಯಂತ ಅವಶ್ಯಕ.

ಮಗು ಎಳೆಯದಾಗಿರುವಾಗ ಅದನ್ನು ಹೂವಿನಂತೆ ಮೃದುವಾಗಿ ನೋಡಿಕೊಳ್ಳಬೇಕು. ಒಂದು ವರ್ಷವಾಗುವವರೆಗೆ ಮಗುವಿನ ಚೇಷ್ಟೆಗಳು ಅಷ್ಟೊಂದು

ಇರುವುದಿಲ್ಲ. ಆಗ ಅದಕ್ಕೆ ಅಪಚನವಾಗದಂತೆ, ಅನಾರೋಗ್ಯವಾಗದಂತಹ ರೀತಿಯಲ್ಲಿ ಆಹಾರ, ಉಡುಗೆ- ತೊಡುಗೆ, ಸ್ವಚ್ಛ ಹವೆ ದೊರೆಯುವಂತೆ ನೋಡಿಕೊಂಡರಾಯ್ತು. ಆದರೆ ಮಗು ದೈಹಿಕವಾಗಿ ಬೆಳೆದಂತೆ, ಬೌದ್ಧಿಕವಾಗಿಯೂ ಬೆಳೆಯುತ್ತದೆ, ಚಲನವಲನದ ಜೊತೆಗೆ ಕುತೂಹಲ ಪ್ರವೃತ್ತಿಯೂ ಬೆಳೆಯುವುದರಿಂದ ಮಗು ಎಲ್ಲದನ್ನೂ ಹಿಡಿಯಲು ಸಿಕ್ಕಿದ್ದನ್ನು ಬಾಯಲ್ಲಿ ಹಾಕಿಕೊಳ್ಳಲು ಪ್ರಯತ್ನಿಸುತ್ತದೆ. ಏನಾದರೂ ಸಿಕ್ಕರೆ ಅದನ್ನು ಎತ್ತಿಹಾಕುವುದು, ಶಬ್ದವಾದಾಗ ಮೇಲಿಂದ ಮೇಲೆ ಹಾಗೆಯೇ ಮಾಡುವುದು, ಮಾಡಲು ಬಿಡದಿದ್ದಲ್ಲಿ, ಅಳುವುದು, ಹಠಮಾಡುವುದು· ಸ್ವಾಭಾವಿಕ, ಅಂತಹ ಮಗುವಿನ ಆಟಗಳಿಗೆ ಅಪಾಯವಿಲ್ಲದ ರೀತಿಯಲ್ಲಿ ಅವಕಾಶಮಾಡಿಕೊಟ್ಟು ಸ್ವಾಭಾವಿಕ ಬೆಳವಣಿಗೆಗೆ ಪ್ರೋತ್ಸಾಹ ನೀಡಬೇಕು. ಒರಟು ಮಾತಿನಿಂದ ಗದರಿಸುವ ಮೂಲಕವಾಗಲೀ, ಹೊಡೆಯುವುದರ ಮೂಲಕವಾಗಲೀ, ಮಗುವಿನ ಮನಸ್ಸಿಗೆ ನೋವಾಗುವಂತೆ, ಮಾಡಬಾರದು, 'ತಪ್ಪು' ಅಥವಾ 'ಸರಿ' ಯ ಕಲ್ಪನೆಯೇ ಇರದ ವಯಸ್ಸಿಗೆ ಮಗುವಿಗೆ ಇಂತಹ ವರ್ತನೆಗಳಿಂದ ಮನಸ್ಸಿಗೆ ತುಂಬಾ ನೋವಾಗುತ್ತದೆ. ಆಗ ಅಸಹಾಯಕತೆಯಿಂದ ಅವು ಅಳುತ್ತವೆ. ಅಥವಾ ಮನಸ್ಸನ್ನು ಹತ್ತಿಕ್ಕಿಕೊಂಡು ಸುಮ್ಮನಾದರೂ ಒಳಗೇ ನರಳುತ್ತವೆ. ಇಂತಹ ಸ್ಥಿತಿ ಮಗುವಿನ ಮಾನಸಿಕ ಸ್ವಾಸ್ಥ್ಯಕ್ಕೆ ಮಾರಕ ಎಂಬುದನ್ನು ಪಾಲಕರು ತಿಳಿದು ವರ್ತಿಸಬೇಕು. ಜಾಣತನದಿಂದ, ಪ್ರೀತಿಯ ಮಾತುಗಳಿಂದ ಅನಪೇಕ್ಷಣೀಯವಾದುದನ್ನು ಮಾಡದಂತೆ ನೋಡಿಕೊಳ್ಳಬೇಕು. ಆದಷ್ಟು ಮಟ್ಟಿಗೆ, ಮಕ್ಕಳು ತಪ್ಪು ಮಾಡಲಿಕ್ಕೆ ಸಾಧ್ಯವಿಲ್ಲದಂತಹ ಪರಿಸರದಲ್ಲಿ ಬಿಟ್ಟು ತಾವು ತಮ್ಮ ಕೆಲಸದಲ್ಲಿ ಮಗ್ನವಾಗಿದ್ದುಕೊಂಡೇ ಮಕ್ಕಳನ್ನು ಗಮನಿಸಬೇಕು. ಸಣ್ಣ ಪುಟ್ಟ ಸಂಗತಿಗಳಿಗೆ ತಲೆ ಹಾಕದೆ, ಹಾನಿಕಾರಕವಾದುದೇನನ್ನಾದರೂ ಮಾಡಿದಾಗ ಮಾತ್ರ ಪ್ರೀತಿಯಿಂದ ತಿಳಿಹೇಳಿದಾಗ ಮಗವೂ ಸುಲಭವಾಗಿ ಒಪ್ಪಿಕೊಳ್ಳುತ್ತದೆ. ಇಂತಹ ರೀತಿಗಳಿಂದ ಹಿರಿಯರಿಗೂ ತೊಂದರೆ ಇರುವುದಿಲ್ಲ. ಮಕ್ಕಳಿಗೂ ಕಿರಿ-ಕಿರಿಯಾಗುವುದಿಲ್ಲ. ಮೇಲಿಂದ ಮೇಲೆ ಅದಕ್ಕೆ ಕಿರಿ-ಕಿರಿಯಾಗುವಂತೆ ಮಾಡುವ ಹಿರಿಯರ ವರ್ತನೆ ಮಗುವಿನ ಮಾನಸಿಕ ಬೆಳವಣಿಗೆಗೆ ಅಹಿತಕಾರಿ. ತಮ್ಮ ಬೇಕು-ಬೇಡಗಳನ್ನು ಮಗುವಿನ ಮೇಲೆ ಒತ್ತಾಯದಿಂದ ಹೇರುವುದಕ್ಕಿಂತ, ಬೇಕಾದುದನ್ನೇ ಮಾಡುವಂತಹ ಪರಿಸರ, ಪರಿಸ್ಥಿತಿ ನಿರ್ಮಿಸುವುದೊಳ್ಳೆಯದು. ಆದಷ್ಟು ಮಟ್ಟಿಗೆ ಗದರಿಸುವಂತಹ, ಬೇಡವೆಂದು ಹೇಳುವಂತಹ ಸನ್ನಿವೇಶಗಳು ಉಂಟಾಗದಂತೆ ನೋಡಿಕೊಳ್ಳುವುದು ಮಗುವಿನ ಆರೋಗ್ಯಕರ ಬೆಳವಣಿಗೆಗೆ ಸಹಕಾರಿ, ಬಾಲ್ಯದಲ್ಲಿ ಹೀಗೆ ಬೆಳೆದ ಮಗು ನಂತರದ ವಯಸ್ಸಿನಲ್ಲಿ ತಪ್ಪು ಮಾಡದು, ತಪ್ಪು ಮಾಡಲವಕಾಶವಿಲ್ಲದೆ ಒಳ್ಳೆಯದನ್ನೇ ಮಾಡುತ್ತಾ ಬಂದ ಮಗುವಿಗೆ, ಒಳ್ಳೆಯದಾಗಿ ನಡೆಯುವ ರೂಢಿಯೇ ಬಂದುಬಿಡುತ್ತದೆ. ಆದರೆ ನಮ್ಮ ಕೌಟುಂಬಿಕ

ಹಾಗೂ ಸಾಮಾಜಿಕ ವ್ಯವಸ್ಥೆಯಲ್ಲಿ, ನೂರಕ್ಕೆ ನೂರಷ್ಟು ಪರಿಪೂರ್ಣವಾಗಿ ಒಳಿತಾಗಿರುವ ಸನ್ನಿವೇಶಗಳನ್ನು ಒದಗಿಸಲು ಸಾಧ್ಯವಿಲ್ಲ. ಆದುದರಿಂದ ಮೂರು ವರ್ಷದ ನಂತರದ ವಯಸ್ಸಿನಲ್ಲಿ, ಒಳಿತು-ಕೆಡಕುಗಳನ್ನು ಅರ್ಥಮಾಡಿಕೊಳ್ಳುವ ಶಕ್ತಿ ಸ್ವಲ್ಪಮಟ್ಟಿಗೆ ಬಂದಿರುವುದರಿಂದ, ಆಗ ಒಳ್ಳೆಯ ಮಾತುಗಳಿಂದ ಮೃದುವಾಗಿ ತಿದ್ದಬೇಕು, ಸಿಟ್ಟು, ಒರಟುತನ ಸಲ್ಲದು, ಮಗು ಮೊಂಡಾಟ ತೋರಿಸಿದರೆ, ನಮ್ಮ ನಡವಳಿಕೆಯೇ ಮಗುವಿನಲ್ಲಿ ಮೊಂಡಾಟ ಹುಟ್ಟಲು ಕಾರಣವಾಗಿದೆಯೆಂದು ಪಾಲಕರು ತಮ್ಮ ತಪ್ಪನ್ನು ಸರಿಪಡಿಸಿಕೊಳ್ಳಬೇಕು.

ಮೊದಲು ತಮ್ಮನ್ನೇ ತಾವು ತಿದ್ದಿಕೊಳ್ಳಬೇಕು.

ಮಕ್ಕಳಲ್ಲಿ ಒಳ್ಳೆಯ ಗುಣಗಳನ್ನು ಬೆಳೆಯಿಸಬೇಕೆಂದು ಪಾಲಕರು ಬಯಸಿದರೆ ಮೊದಲು ತಮ್ಮಲ್ಲಿ ಒಳ್ಳೆಯ ಗುಣಗಳನ್ನು ರೂಢಿಸಿಕೊಳ್ಳಬೇಕು, ಮಗು ಅಳಬಾರದು, ಸಿಟ್ಟಿಗೇಳಬಾರದು, ಶಿಸ್ತಿನಿಂದ ಇರಬೇಕು. ಸಮಯಕ್ಕೆ ಸರಿಯಾಗಿ ಕೆಲಸ ಮಾಡಬೇಕು ಎಂಬ ಅಪೇಕ್ಷೆಯುಳ್ಳವರು, ಹೀಗೆ ಮಾಡು, ಹಾಗೆ ಮಾಡು ಎಂದು ಒತ್ತಾಯಿಸುವುದಕ್ಕಿಂತ, ತಾವೇ ಹಾಗೆ ಬದುಕಬೇಕು, ಪರಿಸರದಲ್ಲೂ ಹಾಗೆ ರೂಢಿ ಮಾಡಿಕೊಳ್ಳುವ ಅನುಕೂಲ ಒದಗಿಸಬೇಕು. ಮಕ್ಕಳಲ್ಲಿ ಅನುಕರಣೆಯ ಗುಣ ಹೆಚ್ಚು, ಅವಕ್ಕೆ ಹೇಳಿದಂತೆ ಮಾಡುವುದಕ್ಕಿಂತ, ನೋಡಿದಂತೆ, ಮಾಡುವುದು ಹೆಚ್ಚು ಇಷ್ಟ, ಅವಕ್ಕೆ ಅರಿವಿಲ್ಲದಂತೆ, ತಮ್ಮ ವಾತಾವರಣದಲ್ಲಿರುವುದನ್ನು ತಮ್ಮಲ್ಲಿ ಅಳವಡಿಸಿಕೊಂಡು ಬಿಡುತ್ತವೆ. ನಾವು ಕೆಟ್ಟ ಉದಾಹರಣೆಯಾಗಿ ಬಾಳಿದರೆ ಕೆಟ್ಟದ್ದನ್ನು ಕಲಿಯುತ್ತವೆ, ಒಳ್ಳೆಯದನ್ನೇ ಬಾಲ್ಯದಿಂದಲೂ ಮನೆಯಲ್ಲಿ ನೋಡುತ್ತಿದ್ದರೆ ಒಳ್ಳೆಯದನ್ನೇ ಮೈಗೂಡಿಸಿಕೊಳ್ಳುತ್ತಾರೆ. ತಾಯಿ ಸುಳ್ಳು ಮಾತನಾಡುವವಳಾಗಿ, ಮಗು ಸತ್ಯವನ್ನೇ ಹೇಳುವಂತಹ ರೀತಿಯನ್ನು ಬಯಸಿದರೆ ಸಾಧ್ಯವಿಲ್ಲ. ಮನೆಯಲ್ಲಿ ತಂದೆ-ತಾಯ್ಗಳು, ತಮಗೆ ಬೇಡವಾದವರನ್ನು ದ್ವೇಷಿಸುವಂತೆ ಪ್ರೋತ್ಸಾಹಿಸುತ್ತಿದ್ದು, ಎಲ್ಲರೊಡನೆ. ಸ್ನೇಹ, ಪ್ರೀತಿ, ವಿಶ್ವಾಸದಿಂದಿರಬೇಕೆಂದು ನಿರೀಕ್ಷಿಸುವುದು ಬೇವು ಬಿತ್ತಿ ಮಾವನ್ನು ಬಯಸಿದಂತಾಗುತ್ತದೆ. ಹಿರಿಯರ ಒಂದೊಂದು ಮಾತೂ, ಒಂದೊಂದು ನಡವಳಿಕೆಯೂ ಅದನ್ನು ಗಮನಿಸುತ್ತ ಬೆಳೆಯುತ್ತಿರುವ ಮಗುವಿನ ಮೇಲೆ ಪರಿಣಾಮ ಬೀರುತ್ತದೆಂಬುದನ್ನು ಪಾಲಕರು ಮರೆಯಬಾರದು. ಇಷ್ಟು ಚಿಕ್ಕಮಗು, ಅದಕ್ಕೇನು ಗೊತ್ತಾಗುತ್ತದೆಂದು ಅನೇಕ ಪಾಲಕರು ಚಿಕ್ಕ ವಯಸ್ಸಿನ ಮಕ್ಕಳ ಇರುವಿಕೆಯನ್ನು ಗಮನಿಸದೇ ವರ್ತಿಸುತ್ತಾರೆ. ಪ್ರತ್ಯಕ್ಷವಾಗಿ ಅದರ ಪರಿಣಾಮ ಕಾಣದಿರಲೂಬಹುದು. ಆದರೆ ಎಲ್ಲವೂ ಮಕ್ಕಳ ಮೇಲೆ, ಮಗುವಿಗಾಗಲೀ, ಮನೆಯವರಿಗಾಗಲೀ, ಅರಿವಾಗದಂತೆ ತನ್ನ ಪ್ರಭಾವ ಬೀರಿರುತ್ತದೆಯೆಂಬ ಅರಿವಿಟ್ಟುಕೊಂಡು ಪಾಲಕರು ವರ್ತಿಸುವುದು ಅತ್ಯಂತ ಅವಶ್ಯಕ.

ಮುಖ್ಯವಾಗಿ, ಹುಟ್ಟಿದಾಗಿನಿಂದಲೂ ಮಗುವಿನ ಸಮೀಪವೇ ಇರುವ ತಾಯಿ ವಿವೇಕಿಯೂ, ಸುಜ್ಞಾನಿಯೂ, ಮಕ್ಕಳನ್ನು ಬೆಳೆಸುವ ರೀತಿಯನ್ನು ತಿಳಿದವಳೂ ಅನುಭವಿಕರ ಸಲಹೆಗಳನ್ನು ಸ್ವೀಕರಿಸುವ ವಿಶಾಲಬುದ್ಧಿಯವಳೂ ಆಗಿರುವುದು ಅವಶ್ಯ. ಇಂದಿನ ದಿನಗಳಲ್ಲಿ ಪಾಲಕರ ಜವಾಬ್ದಾರಿಯು ಹಿಂದೆಂದಿಗಿಂತಲೂ ಹೆಚ್ಚಾಗಿದೆ.

■

## ೫. ಶಾಲೆ, ಮಗು ಮತ್ತು ಮನೆ.

ಆಡು ಮುಟ್ಟದ ಸೊಪ್ಪಿಲ್ಲ ಎಂದಂತೆ ಇಂದು ಶಿಕ್ಷಣದ ಬಗ್ಗೆ ಮಾತನಾಡದ ಜನರಿಲ್ಲ ಎನ್ನಬಹುದು, ಸದ್ಯದ ಪರಿಸ್ಥಿತಿಯಲ್ಲಿ ಶಿಕ್ಷಣದ ಬಗ್ಗೆ ಮಾತನಾಡುವುದು ಎಂದರೆ, ಟೀಕಿಸುವುದು ಎಂದೇ ಆಗಿಬಿಟ್ಟಿದೆ. ಎಲ್ಲರೂ ಟೀಕಿಸಲಿಕ್ಕೆ ಕಾರಣವಿಲ್ಲದೆಯೂ ಇಲ್ಲ. ಸದ್ಯದ ನೈತಿಕ, ಸಾಮಾಜಿಕ, ಬೌದ್ಧಿಕ, ಆರ್ಥಿಕ ಮೊದಲಾದ ಸಮಸ್ಯೆಗಳು ವಿದ್ಯಾರ್ಥಿಗಳ ಸಮಸ್ಯೆಗಳೇ ಆಗಿವೆ.

ವಿದ್ಯಾರ್ಥಿಗಳ ಅಶಿಸ್ತು ನಮ್ಮ ರಾಷ್ಟ್ರದ ಒಂದು ದೊಡ್ಡ ಸಾಮಾಜಿಕ ವ್ಯಾಧಿಯೇ ಆಗಿದೆ. ಆದರೆ ಇದಕ್ಕೆ ಕಾರಣ ವಿದ್ಯಾರ್ಥಿಗಳು ಮಾತ್ರವಲ್ಲ ಎಂಬುದನ್ನು ಎಲ್ಲರೂ ಅರಿಯಬೇಕು. ಯುವಕರಲ್ಲಿ ಕಾಣುವ ಅಶಿಸ್ತು, ಅತೃಪ್ತಿ, ಅಶಾಂತಿ ಮತ್ತು ಬೇಜವಾಬ್ದಾರಿ ನಡವಳಿಕೆಗೆ ಅವರವಲ್ಲದ ಅನೇಕ ಕಾರಣಗಳಿವೆ. ಮತ್ತು ಅವು ಇಂದಿನ ಕಾರಣಗಳಲ್ಲ, ಅವರು ಹುಟ್ಟಿದಂದಿನಿಂದಲೂ ಅವರೊಡನೆಯೇ ಬೆಳೆದುಕೊಂಡು ಬಂದವುಗಳು, ಸಮಾಜ, ಪಾಲಕರು, ಶಿಕ್ಷಕರೂ ಅದಕ್ಕೆ ಬಾಧ್ಯಸ್ಥರಾಗಿದ್ದಾರೆ.

ಮಗು ಬೆಳೆಯುವ ವಾತಾವರಣ ಹಿತಕರವಿರಬೇಕು. ಅದರ ಪರಿಸರದಲ್ಲಿ ಪ್ರೀತಿಗೆ ಕೊರತೆ ಇರಬಾರದು. ಮನದ ಆಸೆಗಳನ್ನು ಅದಮಿಟ್ಟುಕೊಳ್ಳುವ ಪ್ರಸಂಗಗಳು ಬರದಿರಬೇಕು. ವಯಸ್ಸಿಗೆ ಸಹಜವಾದ ಯೋಗ್ಯ ಅನಿಸಿಕೆಗಳ ಪೂರೈಕೆ ತೃಪ್ತಿಕರವಾಗುವಂತೆ ತಂದೆ-ತಾಯಿಯರು ಎಚ್ಚರವಹಿಸಬೇಕು. ಮಕ್ಕಳನ್ನು ಶಾಲೆಗೆ ಸೇರಿಸಿದ ನಂತರ ಮಕ್ಕಳ ಬೆಳವಣಿಗೆಯ ಜವಾಬ್ದಾರಿ ಮನೆಯಲ್ಲಿ ತಂದೆ - ತಾಯಿಯರು, ಶಾಲೆಯಲ್ಲಿ ಉಪಾಧ್ಯಾಯರದೂ ಆಗುತ್ತದೆ. ಶಾಲೆ ಎಂದರೆ ಮಕ್ಕಳ ತಲೆಯಲ್ಲಿ ವಿಷಯ ತುಂಬುವ ಕಾರ್ಖಾನೆಯಲ್ಲವೆಂಬುದನ್ನು ಪಾಲಕರೂ, ಶಿಕ್ಷಕರು ಮೊದಲು ತಿಳಿದಿರಬೇಕಾದುದು ಅತ್ಯಗತ್ಯ.

'Education is no in no longer a process of giving knowledge. It means the learner in the best development of his capacities for an efficient living in an almost revolutionized society'.

ಆದುದರಿಂದ ಮಗುವಿನ ಸರ್ವತೋಮುಖ ಬೆಳವಣಿಗೆಗ ಅವಕಾಶ ಮಾಡಿಕೊಟ್ಟು, ಅವನು ತಾನಿರುವ ಸಮಾಜದಲ್ಲಿ, ತನ್ನ ಜೀವನದಲ್ಲಿ ಸಮಸ್ಯೆಗಳುಂಟಾಗಲು ತಾನೇ ಕಾರಣನಾಗದಂತೆ ನಡೆಯುವುದಲ್ಲದೆ, ಇರುವ ಸಮಸ್ಯೆಗಳನ್ನು ಸಮರ್ಥವಾಗಿ ಬಗೆಹರಿಸಬಲ್ಲ ಕರ್ತೃತ್ವ ಶಕ್ತಿ ಪಡೆಯುವಂತೆ ಎಚ್ಚರಿಕೆ ವಹಿಸಬೇಕು. ಈ ಕಾರ್ಯವನ್ನು ಶಾಲೆಯೊಂದೇ ಮಾಡಲು ಸಾಧ್ಯವಿಲ್ಲ. ನಮ್ಮಲ್ಲಿ ಬಹುಪಾಲು ಪಾಲಕರು ಅವಿದ್ಯಾವಂತರೂ, ಅಜ್ಞಾನಿಗಳೂ ಸರಿಯಾದ ವಾತಾವರಣ ಉಂಟುಮಾಡಲು ಅಸಾಧ್ಯವಾದ ಬಡತನವುಳ್ಳವರೂ ಆಗಿರುವುದರಿಂದ ಬರೀ ಅವರದೇ ಈ ಜವಾಬ್ದಾರಿ ಎಂದು ಹೇಳುವುದು ಮೂರ್ಖತನವಾಗುತ್ತದೆ.

ಈ ದಿಶೆಯಲ್ಲಿ ಶಾಲೆಗಳು ಮಹತ್ತರ ಪಾತ್ರವಹಿಸಬೇಕು. ನಿಜ, ಆದರೆ ಅಲ್ಲಿ ವಿಧ ವಿಧವಾದ ಪರಿಸರಗಳಿಂದ ಬಂದ ಮಕ್ಕಳಿರುತ್ತಾರೆ. ಒಂದೊಂದು ಮಗುವಿನ ರೀತಿ, ನೀತಿ, ನಡೆ–ನುಡಿಯೂ ಒಂದೊಂದು ವಿಧ. ಅವುಗಳ ಸ್ವಭಾವಕ್ಕೆ ಕಾರಣ ತಿಳಿದುಕೊಳ್ಳಬೇಕಾದರೆ ಅವರ ಮನೆಯ ಪರಿಸರ ತಿಳಿದುಕೊಳ್ಳಬೇಕು. ಮಕ್ಕಳಲ್ಲಿ ಕೆಲವೊಂದು ಸುಧಾರಣೆ ಮಾಡಬೇಕಾದರೆ, ಶಿಸ್ತು ಬೆಳೆಸಬೇಕಾದರೆ ಮನೆಯಲ್ಲಿ ಪಾಲಕರ ಸಹಕಾರವೂ ಬೇಕು. ಮಕ್ಕಳು ಸ್ವಚ್ಛವಾಗಿ ಶಾಲೆಗೆ ಬರಬೇಕು, ಹೊತ್ತಿಗೆ ಸರಿಯಾಗಿ ಬರಬೇಕು ಗೃಹಕೃತ್ಯದ ಪಾಠಗಳನ್ನು ತಪ್ಪದೇ ಮಾಡಿಕೊಂಡು ಬರಬೇಕು ಎಂಬ ಶಾಲೆಯ ನಿಯಮ ಪಾಲಿಸಬೇಕಾದರೆ ಪಾಲಕರೂ ಮನೆಯಲ್ಲಿ ಇವಕ್ಕೆಲ್ಲಾ ಬೇಕಾದ ಸೌಲಭ್ಯ ಒದಗಿಸಿ, ನಿಯಮಗಳನ್ನು ಪಾಲಿಸುವಂತೆ ತಾವೂ ಲಕ್ಷ್ಯ ವಹಿಸಬೇಕಾಗುತ್ತದೆ.

ಮುಂದೆ ಮಕ್ಕಳು ಕಿಶೋರಾವಸ್ಥೆಗೆ ಬಂದಾಗ ಶಿಕ್ಷಕರ ಹಾಗೂ ಪಾಲಕರ ಜವಾಬ್ದಾರಿ ಇನ್ನೂ ಹೆಚ್ಚಾಗುತ್ತದೆ. ಈ ವಯಸ್ಸಿನಲ್ಲಿ ಮಕ್ಕಳಲ್ಲಿ ಮಾನಸಿಕ, ದೈಹಿಕ, ಬೌದ್ಧಿಕವಾಗಿ ತೀವ್ರತರ ಬೆಳವಣಿಗೆ ಉಂಟಾಗಿ ಮಕ್ಕಳ ಮನಸ್ಸಿನಲ್ಲಿ ತುಮುಲ, ಘರ್ಷಣೆ ಪ್ರಾರಂಭವಾಗುತ್ತದೆ. ಅನೇಕ ರೀತಿಯ ಭಾವನೆಗಳು ಮೂಡುತ್ತದೆ, ವಿಧ ವಿಧವಾದ ಪ್ರಶ್ನೆಗಳು ಏಳುತ್ತವೆ, ಹೀಗಾಗಿ ಅವರ ನಡವಳಿಕೆಯಲ್ಲಿಯೂ ವಿಚಿತ್ರ ರೀತಿಯ ಪರಿವರ್ತನೆಯನ್ನು ಕಾಣುತ್ತೇವೆ, ಈ ಸಂದರ್ಭದಲ್ಲಿ ಪಾಲಕರು ಹಾಗೂ ಶಿಕ್ಷಕರು ಇವು ವಿಪರೀತ ನಡವಳಿಕೆಗಳೆಂದು ಅಸಮಾಧಾನಗೊಳ್ಳದೆ, ಸಿಟ್ಟಿಗೇಳದೆ, ತಾಳ್ಮೆಯಿಂದ ಸಮರ್ಪಕ ಮಾರ್ಗದರ್ಶನವನ್ನು ಅಪರೋಕ್ಷವಾಗಿ ತಮ್ಮ ನಡೆ–ನಡಿಗಳಿಂದಲೇ ತೋರಿಸಬೇಕಲ್ಲದೆ ಬರೀ ಉಪದೇಶ ಸಲ್ಲದು. ಈ ಕಾಲದಲ್ಲಿ ಅವರಲ್ಲಿ ಉಂಟಾಗುವ ಅಮಿತವಾದ ಉತ್ಸಾಹ ಮತ್ತು ಸಾಮರ್ಥ್ಯವನ್ನು ಸದುಪಯೋಗಪಡಿಸಿಕೊಳ್ಳುವಂತಹ ಅವಕಾಶಗಳನ್ನೊದಗಿಸಬೇಕು. ಅವರ ಸಮಸ್ಯೆಗಳಿಗೆ ಸೂಕ್ತ ಪರಿಹಾರವೂ, ಅತೃಪ್ತಿ, ಅಸಮಾಧಾನಗೊಳ್ಳದಂತಹ

ಎಚ್ಚರಿಕೆಯೂ ಅಗತ್ಯ. ಇಲ್ಲದಿದ್ದಲ್ಲಿ ಕೆಲವು ಸಹಜ ಪ್ರವೃತ್ತಿಗಳು ಪ್ರಬಲವಾಗಿ, ಮಕ್ಕಳನ್ನು ತಪ್ಪು ದಾರಿಗೆ ಹೋಗುವಂತೆ ಮಾಡಬಹುದು. ಒಮ್ಮೆ ತಪ್ಪು ಮಾಡಿದರೆಂದರೆ ಅವರ ಮನಸ್ಸಿನಲ್ಲಿ ಒಳಿತು ಕೆಡಕುಗಳ ಘರ್ಷಣೆ ಪ್ರಾರಂಭವಾಗಿ ಆ ವಿದ್ಯಾರ್ಥಿಯ ಮನಶ್ಶಾಂತಿಯೇ ಕಲಕಿ ಹೋಗಿಬಿಡುತ್ತದೆ, ಆಗ ಅವನಿಗೆ ಬೇರಿನ್ನಾವುದರ ಕಡೆಗೂ ಲಕ್ಷ್ಯವಾಗಲೀ ಆಸಕ್ತಿಯಾಗಲೀ ಉಳಿಯುವುದಿಲ್ಲ. ಬೇಗ ಸಿಟ್ಟಿಗೇಳುವುದೂ, ಸಣ್ಣ ಸಣ್ಣ ಕಾರಣಗಳಿಗೆ ಜಗಳವಾಡುವುದು, ಅವಿಧೇಯನಾಗಿ ನಡೆಯುವುದು, ಬೇರೆಯವರಿಗೆ ಕಿರುಕುಳ ಕೊಡುವುದೂ, ಬೇರೆಯವರನ್ನೂ ನೋಡಿ ಅಸಹನೆಗೊಳ್ಳುವುದೂ ಮುಂತಾದ ದುಷ್ಟ ಪ್ರವೃತ್ತಿಗಳು ಮೊಳೆತು ಅವನು ಸಮಸ್ಯಾತ್ಮಕ ವ್ಯಕ್ತಿಯಾಗಿ, ಉಳಿದವರಿಗೆ ತೊಂದರೆ ಕೊಡುವುದಷ್ಟೇ ಅಲ್ಲದೆ, ತಾನೂ ದಾರುಣವಾದ ನೋವನ್ನು ಸಣ್ಣ ಸಣ್ಣ ಕಾರಣಗಳಿಂದಲೂ ಅನುಭವಿಸುತ್ತಾನೆ, ಹೀಗಾದ ಯುವಕರೇ ಮುಂದೆ ಸಮಾಜದಲ್ಲಿ ಘಾತುಕವಾದ ಕೃತ್ಯಗಳಲ್ಲಿ ತೊಡಗುವರು. ಅಂತಹವರನ್ನು ಬಹಳ ಎಚ್ಚರಿಕೆಯಿಂದ ಮಾರ್ಗಕ್ಕೆ ತರಬೇಕಾಗುತ್ತದೆ. ಹೀಗೆ ಮಕ್ಕಳು ದುರ್ಮಾರ್ಗಪ್ರವೃತ್ತರಾದ ನಂತರ ಜಾಗ್ರತರಾಗುವುದಕ್ಕಿಂತ, ಹಾಗಾಗದಂತೆ ನೋಡಿಕೊಳ್ಳುವುದು ಅಗತ್ಯ, ಹೀಗೆ ನೋಡಿಕೊಳ್ಳುವುದು ಪಾಲಕರ ಹಾಗೂ ಶಿಕ್ಷಕರ ಜೋಡು ಹೊಣೆಗಾರಿಕೆಯಾಗಿದೆ. ಶಾಲೆಯಲ್ಲಿ ಮಕ್ಕಳ ಅವಶ್ಯಕತೆಗಳೇನು ಎಂಬುದನ್ನು ತಿಳಿದುಕೊಳ್ಳಲು ಪಾಲಕರು ಶಾಲೆಯೊಡನೆ ಸಂಬಂಧವಿಟ್ಟುಕೊಂಡಿರಬೇಕು. ಮಕ್ಕಳ ಸಮಸ್ಯಾತ್ಮಕ ನಡವಳಿಕೆಯ ಕಾರಣಗಳನ್ನು ತಿಳಿಯಲು ಮನೆಯ ಪರಿಸ್ಥಿತಿಯನ್ನು ಶಿಕ್ಷಕರು ತಿಳಿದುಕೊಳ್ಳಬೇಕಾಗುತ್ತದೆ ಹೀಗಾಗಿ ಶಿಕ್ಷಕರು ಪಾಲಕರೊಡನೆ ಸಂಪರ್ಕವಿಟ್ಟುಕೊಳ್ಳಬೇಕು. ಹೀಗೆ ಶಾಲೆಗೂ ಮನೆಗೂ ಉತ್ತಮವಾದ ಸಂಪರ್ಕವಿದ್ದು, ಶಿಕ್ಷಕರೂ ಪಾಲಕರೂ ವಿಚಾರ ವಿನಿಮಯ ಮಾಡಿಕೊಂಡು, ಮಕ್ಕಳ ಕುಂದುಕೊರತೆ, ಬೇಕು-ಬೇಡಗಳನ್ನು ಸರಿಯಾಗಿ ಅರ್ಥ ಮಾಡಿಕೊಂಡು ಇಬ್ಬರೂ ಎಚ್ಚರಿಕೆ ವಹಿಸಿದರೆ ಮಕ್ಕಳು ಸಮತೋಲನ ವ್ಯಕ್ತಿತ್ವವನ್ನು ಹೊಂದುತ್ತಾರೆ. ಸಮಾಜದಲ್ಲಿ ಅಶಿಸ್ತಿಗೆ ಅವಕಾಶವಿರುವುದಿಲ್ಲ.

ಆದರೆ ನಮ್ಮ ದೇಶದಲ್ಲಿ ಬಹುಮಂದಿ ಪಾಲಕರು ಶಾಲೆಗೆ ಮಕ್ಕಳನ್ನು ಸೇರಿಸಿಬಿಟ್ಟರೆ ತಮ್ಮ ಕರ್ತವ್ಯ ಮುಗಿಯಿತು ಎಂದು ಶಾಲೆಗೆ ಸೇರಿಸಿ ಕೈಕಟ್ಟಿ ಕುಳಿತುಬಿಡುತ್ತಾರೆ. ಮಕ್ಕಳು ಸರಿಯಾಗಿ ನಡೆಯದಿದ್ದರೆ, ಓದಿನಲ್ಲಿ ಸರಿಯಾದ ಪ್ರಗತಿ ತೋರಿಸದಿದ್ದರೆ ತಮ್ಮಲ್ಲೇನಾದರೂ ತಪ್ಪಿದೆಯೇ, ಶಾಲೆಯಲ್ಲೇನಾದರೂ ಅದಕ್ಕೆ ಪೂರಕವಾದ ಕಾರಣಗಳಿರಬಹುದೇ ಎಂದು ಯೋಚಿಸಿಲೂ ಹೋಗುವುದಿಲ್ಲ. ತಪ್ಪೆಲ್ಲಾ ಮಗುವಿನದೇ ಎಂದು ತಿಳಿದು ಅವನನ್ನೇ ದೂಷಿಸಿ ದಂಡಿಸುತ್ತಾರೆ. ಇದರಿಂದ ಮಕ್ಕಳ ಮನಸ್ಸಿಗೆ ನೋವಾಗಿ ಅವರಲ್ಲಿ ಸಮಸ್ಯಾತ್ಮಕ ನಡವಳಿಕೆಗಳು ಮತ್ತೂ ಹೆಚ್ಚುತ್ತವೆ.

ಕೆಲವು ಪಾಲಕರು ಪ್ರತಿಯೊಂದಕ್ಕೂ ಶಾಲೆ ಹಾಗೂ ಶಿಕ್ಷಕರನ್ನೇ ಹೊಣೆ ಮಾಡಿ, ಮಾತೆತ್ತಿದರೆ, ಶಾಲೆಗೆ ಹೋಗಿ ಶಿಕ್ಷಕರೊಡನೆ ಜಗಳ ಕಾಯುತ್ತಾರೆ. ತಮ್ಮ ಮಗುವಿನ ವ್ಯಕ್ತಿತ್ವ ವಿಕಸನಕ್ಕೆ, ತಮ್ಮ ಹೊಣೆಗಾರಿಕೆಯ ಅಗತ್ಯ ಎಂಬುದನ್ನು ಸಂಪೂರ್ಣ ಮರೆತುಬಿಡುವರು, ಹಾಗಾಗಿ ಯಾವಾಗಲೂ ಮಕ್ಕಳ ಮುಂದೆ ಶಾಲೆಯನ್ನೂ, ಶಿಕ್ಷಕರನ್ನೂ ಟೀಕಿಸಿ, ಮಕ್ಕಳಿಗೆ ಆ ಬಗ್ಗೆ ಗೌರವವಾಗಲೀ ಆಸಕ್ತಿಯಾಗಲೀ ಇಲ್ಲದಂತೆ ಮಾಡುತ್ತಾರೆ. ಹಾಗಾದಾಗಲೂ ಮಕ್ಕಳ ವ್ಯಕ್ತಿತ್ವ ಸಮಸ್ಯಾತ್ಮಕವಾಗುತ್ತದೆ.

ಅಂದರೆ ಶಾಲೆಗಳು ಪಾಲಕರೊಡನೆ ಸಂಪರ್ಕವಿಟ್ಟುಕೊಂಡು ಮಕ್ಕಳ ಶ್ರೋಯೋಭಿವೃದ್ಧಿಗೆ ಶ್ರಮಿಸಲು ತುಂಬಾ ಉತ್ಸುಕರಾಗಿರುವ ಸನ್ನಿವೇಶಗಳೇ ಎಲ್ಲೆಲ್ಲೂ ಇವೆ ಎಂದು ಹೇಳಲೂ ಬರುವುದಿಲ್ಲ. ಅನೇಕ ವಿದ್ಯಾವಂತ ಪಾಲಕರು ತಮ್ಮ ಮಕ್ಕಳ ಸಮಸ್ಯೆಗಳನ್ನು ವಿವರಿಸಲು ಹೋದಾಗ ತಮ್ಮ ಬಗೆಗೆ ಮನೆಯಲ್ಲಿ ಮಕ್ಕಳು ದೂರುತ್ತಾರೆ ಎಂದು ಬಗೆದು, ಶಿಕ್ಷಕರು ಆ ಮಕ್ಕಳನ್ನು ಮಲತಾಯಿ ಧೋರಣೆಯಿಂದ ನಡೆಸಿಕೊಂಡ ಉದಾಹರಣೆಗಳಿಗೂ ಕೊರತೆಯಿಲ್ಲ. ಆದುದರಿಂದ ಅನೇಕ ಪಾಲಕರು ತಾವು ಹೋದರೆ ತಮ್ಮ ಮಕ್ಕಳಿಗೆ ಒಳಿತಾಗುವುದಕ್ಕಿಂತ ಕೆಡಕೆಲ್ಲಾಗುವುದೋ ಎಂಬ ಭಯದಿಂದ ಅಸಹಾಯಕರಾಗಿ, ಇದ್ದುದಕ್ಕೇ ಹೊಂದಿಕೊಂಡು ಹೋಗಲು ಮಕ್ಕಳಿಗೇ ಬುದ್ಧಿವಾದ ಹೇಳುತ್ತಾರೆ. ಅಸಹಾಯಕತೆಯಿಂದ ಹೊಂದಿಕೊಂಡು ಹೋಗಬೇಕಾದ ಪ್ರಸಂಗ ಬಂದಾಗ, ಬೆಳೆಯುವ ವಯಸ್ಸಿನ ಮಕ್ಕಳ ಮನಸ್ಸಿನ ಮೇಲೆ ಅಗಾಧವಾದ ದುಷ್ಪರಿಣಾಮ ಉಂಟಾಗಿ ಆ ಮಕ್ಕಳು ಯುವಕರಾದಾಗ ಎಲ್ಲದಕ್ಕೂ ಪ್ರತಿಭಟಿಸುವ ಮನೋಭಾವ ಬೆಳೆಸಿಕೊಳ್ಳಬಹುದು.

ಇದಕ್ಕೆಲ್ಲಾ ಸೂಕ್ತ ಪರಿಹಾರವೆಂದರೆ ಪ್ರತಿ ಶಾಲೆಯಲ್ಲೂ ಪಾಲಕರು ಶಾಲೆಯೊಡನೆ ಪರಿಣಾಮಕಾರಿಯಾದ ಸಂಬಂಧವನ್ನು ಬೆಳೆಸಿಕೊಳ್ಳಲು ವಿಚಾರ ವಿನಿಮಯ ಮಾಡಿಕೊಳ್ಳಲು ಅನುಕೂಲವಾದ ವಾತಾವರಣ, ಈ ದಿಶೆಯಲ್ಲಿ ಅನೇಕ ಶಾಲೆಗಳು ವಿಧ ವಿಧವಾದ ಏರ್ಪಾಟು ಮಾಡಿಕೊಂಡಿವೆ. ಕೆಲವು ಶಾಲೆಗಳಲ್ಲಿ ಪಾಲಕರ ದಿನಾಚರಣೆ ಮಾಡಿದರೆ, ಕೆಲವು ಶಾಲೆಗಳು ಪಾಲಕರ ಸಪ್ತಾಹವನ್ನಾಚರಿಸುತ್ತವೆ. ಮತ್ತೆ ಕೆಲವು ಶಾಲೆಗಳು ಪ್ರತಿ ತಿಂಗಳೂ ಮಕ್ಕಳ 'ಪ್ರಗತಿ ಪತ್ರ' ವನ್ನು ಪಾಲಕರ ಸಹಿಗೆಂದು ಮನೆಗೆ ಕಳುಹಿಸಿಕೊಡುತ್ತವೆ. ಒಂದು ದಿನ ಪಾಲಕರನ್ನು ಶಾಲೆಗೆ ಕರೆಸುವುದರಿಂದಾಗಲೀ, ಒಂದು ವಾರ ಬಿಡುವಿಲ್ಲದ ಕಾರ್ಯಕ್ರಮಗಳನ್ನು ಹಾಕಿಕೊಂಡು ಅವರನ್ನು ಸಂದರ್ಶಿಸುವುದರಿಂದಲಾಗಲೀ, ಯಾಂತ್ರಿಕವಾಗಿ 'ಪ್ರಗತಿ ಪತ್ರ' ಕ್ಕೆ ಸಹಿ ಮಾಡಿಸಿ ತರಿಸುವುದರಿಂದಲಾಗಲೀ,

ಬೇಕಾದ ಫಲ ದೊರೆಯುವುದಿಲ್ಲ. ಪ್ರತಿ ಶಾಲೆಯಲ್ಲಿಯೂ ಪಾಲಕರ ಸಂಘವಿರಬೇಕು. ಅದು ವಾರಕ್ಕೆ ಒಮ್ಮೆಯಾದರೂ ಶಾಲೆಯಲ್ಲಿ ಸೇರಬೇಕು. ಅಲ್ಲಿ ತಮ್ಮ ಮಕ್ಕಳ ಬೆಳವಣಿಗೆಯ ಬಗೆಗೆ ಸರಿಯಾದ ಜ್ಞಾನವಿಲ್ಲದ ಪಾಲಕರಿಗೆ ತಮ್ಮ ಜವಾಬ್ದಾರಿಗಳೇನು ಎಂದು ತಿಳಿಸಿ ಕೊಡುವ ವ್ಯವಸ್ಥೆ ಇರಬೇಕು. ಮುಖ್ಯವಾಗಿ ತಾಯಂದಿರಿಗೆ ತಿಳಿವಳಿಕೆಯನ್ನುಂಟು ಮಾಡಿದರೆ ಹೆಚ್ಚು ಪ್ರಯೋಜನಕಾರಿಯಾಗುತ್ತದೆ. ಏಕೆಂದರೆ ಉದ್ಯೋಗ ನಿರತನಾದ ತಂದೆ ಪ್ರತಿವಾರವೂ ಶಾಲೆಗೆ ಹೋಗಲು ಮತ್ತು ಮಕ್ಕಳ ಬಗ್ಗೆ ಬೇಕಾದ ವ್ಯವಸ್ಥೆ ಮಾಡಲು, ಮಾರ್ಗದರ್ಶನ ನೀಡಲು ತನ್ನ ಜವಾಬ್ದಾರಿಗಳಲ್ಲಿ ಸಾಧ್ಯವಾಗದಿರಬಹುದು, ಮನೆಯಿಂದ ಆಫೀಸು ದೂರವಿರುವ, ಬಸ್ಸಿಗಾಗಿ ಕ್ಯೂನಲ್ಲಿ ಕಾಯುವ ನಗರಗಳಲ್ಲಿಯಂತೂ ಈ ಸಮಸ್ಯೆ ಇನ್ನೂ ಹೆಚ್ಚು, ಪಾಲಕರು ಮೀಟಿಂಗಿನಲ್ಲಿ ಸೇರಿದಾಗ ತಮ್ಮ ಮಕ್ಕಳ ಉತ್ತಮ ಹಾಗೂ ದುಷ್ಟ ಗುಣಗಳ ಬೆಳವಣಿಗೆಯ ಬಗೆಗೆ, ಅಭ್ಯಾಸದ ಪ್ರಗತಿಯ ಬಗೆಗೆ, ಅಥವಾ ಮತ್ತಾವುದೇ ರೀತಿಯ ಮಗುವಿನ ಶಂಕೆ, ಕುತೂಹಲಗಳ ಬಗೆಗೆ ವಿಚಾರ ವಿನಿಮಯ ಮಾಡಿಕೊಳ್ಳಲು ಅವಕಾಶವಿರಬೇಕು, ಹಾಗೆಯೇ ಶಿಕ್ಷಕರೂ ಸಹ ಮನೆಯ ಕಾರಣದಿಂದ ಮಕ್ಕಳಿಗುಂಟಾಗುವ ಅನಾನುಕೂಲತೆಗಳ ವಿಷಯವಾಗಿಯೂ ಪಾಲಕರು ಮಗುವಿನ ಬಗೆಗೆ ಮನೆಯಲ್ಲಿ ಗಮನಿಸಬೇಕಾದ ಅಂಶಗಳ ಬಗೆಗೂ ಸಲಹೆ, ಸೂಚನೆ ಕೊಡಲು ಸಾಧ್ಯವಾಗಬೇಕು, ಹೀಗೆ ಎಲ್ಲಾ ಪಾಲಕರೂ ಒಂದೆಡೆ ಸೇರಲವಕಾಶವಿದ್ದಾಗ, ಅನಾನುಕೂಲವಿರುವ ಅನೇಕ ಮಕ್ಕಳಿಗೆ ಅನುಕೂಲ ಸಿಗುವ ಅವಕಾಶಗಳೂ ಒದಗಬಹುದು. ಶ್ರೀಮಂತರಾದ ಪಾಲಕರು ಶಾಲೆಯ ಅವಶ್ಯಕತೆಗಳನ್ನು ಪೂರೈಸಲೂ ಮುಂದೆ ಬರಬಹುದು. ಅಲ್ಲದೆ ಶಿಕ್ಷಕರೂ ಸಹ ಪ್ರತಿಯೊಂದು ಮಗುವಿನ ಸರ್ವತೋಮುಖವಾದ ಬೆಳವಣಿಗೆಯ ಬಗೆಗೆ ನಿರ್ಲಕ್ಷ ವಹಿಸದೆ ಲಕ್ಷ್ಯ ಕೊಟ್ಟುಕೊಡಬೇಕಾಗುತ್ತದೆ. ಬೇಜವಾಬ್ದಾರಿಯ ಸ್ವಭಾವವಿಲ್ಲದ ಶಿಕ್ಷಕನೂ ಸಹ ದಕ್ಷತೆಯಿಂದ ವ್ಯವಸ್ಥಿತ ರೀತಿಯಿಂದ ಕೆಲಸ ಮಾಡಬೇಕಾಗುತ್ತದೆ, ಹಾಗೆಯೇ ಪಾಲಕರೂ ಸಹ ನಿರ್ಲಕ್ಷ್ಯ ಮನೋಭಾವದಿಂದಿರಲು ಸಾಧ್ಯವಾಗದೆ ಮಕ್ಕಳ ಪ್ರಗತಿಗೆ ಸಹಾಯಕವಾದ ಶಾಲೆಯ ಕೆಲಸಗಳಲ್ಲಿ ತಮ್ಮ ಸಹಕಾರವನ್ನು ನೀಡಬೇಕಾಗುತ್ತದೆ.

ಈಗಿನ ಕಡ್ಡಾಯ ಸಾರ್ವಜನಿಕ ಶಿಕ್ಷಣದಿಂದಾಗಿ ವಿದ್ಯಾರ್ಥಿಗಳಿಂದ ತುಂಬಿ ತುಳುಕುತ್ತಿರುವ ಶಾಲೆಗಳಲ್ಲಿ ಶಿಕ್ಷಕನು ನಿರ್ವಹಿಸಬೇಕಾದ ಬಿಡುವಿಲ್ಲದ ಕೆಲಸಗಳ ಮಧ್ಯೆ ಈ ಜವಾಬ್ದಾರಿಯನ್ನು ವ್ಯವಸ್ಥಿತವಾಗಿ ನಡೆಸಿಕೊಂಡು ಹೋಗಬೇಕೆಂದು ಅಪೇಕ್ಷಿಸುವುದು ಯೋಗ್ಯವಲ್ಲ, ಅಲ್ಲದೆ ಬಡತನ ಅನಾದರ, ನಿರ್ಲಕ್ಷ್ಯಗಳಿಗೆ ತುತ್ತಾಗಿರುವ ಶಿಕ್ಷಕನಿಗೆ ಎಲ್ಲಾ ರೀತಿಯ ಜವಾಬ್ದಾರಿಯನ್ನೂ ನಿರ್ವಹಿಸಬೇಕೆಂದು ಕಡ್ಡಾಯ ಮಾಡುವುದು ಸಾಧುವಲ್ಲ. ಇದು 'ಅವ್ಯವಹಾರದ ಆದರ್ಶ' ಎಂಬ

ಕೆಲವರ ಅಭಿಪ್ರಾಯದಲ್ಲಿ ಸ್ವಲ್ಪ ಮಟ್ಟದ ಸತ್ಯಾಂಶವಿದೆ. ಆದರೆ ಹಾಗೆಯೇ ಶಾಲೆ-ಮನೆಗಳು ಸಮರಸದಿಂದ ಕೆಲಸ ನಿರ್ವಹಿಸದಿದ್ದರೆ, ಶಿಕ್ಷಣದ ಗುರಿಯೇ ಬುಡಮೇಲಾಗಿ ಶಾಲೆ, ಸಮಾಜ, ಮನೆ ಎಲ್ಲವೂ ಅಶಿಸ್ತೆಂಬ ಬೆಂಕಿಗೆ ಅಹುತಿಯಾಗಬೇಕಾಗುತ್ತದೆ. ಆದ್ದರಿಂದ ಏನೇ ಕಷ್ಟವಾದರೂ ಈ ದಿಶೆಯಲ್ಲಿ ವ್ಯವಸ್ಥೆ ಮಾಡುವುದು ಅತ್ಯಗತ್ಯ. ಇಂಥ ಸೂಕ್ತ ವ್ಯವಸ್ಥೆ ಆದಾಗ ಶಾಲೆಗಳೂ ಸರಿಯಾಗಿ ಕೆಲಸ ಮಾಡುತ್ತವೆ. ಪಾಲಕರ ಸಹಕಾರವೂ ದೊರೆಯುತ್ತದೆ. ಮಕ್ಕಳ ವ್ಯಕ್ತಿತ್ವದ ಬೆಳವಣಿಗೆಯೂ ಸಮರ್ಪಕವಾಗುತ್ತದೆ. ಅವರು ಯುವಕರಾದಾಗ ಸಮಸ್ಯಾತ್ಮಕ ವ್ಯಕ್ತಿಗಳಾಗದೆ, ವಿಧ್ವಂಸಕ ಕೃತ್ಯಗಳಲ್ಲಿ ತೊಡಗದೆ, ಅತೃಪ್ತಿ ಅಸಹನೆಯಿಂದ ಬಾಳದೆ ತಮ್ಮೆಲ್ಲ ಕೆಲಸಗಳನ್ನೂ ಪರಿಣಾಮಕಾರಿಯಾಗಿ ನಿರ್ವಹಿಸಲು ಸಮರ್ಥರಾಗುತ್ತಾರೆ; ಸಮಸ್ಯೆಗಳನ್ನು ಬಗೆಹರಿಸಲು ಶಕ್ತರಾಗುತ್ತಾರೆ, ಆಗ, ಈಗಿರುವ ಆಶಿಸ್ತಿನ ಸಮಸ್ಯೆ ಇಲ್ಲವಾಗುವುದು.

■

## ೭. ಮನೆಯೇ ಮಗುವಿನ ರೂವಾರಿ.

ದೀಪುವಿಗೆ ಅಂದು ಸಡಗರವೋ ಸಡಗರ. ಬೆಳಗಿನಿಂದ ಕುಣಿದು ಕುಪ್ಪಳಿಸಿದ್ದೇ ಕುಪ್ಪಳಿಸಿದ್ದು, ಎಲ್ಲರೊಡನೆ, 'ಇವತ್ತು ನನ್ತಂಗಿ ಮನೆಗೆ ಬರ್‍ತಾಳೆ' ಎಂಬ ಸುದ್ದಿಯನ್ನು ಸಂತೋಷದಿಂದ ಹೇಳುತ್ತಿದ್ದ, ಇದಕ್ಕೆ ಕಾರಣ ಅವನ ಕಾಕಾನ ಮಗಳು ಹುಟ್ಟಿ ಅಂದಿಗೆ ಹನ್ನೊಂದು ದಿನಗಳಾಗಿದ್ದವು, ಆ ದಿನ ದವಾಖಾನೆಯಿಂದ ಮನೆಗೆ ಕರೆದುಕೊಂಡು ಬರುವವರಿದ್ದರು. ಇಷ್ಟು ದಿನ ಅವರ ಮನೆಯಲ್ಲಿ ದೀಪು ಒಬ್ಬನೇ ಪುಟ್ಟಮಗು; ಎಲ್ಲರ ಕಣ್ಮಣಿಯಾಗಿದ್ದ, ಈಗ ಮನೆಗೆ ಮತ್ತೊಂದು ಪುಟ್ಟ ಮಗುವಿನ ಆಗಮನ! ಸಹಜವಾಗಿ ಎಲ್ಲರ ಗಮನ ಹೊಸದಾಗಿ ಹುಟ್ಟಿದ ಮಗುವಿನ ಬಗೆಗೆ ಇರುತ್ತದೆ, ಆಗ ಮೊದಲಿದ್ದ ಮಗುವಿಗೆ ತನ್ನನ್ನು ಎಲ್ಲರೂ ಕಡೆಗಣಿಸುತ್ತಿದ್ದಾರೆ, ಆ ಮಗುವಿನ ಮೇಲೆಯೇ ಎಲ್ಲರಿಗೂ ಪ್ರೀತಿ ಎಂಬ ಅನಿಸಿಕೆ ಉಂಟಾಗಬಹುದು. ಆಗ ಈ ಮಗು ಪುಟ್ಟ ಮಗುವನ್ನು ಒಳಗೇ ದ್ವೇಷಿಸಲು ಪ್ರಾರಂಭಿಸಬಹುದು, ಅಷ್ಟೇ ಅಲ್ಲ, ಯಾರೂ ಇಲ್ಲದ ಸಮಯ ನೋಡಿ ಪುಟ್ಟ ಮಗುವಿಗೆ ಏನಾದರೂ ತೊಂದರೆ ಮಾಡಿ ತನ್ನ ಅಸಮಾಧಾನ ವ್ಯಕ್ತಮಾಡಬಹುದು, ಇದರಿಂದ ಆ ಮಗುವಿನ ತಾಯಿಗೆ ಸಿಟ್ಟು ಬಂದು, ದೊಡ್ಡ ಮಗುವಿನ ಮನಸ್ಸಿನ ತುಮುಲವನ್ನು ಅರ್ಥಮಾಡಿಕೊಳ್ಳದೇ ದಂಡಿಸಬಹುದು, ಈ ಪ್ರತಿಕ್ರಿಯೆಯಿಂದ ಮನೆಯಲ್ಲಿ ವಿರಸ ವಾತಾವರಣ ಉಂಟಾಗುವ ಸಾಧ್ಯತೆಯೂ ಇದೆ. ಇದೆಲ್ಲದರಿಂದ ಮಗುವಿನ ಮನಸ್ಸಿನ ಮೇಲೆ ಇನ್ನೂ ಹೆಚ್ಚಿನ ದುಷ್ಪರಿಣಾಮವಾಗುತ್ತದೆ. ಇದು ಅದರ ಸಹಜ ವಿಕಸನಕ್ಕೆ ಅಡ್ಡಿಯಾಗಬಹುದು, ಇದನ್ನರಿತ, ವಿದ್ಯಾವಂತೆಯೂ, ಸುಸಂಸ್ಕೃತಳೂ ಆದ ದೀಪುವಿನ ತಾಯಿ ತನ್ನ ಮಗನ ಮನಸ್ಸನ್ನು ಹೊಸದಾಗಿ ಬರುವ ಮಗುವಿನ ಆಗಮನಕ್ಕೆ ಸಿದ್ಧಗೊಳಿಸಿದ್ದಳು, ಅವನಿಗೇ ಆ ಮಗುವಿನ ಬಗೆಗೆ ಮಮತೆ ಮೂಡುವ ರೀತಿಯಲ್ಲಿ, 'ನಿನ್ನ ಜೊತೆ ಆಡೋಕೆ ಪುಟ್ಟ ಪಾಪ ಬರುತ್ತೆ, ಆಕೆ ನಿನ್ನ ತಂಗಿ, ನೀನು ಅವಳನ್ನು ಚೆನ್ನಾಗಿ ನೋಡಿಕೊಂಡ್ರೆ ಬೇಗ ದೊಡ್ಡವಳಾಗಿ ನಿನ್ನೊತೆ ಆಟ ಆಡ್ತಾಳೆ, ನಿನ್ನನ್ನು ಅಣ್ಣಾಂತ ಕರೀತಾಳೆ; ಮುಂತಾಗಿ ಹೇಳಿ ಅವನ ಮನಸ್ಸು ತಂಗಿಯ ಬರುವಿಕೆಗಾಗಿ ಹಾತೊರೆಯುವಂತೆ, ಬಂದ ತಂಗಿಯನ್ನು ಮತ್ಸರದಿಂದ ನೋಡದೆ ಪ್ರೀತಿಯಿಂದ ಕಾಣುವಂತೆ ಅಣಿಗೊಳಿಸಿದ್ದಳು, ಈ ದೂರದೃಷ್ಟಿ ತಾಯಂದಿರಿಗಿದ್ದರೆ ಮಕ್ಕಳ ಭವಿಷ್ಯ ಬಂಗಾರವಾದಂತೆಯೇ, ಅದಕ್ಕೇ 'ಮನೆಯ ಮೊದಲ ಪಾಠಶಾಲೆ, ಜನನಿ ತಾನೆ ಮೊದಲ ಗುರುವು' ಎಂದು ಹೇಳುತ್ತಾರೆ.

### ಮನೆ–ಮಾತೆ–ಮಗು

ಹುಟ್ಟಿದ ಮಕ್ಕಳ ಬಗೆಗೆ ಈ ರೀತಿ ಮುಂದಾಲೋಚಿಸಿ ತಕ್ಕಂತೆ ಮಕ್ಕಳನ್ನು ಬೆಳೆಸುವ ಜಾಣ್ಮೆ ಹಿರಿಯರಲ್ಲಿರುವುದು ಅವಶ್ಯಕ. ಎಲ್ಲಾ ತಾಯಿಯರಿಗೂ ತಮ್ಮ ಮಕ್ಕಳು ಚೆನ್ನಾಗಿ ಬೆಳೆಯಬೇಕೆಂದು ಆಸೆ. ತಮ್ಮ ಮಕ್ಕಳು ಹಠಮಾಡದೆ, ತುಂಟರಾಗದೆ, ಸೋಮಾರಿಗಳಾಗದೆ, ಜಾಣರಾಗಿ, ಜವಾಬ್ದಾರಿ ಅರಿತು, ಶಿಸ್ತಿನಿಂದ ಬೆಳೆದು ವಿದ್ಯಾವಂತರಾಗಬೇಕು ಎಂದಾಸೆ. ಆದರೆ ಇಷ್ಟಪಟ್ಟರೆ ಸಾಕೆ ? ಒಳ್ಳೆಯ ಬೆಳೆ ಬೇಕೆಂದರೆ ರೈತ ಹಂತ ಹಂತವಾಗಿ ಬಿತ್ತನೆಯಿಂದ ಹಿಡಿದು ಬೆಳೆ ಹಸನು ಮಾಡಿ ಮನೆಗೆ ತರುವವರೆಗೆ ಬೆಳೆಯನ್ನು ಹೇಗೆ ರಕ್ಷಿಸಬೇಕೋ ಹಾಗೆ ತಾಯಿಯೂ ಸಹ (ಪಾಲಕರೂ ಸಹ) ತಾವು ಆಶಿಸಿದಂತೆ ಬೆಳೆಯುವ ಹಾಗೆ ಮಾಡಲು ಮಗು ಹುಟ್ಟಿದಂದಿನಿಂದಲೂ ಲಕ್ಷ್ಯಗೊಟ್ಟು ಬೆಳೆಸಬೇಕಾಗುತ್ತದೆ. 'ಮೂರು ವರ್ಷದ ಬುದ್ಧಿ ನೂರು ವರ್ಷದವರೆಗೆ ' ಎಂಬ ಗಾದೆಯ ಮಾತು ಸುಳ್ಳಲ್ಲ, ಬಾಲ್ಯದ ಅವಧಿ ಮಗುವಿನ ಮುಂದಿನ ವ್ಯಕ್ತಿತ್ವವನ್ನು ರೂಪಿಸುವಲ್ಲಿ ಬಹು ಮಹತ್ವದ ಪಾತ್ರವನ್ನು ವಹಿಸುತ್ತದೆ.

ತಂದೆ–ತಾಯಿಗಳಿಗೆ ಮಕ್ಕಳಲ್ಲಿ ವಯಸ್ಸಿಗೆ ತಕ್ಕಂತೆ ಆಗುವ ಬದಲಾವಣೆಗಳ ಪರಿಚಯವಿರಬೇಕು. ದೈಹಿಕವಾಗಿ ಬದಲಾವಣೆಯಾದಂತೆ ಮಾನಸಿಕ ಬದಲಾವಣೆಗಳೂ ಆಗುತ್ತವೆ, ಅದಕ್ಕನುಗುಣವಾಗಿ ಮಗುವಿನ ಚಟುವಟಿಕೆಗಳಿರುತ್ತವೆ. ವರ್ಷದೊಳಗಿನ ಮಗುವಿಗೆ ಏನು ಸಿಕ್ಕಿದರೂ ಬಾಯಲ್ಲಿಟ್ಟು ಪರೀಕ್ಷಿಸುವ ಸಹಜ ಗುಣ ( instinctive behaviour ) ಇನ್ನು ಬೆಳೆದ ಮಗು ಸಿಕ್ಕದ ಪುಸ್ತಕವನ್ನು ಹರಿಯಬಹುದು, ಸಾಮಾನನ್ನು ಎತ್ತಿ ಒಗೆದು ಹಾಳುಮಾಡಬಹುದು. ಆಗ ಮಗುವಿಗೆ ತುಂಟತನ ಮಾಡಬೇಕೆಂದಾಗಲೀ, ಹಾಳುಮಾಡಬೇಕೆಂದಾಗಲೀ ಉದ್ದೇಶವಿರುವುದಿಲ್ಲ. ಆ ವಯಸ್ಸಿನಲ್ಲಿ ವಸ್ತುಗಳ ಬಗೆಗೆ ಇರುವ ಪ್ರತಿಕ್ರಿಯೆ ಇದು. ಆದುದರಿಂದ ಸರಿಯಾದ ತಿಳಿವಳಿಕೆ ಇದ್ದ ತಾಯಿ ಸಿಟ್ಟಿಗೇಳದೆ, ದಂಡಿಸದೆ ಮಗುವಿಗೆ ಅಂತಹ ವಸ್ತುಗಳು ಸಿಗದಂತೆ ಇಡುತ್ತಾಳೆ. ಹಾಳಾಗಬಹುದಾದ ಅಥವಾ ಮುರಿಯದಂತಹ ಸಾಮಾನುಗಳನ್ನು ಕೊಡುತ್ತಾಳೆ.

### ಮನೆಯ ಶಿಸ್ತು – ಮಕ್ಕಳಲ್ಲಿ ಶಿಸ್ತು.

ಮಕ್ಕಳು ಶಿಸ್ತಿನಿಂದಿರಬೇಕೆಂಬುದು ಪ್ರತಿ ತಂದೆ ತಾಯಿಗಳ ಅಪೇಕ್ಷೆ, ಶಿಸ್ತು ಯಾವುದೇ ಕೆಲಸ ಮಾಡಲು ಮತ್ತು ಯೋಗ್ಯ ಹಾಗೂ ನೆಮ್ಮದಿಯ ಜೀವನ ನಡೆಸಲು ಪ್ರತಿಯೊಬ್ಬರಿಗೂ ಅತ್ಯವಶ್ಯಕವಾದ ಅಂಶ. ಆದರೆ ಇದು ಬಾಲ್ಯದಿಂದಲೇ ಬೆಳೆಯಬೇಕು. ಬಾಲ್ಯದಲ್ಲಿ ಅಲಕ್ಷ್ಯಮಾಡಿ ದೊಡ್ಡವರಾದ ನಂತರ ಶಿಸ್ತಿನಿಂದ ಇಲ್ಲ, ಜವಾಬ್ದಾರಿಯಿಂದ ನಡೆಯುವುದಿಲ್ಲವೆಂದು ಗೊಣಗಿದರೆ, ವ್ಯಥೆ ಪಟ್ಟರೆ ಏನೂ

ಉಪಯೋಗವಿಲ್ಲ, ಶೈಶವಾವಸ್ಥೆಯಿಂದಲೇ ಮಗು ಶಿಸ್ತನ್ನು ಆಚರಣೆಗೆ ತರುವಂತೆ ನೋಡಿಕೊಳ್ಳಬೇಕು. ಸ್ವಲ್ಪ ತಿಳಿವಳಿಕೆ ಬಂತೆಂದರೆ ಸಾಕು, ಮಗು ನಿಮ್ಮೊಡನೆ ಕೆಲಸ ಮಾಡಬೇಕೆಂದು ಅಪೇಕ್ಷಿಸುತ್ತದೆ. ತನ್ನ ಊಟ ತಾನೇ ಮಾಡಬೇಕು; ತನ್ನ ಷೂ ತಾನೇ ಕಟ್ಟಿಕೊಳ್ಳಬೇಕು, ಅಂಗಿ ಹಾಕಿಕೊಳ್ಳಬೇಕು ಎಂದು ಪ್ರಯತ್ನಿಸುತ್ತದೆ, ಆಗ ತಾಯಿಯಾದವಳು ಅವುಗಳನ್ನು ಮಾಡಲು ಅವಕಾಶ ಮಾಡಿಕೊಡಬೇಕು, ಪ್ರೋತ್ಸಾಹಿಸಬೇಕು, ಇಲ್ಲದೇ ಮಗು ಬೇಗ ಮಾಡಿಕೊಳ್ಳುವುದಿಲ್ಲವೆಂದೋ ಸರಿಯಾಗಿ ಮಾಡಿಕೊಳ್ಳುವುದಿಲ್ಲವೆಂದೋ ತಾಯಿಯೇ ಎಲ್ಲಾ ಮಾಡುತ್ತಾ ಹೋದರೆ ಮಗು ಜವಾಬ್ದಾರಿಯನ್ನು ಕಲಿಯುವುದಿಲ್ಲ, ಶಿಸ್ತನ್ನೂ ಬೆಳೆಸಿಕೊಳ್ಳುವುದಿಲ್ಲ, ಮುಂದೆ ಇಂತಹ ಮಕ್ಕಳೇ ಬೇಜವಾಬ್ದಾರಿಯಿಂದ ಅಲೆದಾಡುವ ಪುಂಡರಾಗುತ್ತಾರೆ, ಹಂತ – ಹಂತವಾಗಿ, ಆಯಾ ವಯಸ್ಸಿಗೆ ತಕ್ಕಂತಹ ಕೆಲಸಗಳನ್ನು ಮಾಡಲು ಮಕ್ಕಳಿಗೆ ಅವಕಾಶ ಕೊಡುತ್ತಾ ಹೋಗಬೇಕು, ಕೆಲಸವನ್ನು ವವಸ್ಥಿತವಾಗಿ ಮಾಡುವಂತೆ ಎಲ್ಲಿ ಬೇಕೋ ಅಲ್ಲಿ, ಎಷ್ಟು ಬೇಕೋ ಅಷ್ಟು ಮಾತ್ರ ಮಾರ್ಗದರ್ಶನ ಮಾಡಬೇಕು ನಂತರ ಅದು ದಕ್ಷತೆಯಿಂದ ವ್ಯವಸ್ಥಿತವಾಗಿ ಕೆಲಸ ಮಾಡುವುದನ್ನು ಕಲಿಯುತ್ತದೆ. ಇಂತಹ ಒಂದು ಸ್ವಭಾವವನ್ನು ಬಾಲ್ಯದಲ್ಲಿಯೇ ಮಗು ಬೆಳೆಸಿಕೊಂಡರೆ ಬೆಳೆದು ದೊಡ್ಡವನಾದ ಮೇಲೆ ಅವನ ಎಲ್ಲ ಕೆಲಸದಲ್ಲೂ ನಾವು ದಕ್ಷತೆಯನ್ನೂ ಅಚ್ಚುಕಟ್ಟುತನವನ್ನೂ, ಶಿಸ್ತನ್ನೂ ಕಾಣಬಹುದು. ಮಕ್ಕಳನ್ನು ತಪ್ಪಿಗಾಗಿ ದಂಡಿಸುವುದರಿಂದ ಶಿಸ್ತು ಬರುವುದಿಲ್ಲ, ಹಂತ ಹಂತವಾಗಿ ವ್ಯವಸ್ಥಿತ ರೀತಿಯಲ್ಲಿ ಹೆಚ್ಚುಹೆಚ್ಚು ಜವಾಬ್ದಾರಿ ಹೊರುವುದನ್ನು ಕಲಿಸುವುದರಿಂದ ಸರಿಯಾದ ಶಿಸ್ತು ಮಗುವಿನಲ್ಲಿ ಬೆಳೆಯಲು ಸಾಧ್ಯವಾಗುತ್ತದೆ. ವ್ಯಕ್ತಿತ್ವದ ಉತ್ತಮ ಗುಣಗಳಾದ ಆತ್ಮವಿಶ್ವಾಸ, ಸ್ವಂತ ನಿರ್ಣಯ ತೆಗೆದುಕೊಳ್ಳುವಿಕೆ ಸ್ವ ಇಚ್ಛೆಯಿಂದ ಕೆಲಸ ಮಾಡಲು ಮುಂದೆ ಬರುವ ಸ್ವಭಾವ, ಇವೆಲ್ಲವೂ ಮಗು ಮೊದಲಿಂದಲೂ ಜವಾಬ್ದಾರಿಯಿಂದ ಕೆಲಸ ನಿರ್ವಹಿಸಿಕೊಂಡು ಬರುವುದರಿಂದ ಬೆಳೆಯುತ್ತವೆ, ಅಲ್ಲದೆ ಕೆಲಸಮಾಡಿ ಸಂತೋಷಪಡುವ ವ್ಯಕ್ತಿತ್ವವನ್ನು ಪಡೆಯುತ್ತದೆ.

**ಕುಟುಂಬವೇ ವ್ಯಕ್ತಿತ್ವದ ಕಮ್ಮಟ.**

ಮಗುವಿನ ವ್ಯಕ್ತಿತ್ವ ರೂಪಿಸುವಲ್ಲಿ ಕುಟುಂಬ, ಕುಟುಂಬದಲ್ಲಿ ಮಗುವಿನ ಸ್ಥಾನ, ಕುಟುಂಬದ ಜನರು ಮಗುವಿನೊಡನೆ, ನಡೆಯುವ ರೀತಿ, ಮನೆಯ ಸಂಸ್ಕೃತಿ, ಅವನ ಒಡನಾಡಿಗಳು, ಅವನು ಹೋಗುವ ಶಾಲೆ, ಇವೆಲ್ಲವೂ ಕಾರಣವಾಗುತ್ತದೆ. ಇವು, ಮುಂದೆ ಮಗುವಿನ ನಡೆ–ನುಡಿ ಹೇಗಾಗಬಹುದೆಂಬುದನ್ನು ಬಹುಮಟ್ಟಿಗೆ ನಿರ್ಧರಿಸುತ್ತವೆ ಎಂದು ಹೇಳಬಹುದು.

ಮಗು, ನಮಗೆ ಅರಿವಿಲ್ಲದಂತೆಯೇ ಪ್ರತಿಯೊಂದು ಅಂಶವನ್ನೂ

ಗಮನಿಸಿರುತ್ತದೆ. ಕಾಲಾನುಕ್ರಮವಾಗಿ ತನ್ನ ಪರಿಸರದಲ್ಲಿದ್ದವರ ಗುಣಗಳನ್ನೇ ಅದೂ ಅಳವಡಿಸಿಕೊಳ್ಳುತ್ತದೆ, ಉದಾ: ಕೆಲಸಗಿತ್ತಿ ಮನೆಗೆಲಸ ತಪ್ಪಿಸಿಕೊಳ್ಳಲು ತನ್ನ ಮಗುವಿನೊಂದಿಗೆ ತನಗೆ ಆರಾಮಿಲ್ಲವೆಂದೂ, ಹಾಸಿಗೆ ಹಿಡಿದು ಮಲಗಿರುವನೆಂದೂ, ಈ ದಿನ ಕೆಲಸಕ್ಕೆ ಬರಲಾಗುವುದಿಲ್ಲವೆಂದೂ ಹೇಳಿಕಳಿಸುತ್ತಾಳೆ ಹೇಳಲು ಹೋದಾಗ, ಅವ್ವಾರು, 'ನಿಮ್ಮವ್ವ ಏನ್ಮಾಡ್ತಿದ್ಲು' ಎಂದು ಕೇಳಿದಾಗ ಮಕ್ಕಂಡಿದ್ಲೂಂತ ಹೇಳು' ಎಂದು ಹೇಳಿಕಳಿಸಲೂ ಮರೆಯುವುದಿಲ್ಲ, ಮರುದಿನ ಅವಳು ಕೆಲಸಕ್ಕೆ ಬಂದಾಗಲೂ ಆ ಮಗುವಿನ ಎದುರಿಗೇ ತಾನು ದವಾಖಾನೆಗೆ ಹೋದದ್ದು ಡಾಕ್ಟರಿಗೆ ಔಷಧಿಗೆ ದುಡ್ಡು ಖರ್ಚಾದದ್ದನ್ನು ಹೇಳಿ ಒಡತಿಯಿಂದ ದುಡ್ಡು ಕಸಿಯುತ್ತಾಳೆ, ಇದನ್ನೆಲ್ಲಾ ಮಗು ಗಮನಿಸುತ್ತದೆ. ಇದೆಲ್ಲಾ ಸುಳ್ಳಾದರೂ ತನ್ನ ಅವ್ವನಿಗೆ ಎಷ್ಟು ಲಾಭದಾಯಕ ಎಂಬುದೂ ಮಗುವಿಗೆ ಹೊಳೆಯದಿರುವುದಿಲ್ಲ. ಆ ಮಗು ಸುಳ್ಳಿನ ಮೊಟ್ಟೆಯಾಗದೆ ಹರಿಶ್ಚಂದ್ರನ ತುಣುಕಾಗಲು ಹೇಗೆ ಸಾಧ್ಯ? ಮನೆಯಲ್ಲಿ ಸಿಕ್ಕ ಈ ಪಾಠವನ್ನು ಯಾವ ಶಿಕ್ಷಣ ಸಂಸ್ಥೆ ತಾನೆ ಅಳಿಸಿಹಾಕಲು ಸಾಧ್ಯ? ತಾಯಿಯ ಈ ಗುಣಗಳು ಮಗುವಿನ ಅರಿವಿಲ್ಲದಂತೆಯೇ ಅದರ ವ್ಯಕ್ತಿತ್ವದಲ್ಲಿ ಅಡಕವಾಗಿ ಬಿಡುತ್ತವೆ. ಈ ಅಂಶವನ್ನು ಪಾಲಕರು ಲಕ್ಷದಲ್ಲಿಡಬೇಕು. ಮಗು ಏನಾಗಬೇಕೆಂದು ನಾವು ಆಶಿಸುತ್ತೇವೆಯೋ ಹಾಗೆಯೇ ನಾವು ನಡೆದುಕೊಳ್ಳಬೇಕಾಗುತ್ತದೆ. ನಾವು ಮಾತ್ರ ಸುಳ್ಳುಹೇಳುತ್ತಾ, ಸೋಮಾರಿತನದಿಂದ ಕಾಲಹಾಕುತ್ತ, ಬೇಜವಾಬ್ದಾರಿಯಿಂದ ನಡೆಯುತ್ತಾ, ಸಕ್ರಮವಿಲ್ಲದ ಜೀವನ ನಡೆಸುತ್ತಾ ಮಗು ಮಾತ್ರ ಅತ್ಯಂತ ಪರಿಪೂರ್ಣ ವ್ಯಕ್ತಿಯಾಗಬೇಕೆಂದು ಆಶಿಸಿದರೆ ಬೇವು ಬಿತ್ತಿ ಮಾವು ಬಯಸಿದಂತಾಗುತ್ತದೆ.

**ವಿರಸ ದಾಂಪತ್ಯ – ವಿಪರೀತ ಮಕ್ಕಳು.**

ವಿರಸ ದಾಂಪತ್ಯವಂತೂ ಮಕ್ಕಳ ಭವಿಷ್ಯವನ್ನೇ ನಾಶ ಮಾಡುತ್ತದೆ ವಿರಸ ದಾಂಪತ್ಯದಲ್ಲಿ ಬೆಳೆದ ಅನೇಕ ಮಕ್ಕಳು ಅಸಹಜ ಪ್ರವೃತ್ತಿಯನ್ನೋ, ಭಾವಾವೇಶದ ವ್ಯಕ್ತಿತ್ವವನ್ನೋ, ದುಶ್ಚಟಗಳಿಗೆ ಬಲಿಯಾಗುವ ಮನೋವಿಕಾರವನ್ನೋ, ಪಡೆದು ಅವರ ಜೀವನವನ್ನೂ, ಕುಟುಂಬದ ನೆಮ್ಮದಿಯನ್ನೂ, ಸಮಾಜದ ಶಾಂತಿಯನ್ನೂ, ಕಲಕುವಂಥವರಾಗಿ ಬಾಳುತ್ತಾರೆ. ತಂದೆ-ತಾಯಿಯರು ಸಂತೋಷದಿಂದ ಜೀವನ ಮಾಡುತ್ತಾ, ಒಬ್ಬರಿಗೊಬ್ಬರು ಅರಿತುಕೊಂಡು ಜವಾಬ್ದಾರಿಯಿಂದ ಬದುಕುತ್ತಿದ್ದರೆ ಅಂತಹ ಕುಟುಂಬದ ಮಕ್ಕಳು ಒಳ್ಳೆಯ ವ್ಯಕ್ತಿತ್ವ ಪಡೆದಿರುತ್ತಾರೆ, ಸುಸಂಸ್ಕೃತ, ಸಂತೋಷ ವಾತಾವರಣದಲ್ಲಿ ಬೆಳೆದ ಮಗುವಿನಲ್ಲಿ ಸಮತೋಲನ ವ್ಯಕ್ತಿತ್ವ ರೂಪುಗೊಳ್ಳುತ್ತದೆ, ಪಾಲಕರು, ತಾವು ಉತ್ತಮರಾಗಿ ಬಾಳುವುದರ ಜೊತೆಗೆ ಮಕ್ಕಳ ಬೆಳವಣಿಗೆಯ ಹಂತದಲ್ಲಿ ಮಗುವಿನ ಪ್ರತಿಯೊಂದು ಚಟುವಟಿಕೆಯನ್ನು

ಗಮನಿಸುತ್ತಿರಬೇಕು. ಅನಪೇಕ್ಷಣೀಯ ಗುಣವೇನಾದರೂ ಕಂಡುಬಂದರೆ ಕೂಡಲೇ ಗುರುತಿಸಿ ಜಾಣತನದಿಂದ ಅದನ್ನು ನಿವಾರಿಸಬೇಕು. ಅಗತ್ಯಬಿದ್ದಲ್ಲಿ ಅಂತಹ ಮಗುವಿನ ಮನಸ್ಸು ಘಾಸಿಕೊಳ್ಳದೆ ತಪ್ಪನ್ನು ಅರಿತುಕೊಳ್ಳುವಂತಹ ರೀತಿಯಲ್ಲಿ ದಂಡನೆ ಮಾಡಬೇಕು, ಮಗು ತಪ್ಪು ಮಾಡಿದಾಗ ಮಾತ್ರ ನಿರ್ಲಕ್ಷಿಸಬಾರದು, ಮಮತೆಯಿಂದ ಮಕ್ಕಳಿಗೆ ಬೇಕಾದುದನ್ನೆಲ್ಲಾ ಹಿರಿಯರೇ ಮಾಡಲು ಹೋಗದೆ ಅವರಿಗೆ ಸಾಧ್ಯವಾದುದನ್ನೆಲ್ಲಾ ತಾವೇ ಮಾಡಿಕೊಳ್ಳುವಂತೆ ಮಾಡಬೇಕು. ಮಕ್ಕಳು ಕೆಲಸ ಮಾಡಿದರೆ ನಲುಗುವುದಿಲ್ಲ, ಕೆಲಸ ಮಾಡದಿದ್ದರೆ ತಂದೆ-ತಾಯ್ಗಳೆ ಮಕ್ಕಳ ಭವಿಷ್ಯ ಹಾಳುಮಾಡಿದಂತಾಗುತ್ತದೆ. ಬಾಲ್ಯದಲ್ಲಿ ಸೋಮಾರಿತನದಿಂದ ಏನೂಮಾಡದೇ ಬೆಳೆದ ಮಕ್ಕಳು ದೊಡ್ಡವರಾದ ಮೇಲೂ, ಹಾಗೆಯೇ ಇರುತ್ತಾರೆ. ವಯಸ್ಸಾದ ತಂದೆ ತಾಯ್ಗಳು ಕಷ್ಟಪಟ್ಟು ದುಡಿಯುತ್ತಿದ್ದರೆ ಅಂಥವರಿಗೆ ಆರಾಮವಾಗಿ ಕಾಲಕಳೆಯಲು ಸ್ವಲ್ಪವೂ ಕಿಡಕೆನ್ನಿಸುವುದಿಲ್ಲ. ಆಗ ಅವರಿಗೆ ಮಕ್ಕಳ ಕಾರಣರೆಂಬುದನ್ನು ಅವರು ಮರೆಯಬಾರದು. ಮಗುವು ಚಿಕ್ಕದಾಗಿದ್ದಾಗ ನಡತೆಯಿಂದ ದು:ಖವಾಗುತ್ತದೆ. ಆದರೆ ಈ ಪರಿಸ್ಥಿತಿಗೆ ತಾವೇ ಅವನ ಬಗೆಗೆ ಸದಾ ಕಾಳಜಿಮಾಡುವುದರಿಂದ, ಕೆಲಸವೇ ಇಲ್ಲದಂತೆ ಬೆಳಸುವುದರಿಂದ, ಅವನಲ್ಲಿ ಸ್ವಂತಿಕೆ ಬೆಳೆಯುವುದಿಲ್ಲ, ದಕ್ಷತೆ ಮೊಳೆಯುವುದಿಲ್ಲ.

### ಮೂರು ವರುಷದ ಬುದ್ಧಿ, ನೂರು ವರುಷದ ವರೆಗೆ

ಬೆಳೆಯುವಾಗ ಮಗು ಅನೇಕ ಸಂದರ್ಭಗಳಲ್ಲಿ ಹಿರಿಯರಿಗೆ ಒಪ್ಪಿತವಾಗದ ರೀತಿಯಲ್ಲಿ ನಡೆದುಕೊಳ್ಳಬಹುದು. ಅದಕ್ಕೆ ಮಾನವನ ಸಹಜ ಪ್ರವೃತಿ ಕಾರಣವಿರಬಹುದು. ಅಂತಹ ಸಂದರ್ಭಗಳಲ್ಲಿ ಪಾಲಕರು ಎಚ್ಚರಿಕೆಯಿಂದ ವರ್ತಿಸಬೇಕು. ಸಹಜಸ್ವಭಾವವೆಂದು ಗುರುತಿಸಿ ಬಹಳ ಜಾಣ್ಮೆಯಿಂದ ಸಹಜ ಪ್ರವೃತ್ತಿಯನ್ನು ಉದಾತ್ತೀಕರಿಸಬೇಕು. ಮೊದಲು ಅಲಕ್ಷ್ಮ ಮಾಡಿ ಸಹಜ ಪ್ರವೃತ್ತಿಯು ಕೌಟುಂಬಿಕವಾಗಿ, ಸಾಮಾಜಿಕವಾಗಿ ಅನಪೇಕ್ಷಣೀಯವಾಗಿ ವ್ಯಕ್ತವಾಗುವಂತೆ ಅವಕಾಶ ಕೊಟ್ಟರೆ, ಕಾಲಾನುಕ್ರಮದಲ್ಲಿ ದುಷ್ಟ ವ್ಯಕ್ತಿಯಾಗಿ ಮಗು ರೂಪುಗೊಳ್ಳುತ್ತದೆ, ಆಗ ಅದನ್ನು ಸರಿಪಡಿಸುವುದು ಕಷ್ಟವಾಗುತ್ತದೆ. ಮಕ್ಕಳನ್ನು ಬೆಳೆಸುವಲ್ಲಿ ತಂದೆ-ತಾಯಿಯರ ಪಾತ್ರ ಅತೀ ಮಹತ್ವದ್ದು, ಅವರು ಎಷ್ಟು ಎಚ್ಚರಿಕೆಯಿಂದಿದ್ದರೂ ಅದು ಕಡಿಮೆಯೇ. ಮನೆಯಲ್ಲಿ ಇತರೆ ಮಕ್ಕಳೊಡನಿರುವಾಗ, ಹೊರಗಿನ ಮಕ್ಕಳ ಸ್ನೇಹಮಾಡಿದಾಗಲೂ ಗಮನ ಅಗತ್ಯ. ಏಕೆಂದರೆ ಒಂದು ಮಗು ಇನ್ನೊಂದು ಮಗುವನ್ನು ಹತ್ತಿಕ್ಕಬಹುದು. ದಬ್ಬಾಳಿಕೆಯಿಂದ ನಡೆಸಿಕೊಳ್ಳಬಹುದು; ಮನಸ್ಸಿಗೆ ನೋವಾಗುವಂತೆ ಕಟಕಿಯಾಡಬಹುದು. ಯಾವುದೋ ಕಾರಣದಿಂದ ಇದನ್ನು ಸಹಿಸಲೇಬೇಕಾದ ಪ್ರಸಂಗ ಮಗುವಿಗೆ ಬಂದರೆ ಆ ಮಗುವಿನ ವ್ಯಕ್ತಿತ್ವ ಕುಂಠಿತವಾದಂತೆಯೇ ಸರಿ.

ಇಂತಹ ಸಂದರ್ಭದಲ್ಲಿ ಪಾಲಕರು ಯಾವುದೇ ಮಗುವು ಇನ್ನೊಂದು ಮಗುವಿಗೆ ಹಿಂಸೆಯಾಗುವಂತಹ ರೀತಿಯಲ್ಲಿ, ಅಸಹಾಯಕತೆಯಿಂದ ಸಹಿಸುವಂತೆ ನಡೆದುಕೊಳ್ಳಲು ಆಸ್ಪದಕೊಡಬಾರದು. ಏಕೆಂದರೆ ಹಾಗೆ ಬೆಳೆದರೆ ಮಗು ಮುಂದೆ ಜೀವನದ ಕಠಿಣ ಪ್ರಸಂಗಗಳನ್ನು ಎದುರಿಸಲು ಅಸಮರ್ಥನಾಗುತ್ತದೆ. ಸಣ್ಣಪುಟ್ಟ ತಪ್ಪುಗಳಿಗೆಲ್ಲಾ ಮನೆಯವರು ಮೇಲಿಂದ ಮೇಲೆ ಟೀಕಿಸುತ್ತಿದ್ದರೆ, ಅವನಿಗೆ ಮುಂದೆ ಹೋಗುವ ಧೈರ್ಯವೇ ಇಲ್ಲವಾಗಿ ಅಳುಕು ಸ್ವಭಾವ ಉಂಟಾಗುತ್ತದೆ. ಯಾವುದಕ್ಕೂ ಅಂಜಿಕೆ; ಎಲ್ಲದಕ್ಕೂ ಹಿಂಜರಿಕೆ ತನ್ನ ಬಗ್ಗೆ ಕೀಳರಿಮೆಯುಂಟಾಗಿ ಆತ್ಮವಿಶ್ವಾಸವನ್ನು ಕಳೆದುಕೊಳ್ಳುತ್ತಾನೆ, ಅವನಿಗೆ ಮನೆಯಲ್ಲಿ ಊಟ, ಉಡುಗೆ, ತೊಡಿಗೆಗಳನ್ನೆಲ್ಲಾ ನೀವು ಕೊಟ್ಟರೂ ಮಕ್ಕಳೊಡನೆ ಹೇಗಿರಬೇಕೆಂಬ ತಿಳಿವಳಿಕೆ ಹಿರಿಯರಿಗಿಲ್ಲದಿದ್ದರೆ ಮಗುವಿನ ಪ್ರಗತಿದಾಯಕವಾದ ವ್ಯಕ್ತಿತ್ವದ ಬೆಳವಣಿಗೆ ಕುಂಠಿತವಾಗುತ್ತದೆ. ಮೂರು ವರುಷದ ಬುದ್ಧಿ ನೂರು ವರುಷದವರೆಗೆ ಎಂಬ ಅನುಭವದ ಗಾದೆಯ ನುಡಿಯನ್ನು ಸ್ಪಷ್ಟೀಕರಿಸುವಂತೆ ಈಗಿನ ಅನೇಕ ಪರಿಣಿತರ ಅಭ್ಯಾಸಗಳಲ್ಲಿಯೂ ವಯಸ್ಕ ವ್ಯಕ್ತಿತ್ವ ಬಾಲ್ಯದ ಅನುಭವಗಳಿಂದ, ಆಗಿನ ಕಾಲದಲ್ಲಿ ಮಗುವಿನೊಡನೆ ಸಂಪರ್ಕವಿದ್ದ ಜನರ ನಡೆ–ನುಡಿಗಳಿಂದ ಪ್ರಭಾವಿತವಾಗುತ್ತದೆ ಎಂಬುದು ಸ್ಪಷ್ಟಪಡಿಸಲ್ಪಟ್ಟಿದೆ.

ಬೆಳೆಯುವ ಹಂತದಲ್ಲಿ ಮಗುವಿಗೆ ಮುಖ್ಯವಾಗಿ ಪ್ರೀತಿ, ಸಹಕಾರ, ಮೆಚ್ಚುಗೆ ಪ್ರೋತ್ಸಾಹ ಹಾಗೂ ಮಾರ್ಗದರ್ಶನಗಳು ಸರಿಯಾದ ರೀತಿಯಲ್ಲಿ ದೊರೆಯಬೇಕು. ಇವುಗಳು ಅತಿಯಾದರೂ ಕೆಡಕು, ಇಲ್ಲವಾದರೂ ಅಪಾಯ, ಅಪೇಕ್ಷಣೀಯ ರೀತಿಯಲ್ಲಿ ದೊರೆಯದಿದ್ದರೆ ಅದರ ಪರಿಣಾಮ ಅವನಲ್ಲಿ ಕುಟುಂಬಕ್ಕೆ, ರಾಷ್ಟ್ರಕ್ಕೆ ಮಾರಕವಾದಂತಹ ಗುಣಗಳು ವ್ಯಕ್ತವಾಗುತ್ತವೆ. ಅವನು ಸ್ವಾರ್ಥಿಯೂ, ಕ್ರೂರಿಯೂ, ಅಸಹನೆ ಉಳ್ಳವನೂ ಆಗಬಹುದು. ಅವಿವೇಕಿಯೂ, ಅದಕ್ಷನೂ ಆಗುವುದಲ್ಲದೆ ಬೇರೆಯವರನ್ನು ದ್ವೇಷಿಸುವನು; ಪರರಿಗೆ ಕೇಡು ಬಗೆದು ಸಂತೋಷ ಪಡುವವನೂ ಆಗಬಹುದು, ಅಲ್ಲದೆ ಅಪ್ರಾಮಾಣಿಕನಾಗಿಯೂ, ಮೋಸಗಾರನಾಗಿಯೂ, ಬೇರೆಯವರ ಎದುರಿನಲ್ಲಿ ತಾನೂ ಒಳ್ಳೆಯವನೆಂಬಂತೆ, ಜಾಣನೆಂಬಂತೆ, ಉತ್ತಮ ವ್ಯಕ್ತಿತ್ವ ಉಳ್ಳವನೆಂಬಂತೆ ನಟಿಸುವವನಾಗಿಯೂ ಎಲ್ಲರನ್ನು ಕಡೆಗಣಿಸಿ ತನ್ನನ್ನು ಮೆರೆಸಿಕೊಳ್ಳುತ್ತಾನೆ. ಎಲ್ಲೆಲ್ಲಿಯೂ ಯಾವಾಗಲೂ ತನಗೆ ಲಾಭವಾಗಬೇಕೆಂಬ ದುರಾಸೆಯವನೂ ಆಗಿರುತ್ತಾನೆ.

ಯಾವುದೇ ಹಂತದ ಶಿಕ್ಷಣಕ್ಕೂ ಮನೆಯ ಪ್ರಭಾವ ಬಹಳ ಮಹತ್ವವಾದುದು, ಮಗುವಿನ ಪ್ರತಿಯೊಂದು ಅನಿಸಿಕೆಗೂ, ಆಸೆ–ಆಕಾಂಕ್ಷೆಗಳಿಗೂ, ನಡೆ–ನುಡಿಗಳಿಗೂ ಕುಟುಂಬವೇ ಬಹಳಷ್ಟು ಕಾರಣ, ಕುಟುಂಬವೇ ಎಂದಿಗೂ ವ್ಯಕ್ತಿತ್ವ ಕಮ್ಮಟ ಎಂಬುದು ಸತ್ಯವಾಕ್ಯ. ಮನೆಯಲ್ಲಿ ಸುಭದ್ರತೆಯಾಗಲೀ, ಮೆಚ್ಚುಗೆಯಾಗಲೀ

ದೊರೆಯದಿದ್ದರೆ ಆ ವ್ಯಕ್ತಿಯಲ್ಲಿ ಅತೃಪ್ತಿ ಅಸಮಾಧಾನ ಬೆಳೆದು ದುಶ್ಚಟಗಳಿಗೆ ಅಸಾಮಾಜಿಕ ನಡವಳಿಕೆಗಳಿಗೆ ತುತ್ತಾಗುತ್ತಾನೆ. ಆದುದರಿಂದ ಮನೆಯಲ್ಲಿ ಮಕ್ಕಳನ್ನು ಮೈಯೆಲ್ಲಾ ಕಣ್ಣಾಗಿ ಬೆಳೆಸುವುದರ ಜೊತೆಗೆ ಹೊರಗಿನ ಸ್ನೇಹವೂ ಉತ್ತಮವಾಗಿರುವಂತೆ ನೋಡಿಕೊಳ್ಳುವುದಗತ್ಯ. ಆಟವು ಮಗುವಿನ ಬೆಳವಣಿಗೆಗೆ ಊಟದಷ್ಟೇ ಮಹತ್ವ, ಅದೂ ಇತಿ-ಮಿತಿಯಾಗಿ ದೊರೆಯಬೇಕು. ಮಗು ಬೆಳವಣಿಗೆಯ ಬಹಳಷ್ಟು ಕಾಲವನ್ನು ಶಾಲೆಯಲ್ಲೇ ಕಳೆಯುವುದರಿಂದ ಉತ್ತಮ ಶಿಕ್ಷಣ ಹಾಗೂ ಮಾರ್ಗದರ್ಶನ ದೊರೆಯುವಂತಹ ಶಾಲೆಗೆ ಕಳುಹಿಸುವಲ್ಲಿಯೂ ಪಾಲಕರ ಜವಾಬ್ದಾರಿ ಇದೆ. ಶಾಲೆಗೆ ಕಳಿಸಿದ ಮೇಲೂ ಅಲ್ಲಿ ಹೇಗೆ ಮುಂದುವರೆಯುತ್ತಿದ್ದಾನೆ ಎಂಬುದನ್ನು ಸದಾ ನಿರೀಕ್ಷಿಸುತ್ತಾ, ಸಕಾಲದಲ್ಲಿ ಸೂಕ್ತ ಮಾರ್ಗದರ್ಶನ ಮಾಡುವ ಹೊಣೆಗಾರಿಕೆಯೂ ಪಾಲಕರದ್ದೆ ಆಗಿದೆ.

ಇಷ್ಟೆಲ್ಲಾ ಜವಾಬ್ದಾರಿ ಮನೆಯದಾಗಿರುವಾಗ ನಮ್ಮ ದೇಶದಲ್ಲಿ ಮುಕ್ಕಾಲು ಮೂರುಪಾಲು ಮಕ್ಕಳಿಗೆ , ಇಂತಹ ಎಚ್ಚರಿಕೆ ವಹಿಸುವ ಜಾಣ್ಮೆಯಾಗಲಿ, ತಿಳಿವಳಿಕೆಯಾಗಲೀ, ಜವಾಬ್ದಾರಿಯಾಗಲೀ, ಅನುಕೂಲವಾಗಲೀ ಇಲ್ಲದಂತಹ ಮನೆ ಹಾಗೂ ಪಾಲಕರಿರುವುದು ಮಕ್ಕಳ ಹಾಗೂ ದೇಶದ ದುರದೃಷ್ಟ. ಇದರ ಕೊರತೆಯನ್ನು ನೀಗಿಸಲು ಶಾಲೆಗಳು ಮಹತ್ವದ ಪಾತ್ರ ವಹಿಸಬೇಕಾಗಿದೆ. ಶಾಲೆಯ ಪಾತ್ರ ಮಹತ್ವದ್ದಾಗುವಂತಹ ರೀತಿಯಲ್ಲಿ ಕೆಲಸ ಮಾಡಲು ಬೇಕಾದ ಸೌಲಭ್ಯ, ಮಾರ್ಗದರ್ಶನ, ಮೇಲ್ವಿಚಾರಣೆ ಪ್ರಜಾಸರ್ಕಾರದ್ದು ಎಂದು ಅಪೇಕ್ಷಿಸಿದರೆ ತಪ್ಪೇನಲ್ಲ.

ಮಕ್ಕಳ ವ್ಯಕ್ತಿತ್ವದ ವಿವಿಧ ರೀತಿಗಳನ್ನು ಸೂಚಿಸುವ ಈ ಪದ್ಯ ನನ್ನ ಈ ಲೇಖನದ ಆಶಯವನು ಪ್ರತಿಬಿಂಬಿಸುತ್ತದೆ.

ಟೀಕೆಗಳ ಮಧ್ಯದಲ್ಲಿ ಕುದಿದು ಬೆಳೆದ ಮಗು
ಪಡೆಯುವನು ಖಂಡಿಸುವ ಮನೋವೃತ್ತಿಯನು

ಹಗೆತನದ ಮಧ್ಯದಲಿ ಬೆಳೆದನಾದೊಡನೆ ಅವನಲ್ಲಿ
ಬೆಳೆಯುವುದು ಬಡಿದಾಟ-ಜಗಳದ ಪ್ರವೃತ್ತಿ

ಟೀಕೆ ಅಪಹಾಸ್ಯಗಳನುಂಡು ಬೆಳೆದ ಪೋರ
ಹಿಂದುಳಿವನೆಲ್ಲೆಡೆ ನಾಚಿ, ಮುದುಡಿ ಸಂಕೋಚದಿ

ಪ್ರತಿಕ್ಷಣ ಅಸೂಯೆಯ ಬೆಂಕಿಯಲಿ ಬೆಂದವನು
ನಿರಪರಾಧಿ ತಾನಾಗಿಯೂ ನಡೆವನಪರಾಧಿಯಂತೆ

ಮೆಚ್ಚುಗೆ, ಮತ್ತು ರಕ್ಷಣೆಯ ಕೊರತೆಯಲಿ ಬಂದವನು
ಕಳೆದುಕೊಳ್ಳುವನು ಅಸ್ತಿತ್ವ-ಆತ್ಮವಿಶ್ವಾಸವನು

ಕನಿಕರಕ್ಕೊಳಗಾಗಿ ಅನ್ಯರ ಕರುಣೆಯಲಿ ಬೆಳೆದವನು
ಕಳೆದುಕೊಳ್ಳುವವನಾತ್ಮಾಭಿಮಾನವನೆ

ಸ್ವಂತಿಕೆಗವಕಾಶವಿಲ್ಲದ ವಿಧೇಯತೆ
ಬೆಳೆಸುವುದು ಮಕ್ಕಳಲಿ ಅಧೀನ ಪ್ರವೃತ್ತಿಯನು
ಮಕ್ಕಳನು ಚೊಕ್ಕಟದಿ ಬೆಳಸಲಾಶಿಪ ನೀವು
ತಿಳಿದುಕೊಳ್ಳಿರಿ ತಮ್ಮ ಕರ್ತವ್ಯ, ಕರ್ಮವನು

ಉತ್ಸಾಹಗೊಂಡವನು, ಪ್ರೋತ್ಸಾಹ ಪಡೆದವನು
ಪಡೆಯುವನು ನಂಬಿಕೆ ಪ್ರವೃತ್ತಿ ಮತ್ತು ಆತ್ಮವಿಶ್ವಾಸವನು

ಪಾತ್ರನಾದರೆ ಅವನು ಮೆಚ್ಚುಗೆಗೆ- ನೆಚ್ಚುಗೆಗೆ
ಅನ್ಯರೊಳಿತನು ಕಂಡು ಮೆಚ್ಚುವುದ ಕಲಿಯುವನು

ಅನ್ಯಾಯಕೊಳಗಾಗದೆ ನಡೆ-ನುಡಿಯ ಕಲಿತವನು
ಆಗುವನು ಎಂದಿಗೂ ನಿಷ್ಪಕ್ಷಪಾತಿ

ಭದ್ರತೆಯ ಕೋಟೆಯಲಿ ನೆಮ್ಮದಿಯನುಂಡ ಮಗು
ಕಾಂಬ ವಿಶ್ವಾಸನೆ ಎಲ್ಲರಲಿ, ಎಲ್ಲೆಡೆಗೆ

ಸುಪ್ಪತ್ತಿಗೆಯ ತೃಪ್ತಿಯಲಿದ್ದವನು
ಪಡೆವನವನೆಂದಿಗೂ ಯೋಗ್ಯ ವ್ಯಕ್ತಿತ್ವವನು
ಮೆಚ್ಚುಗೆಯ ನೇಹದಲ್ಲಿ ಮಿಂದ ಮಗು ಎಂದಿಗೂ
ಬೆಳೆಸುವುದು ಸ್ನೇಹವನು ಎಲ್ಲರಲಿ, ಎಲ್ಲಡೆಗೆ
ಮಕ್ಕಳನು ಪಡೆವೊಂದು ಪುಣ್ಯ ಪಡೆದಿಹ ಜನರೆ
ತಿಳಿದುಕೊಳ್ಳಿರಿ ನಿಮ್ಮ ಕರ್ತವ್ಯ, ಕರ್ಮವನು
ಮುದ್ದು ಮಕ್ಕಳೆ ನೀವೂ ತಿಳಿದು ನಡೆಯಿರಿ
ನಿಮ್ಮ ಬಾಳು ಭವ್ಯವಾಗುವುದು ಎಂದು ಅರಿದು
(ಲೇಖಕರಾರೆಂಬುದು ತಿಳಿಯವ ಪದ್ಯವೊಂದರ ಭಾವಾನುವಾದ)

■

## ೭. ಮಕ್ಕಳೊಡನಾಟ ಕಲಿಸಬಲದು ಪಾಠ.

ಮಕ್ಕಳನ್ನು ಚೆನ್ನಾಗಿ ಬೆಳೆಸಬೇಕೆಂದು ಪ್ರತಿಯೊಬ್ಬ ತಾಯ್ತಂದೆಗಳೂ ಬಯಸುತ್ತಾರೆ. ಆದರೆ ಒಳ್ಳೆವರನ್ನಾಗಿ ಹೇಗೆ ಬೆಳಸಬೇಕು ಎಂಬುದು ಅನೇಕರಿಗೆ ಗೊತ್ತಿರುವುದಿಲ್ಲ. ಗೊತ್ತಿಲ್ಲದ ತಂದೆ – ತಾಯಿಯರ ಮಕ್ಕಳ ಸ್ಥಿತಿ ದಾರುಣ. ತಮ್ಮ ಅಜ್ಞಾನದಲ್ಲಿ ಮಕ್ಕಳ ಮನೋಭಾವ ಅರ್ಥಮಾಡಿಕೊಳ್ಳದೆ ಅವರನ್ನು ಹೇಗೆಂದರೆ ಹಾಗೆ ನಡೆಸಿಕೊಂಡಾಗ ಅವರ ಮನ ಮುದುಡಿ ವ್ಯಕ್ತಿತ್ವ ಕಮರುತ್ತದೆ. ತೆರೆದ ಮನಸ್ಸಿನಿಂದ ಅದರೊಡನೆ ಬೆರೆತರೆ ನಮ್ಮ ತಪ್ಪುಗಳು ಏನೆಂಬುದನ್ನು ಅರ್ಥ ಮಾಡಿಕೊಂಡು ತಿದ್ದಿಕೊಳ್ಳಬಹುದು. ಈ ಕೆಳಗಿನ ಅನುಭವಗಳು ಮಕ್ಕಳ ಮನೋಭಾವವನ್ನು ಸ್ಪಷ್ಟಪಡಿಸುತ್ತವೆ.

ಒಮ್ಮೆ ನಾನು ಆಕಸ್ಮಾತ್ತಾಗಿ ನನ್ನ ತಂಗಿಯ ಮಗಳ ಮನೆಗೆ ಹೋಗಿದ್ದೆ, ಅಲ್ಲಿ ಅವಳ, ಮುದ್ದಾದ ಐದುವರ್ಷದ ಮಗಳು ಕಾವ್ಯ ಕಂಡಳು. ಅವಳನ್ನು ಆಗಾಗ್ಗೆ ನೋಡಿದ್ದೆನಾದರೂ, ನನಗೂ ಮಗುವಿಗೂ ಅಂತಹ ಸಾಮಿಪ್ಯದ ಪರಿಚಯವಾಗಲವಕಾಶವಾಗಿರಲಿಲ್ಲ. ಈ ಸಾರಿ ಅವರೂರಿಗೆ ಹೋದಾಗ ಎಲ್ಲರೂ ಕೂಡಿ ಹತ್ತಿರದ ಆನೆಗೊಂದಿ ನೋಡಲೆಂದು ಕಾರಿನಲ್ಲಿ ಹೋಗುತ್ತಿದ್ದೆವು. ಮಗು ಅನೇಕ ಪ್ರಶ್ನೆಗಳನ್ನು ಕೇಳುತ್ತಿತ್ತು. ಹೊಲದಲ್ಲಿ ಬೆಳೆದಿದ್ದ ಸೇಂಗಾ ಗಿಡಗಳನ್ನು ನೋಡಿ ಅನೇಕ ಪ್ರಶ್ನೆ; ದೇವರ ಗುಡಿ ನೋಡಿ ಸಾಕಷ್ಟು ಪ್ರಶ್ನೆಗಳು. ಅವಕ್ಕೆಲ್ಲಾ ತಾಳ್ಮೆಯಿಂದ ಮಗುವಿಗೆ ತೃಪ್ತಿಕೊಡುವ ರೀತಿಯಲ್ಲಿ ಉತ್ತರ ಹೇಳುತ್ತಿರುವಾಗ ಅವಳಿಗೆ ನನ್ನ ಬಗೆಗೆ ಒಂದು ತರಹದ ನಂಬಿಕೆ, ವಿಶ್ವಾಸ ಮೂಡಿತು, ತನ್ನ ಅಜ್ಜಿಯ ಹತ್ತಿರ ಕೂತಿದ್ದವಳು ನನ್ನ ಹತ್ತಿರ ಬಂದಳು, ತನ್ನೆಲ್ಲ ಸಮಸ್ಯೆಗಳಿಗೆ ನಾನು ಪರಿಹಾರ ಕೊಡಬಹುದೆಂದು ಅನ್ನಿಸಿತೊ ಏನೋ?

'ಅಜ್ಜೀ ನನ್ನ ಎಲ್ಲಾ ಕೆಲ್ಸಾನೂ ನನಗೆ ನಾನೆ ಮಾಡ್ಕೊಳ್ಳಿಕ್ಕಾಗುತ್ತೇ, ಆದ್ರೆ ಇವ್ರು ಭಿಡ್ಲೋದೇ ಇಲ್ಲ, ತಾವೇ ಮಾಡಬಿಡ್ತಾರೆ' ಎಂದಳು. ನನಗೆ ಮಗುವಿನ ಸ್ವಾವಲಂಬನೆಯ ಆಸೆ ಗಮನಿಸಿ, 'ಅಯ್ಯೋ ಪಾಪ' ಎನ್ನಿಸಿತು, ಏಕೆಂದರೆ ಮಕ್ಕಳದು ಅನುಕರಣೀಯ ಸ್ವಭಾವ, ತಮ್ಮ ಎದುರಿಗೇ ದೊಡ್ಡವರು ತಮ್ಮ ಕೆಲಸವನ್ನು ತಾವೇ ಮಾಡಿಕೊಳ್ಳುವುದನ್ನು ನೋಡುತ್ತಿರುತ್ತಾರೆ. ತಾವೇ ಮಾಡಿಕೊಳ್ಳಬೇಕೆನಿಸುತ್ತದೆ.

ಅಲ್ಲದೆ ಸ್ವಾವಲಂಬನೆಯ ಭಾವ ಆಗ ಚಿಗುರೊಡೆಯುತ್ತಿರುತ್ತದೆ. ಜೊತೆಗೆ ಬೇರೆಯವರನ್ನು ಅವಲಂಬಿಸುವುದೇ ಬೇಡ ಎಂಬ ಆತ್ಮಾಭಿಮಾನವು ಮೊಳಕೆಗೊಳ್ಳುತ್ತಿರುತ್ತದೆ. ಇದೆಲ್ಲಾ ಒಟ್ಟುಗೂಡಿ, ಮಕ್ಕಳಿಗೆ ತಮ್ಮ ಕೆಲಸಗಳನ್ನು ತಾವೇ ಮಾಡಿಕೊಳ್ಳಬೇಕೆಂಬ ಆಸೆ ಮೂಡಿಸುತ್ತದೆ. ಆ ಆಸೆ ನೆರವೇರದಿದ್ದಾಗ ಮಗುವಿಗೆ ಒಳಗೇ ಏನೋ ಒಂದು ರೀತಿಯ ಕಸಿವಿಸಿ; ಆತಂಕ; ಅಸಮಾಧಾನ, ದೊಡ್ಡವರಾದ ನಾವು ಅವಸರದಲ್ಲಿದ್ದಾಗ, ಮಗುವಿಗೆ ತಾನೇ ತನ್ನ ಕೆಲಸ ಮಾಡಿಕೊಳ್ಳಲೆಂದು ಬಿಟ್ಟರೆ, ತುಂಬಾ ಹೊತ್ತಾಗುವುದೆಂದು ನಾವೆ ಮಾಡಿಬಿಡುತ್ತೇವೆ. ಆಗ ಮಗುವಿನ ಅನಿಸಿಕೆಗಳ ಕಡೆಗೆ ಲಕ್ಷ್ಯ ಕೊಡುವುದೇ ಇಲ್ಲ, ಅಲ್ಲದೆ ಮಗುವಿಗೆ ಊಟ ಮಾಡಿಸುವುದರಲ್ಲಿ ಬಟ್ಟೆ ಹಾಕುವುದರಲ್ಲಿ, ಹಾಲು ಕುಡಿಸುವುದರಲ್ಲಿ, ಸ್ನಾನಮಾಡಿಸುವುದರಲ್ಲಿ ನಮಗೂ ಏನೋ ಒಂದು ತರಹಯ ಆನಂದ, ಕೆಲವು ಸಾರಿ, ಮಕ್ಕಳಿಗೆ ಸರಿಯಾಗಿ ಸ್ನಾನ ಮಾಡಿಕೊಳ್ಳಲೂ ಬರುವುದಿಲ್ಲ; ಊಟ ಮಾಡುವಾಗ ತಟ್ಟೆಸುತ್ತ ಚಲ್ಲಿಬಿಡುತ್ತಾರೆ; ಮೈಮೇಲೆಲ್ಲಾ ಸುರಿಸಿಕೊಂಡು ಬಿಡುತ್ತಾರೆ ಎಂಬ ವಿಚಾರದಲ್ಲಿ, ಆ ಕೆಲಸಗಳನ್ನು ಸರಿಯಾಗಿ ಹೇಗೆ ಮಾಡಿಕೊಳ್ಳಬೇಕು ಎಂಬುದನ್ನು ತಾಳ್ಮೆ ವಹಿಸಿದರೆ ಕಲಿಸಲು ಸಾಧ್ಯ ಎನ್ನುವುದನ್ನು ತಾತ್ಕಾಲಿಕವಾಗಿ ಮರೆತುಬಿಡುತ್ತೇವೆ. ನಮಗೆ ಮಕ್ಕಳ ಬಗೆಗೆ ಸಾಕಷ್ಟು ಪ್ರೀತಿ ಇರುತ್ತದೆ. ಪ್ರೀತಿ, ಅತಿಯಾದ ಕಾಳಜಿ ವಹಿಸುವಂತೆ ಮಾಡುವುದೇ ಇದಕ್ಕೆಲ್ಲಾ ಕಾರಣ.

ಕಾವ್ಯಳ ಇನ್ನೊಂದು ದೂರು ಎಂದರೆ, ಅಜ್ಜೀ ನನಗೆ tables, spelling, rhymes ಎಲ್ಲಾ ಬರುತ್ತೆ, ಆದ್ರೆ ಕ್ಲಾಸ್‌ನಲ್ಲಿ ಟೀಚರ್, ಮಾನೀಟರ್‌ಗೆ, 'ಕಾವ್ಯಾನ್ನ ಕೇಳ್ಬೇಡ ಬೇರೆಯವ್ರನ್ನ ಕೇಳು, ಅಂತಾರೆ' ನನ್ನ ಕೇಳೊದೇ ಇಲ್ಲ' ಎನ್ನುವುದು ಈ ಬುದ್ಧಿವಂತ, ಚುರುಕಾದ ಮಗು ಮನೆಯಲ್ಲಿ ಎಲ್ಲವನ್ನೂ ಚೆನ್ನಾಗಿ ಕಲಿತು, ಶಾಲೆಯಲ್ಲಿ ಎಲ್ಲರೆದುರಿಗೆ ಹೇಳಿ, ಟೀಚರ್‌ರಿಂದ 'ಶಹಬಾಶ್' ಎನ್ನಿಸಿಕೊಳ್ಳಬೇಕೆಂಬಾಸೆಯಲ್ಲಿ ಹೋಗಿರುತ್ತದೆ. ಆದರೆ ಈಗಂತೂ ತರಗತಿಯಲ್ಲಿ ತುಂಬಾ ಮಕ್ಕಳು, ಅದರಿಂದ ಶಿಕ್ಷಕಿ 'ಕಾವ್ಯ ಹೇಗೂ ಕಲಿತೇ ಬಂದಿರುತ್ತಾಳೆ, ಬುದ್ಧಿವಂತಳಿದ್ದಾಳೆ, ಅವಳನ್ನು ಕೇಳುವುದು ಟೈಂ ದಂಡ ಮಾಡುವ ಬದಲು ಕಲಿಯದಿರುವ ಮಕ್ಕಳ ಕಡೆ ಗಮನಕೊಡೋಣ ಎಂಬ ವಿಚಾರದಿಂದ, ಈ ಬುದ್ಧಿವಂತ ಮಗುವಿನ ಕಡೆ ಗಮನ ಕೊಡುವುದಿಲ್ಲ. ಆಗ ಮಗುವಿಗಾಗುವ ನಿರಾಸೆ ಅಷ್ಟಿಷ್ಟಲ್ಲ, ಈ ನಿರಾಸೆ ಟೀಚರ್‌ಗೆ ಗೊತ್ತೇ ಆಗುವುದಿಲ್ಲ. ಆದರೆ ಬುದ್ಧಿವಂತ ಮಗುವಿನ 'ಶಹಬಾಶ್' ಎನ್ನಿಸಿಕೊಳ್ಳುವ ಆಸೆ ಪೂರ್ಣಗೊಳ್ಳಲು ಅವಕಾಶ ಸಿಗದಿದ್ದರೆ ಮಗುವಿಗಾಗುವ ನಿರಾಸೆ, ನಿರಾಸೆಯಿಂದ ಮಗುವಿನ ಮನಸ್ಸಿನ ಮೇಲಾಗುವ ಪರಿಣಾಮದ ಬಗ್ಗೆ ಟೀಚರ್ ಆದವರಿಗೆ ಲಕ್ಷ್ಯ ಇರಬೇಕಾದುದು ಅವಶ್ಯಕ. ಮಗುವನ್ನು ಅಲಕ್ಷಿಸಬೇಕೆಂದೇನೂ ಶಿಕ್ಷಕರು ಹಾಗೆ ಮಾಡಿರುವುದಿಲ್ಲ. ಆದರೆ ಬುದ್ಧಿವಂತ

ಮಗುವಿನ ಬೆಳವಣಿಗೆಗೂ ಲಕ್ಷ್ಯ ವಹಿಸುವುದಗತ್ಯ. ಇಲ್ಲದಿದ್ದಲ್ಲಿ ಬೆಳೆಯುವ ಮಗುವಿನ ಎಳೆಯ ಮೃದುಮನಸ್ಸಿನ ಮೇಲೆ ದುಷ್ಪರಿಣಾಮವಾಗುವ ಸಾಧ್ಯತೆ ಉಂಟು. ಮುಂದೆ ಅವರ ಬುದ್ಧಿಶಕ್ತಿ, ಇಂತಹ ಅನುಭವಗಳು ಹೆಚ್ಚಿದರೆ ಕುಂದುತ್ತಾ ಹೋಗುತ್ತದೆ.

ಕಾವ್ಯಳ ಈ ಮಾತುಗಳನ್ನು ಕೇಳಿದಾಗ, ಹಿಂದಿನ ಅನೇಕ ಘಟನೆಗಳು ನೆನಪಿಗೆ ಬಂದವು. ಈಗ ಸುಮಾರು ಇಪ್ಪತ್ಮೂರು ವರ್ಷಗಳ ಹಿಂದಿನ ಮಾತು, ನನ್ನ ತಂಗಿಯ ಎರಡು ವರ್ಷದ ಮಗಳೊಬ್ಬಳು ನಮ್ಮ ಮನೆಯಲ್ಲಿದ್ದಳು, ಆ ಪುಟ್ಟ ಹುಡುಗಿ ತುಂಬಾ ಮುದ್ದು ಮುದ್ದಾಗಿ ಮಾತನಾಡುತ್ತಿತ್ತು. ಆಕೆಯೊಡನೆ ನಾನು, ನನ್ನ ಯಜಮಾನರು ಎಷ್ಟೋ ಮಾತನಾಡುತ್ತಿದ್ದೆವು, ನಾವು ದಿನಾಲೂ ನೌಕರಿ ಮುಗಿಸಿ ಸಂಜೆ ಮನೆಗೆ ಬಂದ ಮೇಲೆ, ಅವಳನ್ನು ಕರೆದುಕೊಂಡು ಹೊರಗೆ ಅಡ್ಡಾಡಲು ಹೋಗುತ್ತಿದ್ದೆವು, ಒಂದು ದಿನ ಹೀಗೆ ಹೋದಾಗ ಒಂದು ಕಡೆ ಕುಳಿತೆವು, ನಮ್ಮ ಮನೆಯವರು ಮಗುವಿಗೆ ಕಥೆ ಹೇಳತೊಡಗಿದರು. 'ಒಂದೂರಲ್ಲಿ ಒಂದು ಹುಡ್ಗಿ ಇತ್ತಂತೆ, ಅವಳ ಹೆಸರು ರಾಣಿ ಅಂತಂತೆ (ಅವಳನ್ನು ನಾವು ಮುದ್ದಿನಿಂದ 'ರಾಣಿ' ಎಂದು ಕರೆಯುತ್ತಿದ್ದೆವು) ಅವಳು ತುಂಬಾ ಆಸಕ್ತಿಯಿಂದ ಆಲಿಲಿಸುತ್ತಿದ್ದಳು. ಅಷ್ಟರಲ್ಲೆ ನನಗೇನೋ ಮನೆಯ ವಿಚಾರ ನೆನಪು ಬಂದು ನಮ್ಮ ಮನೆಯವರನ್ನು ಮಾತನಾಡಿಸಿದೆ. ಆಗ ಅವರು ಕಥೆ ಹೇಳುವುದನ್ನು ನಿಲ್ಲಿಸಿ ನನ್ನೊಂದಿಗೆ ಮಾತಾಡತೊಡಗಿದರು. ಕೂಡಲೇ ಛಟೀರ್ ಎಂಬ ಒಂದು ಏಟು ನನ್ನ ಕಪಾಳಕ್ಕೆ ಬಿದ್ದಿತು. ರಾಣಿಗೆ ರಸಭಂಗವಾಗಿತ್ತು, ತನ್ನ ಸಂತೋಷಕ್ಕೆ ಅಡ್ಡಿ ತಂದ ನನ್ನ ಮೇಲೆ ತಡೆಯಲಾರದ ಸಿಟ್ಟು ಬಂದಿತ್ತು. ಕೆನ್ನೆಗೆ ಒಂದು ಬಿಗಿದು, 'ದದ್ದಪ್ಪಾಜಿ ಒಂದು ಹುಗ್ಗಿತ್ತೆಂತ ಹೇಳ್ತಿದ್ದಾರೆ . . . .' ಎಂದಳು ಆಗ ನನಗೆ ನಾನು ಮಾಡಿದ ತಪ್ಪಿನ ಅರಿವಾಗಿತ್ತು. ದೊಡ್ಡವರಾದ ನಾವು ಮಕ್ಕಳೊಡನೆ ವ್ಯವಹರಿಸುವಾಗ, ನಮ್ಮ ಮಾತು, ಕೆಲಸಗಳ ಪರಿಣಾಮ ಕಂದಮ್ಮಗಳ ಮೇಲೆ ಏನಾದೀತು ಎಂಬುದರ ಕಲ್ಪನೆ ಮಿಂಚಿನಂತೆ ಮನಸ್ಸಿನಲ್ಲಿ ಹೊಳೆಯಬೇಕು. ಬುದ್ಧಿ ಪಾದರಸದಂತೆ ಕೆಲಸ ಮಾಡಬೇಕು. ಈ ರೀತಿಯ ನಡೆ–ನುಡಿ ಮಗುವಿನ ಸಮರ್ಪಕ ಬೆಳವಣಿಗೆಗೆ ಸಹಾಯಕ.

ನಮ್ಮ ಬಂಧುಗಳ ಹುಡುಗನೊಬ್ಬ ನಮ್ಮ ಮನೆಯಲ್ಲಿ ಓದುತ್ತಿದ್ದ, ಅವನಿಗೆ ಹೊಸ ಶಾಲೆ, ಹೊಸ ಬೋಧನಾ ಪದ್ಧತಿ, ಹೊಸ ಸ್ನೇಹಿತರು, ಒಟ್ಟಿನಲ್ಲಿ ಹೊಸ ಪರಿಸರಕ್ಕೆ ಹೊಂದಿಕೊಳ್ಳಲು ಕಷ್ಟವಾಯ್ತು. ಅಲ್ಲದೆ ತರಗತಿಯಲ್ಲೂ ತುಂಬಾ ಮಕ್ಕಳು, ಸ್ಥಳಾವಕಾಶ ಕಡಿಮೆ, ಒಂದು ಬೆಂಚಿಗೆ ಆರೇಳು ಮಕ್ಕಳು ಕೂಡ ಬೇಕಾಗುತ್ತಿತ್ತು. ಇಡೀ ಪೀರಿಯಡ್, ಹುಡುಗರು ಒಬ್ಬರನ್ನೊಬ್ಬರು ತಳ್ಳುತ್ತಾ, ಅನುಕೂಲವಾಗಿ ಕುಳಿತುಕೊಳ್ಳಬೇಕೆಂಬ ಪ್ರಯತ್ನದಲ್ಲೇ ಕಳೆಯುತ್ತಿತ್ತು. ಸ್ಥಳಕ್ಕಾಗಿ

ಹುಡುಗರಲ್ಲಿ ತಿಕ್ಕಾಟ-ಜಗಳ, ಇದೊಂದನ್ನೂ ಗಮನಕ್ಕೆ ತೆಗೆದುಕೊಳ್ಳದೆ ಶಿಕ್ಷಕರು, ಗಲಾಟೆ ಮಾಡುತ್ತಾರೆಂದು ಮಕ್ಕಳನ್ನು ಹೊಡೆಯುತ್ತಿದ್ದರು, ಬೆಂಚಿನ ಮೇಲೆ ನಿಲ್ಲಿಸುತ್ತಿದ್ದರು, ಕ್ಲಾಸಿನಿಂದ ಹೊರಗೆ ಕಳಿಸುತ್ತಿದ್ದರು, ಹೀಗಾಗಿ ಆ ಹುಡುಗ ದಿನವೂ, ಶಾಲೆಯಿಂದ ನಿರುತ್ಸಾಹಿಯಾಗಿ ಬರುತ್ತಿದ್ದ, ಓದಿನಲ್ಲೂ ಆಸಕ್ತಿ ತೋರಿಸುತ್ತಿರಲಿಲ್ಲ. ಮೂರು ತಿಂಗಳ ಪರೀಕ್ಷೆಯಾಯಿತು. ಎಲ್ಲಾ ವಿಷಯಗಳಲ್ಲೂ ಅತೀ ಕಡಿಮೆ ಅಂಕ ಪಡೆದಿದ್ದ, ಮ್ಯಾಥ್ಸ್‌ನಲ್ಲಂತೂ ಮೂರೇ ಅಂಕಗಳು. ನನಗೂ ಆ ವಿಷಯ ಹೇಳಿಕೊಡಲು ಗೊತ್ತಿರಲಿಲ್ಲ, ಹಾಗಾಗಿ ಟ್ಯೂಷನ್‌ಗೆ ಗೊತ್ತುಮಾಡಿದೆ, ಟ್ಯೂಷನ್‌ಗೆ ಹೋದರೂ ಪ್ರಗತಿ ಕಾಣಲಿಲ್ಲ. ಅಷ್ಟೇ ಅಲ್ಲ, ಮನೆಪಾಠಕ್ಕೂ ಹೋಗಲು ಇಷ್ಟವೇ ಪಡುತ್ತಿರಲಿಲ್ಲ, ಆಗ ಒಂದು ದಿನ ಲೆಕ್ಕದ ನೋಟ್ಸ್ ತೆಗೆಸಿ ನೋಡಿದೆ, ಅದರಲ್ಲಿ ಏನನ್ನು ಸರಿಯಾಗಿ ಬರೆದಿರಲಿಲ್ಲ. 'ಏಕೆ ಎಂದು ಕೇಳಿದೆ, ' ಅವರು ಹೇಳಿಕೊಡುವುದು ನನಗೆ ಅರ್ಥವಾಗುವುದೇ ಇಲ್ಲ' ಎಂದ. 'ಅದಕ್ಕಾಗಿಯೇ ನಿನ್ನನ್ನು ಮನೆಪಾಠಕ್ಕೆ ಕಳಿಸುತ್ತಿರುವುದು, ನಿನಗೆ ಅರ್ಥವಾಗದಿದ್ದರೆ ಟೀಚರ್‌ಗೆ ತಿಳಿಸಬೇಕು, ಮತ್ತೊಮ್ಮೆ ಹೇಳಿಕೊಡಿ' ಎಂದು ಕೇಳಬೇಕು. ಎಂದೆ. ಒಂದು ದಿನ ಹಾಗೆ ಕೇಳಿದನಂತೆ 'ಎಲ್ರಿಗೂ ಅರ್ಥ ಆಗುತ್ತೆ, ನಿನಗೆ ಅರ್ಥ ಆಗುವುದಿಲ್ಲವೇ? ಹೇಳಿಕೊಡಬೇಕಾದರೆ ಸಗಣಿ ತಿನ್ನುತ್ತಿದ್ದೆಯಾ' ಎಂದರಂತೆ, ಆಗ ಉಳಿದ ಹುಡುಗರೆಲ್ಲಾ ಗೊಳ್ಳೆಂದು ನಕ್ಕರಂತೆ, ಅದರಲ್ಲಿ ಶಿಕ್ಷಕರೂ ಸೇರಿದ್ದರಂತೆ, ಈ ವಿಚಾರ ಕೇಳಿದ್ದೇ ನನ್ನ ಹೃದಯ ತಳಮಳಿಸಿತು, ಮಕ್ಕಳಿಗೆ ಹೀಗೆ ಎಲ್ಲರೆದುರಿಗೆ ಅವಮಾನಮಾಡಿದರೆ, ಅವರ ಮನಸ್ಸಿನ ಮೇಲೆ, ಅಭ್ಯಾಸದ ಮೇಲೆ ಎಂತಹ ದುಷ್ಪರಿಣಾಮವಾಗುತ್ತದೆ ಎಂಬ ಮಕ್ಕಳ ಮನಶ್ಶಾಸ್ತ್ರದ ಅರಿವೇ ಇಲ್ಲದ ಆ ಟೀಚರ್ ಕಡೆ ಕಳಿಸುವುದನ್ನು ನಿಲ್ಲಿಸಿದೆ, ಇನ್ನೊಬ್ಬ ಶಿಕ್ಷಕರ ಬಳಿ ಹೋಗಿ, ಅವನ ಹಿನ್ನೆಲೆಯನ್ನು ಅವನ ಮನಸ್ಸಿಗಾಗಿರುವ ನೋವನ್ನೂ, ಅದರಿಂದಾಗಿರಬಹುದಾದ ಪರಿಣಾಮವನ್ನು ವಿವರಿಸಿದೆ, ಮಕ್ಕಳಲ್ಲಿ ಆತ್ಮವಿಶ್ವಾಸ ಕುದುರಿಸುವುದು ಪಾಠ ಹೇಳುವುದಕ್ಕಿಂತ ಅಗತ್ಯವೆಂಬ ಕಿವಿಮಾತನ್ನು ಆ ಶಿಕ್ಷಕರಿಗೆ ಹೇಳಿದೆ. ಶಿಕ್ಷಕರು ಚಿಕ್ಕವರಿದ್ದರೂ, ಉತ್ಸಾಹಿಯೂ, ಪ್ರತಿಭಾವಂತರೂ ಆಗಿ, ಉತ್ತಮ ಶಿಕ್ಷಕನಲ್ಲಿರಬೇಕಾದ ಅನೇಕ ಲಕ್ಷಣಗಳು ಅವರಲ್ಲಿ ಕಾಣಿಸಿದವು, ಆತ ಹುಡುಗನ ಕೊರತೆಗಳನ್ನು ಗಮನದಲ್ಲಿಟ್ಟುಕೊಂಡು, ಉತ್ಸಾಹ ಮೂಡುವಂತೆ ಮಾತನಾಡಿಸುತ್ತಾ ಪಾಠ ಹೇಳಿಕೊಡುತ್ತಿದ್ದರಂತೆ, ಈ ಅಂಶ ಹುಡುಗನಿಂದಲೇ ತಿಳಿದುಕೊಂಡೆ, ಅಲ್ಲದೆ ಹುಡುಗ ಓದಿನಲ್ಲಿ ಆಸಕ್ತಿ ತೋರಿಸಹತ್ತಿದ, ಅವನ ನಡೆ-ನುಡಿಯಲ್ಲಿ ಲವಲವಿಕೆ ಕಾಣಿಸಿತು, ಟ್ಯೂಷನ್‌ಗೆ ಹೋಗಲು ತುದಿಗಾಲಲ್ಲಿ ನಿಂತಿರುತ್ತಿದ್ದ, ಫೇಲ್ ಆಗಬಹುದೇನೋ ಎಂಬಂತಿದ್ದ ಅವನು ಎಸ್.ಎಸ್.ಎಲ್.ಸಿ. ಯನ್ನು ಪ್ರಥಮ ದರ್ಜೆಯಲ್ಲಿ ಪಾಸು ಮಾಡಿದ, ಈ ಘಟನೆಯಿಂದ ಮಕ್ಕಳ ಮಾನಸಿಕ ಮತ್ತು

ಬೌದ್ಧಿಕ ಬೆಳವಣಿಗೆಯಲ್ಲಿ ಶಿಕ್ಷಕನ ಹಾಗೂ ಪಾಲಕರ ಪಾತ್ರ ಹೇಗಿರಬೇಕೆಂಬುದನ್ನು ನಾವು ತಿಳಿದುಕೊಳ್ಳಬಹುದು.

ನಮ್ಮ ಮನೆಯಲ್ಲಿ ಇನ್ನೊಬ್ಬ ಹುಡುಗ ಓದುತ್ತಿದ್ದ, ಎಲ್ಲರಿಗೂ ಸಹಾಯ ಮಾಡುವ ಒಳ್ಳೆಯ ಸ್ವಭಾವ ಅವನದ್ದು, ವಯಸ್ಸಿಗೆ ಮೀರಿದ ರೀತಿಯಲ್ಲಿ ಬೇರೆಯವರನ್ನು ಅರ್ಥಮಾಡಿಕೊಂಡು ನೆರವು ನೀಡುತ್ತಿದ್ದ, ವಿಧೇಯತೆಯ ಗುಣವೂ ಇತ್ತು, ಬರುಬರುತ್ತಾ ಅವಿಧೇಯನೂ, ಜಗಳಗಂಟಿಗನೂ, ಅಸಹನೆ ಉಳ್ಳವನೂ ಸುಳ್ಳುಗಾರನೂ ಆಗಹತ್ತಿದ, ಇದನ್ನು ಗಮನಿಸಿ, ಕಾರಣ ಕಂಡುಹಿಡಿದಾಗ, ಶಾಲೆಯಲ್ಲಿ ತರಗತಿಗೆ ಶಿಕ್ಷಕರು ತುಂಬಾ ತಡವಾಗಿ ಬರುತ್ತಿದ್ದರೆಂದು ಆಗ ಹುಡುಗರು ಒಬ್ಬರಿಗೊಬ್ಬರು ಜಗಳವಾಡುತ್ತಾ ಕಾಲಕಳೆಯುತ್ತಿದ್ದರೆಂದೂ, ಬಲಿಷ್ಠ ಹುಡುಗರು ದುರ್ಬಲರನ್ನೂ, ಸೌಮ್ಯ ಸ್ವಭಾವದವರನ್ನೂ ತುಂಬಾ ಗೋಳು ಹುಯ್ದುಕೊಳ್ಳುತ್ತಿದ್ದರೆಂದು ತಿಳಿಯಿತು. ಅಲ್ಲದೆ 'ಏಕೆ' ಹೊಡಿತೀಯ ಎಂದು ಕೇಳಿದರೆ, ನೋವಿನಿಂದ ಅತ್ತರೆ, ಮತ್ತಷ್ಟು ಹೊಡೆಯುತ್ತಿದ್ದರಂತೆ, ಹೀಗೆ ತರಗತಿಯಲ್ಲಿ ದೊಂಬಿ ನಡೆಯುತ್ತಿರುವಾಗ ಶಿಕ್ಷಕರು ತರಗತಿಗೆ ಬರುತ್ತಿದ್ದರಂತೆ, ಬಂದವರೇ ತಪ್ಪು ಮಾಡುತ್ತಿದ್ದ ಬಲಿಷ್ಠ ಹುಡುಗನನ್ನು ಬಿಟ್ಟು, ಇವನಿಗೂ ಇವನಂತಹ ಇತರರಿಗೂ ಹೊಡೆಯುತ್ತಿದ್ದರಂತೆ, ಅನ್ಯಾಯವಾಗಿ ಶಿಕ್ಷೆಗೆ ಒಳಗಾಗುತ್ತಿದ್ದ ಅವನಿಗೆ ಎಲ್ಲರ ಬಗ್ಗೆ ಒಂದು ರೀತಿಯ ದ್ವೇಷ ಹುಟ್ಟಿತು. ತನ್ನ ಉಳಿವಿಗೆ ಸುಳ್ಳು ಹೇಳುವುದನ್ನು ಕಲಿತ, ಪುಂಡಾಟಿಕೆ ಕಲಿತ, ಆಶಿಸ್ತಿನಿಂದ ನಡೆಯುವುದು ರೂಢಿಯಾಯಿತು. ತನ್ನ ರಕ್ಷಣೆಗಾಗಿ ತನ್ನಂತಹವರದ್ದೇ ಒಂದು ಗುಂಪು ಕಟ್ಟಿಕೊಂಡ, ಈ ಸ್ಥಿತಿಯನ್ನೆಲ್ಲಾ ಕೇಳಿದ ನಾನು, ಶಾಲೆಗೆ ಹೋಗಿ ಮುಖ್ಯಾಧ್ಯಾಪಕರಿಗೆ ವಿವರಿಸಿದೆ. ಆದರೆ ಆತನಿಗೆ ತನ್ನ ಸಹೋದ್ಯೋಗಿಗಳ ಮೇಲೆ ಹಿಡಿತವಿಟ್ಟುಕೊಳ್ಳುವ ಶಕ್ತಿ ಇರಲಿಲ್ಲ. ಶಿಕ್ಷಕರು ತಮ್ಮ ಮೇಲಿನ ಆರೋಪ ಒಪ್ಪಿಕೊಳ್ಳಲು ಸಿದ್ಧರಿರಲಿಲ್ಲ. ಯಾವ ರೀತಿಯ ಸುಧಾರಣೆಯನ್ನೂ ಶಾಲೆಯಲ್ಲಿ ತರಲು ಅಸಮರ್ಥಳಾದೆ. ಹೀಗೆ ಬಿದ್ದ ಬುನಾದಿಯಿಂದ ಮುಂದೆ ಅವನಿಗೆ ಶಾಲೆ–ಓದು ಇದರ ಬಗ್ಗೆ ನಿರಾಸೆ, ದ್ವೇಷ, ನಿರಾಸಕ್ತಿಗಳು ಬೆಳೆದವು. ಅವನು ಅಭ್ಯಾಸವನ್ನೇ ಪೂರ್ಣಗೊಳಿಸಲಿಲ್ಲ. ಭವಿಷ್ಯ ಕತ್ತಲಾಯಿತು. ಈ ಉದಾಹರಣೆ ಶಾಲೆಯ ಆಡಳಿತ, ಶಿಕ್ಷಕರ ವರ್ತನೆ, ಅವರ ಕರ್ತವ್ಯ ನಿಷ್ಠೆ ಮುಂತಾದವು ನಿರೀಕ್ಷಿತ ರೀತಿಯಲ್ಲಿ ಇಲ್ಲದಿದ್ದರೆ, ಮಕ್ಕಳ ಮೇಲೆ ಎಂತಹ ದುಷ್ಪರಿಣಾಮ ಉಂಟು ಮಾಡುತ್ತವೆ. ಎಂಬ ಅಂಶವನ್ನು ಎತ್ತಿ ತೋರಿಸುತ್ತದೆ. ಈ ರೀತಿಯ ಶಾಲೆಗಳೇ ಹೆಚ್ಚಿರುವ ನಮ್ಮ ದೇಶದಲ್ಲಿ ಎಂತಹ ಪೀಳಿಗೆಯ ನಿರ್ಮಾಣವಾಗುತ್ತಿದೆ ಎಂಬುದನ್ನು ಊಹಿಸಬಹುದಾಗಿದೆ.

ಇನ್ನೊಂದು ಉದಾಹರಣೆ, ನನ್ನ ಮಗ ಇನ್ನೂ ನಾಲ್ಕು ವರ್ಷದವನಿದ್ದ, ಕೆ.ಜಿ. ಕ್ಲಾಸು ಬೆಳಿಗ್ಗೆ ಎಂಟರಿಂದ ಹನ್ನೊಂದೂವರೆಗೆ, ಬೆಳಿಗ್ಗೆ ೭.೩೦ಕ್ಕೆ ಮನೆ

ಬಿಟ್ಟರೆ, ೧೧.೩೦ಕ್ಕೆ ವಾಪಸ್ಸು ಬರುತ್ತಿದ್ದ, ಅವನು ಮನೆಗೆ ಬರುವಷ್ಟರಲ್ಲಿ ನಾವಿಬ್ಬರೂ ನಮ್ಮ ನಮ್ಮ ಕೆಲಸಗಳಿಗೆ ಹೋಗಿ ಬಿಡುತ್ತಿದ್ದೆವು, ಆದುದರಿಂದ ಅವನಿಗೆ ಊಟ ಸಿದ್ಧಗೊಳಿಸಿ ಒಂದು ಕ್ಯಾರಿಯರ್‌ನಲ್ಲಿ ಹಾಕಿ ಮನೆಯ ಮುಂದಿನ ಕೊಠಡಿಯಲ್ಲಿಟ್ಟು ಬೀಗ ಹಾಕಿ ಕೈ ಪಕ್ಕದ ಮನೆಗೆ ಕೊಟ್ಟು ಹೋಗಿರುತ್ತಿದ್ದೆವು, ಆಗ ಈ ನಾಲ್ಕು – ನಾಲ್ಕುವರೆ ವರ್ಷದ ಮಗ ಬಂದು ಬೀಗ ಕೈ ಯನ್ನು ಪಕ್ಕದ ಮನೆಯವರಿಂದ ಪಡೆದು, 'ಊಟಮಾಡಿ, ಪುನ: ಬೀಗಹಾಕಿ ಬೀಗದಕೈಯನ್ನು ಅವರಿಗೆ ಕೊಟ್ಟು ತಾನು, ಸಂಜೆಯವರೆಗೆ ಬಾಗಿಲಲ್ಲಿ ಆಡಿಕೊಂಡು ಇರಬೇಕಾಗುತ್ತಿತ್ತು. ನಮ್ಮ ನೌಕರಿಯ ಭರಾಟೆಯಲ್ಲಿ ಈ ಪುಟ್ಟ ಮಗುವಿನ ಮನಸ್ಸಿಗೆಷ್ಟು ನೋವಾಗಬಹುದೋ ಎಂಬ ಕಲ್ಪನೆಯೇ ಬಂದಿರಲಿಲ್ಲ, ಒಂದು ದಿನ ಮನೆಗೆ ಬಂದಾಗ ಅವನು, 'ಅಮ್ಮ ನನಗೆ ಇವತ್ತೆಲ್ಲಾ ಅಳು ಬರ್ತಿತ್ತು, ತಡ್ಯೋಕೆ ಆಗ್ತಿರಲಿಲ್ಲ, ಆಗ ಕಣ್ಣಲ್ಲಿ ನೀರು ಸುರೀತಾ ಇದೆ, ಒರ್ಸೋಕೆ ಯಾರೂ ಇಲ್ಲ' ಅಂತ ಹೇಳ್ಕೊಂಡು ಅಳ್ತಾ ಇದ್ದೆ ಎಂದ. ನನ್ನ ಕರುಳಿನಲ್ಲಿ ಕತ್ತರಿಯಾಡಿಸಿದಂತಾಯಿತು. ಹೊಟ್ಟೆಗೆ ಸುಣ್ಣದ ನೀರನ್ನು ಸುರುವಿದಂತಾಯಿತು. ಕೂಡಲೇ ತಾತ್ಕಾಲಿಕವಾದೊಂದು ವ್ಯವಸ್ಥೆ ಮಾಡಿದೆವು. ಮರುವರ್ಷದಿಂದ ಓದು ಮುಗಿಸಿದ್ದ ನನ್ನ ತಂಗಿಯನ್ನು ಕರೆಸಿಕೊಂಡೆವು, ಆದರೂ ಇಂದಿಗೂ ನನಗೆ, ಮನೆಯಲ್ಲಿ, ಮನೆ ಹಾಗೂ ಮಕ್ಕಳನ್ನೂ ನೋಡಿಕೊಳ್ಳುವವರು ಇಲ್ಲದಿದ್ದರೆ ತಾಯಿ ನೌಕರಿಗೇ ಹೋಗಬಾರದು ಎಂಬ ದೃಢ ಭಾವನೆ ಬೆಳೆದು ಬೇರೂರಿದೆ.

ಮತ್ತೊಂದು ನೆನಪು, ಒಮ್ಮೆ ನಮ್ಮ ಸಂಬಂಧಿಕರ ಮನೆಗೆ ಹೋಗಿದ್ದೆ, ಅವರ ಸೊಸೆ ಎರಡು ವರ್ಷದ ಚೊಚ್ಚಲ ಮಗುವಿನ ತಾಯಿ ಇದ್ದಳು, ಮಗು ಚೆನ್ನಾಗಿತ್ತು, ಆದರೆ ಅದರ ನಡವಳಿಕೆ ಗಮನಿಸಿದರೆ, ಆ ವಯಸ್ಸಿನ ಮಗುವಿನ ನಡೆ–ನುಡಿ ಕಾಣಿಸಲಿಲ್ಲ, ಪ್ರತಿ ಸಣ್ಣ ವಿಷಯಕ್ಕೂ ಮಗು ಗಾಬರಿಗೊಳ್ಳುತ್ತಿತ್ತು, ಏನು ಮಾಡಲೂ ಹಿಂಜರಿಯುತ್ತಿತ್ತು. ಒಂದು ದಿನ ಆಕೆಯ ಗೆಳತಿ ಈಕೆಯನ್ನು ನೋಡಲು ಬಂದಳು, ಜೊತೆಯಲ್ಲಿ ತನ್ನ ಮಗುವನ್ನು ಮೊದಲ ಬಾರಿಗೆ ಇವರ ಮನೆಗೆ ಕರೆತಂದಿದ್ದಳು, ಹೋಗುವಾಗ ಒಂದು ಮುದ್ದಾದ ಬೊಂಬೆಯನ್ನು ಗೆಳತಿಯ ಮಗುವಿಗೆ ಉಡುಗೊರೆ ಇತ್ತಳು, ಆ ಬೊಂಬೆ ತುಂಬಾ ಚೆನ್ನಾಗಿತ್ತು, 'ಎಷ್ಟು ಚೆನ್ನಾಗಿರುವುದನ್ನು ಕೊಡುತ್ತಿದ್ದಾಳಲ್ಲ ಎಂದು ನನಗೇ ಅನ್ನಿಸಿತು. ಅಷ್ಟು ಚೆನ್ನಾಗಿತ್ತು, ಅದನ್ನು ಬೇರೆಯ ಮಗುವಿಗೆ ಕೊಟ್ಟಿದ್ದನ್ನು ನೋಡಿದ ಈಕೆಯ ಎರಡು ವರ್ಷದ ಮಗು ಅದು ತನಗೆ ಬೇಕೆಂದು ಹಠ ಮಾಡಿತು. ಅತ್ತಿತು. ಮಗುವಿನ ಸಹಜವಾದ ಈ ವರ್ತನೆ ತಾಯಿಗೆ ಅಸಾಧ್ಯ ಕೋಪ ತರಿಸಿತು. ಒಳಗೆ ಕರೆದುಕೊಂಡು ಹೋದಳು, ಮಗುವಿನ ಚರ್ಮ ಹಿಡಿದು ಜೋರಾಗಿ ಹಿಂಡಿದಳು, ಮಗು ನೋವಿನಿಂದ ಅಳಲು ಹೋಯಿತು. ಛಟೀರೆಂದು ಬಾರಿಸಿ ಭಯಂಕರವಾಗಿ

ಮುಖಮಾಡಿ ಕಣ್ಣು ಹೊರಳಿಸುತ್ತಿದ್ದನ್ನು ನೋಡಿದ ಮಗು ಹೆದರಿ ಕಂಗಾಲಾಯಿತು. ಅಳುನುಂಗಿತು. ನಂತರ ಹೊರಗೆ ಕರೆದುಕೊಂಡು ಅದರ ಕೈಯಿಂದಲೇ ತನ್ನ ಗೆಳತಿಯ ಮಗುವಿಗೆ ಗೊಂಬೆ ಕೊಡಿಸಿದಳು ಆಗ ಮಗು ಸುಮ್ಮನೆ ಕೊಟ್ಟಿತು. ಆದರೆ, ಆಗ ಮಗುವಿನ ಮುಖದ ಮೇಲಿದ್ದ ಅಸಹಾಯಕತೆ, ದುಃಖ, ನೋವು, ಸಂದಿಗ್ಧತೆ ಬಿಂಬಿಸುವ ನೋಟ ಇಂದೂ ನನ್ನ ಕಣ್ಣು ಮುಂದೆ ಅಚ್ಚಳಿಯದಂತೆ ಉಳಿದಿದೆ. ಆ ಚಿತ್ರ ನೋಡಿದ ಯಾವ ಹೃದಯವೂ ಕರಗಿ ನೀರಾಗುತ್ತಿತ್ತು, ಇಲ್ಲಿ ತಾಯಿಗೆ ಮಗುವಿನ ಬಗ್ಗೆ ಅಪಾರ ಪ್ರೀತಿ ಇತ್ತು, ಮಗುವಿಗೆ ಒಳ್ಳೆಯ ಗುಣ ಕಲಿಸುವ ಆಸೆ ಇತ್ತು. ಆದರೆ ಮಗುವಿನ ಸಹಜ ಸ್ವಭಾವ ಅರ್ಥಮಾಡಿಕೊಳ್ಳುವ, ಇನ್ನೊಬ್ಬರಿಗೆ ವಸ್ತುವನ್ನು ಕೊಟ್ಟು ಸಂತೋಷ ಪಡುವಂತೆ ಮಾಡುವ ಪ್ರೀತಿಯ ಮಾರ್ಗದ ಅರಿವಿನ, ಅನುಭವದ ಕೊರತೆಯಿತ್ತು. ಮಕ್ಕಳು ಒಮ್ಮೆಗೆ ಪರಿಪೂರ್ಣರಾಗಲು ಸಾಧ್ಯವಿಲ್ಲ, ಕಾಲಾನುಕ್ರಮವಾಗಿ ಕಲಿಯುತ್ತಾರೆ. ಅವರು ಕಲಿಯಬೇಕಾದ ಒಳ್ಳೆಯ ನಡತೆಯನ್ನು ನಮ್ಮಲ್ಲಿ ಅಳವಡಿಸಿಕೊಂಡು ನಾವೇ ಬದುಕುತ್ತಿದ್ದರೆ, ಇಂದಲ್ಲದಿದ್ದರೂ ನಾಳೆ ಸರಿಯಾದ ನಡೆ ಕಲಿತೇ ಕಲಿಯುತ್ತಾರೆ ಎಂಬ ತತ್ವದ ಕಡೆಗೆ ಆಕೆ ಗಮನ ಕೊಡಬೇಕಿತ್ತು, ಅನುಭವ ಕಡಿಮೆ ಇದ್ದವರು ಹೆಚ್ಚು ಇದ್ದವರ ಅನುಕರಣೆ ಮಾಡಿದರೆ, ಅವರ ಸಲಹೆಯಂತೆ ನಡೆದರೆ ಅವಮಾನವೇನಲ್ಲ ಎಂಬ ತಿಳಿವಳಿಕೆ ಇರುವುದು ಎಲ್ಲರಿಗೂ ಅಗತ್ಯ.

ಇನ್ನೂ ಒಂದು ನೆನಪು. ಒಂದು ದಿನ ನನ್ನ ಸ್ನೇಹಿತೆ ಮೂರು ವರ್ಷದ ತನ್ನ ಮಗುವಿನೊಡನೆ ನಮ್ಮ ಮನೆಗೆ ಬಂದಿದ್ದಳು, ಈ ವಯಸ್ಸಿಗೆ ತನ್ನ ಮಗುವಿಗೆ ಶಿಸ್ತು ಕಲಿಸಿದ್ದೇನೆಂದು ಆ ವಯಸ್ಸಿನ ಮಕ್ಕಳಂತೆ ತನ್ನ ಮಗು ಹಠ ಮಾಡುವುದಿಲ್ಲವೆಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದಳು. ಆಕೆ ನಮ್ಮಲ್ಲಿದ್ದ ಎರಡು ಮೂರು ದಿನಗಳಲ್ಲಿ ಮಗುವಿನೊಡನೆ ಅವಳು ವ್ಯವಹರಿಸುತ್ತಿದ್ದುದನ್ನು ನಾನು ಸೂಕ್ಷ್ಮವಾಗಿ ಗಮನಿಸುತ್ತಿದ್ದೆ, ಬಟ್ಟೆ ಹಾಕುತ್ತಿದ್ದಳು, ಊಟ ಮಾಡುವಾಗ ಇದುಬೇಕು – ಅದುಬೇಡ ಎನ್ನುವುದಕ್ಕೆ ಆಸ್ಪದವನ್ನೇ ಕೊಡದೆ ಬಲವಂತದಿಂದಲೋ ಹೆದರಿಸಿಯೋ ತಾನು ತಿನ್ನಿಸಿದುದನ್ನೇ, ತಿನ್ನುವಂತೆ ಮಾಡುತ್ತಿದ್ದಳು, ಸ್ನಾನಮಾಡುವಾಗ ಮಗು ತಾನೇ ತಂಬಿಗೆಯಿಂದ ನೀರು ಹಾಕಿಕೊಳ್ಳಲು ಹೋದರೆ ತಂಬಿಗೆಯಿಂದಲೇ ತಲೆಗೆ ಕುಕ್ಕಿ, ತಾನೇ ನೀರು ಹಾಕಿದಳು, ಮಗು ಅಸಯಕತೆಯಿಂದ, ಶಿಕ್ಷೆಯಾಗುವುದೆಂಬ ಭಯದಿಂದ ಹೇಳಿದಂತೆ ಕೇಳುತ್ತಿತ್ತು, ಹಸಿವಾದರೂ ಸಹ ತಾನೇ ಊಟಕ್ಕೆ ಕೇಳಲು ಅಂಜುತ್ತಿತ್ತು. ಆಕೆ ಕೊಟ್ಟಾಗಲೇ ಊಟ ಮಾಡಬೇಕು. ಮರೆತರೂ ಮಗು ಬಾಯಿಬಿಡಲು ಹೆದರುತ್ತಿತ್ತು. ಶಿಸ್ತನ್ನು ಕಲಿಸುವ ಇಂತಹ ತಾಯಿಯರೂ ಇರುತ್ತಾರೆ. ಒತ್ತಡಕ್ಕೆ ಬಲಿಯಾಗಿ ತೋರಿಸುವ ಶಿಸ್ತು ಶಿಸ್ತಲ್ಲ. ಮನಸ್ಸನ್ನು ಹತ್ತಿಕ್ಕಿಕೊಂಡು, ಅಸಹಾಯಕತೆಯಿಂದ ತೋರಿಸುವ ವಿಧೇಯತೆ

ಶಿಸ್ತಲ್ಲ ಎಂಬುದನ್ನು ತಾಯಿಯಾದವಳು, ಶಿಕ್ಷಕರಾದವರು ಎಷ್ಟು ಬೇಗ ತಿಳಿದುಕೊಂಡರೆ ಅಷ್ಟು ಒಳ್ಳೆಯದು. ಈ ರೀತಿಯ ಬಲವಂತದಿಂದ ತೋರಿಸುವ ಶಿಸ್ತು ಮಗುವಿನ ( Original thinking ) ಸ್ವಂತ ಯೋಚಿಸುವ ಶಕ್ತಿಯನ್ನೇ ನಾಶಮಾಡುತ್ತದೆ. ಮೇಲಿಂದ ಮೇಲೆ ಉಂಟಾಗುವ ಮನಸ್ಸಿನ ಒತ್ತಡದಿಂದ ಅಸಹಾಯಕತೆಯಿಂದ ಮುಂದೆ ಸಮತೋಲನ ಮನಸ್ಸು ಉಳಿಯುವುದು ಕಷ್ಟವಾಗುತ್ತದೆ. ಎಮೋಷನಲ್ ಬ್ಯಾಲೆನ್ಸ್ ಮಗುವಿಗೆ ಇಲ್ಲವಾಗುತ್ತದೆ. ಅವರು ಮುಂದೆ ಸಂಕೋಚದಿಂದ, ಭಯದಿಂದ ಹಿಂದುಳಿಯಬಹುದು, ಅಥವಾ ದ್ವೇಷದ ಮನೋಭಾವ ಬೆಳೆಸಿಕೊಂಡು rebels ಆಗಬಹುದು. ಇದನ್ನೆಲ್ಲಾ ಅರಿತು ಮಗುವಿನೊಡನೆ ವ್ಯವಹರಿಸಿದರೆ, ಮಗುವಿನಲ್ಲಿ ಸರಿಯಾದ ಶಿಸ್ತಿನ ನಡತೆ ಮೂಡಲು ಸಹಾಯಕವಾಗುವುದು, ಹಿರಿಯರು, ಶಿಕ್ಷಕರು ಮಕ್ಕಳಿಗೆ ಹೇಳುವ ಒತ್ತಾಯಿಸುವ ಬದಲು ತಾವು ಉತ್ತಮ ಉದಾಹರಣೆಯಾಗಿ ಬದುಕುವುದು ಮುಖ್ಯ.

ಇಂತಹ ಸಾವಿರಾರು ಅನುಭವಗಳು ಎಲ್ಲರ ಜೀವನದಲ್ಲೂ ಬಂದಿರುತ್ತವೆ ಅವುಗಳ ಬಗೆಗೆ ಹಿರಿಯರಾದವರು, ಶಿಕ್ಷಕರಾದವರು ಸರಿಯಾದ ರೀತಿಯಲ್ಲಿ ನಡೆದರೆ, ಸ್ಪಂದಿಸಿದರೆ, ಮಕ್ಕಳ, ಕುಟುಂಬದ, ಸಮಾಜದ, ದೇಶದ ಅನೇಕ ಸಮಸ್ಯೆಗಳನ್ನು ಇಲ್ಲವಾಗಿಸಬಹುದು, ಮಕ್ಕಳ ನಡೆ-ನುಡಿಗಳ ಬಗ್ಗೆ ಗಮನಕೊಟ್ಟರೆ, ಹಿರಿಯರಾದ ನಾವು ಅನೇಕ ಪಾಠಗಳನ್ನು ಅವರಿಂದಲೇ ಕಲಿಯಬಹುದು.

■

## ೮. ಆರ್ಥಿಕ ದು:ಸ್ಥಿತಿಯಲ್ಲಿ ಮಕ್ಕಳ ವ್ಯಕ್ತಿತ್ವ

ಶಿಕ್ಷಣದ ಮೂಲ ಉದ್ದೇಶ ಮಕ್ಕಳಲ್ಲಿ ಸರ್ವತೋಮುಖವಾದ ಬೆಳವಣಿಗೆಯನ್ನುಂಟು ಮಾಡುವುದು. ಈ ಗುರಿ ಸಾಧಿತವಾದರೆ ಮಕ್ಕಳು ಯೋಗ್ಯ ವ್ಯಕ್ತಿಗಳಾಗಿ ಸಮಾಜದಲ್ಲಿ ಬಾಳಬಲ್ಲರು. ತಮ್ಮ ಜೀವನವನ್ನು ಸುಖಮಯವಾಗಿ ಮಾಡಿಕೊಂಡು ತಮ್ಮ ಪರಿಧಿಯಲ್ಲಿ ಬರುವ ಇತರರ ಜೀವನವೂ ಸುಖಪ್ರದವಾಗಲು ಸಹಾಯಕರಾಗುವರು. ಅವರಿಗೆ ಅತೃಪ್ತಿ, ಅಸಮಾಧಾನಗಳು ಇರುವುದಿಲ್ಲ, ಮೋಸ, ದ್ವೇಷಗಳ ಪರಿಚಯವಿರುವುದಿಲ್ಲ, ಸುಳ್ಳು ಕಳ್ಳತನಗಳು ಅವರ ಬಳಿ ಸುಳಿಯುವುದಿಲ್ಲ, ಅವರು ನಡೆನುಡಿಯಲ್ಲಿ ನಾಗರಿಕರೂ ಸುಸಂಸ್ಕೃತರೂ ಆಗಿ, ಒಳಹೊರಗೆ ಒಂದಾಗಿ ಬಾಳುವರು. ಅವರ ರೀತಿ-ನೀತಿಗಳಲ್ಲಿ ಕೃತ್ರಿಮತೆ- ಕುತಂತ್ರಗಳ ನೆರಳೂ ಇರುವುದಿಲ್ಲ.

ಮಗು ಸರ್ವವಿಧದಲ್ಲೂ ಅಪೇಕ್ಷಣೀಯವಾದ ರೀತಿಯಲ್ಲಿ ಬೆಳೆಯಬೇಕಾದರೆ ಅನೇಕ ಅಂಶಗಳು ಪ್ರಭಾವ ಬೀರುತ್ತವೆ. ಶಾಲೆಯೊಂದೇ ಜವಾಬ್ದಾರಿ ಹೊರಲು ಆಗುವುದಿಲ್ಲ. ಶಾಲೆ ಏನೋ ಈ ಗುರಿ ಸಾಧಿಸುವ ಹೊಣೆ ಹೊತ್ತಿದೆ, ಅದರ ಸಾಧನೆಗಾಗಿ ಸರ್ವವಿಧದಲ್ಲೂ ಅದು ಕರ್ತವ್ಯ ನಿರ್ವಹಿಸಬೇಕು. ಆದರೆ ಈ ಕರ್ತವ್ಯ ನಿರ್ವಹಣೆ ಯಶಸ್ವಿಯಾಗಲು ಮಗುವಿನ ಜೀವನದಲ್ಲಿ ಅನೇಕ ಅಂಶಗಳು ಸತ್ಪ್ರಭಾವ ಬೀರಬೇಕು, ಮುಖ್ಯವಾಗಿ ಪ್ರಭಾವ ಬೀರುವ ಅಂಶಗಳೆಂದರೆ, ಮಗುವಿನ ವಂಶಾವಳಿ, ನೆರೆ-ಹೊರೆ, ಮನೆಯ ಪರಿಸರ- ಪರಿಸ್ಥಿತಿ, ಶಿಕ್ಷಣ ದೊರೆಯುವ ಅವಕಾಶಗಳು, ಸ್ನೇಹ, ಶಾಲೆಯಲ್ಲಿ ಮಗುವಿನೊಡನೆ ಶಿಕ್ಷಕರ ಸಂಬಂಧ, ಶಾಲಾ ಪರಿಸರ, ಆಟದ ಬಯಲು, ಮಗುವಿನ ಆರ್ಥಿಕ ಸ್ಥಿತಿ ಮುಂತಾದವುಗಳು ಮಗುವಿನ ಮಾನಸಿಕ, ಬೌದ್ಧಿಕ ಹಾಗೂ ನೈತಿಕ ಬೆಳವಣಿಗೆಯ ಮೇಲೆ ಸಾಕಷ್ಟು ಪ್ರಭಾವ ಬೀರುತ್ತವೆ. ಯಾವ ಒಂದು ಅಂಶವೂ ಅಸಮರ್ಪಕ ಅಥವಾ ಅನಪೇಕ್ಷಣೀಯ ರೀತಿಯಲ್ಲಿ ಪ್ರಭಾವ ಬೀರಿದರೂ, ಅಷ್ಟರಮಟ್ಟಿಗೆ ಮಗುವಿನ ವ್ಯಕ್ತಿತ್ವ ರೂಪಿತವಾಗುವಿಕೆಯಲ್ಲಿ ಕೊರತೆ ಅಥವಾ ದುಷ್ಪರಿಣಾಮ ಉಂಟಾಗುವ ಸಾಧ್ಯತೆ ಇದೆ.

ಮಕ್ಕಳ ಯಶಸ್ಸು, ಅಪಯಶಸ್ಸುಗಳಿಗೆ, ಅವರಲ್ಲಿರುವ ಗುಣದೋಷಗಳಿಗೆ, ಮುಂದುವರಿಯುವಿಕೆ ಅಥವಾ ಹಿಂದುಳಿಯುವಿಕೆಗೆ ಮಕ್ಕಳ ಅದೃಷ್ಟ ಅಥವಾ

ಹಣೆಯ ಬರಹವೇ ಕಾರಣ ಎಂದು ಹಿರಿಯರು ತಿಳಿಯುವುದು ಸಾಮಾನ್ಯ, ಅದರಲ್ಲೂ ಸಾಮಾನ್ಯ ಜನರಲ್ಲಿ, ವಿದ್ಯಾವಂತರಲ್ಲದವರಲ್ಲಿ, ಸಂಪ್ರದಾಯಸ್ಥರಲ್ಲಿ ಈ ಅನಿಸಿಕೆ ಮತ್ತೂ ಹೆಚ್ಚು, ಮತ್ತೆ ಕೆಲವರು, ವಿದ್ಯಾವಂತರನ್ನೊಳಗೊಂಡು ಮಕ್ಕಳೇ ಸರಿಯಾಗಿ ಮುಂದೆ ಬರದಿದ್ದರೆ, ಅವರ ಹಿಂದುಳಿಯುವಿಕೆಗೆ ಮಕ್ಕಳೇ ಹೊಣೆಗಾರರೆಂದು ತಿಳಿದು, ಮಕ್ಕಳ ಮೇಲೆಯೇ ಎಲ್ಲಾ ತಪ್ಪನ್ನು ಹೊರಿಸಿ ಅವರನ್ನು ದೂಷಿಸುತ್ತಾರೆ; ಹಾಗೂ ಶಿಕ್ಷಿಸುತ್ತಾರೆ, ಆದರೆ ನಿಜವಾಗಿ ಅದಕ್ಕೆ ಮಕ್ಕಳು ಎಳ್ಳಷ್ಟೂ ಹೊಣೆಗಾರರಲ್ಲ. ಇದಕ್ಕೆಲ್ಲಾ ಮೇಲಿನ ಅಂಶಗಳೇ ಕಾರಣ. ಅದಕ್ಕೆ ಸಂಬಂಧಿಸಿದ ಹಿರಿಯರು, ಶಿಕ್ಷಕರು, ಪಾಲಕರು, ಸಮಾಜದವರು ತಮ್ಮ ಹೊಣೆಗಾರಿಕೆಯರಿತು ಮಕ್ಕಳು ಸರಿಯಾದ ರೀತಿಯಲ್ಲಿ ಬೆಳೆಯುವಂತೆ ಸರ್ವವಿಧದಲ್ಲೂ ಎಚ್ಚರಿಕೆ ವಹಿಸಬೇಕಾದುದು ಅಗತ್ಯ. ಇಲ್ಲದಿದ್ದಲ್ಲಿ ಅವರು ಸಮಾಜ ಕಂಟಕರಾಗಿ ಸಮಾಜದಲ್ಲಿಯ ಇತರರ ದು:ಖಕ್ಕೆ ಕಾರಣರಾಗಬಹುದು ಅಥವಾ ನಿರ್ವೀರ್ಯರಾಗಿ, ಅಸಹಾಯಕರಾಗಿ ಇತರರ ಕಿರುಕುಳಕ್ಕೆ ಒಳಗಾಗಿ ತಾವೇ ದು:ಖಕ್ಕೆ ಗುರಿಯಾಗಿ ಸಂಕಟದಲ್ಲಿ ಬದುಕಬಹುದು; ಅಲ್ಲದೆ ತಮಗಾದ ಅನ್ಯಾಯವನ್ನು ಪ್ರತಿಭಟನೆ ಇಲ್ಲದೆ ನುಂಗಿಕೊಂಡು ಹೋಗುವಂತಹ ಹೇಡಿತನವನ್ನಾದರೂ ಬೆಳೆಸಿಕೊಳ್ಳಬಹುದು, ಇಂತಹ ಯಾವುದೇ ರೀತಿಯ ಕೆಡುಕಿಗೆ ಒಳಗಾದರೂ ಸಾರ್ಥಕವಾಗಿ ಬದುಕಬೇಕಾದ ಅವರ ಜೀವನ ನಿರರ್ಥಕವಾಗಿ ಹೋಗುತ್ತದೆ.

ಅನೇಕ ಅಂಶಗಳು ಮಗುವಿನ ಬೆಳವಣಿಗೆಗೆ ಸಹಾಯಕವಾಗುತ್ತವೆ. ಅದರಲ್ಲಿ ಆರ್ಥಿಕ ಸ್ಥಿತಿಯೂ ಸಹ ಮುಖ್ಯವಾದ ಅಂಶಗಳಲ್ಲಿ ಒಂದು. ಇದು ಮಗುವಿನ ಬೆಳವಣಿಗೆಯಲ್ಲಿ ಅನೇಕ ರೀತಿಯ ಪ್ರಭಾವ ಬೀರಲು ಸಮರ್ಥವಾಗಿದೆ, ತಂದೆ ತಾಯಿಯರ ಆರ್ಥಿಕ ಸ್ಥಿತಿ ಉತ್ತಮವಾಗಿಲ್ಲದಿದ್ದರೆ ಮಗುವಿಗೆ ಪರಿಪೂರ್ಣ ಆಹಾರದ ಕೊರತೆಯುಂಟಾಗುತ್ತದೆ, ತತ್ಪರಿಣಾಮವಾಗಿ ಮಗುವು ನಿಸ್ತೇಜವಾಗಿಯೂ, ನಿಶ್ಶಕ್ತಿಯುಳ್ಳವನಾಗಿಯೂ, ನಿರುತ್ಸಾಹಿಯಾಗಿಯೂ ಆಗುತ್ತಾನೆ, ಪಚನ ಶಕ್ತಿ ಕುಂಠಿತವಾಗುತ್ತದೆ. ರೋಗ ನಿರೋಧಕ ಶಕ್ತಿ ಕಡಿಮೆಯಾಗಿ ಮೇಲಿಂದ ಮೇಲೆ ಅನಾರೋಗ್ಯಕ್ಕೆ ಗುರಿಯಾಗುತ್ತಾನೆ. ಹಾಗಾಗಿ ಶಾಲೆಗೆ ಗೈರು ಹಾಜರಾಗಬೇಕಾಗುತ್ತದೆ. ಅದರಿಂದ ಬೌದ್ಧಿಕ ಬೆಳವಣಿಗೆ ಕುಂಠಿತವಾಗುತ್ತದೆ. ರೋಗ ನಿರೋಧಕ ಶಕ್ತಿ ಇಲ್ಲದ ಕಾರಣ ಕೆಲವು ಅಂಟುರೋಗಗಳು ಗಂಟು ಬೀಳಬಹುದು. ಆಗ ಜೊತೆಗಾರರು ಅವನನ್ನು ಹತ್ತಿರ ಸೇರಿಸುವುದಿಲ್ಲ. ಇದರಿಂದ ಮಗುವು ಮಾನಸಿಕ ನೋವಿಗೆ ಗುರಿಯಾಗುತ್ತದೆ. ಆತ್ಮವಿಶ್ವಾಸ ಕಡಿಮೆಯಾಗಿ, ಮುಂದೆ ಹೋಗಲು ಸಂಕೋಚಗೊಂಡು ಹಿಂದುಳಿದ ಸ್ವಭಾವ ಉಂಟಾಗಲು ಅವಕಾಶವಾಗುವುದು, ಸಮವಯಸ್ಕರೊಡನೆ ಆಡವಾಡಲು ಆಸ್ಪದವಿಲ್ಲದೆ, ಮನಸ್ಸು ಅಸಮಾಧಾನಕ್ಕೆ

ಒಳಗಾಗಿ, ನಿರಾಸೆಯಿಂದ ತಳವಳಿಸಬಹುದು, ಅದು ಸಿಟ್ಟಿನ ಮನೋಭಾವಕ್ಕಾಗಲೀ, ಅತೃಪ್ತ ವ್ಯಕ್ತಿತ್ವಕ್ಕಾಗಲೀ ದಾರಿಯಾಗಬಹುದು.

ಮಗುವಿನ ಸಾಮಾಜಿಕ ಜೀವನದ ಮೇಲೂ ತಂದೆ ತಾಯಿಯರ ಆರ್ಥಿಕ ದುಸ್ಥಿತಿ ಪರಿಣಾಮವನ್ನುಂಟು ಮಾಡುತ್ತದೆ. ಉತ್ತಮ ಪರಿಸರದಿಂದ ಬಂದ, ಉತ್ತಮ ನಡೆ-ನುಡಿಗಳಿತ, ಓದಿನಲ್ಲಿ ಮುಂದಿರುವ ಉತ್ಸಾಹೀ ಮಕ್ಕಳ ಸಹವಾಸ ಇವರಿಗೆ ದೊರಕುವುದಿಲ್ಲ. ಹಾಗಾಗಿ ಅಂತಹವರ ಸ್ನೇಹದಿಂದ ಕಲಿತುಕೊಳ್ಳಬಹುದಾದ ಅನೇಕ ಸದ್ಗುಣಗಳಿಂದ ಈ ಮಕ್ಕಳು ವಂಚಿತರಾಗಬಹುದು, ವಿವಿಧ ಆರ್ಥಿಕ ಹಂತದ ಮಕ್ಕಳ ರೀತಿ-ನೀತಿಗಳು, ಅನುಕೂಲಗಳು ಈ ಮಕ್ಕಳಿಗೆ ಪರಿಚಯವಾಗದೇ ಪುಸ್ತಕದಲ್ಲಿ ತಿಳಿದುಕೊಳ್ಳಬಹುದಾದ ಮಾಹಿತಿಯಾಗಿ ಉಳಿಯುತ್ತವೆಯೇ ಹೊರತು, ಸ್ವಂತ ಅನುಭವಕ್ಕೆ ಬರುವುದೇ ಇಲ್ಲ. ಹೀಗಾಗಿ ಅಂತಹ ಶಿಷ್ಟ ಅಥವಾ ಸುಧಾರಿತ ಸುಸಂಸ್ಕೃ ನಡವಳಿಕೆಗಳ ಪರಿಚಯವೇ ಇಲ್ಲವಾಗುತ್ತದೆ. ಇನ್ನೂ ಒಂದು ರೀತಿಯಲ್ಲಿ ಆರ್ಥಿಕ ದುಸ್ಥಿತಿ ಮಕ್ಕಳ ಜೀವನದಲ್ಲಿ ಕೆಡಕುಂಟುಮಾಡಬಹುದು. ಅಸಹಾಯಕತೆಯಿಂದ ಇನ್ನೊಬ್ಬರ ಕರುಣೆಗೆ ಒಳಗಾಗಬೇಕಾಗುತ್ತದೆ. ಆಗ ಸಹಜವಾಗಿ ಕರುಣೆ ತೋರಿಸಿದವರಿಗೆ ಋಣಿಯಾಗಿ ವರ್ತಿಸಬೇಕಾಗುತ್ತದೆ. ಹೀಗೆ ಕೃತಜ್ಞತಾ ಭಾವನೆಯಿಂದ ದೇಹವನ್ನು, ಮನಸ್ಸನ್ನೂ ಬಾಗಿಸಿಕೊಂಡು, ಅವರು ಕ್ರೂರವಾಗಿ ವರ್ತಿಸಿದರೂ, ಅನ್ಯಾಯ ಮಾಡಿದರೂ ತುಟಿಪಿಟಕ್ಕೆನ್ನದೆ, ತನಗೇನೂ ಆಗಿಲ್ಲವೇನೋ ಎಂಬಂತೆ ಬದುಕಬೇಕಾಗುತ್ತದೆ. ಹಾಗೆ ಬೆಳೆದ ಮಗುವಿನಲ್ಲಿ ಮುಂದೆ ದೊಡ್ಡವನಾಧಾಗಲೂ ತನ್ನ ಬಗ್ಗೆ ಯಾರಾದರೂ ಅನ್ಯಾಯ ಮಾಡಿದರೆ, ಸುಮ್ಮನೆ ನುಂಗಿ ಕೊಂಡಿರುವ ಹೇಡಿ ಪ್ರವೃತ್ತಿ ಬೆಳೆದು ಬಿಡುತ್ತದೆ. ಹಣದ ಕೊರತೆ ಇನ್ನೊಂದು ರೀತಿಯಲ್ಲಿ ಮಗುವಿನ ಉತ್ತಮ ಬೆಳವಣಿಗೆಗೆ ಅಡ್ಡಿ ಮಾಡುವ ಸಾಧ್ಯತೆ ಇದೆ. ಎಲ್ಲ ರೀತಿಯಲ್ಲೂ ಹಣದ ಅಡಚಣೆ ಇರುವ ಮಗು, ಬಡತನದಿಂದ ನರಳುತ್ತಿದ್ದಾನೆಂಬ ಅಂಶ ಅವನ ಪರಿಸರದಲ್ಲಿ ಎಲ್ಲರಿಗೂ ಗೊತ್ತಾಗುತ್ತದೆ. ಆಗ ಕೆಲವು ಅಹಂಕಾರೀ ಶ್ರೀಮಂತ ಮಕ್ಕಳು ಅಣಕಿಸಬಹುದು. ಅವಮಾನಿಸಬಹುದು, ಆಗ ಮಕ್ಕಳಿಗೆ ಒಳಗೊಳಗೇ ಈ ಸಿರಿವಂತರ ಬಗೆಗೆ, ಎಲ್ಲದರಲ್ಲೂ ಸೌಖ್ಯವಾಗಿರುವ ಮಕ್ಕಳ ಬಗ್ಗೆ ಹೊಟ್ಟೆಕಿಚ್ಚು, ದ್ವೇಷ ಬೆಳೆಯುತ್ತದೆ. ಅದನ್ನು ನೇರವಾಗಿ ತೋರಿಸಲು ಸಾಧ್ಯವಿರುವುದಿಲ್ಲ. ಆಗ ತಮ್ಮ ದ್ವೇಷವನ್ನು ತಮಗಿಲ್ಲದ ಸುಖವನ್ನು, ಅನುಕೂಲಗಳನ್ನು ಅವರು ಅನುಭವಿಸುತ್ತಿದ್ದಾರೆಂಬ ಅಸಮಾಧಾನವನ್ನು, ಆ ಮಕ್ಕಳು ಹಾಕಿಕೊಂಡಿರುವ ಸ್ವಚ್ಛ ಬಟ್ಟೆಗಳ ಮೇಲೆ ಅವರಿಗೆ ಗೊತ್ತಿಲ್ಲದಂತೆ ಇಂಕನ್ನು ಎರಚಿ ಅಂದಗೆಡಿಸುವ ಮೂಲಕ, ಅವರ ಸೈಕಲ್ಲುಗಳ ಟೈರಿನ ಹವಾ ತೆಗೆಯುವುದರ ಮೂಲಕ, ಅವರ ವಸ್ತುಗಳನ್ನು ಕದಿಯುವುದರ ಮೂಲಕ, ಆಟದಲ್ಲಿ ಉದ್ದೇಶಪೂರ್ವಕ ಕಾಲು ಹಿಡಿದು ಜಗ್ಗಿ ಬೀಳಿಸುವ ಮೂಲಕ ವ್ಯಕ್ತ ಮಾಡುತ್ತಾರೆ.

ಅಂತಹ ಮಕ್ಕಳನ್ನು ಶಿಕ್ಷಕರು ಗುರುತಿಸಿ, ಪ್ರೀತಿಯಿಂದ, ನೀನೂ ಅದಕ್ಕಿಂತ ಚೆನ್ನಾಗಿ ಬಾಳಬಹುದು, ನೀನು ಹೀಗಿರಬೇಕು, ಹಾಗೆ ಮಾಡಬೇಕು ಎಂದು ಮಾರ್ಗದರ್ಶನ ಮಾಡುವುದಲ್ಲದೆ, ಅವರು ಸಮಸ್ಯೆಗಳಿಲ್ಲದೆ ಓದು ಮುಂದುವರಿಸಿಕೊಳ್ಳಲು ದಾರಿ ಮಾಡುವಲ್ಲೂ ಸಹಾಯಕರಾದರೆ, ಅವರು ಅಸಹನೆಯ ಮಾರ್ಗಬಿಟ್ಟು ಒಳ್ಳೆಯ ನಾಗರಿಕರಾಗಿ ರೂಪುಗೊಳ್ಳುತ್ತಾರೆ. ಇಲ್ಲದಿದ್ದಲ್ಲಿ ಮುಂದೆ ಸಮಾಜಕಂಟಕರಾಗಿ ಸಮಾಜದ ಅನೇಕ ಸಮಸ್ಯೆಗಳಿಗೆ ಕಾರಣರಾಗುತ್ತಾರೆ. ಆದುದರಿಂದ ಬಾಲ್ಯದಲ್ಲಿ ಜೀವನದ ಮೌಲ್ಯಗಳನ್ನು, ಆದರ್ಶಗಳನ್ನು ಬೆಳೆಸಿಕೊಳ್ಳಲು ಸಹಾಯಕವಾಗುವಂತೆ ಅಸಹಾಯ ಮಕ್ಕಳಿಗೆ ಮಾರ್ಗ ತೋರಿಸಬೇಕು. ಅಂದರೆ ಮಾತ್ರ ಸ್ವಲ್ಪ ಉತ್ತಮ ಮಾರ್ಗದಲ್ಲಿ ನಡೆಯಲು ಪ್ರಯತ್ನಿಸುತ್ತಾರೆ.

ಕೆಲವು ಸಂದರ್ಭದಲ್ಲಿ ಇನ್ನೂ ಭಯಂಕರವಾದ ಪರಿಣಾಮಗಳು ಆಗುವ ಸಾಧ್ಯತೆ ಇದೆ. ದುರಹಂಕಾರಿ ಹಾಗೂ ದುಷ್ಟ ಜನರ ನಡತೆಯಿಂದ ಘಾಸಿಗೊಂಡ ಮಗು ಅಸಹಾಯಕತೆಯಿಂದ, ತಗನಾದ ಅನ್ಯಾಯವನ್ನು, ನೋವನ್ನು ಸಹಿಸಿಕೊಳ್ಳುತ್ತದೆ, ಆದರೆ ಒಳಗೊಳಗೇ ದ್ವೇಷವನ್ನು ಬೆಳೆಸಿಕೊಂಡು, ಸೇಡು ತೀರಿಸಿಕೊಳ್ಳಲು ಹೊಂಚು ಹಾಕುತ್ತಿರುತ್ತಾನೆ. ಬೇರೆಯವರ ಬಗ್ಗೆ ಅವನಿಗೆ ಯಾವಾಗಲೂ ಅಸಹನೆ, ಹಾಗಾಗಿ ಬೇರೆಯವರ ಹಿಂಸೆ ನೋಡಿ ಸಂತೋಷ ಪಡುವ ಮನೋಭಾವ ಮೂಡುತ್ತದೆ. ಕರುಣೆಯ ಮನೋಭಾವವೇ ಇಲ್ಲವಾಗುತ್ತದೆ. ಇಂತಹ ಮಕ್ಕಳು ಮುಂದೆ ಕಾಲು ಕೆರೆದು ಜಗಳವಾಡುವ ಸ್ವಭಾವದವರೂ, ಸಮಾಧಾನದ ಪರಿಸರದಲ್ಲಿ ವಿರಸ ವಾತಾವರಣ ಉಂಟುಮಾಡುವವರೂ, ಅವಕಾಶ ಸಿಕ್ಕಾಗಲೆಲ್ಲಾ ಬೇರೆಯವರನ್ನು ಅನ್ಯಾಯಕ್ಕೆ ಗುರಿಮಾಡಿ ಹಿಗ್ಗುವ ಮನೋಭಾವ ಪಡೆಯುತ್ತಾರೆ. ಇವರ ಇಂತಹ ಸ್ವಭಾವದಿಂದ ಬಹಳಷ್ಟು ಜನರು ಇವರಿಂದ ದೂರವಿರಲು ಪ್ರಯತ್ನಿಸುತ್ತಾರೆ. ಇದರಿಂದ ಇನ್ನೂ ಕುಪಿತರಾಗುವ ಇವರಿಗೆ ಉತ್ತಮ ಮೌಲ್ಯಗಳಾಗಲೀ, ಉದಾತ್ತ ಭಾವನೆಗಳಾಗಲೀ ಪರಿಚಯವಾಗುವುದೇ ಇಲ್ಲ, ನಂತರ ಇವರ ಸ್ನೇಹ, ಸಹವಾಸ, ಸಂಪರ್ಕ ಎಲ್ಲವೂ ತಮ್ಮದೇ ಮನೋಭಾವದವರೊಡನೆ ಮಾತ್ರ, ಇವರಿಗೂ ತಮ್ಮ ಆರ್ಥಿಕ ಸ್ಥಿತಿಯನ್ನು ಸುಧಾರಿಸಿಕೊಂಡು ಉತ್ತಮ ಜೀವನ ನಡೆಸಬೇಕೆಂಬ ಆಸೆ ಇರುತ್ತದೆ. ಅದು ಅಸಾಧ್ಯವಾದಾಗ ಅವರು ಹತಾಶರಾಗುತ್ತಾರೆ. ಇಂತಹವರು ಮುಂದೆ ಸಮಾಜಘಾತಕರಾಗುತ್ತಾರೆ. ಒಂದು ಸ್ಥಾನಮಾನ ಅಥವಾ ನೌಕರಿ ಸಿಗದಿದ್ದರಂತೂ ಇವರು ಕೊಲೆಗೆಡುಕರಾಗಬಹುದು. ಎಲ್ಲಿಯಾದರೂ ಜವಾಬ್ದಾರಿಯುತ ನೌಕರಿಗೆ ಹೋದರೂ ಸಹ ಅಲ್ಲಿ ಸಿಗುವ ಎಲ್ಲಾ ಸಾಧನಗಳನ್ನೂ ಸ್ವಂತಕ್ಕೆ ಉಪಯೋಗಿಸಿಕೊಂಡು ಮೇಲ್ಮಟ್ಟಕ್ಕೆ ಬರಲು ಯತ್ನಿಸುತ್ತಾರೆ. ನಂತರ ಸೇಡು

ತೀರಿಸಿಕೊಳ್ಳುವ ಮನೋಭಾವದಿಂದಲೇ ಎಲ್ಲಾ ಕೆಲಸ ಮಾಡುತ್ತಾರೆ, ಆಗ ಸ್ವಾರ್ಥಿಗಳು ಅವರ ಜೊತೆಗಿದ್ದರಂತೂ ಅಂತಹವರೆಲ್ಲಾ ಒಂದಾಗಿ ಮಾಡಬಾರದ್ದನ್ನೆಲ್ಲಾ ಮಾಡಿ, ತಮ್ಮ ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸಿಕೊಳ್ಳುತ್ತಾ ಹೋಗುತ್ತಾರೆ. ಅವರೊಡನೆ ಸಜ್ಜನರಿದ್ದರೆ ಅವರ ಕಥೆ ಮುಗಿಯುತು. ಈ ದುಷ್ಟ ಪ್ರವೃತ್ತಿಯ ಜನರಿಗೆ ಒಳಿತಾಗಿ ನಡೆಯುವ ರೂಢಿಯೇ ಇರುವುದಿಲ್ಲವಾಗಿ, ಎಲ್ಲೆಲ್ಲಿ ತಮ್ಮ ದುರಹಂಕಾರ, ಅಟ್ಟಹಾಸಗಳು, ದಬ್ಬಾಳಿಕೆಗಳು ಪ್ರತಿಭಟನೆ ಇಲ್ಲದೆ ನಡೆಯಬಹುದೋ ಅಲ್ಲೆಲ್ಲಾ ನ್ಯಾಯಾನ್ಯಾಯ ವಿಮರ್ಶಿಸದೆ ಯೋಗ್ಯಾಯೋಗ್ಯತೆಯ ತಾರತಮ್ಯವಿಲ್ಲದೆ, ತಮ್ಮ ತಾಳಕ್ಕೆ ತಕ್ಕಂತೆ ಕುಣಿಯುವವರಿಗೆ ಕೃಪೆ ತೋರಿಸುತ್ತಾ, ಸಹಕರಿಸದಿದ್ದವರನ್ನು ಹಿಂಸಿಸುತ್ತಾ ಮೆರೆಯುತ್ತಾರೆ. ಸಮಸ್ಯೆ ಇಲ್ಲದ ಕಡೆ ಸಮಸ್ಯೆಗಳು ಪ್ರಾರಂಭವಾಗುತ್ತದೆ. ಪ್ರಗತಿಯ ಸೋಗು ಕಾಣಿಸುತ್ತದೆ. ಆದರೆ ನಿಜವಾದ ಪ್ರಗತಿ ಕುಂಠಿತವಾಗುತ್ತಾ ಹೋಗುತ್ತದೆ.

ಹೀಗೆ ಆರ್ಥಿಕ ದುಃಸ್ಥಿತಿ ಮಗುವಿನ ಬೆಳವಣಿಗೆಯ ಮೇಲೆ ಇಂತಹ ದುಷ್ಪಪರಿಣಾಮ ಮಾಡುವುದರಿಂದ, ಬೆಳೆಯುವ ವಯಸ್ಸಿನಲ್ಲಿ ಮಕ್ಕಳ ಆರೋಗ್ಯಕ್ಕೆ ಕುಂದಾಗದಂತೆ, ಅವಶ್ಯಕತೆಗಳಿಗೆ ಕೊರತೆಯಂಟಾಗದಂತೆ ವ್ಯವಸ್ಥೆ ಮಾಡಿ ಉತ್ತಮ ಪರಿಸರ, ಮಾರ್ಗದರ್ಶನ, ಸಹವಾಸ ದೊರೆಯುವಂತಹ ಏರ್ಪಾಟನ್ನು ಸರ್ಕಾರವಾಗಲೀ, ಸಮಾಜವಾಗಲೀ, ಮತಮಾನ್ಯಗಳಾಗಲೀ ಮಾಡಿದರೆ ಪ್ರತಿಯೊಂದು ಮಗುವೂ ಸಮಾಜದ ಸತ್ಪ್ರಜೆಯಾಗಿ ರೂಪುಗೊಳ್ಳಲು ಸಾಧ್ಯವಿದೆ. ಈಗ ನ್ಯಾಯ ಇಲಾಖೆಗೆ, ಪೊಲೀಸ್ ಖಾತೆಗೆ ಜೈಲುಗಳಿಗೆ, ಆಸ್ಪತ್ರೆಗಳಿಗೆ ಖರ್ಚು ಮಾಡುವ ಹಣದ ಉಳಿತಾಯವಾಗಿ, ಮಕ್ಕಳ ಸರ್ವತೋಮುಖ ಅಭಿವೃದ್ಧಿಗೆ, ದೇಶದ ಅಭಿವೃದ್ಧಿ ಯೋಜನೆಗಳಿಗೆ ಹಣ ಖರ್ಚು ಮಾಡಲು ಸಾಧ್ಯವಾಗುವುದು.

ಆರ್ಥಿಕ ದುಸ್ಥಿತಿ ಮಕ್ಕಳ ಬೆಳವಣಿಗೆಯ ಮೇಲೆ ದುಷ್ಪಪರಿಣಾಮ ಬೀರುತ್ತದೆಯೆಂದರೆ ಸುಸ್ಥಿತಿ ಬಹು ಉತ್ತಮ ಪರಿಣಾಮ ಬೀರುತ್ತದೆಯೆಂದೇನೂ ಅರ್ಥವಲ್ಲ. ಹಣದ ಅನಿಷ್ಟಗಳ ಬಗ್ಗೆ ಎಚ್ಚೆತ್ತು ಕೊಂಡಿದ್ದರೆ ಹಣ ಖಂಡಿತವಾಗಿಯೂ ಸತ್ಪರಿಣಾಮವನ್ನು ಉಂಟುಮಾಡಿಯೇ ಮಾಡುತ್ತದೆ. ಅತ್ಯಂತ ಶ್ರೀಮಂತರ ಮನೆಯ ಮಕ್ಕಳು ಬಹಳ ವಿದ್ಯಾವಂತರೂ, ದಯಾಪರರೂ, ದಕ್ಷರೂ, ಕರ್ತವ್ಯನಿಷ್ಠರೂ, ರಾಷ್ಟ್ರಪ್ರೇಮಿಗಳೂ, ಉದಾತ್ತ ಜೀವಿಗಳೂ ಆಗಿ ಬದುಕಿರುವಂತಹ ಉದಾಹರಣೆಗಳಿಗೂ ಕೊರತೆ ಏನಿಲ್ಲ, ಲಾಲ್ ಬಹದ್ದೂರ್ ಶಾಸ್ತ್ರಿಯವರಂತಹವರುಗಳಿಗೆ ಬಡತನವೇ ಒಂದು ವರವಾಗಿದ್ದರೆ, ನಾಲ್ಮಡಿ ಕೃಷ್ಣರಾಜ ಒಡೆಯರ್, ಕಾರ್ನಾಡ್ ಸದಾಶಿವರಾಯರು, ಸರೋಜಿನಿ ನಾಯ್ಡು ಅಂತಹವರುಗಳಿಗೆ ಸಂಪತ್ತೇ ಸತ್ಕಾರ್ಯದ ಸಹಕಾರಿಯಾಗಿದ್ದುದು ಸುಳ್ಳಲ್ಲ. ಧರ್ಮಸ್ಥಳದ

ಹೆಗ್ಗಡೆಯವರಿಗೆ ಸಂಪತ್ತಿನ ಸುರಿಮಳೆ ಸತ್ಕಾರ್ಯದ ಸರಳ ಮಾರ್ಗದರ್ಶಿಯಾಗಿದೆ. ಅನೇಕ ರಾಜಕಾರಣಿಗಳಿಗೆ ಸಂಪತ್ತು ಅಹಂಕಾರದ ವಿಷಸರ್ಪವಾಗಿದೆ. ಹೀಗೆ ಸಂಪತ್ತಿದ್ದರೂ ಅದರ ದುರ್ಬಳಕೆ ಅನೇಕರನ್ನು ಮುಳುಗಿಸಬಹುದು. ಹೇರಳ ಹಣದಿಂದ ಬಾಯಿಗೆ ಬೇಕಾದುದನ್ನೆಲ್ಲಾ ತಿಂದು ನಾನಾ ರೀತಿಯ ಅಜೀರ್ಣ ರೋಗಗಳಿಗೆ ಗುರಿಯಾಗಬಹುದು. ಸ್ಥೂಲಶರೀರ ಉಂಟಾಗಿ ಚುರುಕಾಗಿರಲಾಗದೆ ಸೋಮಾರಿತನಕ್ಕೆ ಎಡೆಯಾಗಬಹುದು. ಸ್ಥೂಲ ದೇಹದ ಜೊತೆಗಾರರಾದ ಡಯಾಬಿಟಿಸ್, ಹೃದಯರೋಗ, ಕೀಲುನೋವು ಮುಂತಾದ ಮಾರಣಾಂತಿಕ ರೋಗಗಳಿಗೆ ಗುರಿಯಾಗಿ ಆ ರೋಗಿಯ ಜೀವನ ದುರ್ಭರವರನ್ನಿಸುವುದರ ಜೊತೆಗೆ ಇಡೀ ಕುಟುಂಬದ ನೆಮ್ಮದಿ, ಸಂತೋಷ, ಪ್ರಗತಿಗೇ ಧಕ್ಕೆಯುಂಟಾಗಬಹುದು.

ವಿವೇಕವುಳ್ಳ ಜ್ಞಾನ, ಹಾಗೂ ಮಾರ್ಗದರ್ಶನ, ಸಂಪತ್ತಿನ ಸದುಪಯೋಗಕ್ಕೆ ಹಾದಿಯಾಗುತ್ತದೆ. ಸಂಪತ್ತಿದ್ದೂ, ಸದ್ಗುಣವಿದ್ದರೂ ಮಕ್ಕಳ ಬಗೆಗೆ ಲಕ್ಷ್ಯಕೊಟ್ಟು ಮಾರ್ಗದರ್ಶನ ಮಾಡದಿದ್ದರೆ, ಅಂತಹ ಮಕ್ಕಳು ಸರಿಯಾದ Motivation ಇಲ್ಲದೆ, ಸ್ವಾರ್ಥಿಗಳ ಸಹವಾಸದಿಂದ ಅಡ್ಡದಾರಿಗಿಳಿಯಬಹುದು; ದುಶ್ಚಟಗಳಿಗೆ ಒಳಗಾಗಬಹುದು. ದುರ್ಮಾರ್ಗಪ್ರವೃತ್ತರಾಗಬಹುದು. ಆದುದರಿಂದ ವಿವೇಕ ರೀತಿಯಿಂದ ಬದುಕದಿದ್ದರೆ ಸಿರಿವಂತಿಕೆಯಿಂದಲೂ ಹಾನಿಯಾಗುವ ಸಾಧ್ಯತೆ ಇದೆ.

■

## ೯. ಮಕ್ಕಳಲ್ಲಿ ಮೌಲ್ಯಗಳ ಬೆಲವಣಿಗೆ

ಮೌಲ್ಯಾಧಾರಿತ ಜೀವನ ಮಾನವನ ಬದುಕಿಗೆ ಮಂಗಳಕರ. ಮೌಲ್ಯಗಳಿಲ್ಲದ ಬದುಕು ಮಾಲಿನ್ಯ; ಮೌಲ್ಯಗಳನ್ನು ಗಾಳಿಗೆ ತೂರಿದ ಸಮಾಜದಲ್ಲಿಯ ಜನರ ಜೀವನ ದುಸ್ತರ. ಮೌಲ್ಯಗಳಲ್ಲಿ ಎರಡು ವಿಧ. ಒಂದು ಸರ್ವಕಾಲಿಕ ಮೌಲ್ಯಗಳು ಎಂದರೆ, ಎಲ್ಲಾ ಕಾಲದಲ್ಲೂ ಎಲ್ಲರೂ ಮಾನ್ಯತೆ ಮಾಡಬೇಕಾದ ಮೌಲ್ಯಗಳು. ಅವು ಪ್ರಾಮಾಣಿಕತೆ, ಸಹಕಾರ ಮನೋಭಾವ, ಕೃತಜ್ಞತೆ, ಎಲ್ಲರನ್ನೂ ತನ್ನಂತೆ ಬಗೆಯುವುದು, ಸ್ವಾರ್ಥಸಾಧಕರಾಗಿಲ್ಲದಿರುವುದು ಮುಂತಾದವುಗಳು, ಎರಡನೆಯದಾಗಿ, ಕಾಲ – ದೇಶವನ್ನನುಸರಿಸಿ ಬದಲಾಗುವ ಮೌಲ್ಯಗಳು ಉದಾಹರಣೆಗೆ ಹೇಳಬೇಕೆಂದರೆ ಅಸ್ಪೃಶ್ಯತೆ, ಸ್ತ್ರೀ ಅಸಮಾನತೆ, ವಿಧವಾ ವಿವಾಹ, ಮಹಿಳಾ ಸಾಕ್ಷರತೆ ಮುಂತಾದವುಗಳು, ಒಟ್ಟಿನಲ್ಲಿ ಸಮಾಜದಲ್ಲಿ ಉತ್ತಮ ಮೌಲ್ಯಗಳಿಗೆ ಬೆಲೆಕೊಡುವ ಸುಸಂಸ್ಕೃತ ಜನರು ಹೆಚ್ಚಾಗಿ ಇದ್ದಲ್ಲಿ, ಅಲ್ಲಿ ಸುಖ, ಶಾಂತಿ, ಪ್ರಗತಿ ಕಂಡುಬರುತ್ತದೆ. ಕೊಲೆ, ಸುಲಿಗೆ, ದರೋಡೆಗಳು ತಾಂಡವವಾಡಿ ಜನಜೀವನ ಅಸಹನೀಯವಾಗುತ್ತದೆ. ಆದುದರಿಂದ ಎಲ್ಲರೂ ಮೌಲ್ಯಾಧಾರಿತವಾದ ಸುಸಂಸ್ಕೃತವಾದ ಬದುಕನ್ನು ಬಾಳಲು ಪ್ರಯತ್ನಿಸಬೇಕು.

### ಮೌಲ್ಯವಿಹೀನ ಜೀವನ – ಸಮಾಜ :

ಆದರೆ ಈಗೀಗ ಮೌಲ್ಯಗಳು ಜೀವನದಿಂದ ಸವೆದ ಕೊಂಡಿಗಳಂತೆ ಉದುರಿ ಹೋಗುತ್ತಿವೆ. ಮೌಲ್ಯದ ಬಗೆಗಿನ ವಿಚಾರಗಳು ವಿಚಿತ್ರವಾಗಿವೆ, ಉದಾಹರಣೆಗೆ ಯಾವನಾದರೂ ಒಬ್ಬ ವ್ಯಕ್ತಿ ಸಾರ್ವಜನಿಕ ಜೀವನದಲ್ಲಿ ಜನರಿಗೆ ಉಪಕಾರವಾಗುವಂತಹ ಕೆಲಸ ಮಾಡಿದನೆಂದಿಟ್ಟುಕೊಳ್ಳೋಣ, ಆದರೆ ಅವನ ವೈಯಕ್ತಿಕ ಜೀವನ ಅತ್ಯಂತ ನೀತಿರಹಿತವಾಗಿರುತ್ತದೆ; ಅಸಹ್ಯವಾಗಿರುತ್ತದೆ. ಅಂತಹ ಸಂದರ್ಭದಲ್ಲಿ ಈಗಿನ ಬಹಳಷ್ಟು ಜನರು ತೋರುವ ಪ್ರತಿಕ್ರಿಯೆ, 'ಅವನ ಸ್ವಂತ ಜೀವನದಲ್ಲಿ ಏನಾರ ಮಾಡಿಕೊಳ್ಳಲಿ, ನೀವು ಅದನ್ನು ತೊಗೊಂಡು ಮಾಡೋದೇನೈತಿ, ನಾಕು ಜನರಿಗೆ ಒಳ್ಳೇದಾಗೋ ಅಂಥ ಕೆಲಸ ಮಾಡ್ಯಾನಿಲ್ಲೋ? ಸಾಕು, ಅಂತಾರೆ, ಹಾಗೆಯೇ ಕೆಲವು ಅಧಿಕಾರಿಗಳಿದ್ದಾರೆ. ಭ್ರಷ್ಟಾಚಾರ, ಮೋಸಗಾರಿಕೆಯಿಂದ ಹೇರಳ ಹಣ ಸಂಪಾದಿಸಿರುತ್ತಾರೆ. ಆದರೆ ತಮ್ಮ ವೃತ್ತಿಗೆ ಸಂಬಂಧಿಸಿದ ಕೆಲಸ ಚೆನ್ನಾಗಿ ಮಾಡಿರುತ್ತಾರೆ. ಆಗ ಜನ, 'ತಾನು ತಿನ್ನವಲ್ಯಾಕ, ಒಳ್ಳೆ ಕೆಲ್ಸಅರ ಮಾಡ್ಯಾನಿಲ್ಲೋ,

ಹಿಂದಿನವ ದುಡ್ಡು ತಿನ್ತಿದ್ದ, ಕೆಲ್ಸಾನೂ ಮಾಡ್ತಿರಲಿಲ್ಲ. ಇವ ಅಷ್ಟರ ಮಾಡ್ತಾನ ಇನ್ನೂ ಏನುಬೇಕು ನಿಮ್ಗ ? ಅವ ಏನು ನೀವು ದುಡಿದಿಟ್ಟದ್ದು ತಿನ್ನೋದಿಲ್ಲಲ್ಲಾ ಸಾಕು ಬಿಡ್ರಿ! ಅಂತಾರೆ! ಇಂಥ ಮೌಲ್ಯಗಳು ಈಗ ಪ್ರಚಾರದಲ್ಲಿವೆ!

ಇದನ್ನೆಲ್ಲಾ ನಾವು ವ್ಯವಹಾರಿಕವಾಗಿ ಒಪ್ಪಿಕೊಂಡರೂ ಸಮಗ್ರ ಸಮಾಜದ ಬದುಕಿನ ದೃಷ್ಟಿಯಿಂದ ಇದು ಹಿತಕರವಲ್ಲ. ಒಬ್ಬ ವ್ಯಕ್ತಿಯ ವೈಯಕ್ತಿಕ (ಆಂತರಿಕ) ಜೀವನವು ಹೊಲಸಾಗಿದ್ದು, ಬಾಹ್ಯ ಜೀವನದಲ್ಲಿ ದೊಡ್ಡವ್ಯಕ್ತಿಯಂತೆ, ಆದರ್ಶ ವ್ಯಕ್ತಿಯಂತೆ ಬದುಕಿದರೆ ಅವನು ಹಿಪೋಕ್ರೇಟ್ ಎಂದೇ ಹೇಳಬೇಕು. ಅವನು ಸಾರ್ವಜನಿಕ ಜೀವನದಲ್ಲಿ ಮಾಡುವ ಒಳ್ಳೆಯ ಕೆಲಸ, ಸಾರ್ವಜನಿಕ ಹಿತಕ್ಕಾಗಿಯಲ್ಲ, ಅಲ್ಲಿ ತನ್ನ ವರ್ಚಸ್ಸನ್ನು ಹೆಚ್ಚಿಸಿಕೊಂಡು, ತನ್ನ ಸ್ವಾರ್ಥಸಾಧಿಸಿಕೊಳ್ಳುವುದಕ್ಕಾಗಿ ಮತ್ತು ದೊಡ್ಡವನಂತೆ ಮೆರೆಯುವುದಕ್ಕಾಗಿಯೇ, ಇಂಥ ಒಳ್ಳೆಯ ಕಾರ್ಯಗಳು ನಿಶ್ಚಯವಾಗಿಯೂ ಪರೋಕ್ಷವಾಗಿ ಅನರ್ಥಕಾರಿ, ಇಂತಹ ವ್ಯಕ್ತಿಗಳಿಗೆ ಮನ್ನಣೆ ಕೊಟ್ಟರೆ, ಇತರರೂ ಅವನನ್ನು ಅನುಸರಿಸಿ ತಮ್ಮ ಸ್ವಾರ್ಥಕ್ಕಾಗಿಯೇ ಒಳ್ಳೆಯ ಕೆಲಸ ಮಾಡುತ್ತಾ ಪರದೆಯ ಹಿಂದೆ ಮೌಲ್ಯಗಳಿಗೆ ಎಳ್ಳು-ನೀರು ಬಿಡುತ್ತಿರುತ್ತಾರೆ. ಯಾವುದೇ ಸಮಾಜ, ನೀತಿಯ ನೆಲಗಟ್ಟಿನ ಮೇಲೆ ನಿಂತಾಗ ಅದು ಕುಸಿಯದೆ ಬಹಳ ಕಾಲ ಬಾಳುತ್ತದೆ ಎಂಬುದನ್ನು ಎಲ್ಲರೂ ನೆನಪಿನಲ್ಲಿಡಬೇಕು. ಸುಗುಣರಹಿತ ಜೀವನ, ವ್ಯಕ್ತಿ ಹಾಗೂ ಸಮಷ್ಟಿ ಜೀವನದಲ್ಲಿ ಅನೇಕ ದುಷ್ಪರಿಣಾಮಗಳನ್ನುಂಟು ಮಾಡುತ್ತದೆ. ಇದರಿಂದ ಕೌಟುಂಬಿಕ, ಸಾಮಾಜಿಕ ಹಾಗೂ ರಾಷ್ಟ್ರೀಯ ವ್ಯವಸ್ಥೆಗಳು, ಬರುಬರುತ್ತಾ ದೋಷಪೂರಿತವಾಗುತ್ತವೆ, ಕಾಲಾನುಕ್ರಮದಲ್ಲಿ ಅಸಹನೀಯ ಪರಿಸ್ಥಿತಿಯನ್ನು ಮುಟ್ಟುವ ಸಾಧ್ಯತೆಯೂ ಉಂಟು. ಆದುದರಿಂದ ಒಬ್ಬ ವ್ಯಕ್ತಿ ಒಳ್ಳೆಯವನು ಎನ್ನಿಸಿಕೊಳ್ಳಬೇಕಾದರೆ ಅವನು ತನ್ನ ವೈಯಕ್ತಿಕ ಜೀವನದಿಂದ ಪ್ರಾರಂಭವಾಗಿ, ತನ್ನ ಪ್ರಭಾವವಿರುವ ಅಥವಾ ಕೆಲಸ ಮಾಡುವ ಎಲ್ಲಾ ಕ್ಷೇತ್ರಗಳಲ್ಲಿಯೂ ಒಳಿತಾಗಿಯೇ ಬಾಳಬೇಕಾಗುತ್ತದೆ. ಆದರೆ ದುರದೃಷ್ಟವಶಾತ್, ಈಗಿನ ಕಾಲದಲ್ಲಿ ಸ್ವಂತ ಜೀವನದಲ್ಲಿ ಒಳ್ಳೆಯವರಾಗಿದ್ದು, ಉಳಿದ ಕಡೆ ಮೌಲ್ಯಗಳನ್ನು ಗಾಳಿಗೆ ತೂರಿ ಬದುಕುವವರೂ, ಸಾರ್ವಜನಿಕ ಜೀವನದಲ್ಲಿ ದೊಡ್ಡ ಮನುಷ್ಯರಂತೆ ಕಾಣಿಸಿಕೊಳ್ಳುತ್ತಾ ವೈಯಕ್ತಿಕ ಜೀವನದಲ್ಲಿ ಹೊಲಸು ತುಂಬಿರುವ ಜನಗಳೇ ಹೆಚ್ಚು, ಜೀವನದ ಒಳಗೆ - ಹೊರಗೆ, ಎಲ್ಲೆಡೆಯಲ್ಲೂ ಮೌಲ್ಯಗಳಿಗೆ ಮಹತ್ವ ಕೊಟ್ಟು ಸುಗುಣಿಗಳಾಗಿ ಬದುಕುವ ಜನ ಈಗೀಗ ಬಹಳ ಕಡಿಮೆಯಾಗುತ್ತಿದ್ದಾರೆ. 'ಅಂತರಂಗ ಶುದ್ಧಿ - ಬಹಿರಂಗಶುದ್ಧಿ' ಎಂಬ ಬಸವಣ್ಣನವರ ಮೌಲ್ಯಕ್ಕೆ ಈಗ ವೇದಿಕೆಯ ಮೇಲಷ್ಟೆ ಬೆಲೆ.

ಹಾಗಾದರೆ, ಹೀಗೇಕೆ ಎಂಬ ಪ್ರಶ್ನೆ ಉದ್ಭವಿಸುತ್ತದೆ, ಇದಕ್ಕೆ ಹಲವಾರು ಕಾರಣಗಳಿವೆ, ಮೊದಲನೆಯದಾಗಿ, ಪಾಶ್ಚಾತ್ಯ ಸಂಸ್ಕೃತಿಗೆ ನಮ್ಮ ಜನ ಮಾರು ಹೋಗುತ್ತಿರುವುದು. ಪಾಶ್ಚಾತ್ಯ ದೇಶಗಳಲ್ಲಿ ನಮ್ಮ ಭಾರತೀಯ ಅರ್ಥದ ನೀತಿಯೇ ಅಲ್ಲಿಲ್ಲ; ಅಲ್ಲಿ ಯಾವ ಮೌಲ್ಯಗಳಿಗೆ ಮಹತ್ವವಿಲ್ಲವೋ ಅವು ನಮ್ಮ ದೇಶಗಳಲ್ಲಿಯ ನೀತಿಗಳು. ನಾವು ನೈತಿಕತೆ ಎಂದು ಯಾವುದನ್ನು ಪರಿಗಣಿಸುತ್ತೇವೆಯೋ ಅವು ಅವರಿಗೆ ಹಾಸ್ಯಾಸ್ಪದ. ಉದಾಹರಣೆಗೆ ಒಬ್ಬ ಯುವತಿ, ತನ್ನ ವಯಸ್ಸಿನ ಹುಡುಗನೊಡನೆ ಸ್ವತಂತ್ರವಾಗಿ ಪ್ರತ್ಯೇಕವಾಗಿ ಅಡ್ಡಾಡುವುದು, ಒಂದೇ ರೂಮಿನಲ್ಲಿ ವಾಸಿಸುವುದು, ಡೇಟಿಂಗ್  ಹೋಗುವುದು, ನಮ್ಮ ಸಂಸ್ಕೃತಿಯಲ್ಲಿ ಅವಮಾನ, ಆದರೆ ಪಾಶ್ಚಾತ್ಯರಿಗೆ ಅದು ಸಹಜ ಮತ್ತು ಅವಶ್ಯಕ. ಹಿರಿಯರು ಜೀವನ ಸಂಗಾತಿಯನ್ನು ತಮ್ಮ ಮಕ್ಕಳಿಗಾಗಿ ಆರಿಸುವುದು, ಮದುವೆ ವ್ಯವಸ್ಥೆಗೊಳಿಸುವುದು ನಮ್ಮಲ್ಲಿ ಗೌರವಾನ್ವಿತ. ಆದರೆ ಪಾಶ್ಚಾತ್ಯರಿಗೆ ಹಾಸ್ಯಾಸ್ಪದ. ನಮ್ಮ ಸಂಸ್ಕೃತಿಯಲ್ಲಿ ವಯಸ್ಸಾದ ತಂದೆ- ತಾಯಿಯರನ್ನು ರಕ್ಷಿಸುವುದು ಕರ್ತವ್ಯ. ಅವಿಭಕ್ತ ಕುಟುಂಬದ ಬದುಕು ಗೌರವಪೂರ್ಣ, ಆದರೆ ಪಾಶ್ಚಾತ್ಯರಿಗೆ ಅನವಶ್ಯಕ; ಸಮಸ್ಯಾತ್ಮಕ ಹೀಗೆ ಅನೇಕ ವಿಧಗಳಲ್ಲಿ ನಮಗೂ ಅವರಿಗೂ ಬಹಳ ಅಂತರ. ಆದರೆ ಈಗ ನಮ್ಮ ಜನರೂ ಪಾಶ್ಚಾತ್ಯ ಸಂಸ್ಕೃತಿಯನ್ನು, ಮೌಲ್ಯಗಳನ್ನು ಮೆಚ್ಚುತ್ತಿದ್ದಾರೆ; ಅನುಕರಿಸುತ್ತಿದ್ದಾರೆ. ಹಾಗಾಗಿ ನಮ್ಮ ಮೌಲ್ಯಗಳು ಅಪಮೌಲ್ಯಗೊಳ್ಳುತ್ತಿವೆ. ಎರಡನೆಯದಾಗಿ ನಮ್ಮ ರಾಜಕೀಯ, ಬಹು ದೊಡ್ಡ ಕಾರಣವಾಗಿದೆ. ರಾಜಕೀಯ ವ್ಯಕ್ತಿಗಳು ತಮ್ಮ ಸ್ಥಾನಭದ್ರತೆಗಾಗಿ, ಓಟಿನ ಸಲುವಾಗಿ ಜನರನ್ನು ಕ್ಷುಲ್ಲಕ ಆಮಿಷಗಳಿಗೆ ಒಳಗಾಗಿಸಿ ಅವರನ್ನು ತಪ್ಪುದಾರಿಗೆಳೆಯುತ್ತಾರೆ. ತಪ್ಪು ಮಾಡಿದವರು ತಮ್ಮ ಹಿಂಬಾಲಕರಾಗಿದ್ದರೆ, ತಮ್ಮ ರಾಜಕೀಯ ಪ್ರಭಾವದಿಂದ ಅವರನ್ನು ಉಳಿಸುತ್ತಾರೆ. ತಮ್ಮ ರಾಜಕೀಯ ಬದುಕಿಗೆ ಸಹಾಯಕವಾಗುವಂತೆ ಅಧಿಕಾರಿಗಳನ್ನು, ಭ್ರಷ್ಟಾಚಾರಿಗಳಾಗಲು ಅವಕಾಶ ಮಾಡಿಕೊಡುತ್ತಾರೆ. ಅಂತಹ ಭ್ರಷ್ಟರಿಗೆ ಬೆಂಬಲ ಕೊಟ್ಟು ಏನು ಕೆಡಕು ಮಾಡಿದರೂ ಅವರನ್ನು ಉಳಿಸಿಕೊಳ್ಳುತ್ತಾರೆ. ಅಷ್ಟೇ ಅಲ್ಲ; ತಮಗೆ ಬೆಂಬಲ ನೀಡದ ನೀತಿವಂತರನ್ನು, ಅಸಾಧ್ಯವಾದ ಸಮಸ್ಯೆಗಳಿಗೆ ಗುರಿಮಾಡುತ್ತಾರೆ. ಇದನ್ನೇ ಗಮನಿಸುವ ಪೀಳಿಗೆಯು ಸಮಸ್ಯಾತ್ಮಕ ಮಾರ್ಗವನ್ನಾದರೂ ಏಕೆ ಹಿಡಿಯುತ್ತದೆ? ಹರಿಶ್ಚಂದ್ರ ಸತ್ಯ ನಿಷ್ಠರಾಗಿ ಬದುಕಲು ಹಪಹಪಿಸಿದುದರಿಂದ, ತಾನು ಸ್ಮಶಾನ ಕಾಯಬೇಕಾಯ್ತು. ರಾಣಿಯಾಗಿದ್ದ ಹೆಂಡತಿ ಪರರ ಮನೆಯ ಊಳಿಗವನ್ನು ಮಾಡಿಕೊಂಡು ಬದುಕಬೇಕಾಯ್ತು. ಅವನೇನಾದರೂ ಒಂದೇ ಮಾತಿನಲ್ಲಿ, 'ನಾನು ಹಾಗೇನು ಹೇಳಿರಲಿಲ್ಲ' ಎಂದು ವಿಶ್ವಾಮಿತ್ರನಿಗೆ ಹೇಳಿದ್ದರೆ, ತಾನು ರಾಜನಾಗಿಯೇ ಉಳಿಯುತ್ತಿದ್ದ! ಹೆಂಡತಿ ರಾಣಿಯಾಗಿಯೇ ಮುಂದುವರಿಯುತ್ತಿದ್ದಳು! ಮಗ

ಯಾವ ಕಷ್ಟಗಳಿಲ್ಲದೆ ಸುಖದ ಸುಪತ್ತಿಗೆಯಲ್ಲಿ ರಾಜಕುಮಾರನಾಗಿ ಬೆಳೆಯುತ್ತಿದ್ದ! ಎಂದು ಈಗಿನ ಭ್ರಷ್ಟಾಚಾರಿಗಳು ಮಜವಾಗಿ ಬದುಕುವುದನ್ನೂ, ತತ್ವಗಳಿಗೆ ಅಂಟಿಕೊಂಡು ಬದುಕು ಸಾಗಿಸುತ್ತಿರುವವರು ಬವಣೆಗೊಳ್ಳುತ್ತಿರುವುದನ್ನೂ ನೋಡುತ್ತಿರುವ ಪೀಳಿಗೆ ಹೇಳುತ್ತದೆ. ಅದನ್ನೇ ಆದರ್ಶವಾಗಿ ಇಟ್ಟುಕೊಂಡು ತನ್ನ ವ್ಯಕ್ತಿತ್ವವನ್ನು, ಜೀವನವನ್ನೂ ರೂಪಿಸಿಕೊಳ್ಳುತ್ತದೆ. ಈಗಿನ ಸ್ಥಿತಿಗೆ ಮತ್ತೊಂದು ಪ್ರಮುಖ ಕಾರಣವೆಂದರೆ ಶಿಕ್ಷಣ ವ್ಯವಸ್ಥೆ, ಇಲ್ಲಿ ಅಂಕಗಳಿಗೆ ಬಹಳ ಪ್ರಾಶಸ್ತ್ಯ ಕೊಡಲಾಗುತ್ತಿದೆ. ಈ ಮಕ್ಕಳು ತಮ್ಮ ವಿದ್ಯಾಭ್ಯಾಸದಲ್ಲಿ ಪಡೆದ ಅಂಕಗಳ ಮೇಲೆ ಅವರ ಶಿಕ್ಷಣ, ನೌಕರಿ, ಭವಿಷ್ಯ ರೂಪಿತವಾಗುತ್ತದೆ. ಹಾಗಾಗಿ ಪಾಲಕರು, ಮಗು ಎರಡು ವರ್ಷದ್ದಿರುವಾಗಿನಿಂದಲೇ ಒತ್ತಡ ಹೇರಲು ಪ್ರಾರಂಭಿಸುತ್ತಾರೆ. ಮಕ್ಕಳ ವಿಚಾರದಲ್ಲಿ ಪೋಷಕರ ನಿರೀಕ್ಷೆ ಮಿತಿಮೀರುತ್ತಿದೆ. ಅಸ್ವಾಭಾವಿಕವಾಗಿ ಮಕ್ಕಳೂ ಹೋರಾಡಬೇಕಾಗಿದೆ. ಅವರ ಅನಿಸಿಕೆಗೆ, ಶಕ್ತಿಗೆ ಶಾಲೆಯಲ್ಲೂ ಗಮನ ಕೊಡುತ್ತಾ ಇಲ್ಲ. ಪಾಲಕರಂತೂ ಎಲ್ಲ ವಿಚಾರದಲ್ಲೂ ತಮ್ಮ ಮಕ್ಕಳೇ ಮುಂದಿರಬೇಕೆಂಬಾಸೆಯಿಂದ ಅವರೂ ಈ ಯಾವ ಅಂಶಗಳನ್ನು ನೋಡದೆ ತಮ್ಮ ಅಪೇಕ್ಷೆಗಳು ಈಡೇರುವಂತೆ ಮಾಡುವುದಕ್ಕೆ ಗಮನವೀಯುತ್ತಾರೆ. ಹಾಗಾಗಿ ಮಕ್ಕಳು ತಮಗಿಷ್ಟವಿಲ್ಲದ ವಿಷಯಗಳನ್ನು ಕಲಿಯಬೇಕಾಗುತ್ತದೆ. ತಮಗೆ ನೀಗದ ವಿಷಯಗಳಲ್ಲೂ ಮಿತಿ ಮೀರಿದ ಅಂಕಗಳನ್ನು ಪಡೆಯಬೇಕೆಂಬ ಒತ್ತಡಕ್ಕೆ ಬಲಿಯಾಗಿ ಅಪ್ರಾಮಾಣಿಕವಾದ ರೀತಿಯಲ್ಲಿ ಪಡೆಯಲು ಉದ್ಯುಕ್ತರಾಗುತ್ತಾರೆ. ಅದರಲ್ಲಿ ಒಮ್ಮೆ ಜಯಗಳಿಸಿ ಲಾಭಮಾಡಿಕೊಂಡರೆ ಮುಗಿಯಿತು. ಮುಂದೆ ಅದೇ ದಾರಿಯಲ್ಲಿ ಜೀವನದುದ್ದಕ್ಕೂ ನಡೆಯುತ್ತಾರೆ. ಹೀಗೆ ಮಾಡದುದಕ್ಕಾಗಿ ಹಿಂದೆ ಉಳಿದ ವಿದ್ಯಾರ್ಥಿಗೆ, ಎಲ್ಲರೂ ಮೋಸಗಾರಿಕೆಯಿಂದ ಮುಂದೆ ಬಂದು ಸುಖವಾಗಿರುವಾಗ ನಾನೊಬ್ಬನೇ ಏಕೆ ಮೌಲ್ಯಕ್ಕಾಗಿ ಸಮಸ್ಯೆಗಳಲ್ಲಿ ತೊಳಲಾಡಬೇಕು ಎಂಬ ಅನಿಸಿಕೆ ಸಹಜವಾಗಿಯೇ ಉಂಟಾಗುತ್ತದೆ.

**ಜೀವನದ ತಪ್ಪು ಹೆಜ್ಜೆಗಳು:**

ತಪ್ಪು ರೀತಿಯ ರಾಜಕೀಯ, ಧಾರ್ಮಿಕ, ಆರ್ಥಿಕ, ಆಡಳಿತ ನೀತಿಯ ಕಾರಣದಿಂದಾಗಿ ಭಾರತದಲ್ಲಿ ಜನರು ಅಜ್ಞಾನ, ಬಡತನ, ಅಸಹಾಯಕತೆಯಿಂದ ನರಳುತ್ತಿದ್ದಾರೆ. ಮೂಲಭೂತ ಅವಶ್ಯಕತೆಗಳಾದ ಊಟ, ಉಡುಗೆ, ವಸತಿಗೆ ಸಹಾ ಕೊರತೆ ಅನೇಕರಿಗೆ ಇದೆ. ಇದನ್ನು ಗಮನಿಸಿ ಕೆಲವರು; 'ಹೊಟ್ಟೆ-ಬಟ್ಟೆಗೇ ಇಲ್ಲದಿರುವಾಗ ಮೌಲ್ಯಕಟ್ಟಿಕೊಂಡು ಏನು ಮಾಡುತ್ತೀರಿ? ನೀತಿ ತೆಗೆದು ಕೊಂಡು ಏನಾಗಬೇಕಿದೆ? ಮೊದಲು ಹೊಟ್ಟೆ ನೋಡಿಕೊಳ್ಳಿ, ನಂತರ ಉಳಿದದ್ದು' ಎಂದು ಮೊದಲೇ ದಿಕ್ಕುತೋಚದಿದ್ದ ಜನರಿಗೆ ಹಾದಿ ತಪ್ಪಿಸಿಬಿಡುತ್ತಾರೆ, ಬಡತನ

ನೀಗಿಸುವುದು, ಮೂಲಭೂತ ಅವಶ್ಯಕತೆಗಾಗಿ ಗಮನ ಕೊಡುವುದು ಅಗತ್ಯವಾದರೂ ಮೌಲ್ಯಗಳನ್ನು ಕಡೆಗಣಿಸಿ ಬಡತನ ಹೊಡೆದೋಡಿಸುವ ಪ್ರಯತ್ನ ಅದೂರದೃಷ್ಟಿಯದ್ದಾಗಿದೆ; ಅರ್ಥಹೀನವಾಗಿದೆ, ಈಗಿನ ನಮ್ಮ ದೇಶದ ಅನೇಕ ಯೋಜನೆಗಳು ಗುರಿ ಮುಟ್ಟದಿರಲು, ಜನರ ಅನೀತಿಯುತವಾದ, ಭ್ರಷ್ಟಾಚಾರ ಭರಿತವಾದ, ರಾಷ್ಟ್ರಪ್ರೇಮವಿಲ್ಲದ, ಬೇಜವಾಬ್ದಾರಿಯುತ ನಡವಳಿಕೆಯೇ ಕಾರಣವಾಗಿದೆ.

ಈಗಿನ ಕಾಲದಲ್ಲಿ ಭಾರತದಲ್ಲಿಯೂ ಪಾಶ್ಚಾತ್ಯರ ಮೌಲ್ಯಗಳು ಹಣಿಕಿಹಾಕುತ್ತಿವೆ. ಅಲ್ಲಿಯ ಪ್ರಶ್ನೆಗಳು ಎಂದರೆ, ಮದುವೆಗೆ ಮುನ್ನ ಮಕ್ಕಳನ್ನು ಪಡೆಯಬೇಕೆ? ಅಥವಾ ಬೇಡವೇ? ಎಂಬುದು, ಅವಿವಾಹಿತ ಯುವತಿಯ ಅಬಾರ್ಷನ್‌ಗೆ ಸರಕಾರ ಅನುಮತಿ ಕೊಡಬೇಕೋ ಬೇಡವೋ ಎಂಬ ಪ್ರಶ್ನೆ ಡಿ.ಎನ್.ಎ. ಸಂಶೋಧನೆಗೆ ಸಂಬಂಧಿಸಿದ ನೀತಿ ದೇಹದ ಭಾಗವನ್ನು ಕಸಿ ಮಾಡುವ ನೀತಿಯಿಂದಾಗುವ ಪರಿಣಾಮಗಳು ಇಂಥವುಗಳಾಗಿವೆ. ಪ್ರಾಮಾಣಿಕತೆ, ಕೃತಜ್ಞತೆ, ಉಪಕಾರಸ್ಮರಣೆ, ತಂದೆ-ತಾಯಿಯರ ಬಗ್ಗೆ ಆದರದ ಭಾವನೆ, ಸಹಕಾರ, ತ್ಯಾಗ ಮನೋಭಾವ ಮುಂತಾದ ವ್ಯಕ್ತಿತ್ವ ರೂಪುಗೊಳ್ಳಲು ಸಹಾಯವಾಗುವ ಮೌಲ್ಯಗಳ ಪರಿಚಯವೇ ಆ ಮಕ್ಕಳಿಗೆ ಯಾವ ಹಂತದಲ್ಲೂ ಆಗುವುದಿಲ್ಲ. ಆದುದರಿಂದ ಈ ಬಗ್ಗೆ ಮಾತನಾಡಿದರೆ ಅವರಿಗೆ ಆ ಮಾತುಗಳು ಅರ್ಥವಿಹೀನವೆನ್ನಿಸುತ್ತವೆ. ಎಷ್ಟು ಹೇಳಿದರೂ ಅವರ ಮನಮುಟ್ಟುವುದೇ ಇಲ್ಲ. ಪಾಶ್ಚಾತ್ಯ ದೇಶಗಳೊಡನೆ ನಮ್ಮ ವಿದ್ಯಾವಂತ ಜನರ ಸಂಪರ್ಕ ಹೆಚ್ಚುತ್ತಿದೆ. ಅವರು ಅಂಕಗಳಿಸುವ ಸ್ಪರ್ಧೆಯಲ್ಲಿ ಮೌಲ್ಯಗಳ ಕಡೆಗಾಗಲೀ, ಕುಟುಂಬ ಜೀವನದ ಬಗೆಗಾಗಲೀ, ಯೋಚಿಸಲೂ ಅವಕಾಶವಿಲ್ಲದೆ ನಮ್ಮ ಮಕ್ಕಳ ಸ್ಥಿತಿಯೂ ಅದೇ ಗತಿ ಕಾಣುತ್ತಿದೆ.

ಇಂತಹ ಪರಿಸ್ಥಿತಿಯಿಂದ ಈಗಿನವರ ಮೌಲ್ಯಗಳು ತ್ರಿಶಂಕುಸ್ಥಿತಿಯಲ್ಲಿವೆ. ಸರ್ವಮಾನ್ಯವಾಗಿದ್ದ ಮೌಲ್ಯಗಳಿಗೆ ಬೆಲೆ ಇಲ್ಲವಾಗಿದೆ. ಬೇರೆಯವರು ಯಾರನ್ನಾದರೂ ಕ್ರೌರ್ಯದಿಂದ ಅನ್ಯಾಯದಿಂದ ನೋಡಿಕೊಂಡರೆ, ಹಿಂದಿನಕಾಲದಲ್ಲಿ ಬೇರೆಯವರು ಅನ್ಯಾಯಕ್ಕೆ ಒಳಗಾದವರ ಬಗ್ಗೆ, ಹಿಂಸೆಗೆ ಗುರಿಯಾದವರ ಬಗ್ಗೆ ದಯೆ ತಾಳಿ ಅವರ ನೆರವಿಗೆ ಹೋಗುತ್ತಿದ್ದರು, ಈಗಾದರೆ 'ಇನ್ನೊಬ್ಬರ ಗೊಡವೆ ನಮಗೇಕೆ? ನಮ್ಮ ನಮ್ಮ ತಾಪತ್ರಯಗಳೇ ಸಾಕಷ್ಟಿವೆ' ಎಂದುಕೊಂಡು ದೂರ ಉಳಿದು ಬಿಡುತ್ತಾರೆ. ಹಾಗಾಗಿ ಸಮಾಜದಲ್ಲಿ ಜನ ತುಂಬಿದ್ದರೂ, ಮಾನವ ಏಕಾಂಗಿಯಾಗಿ ಬದುಕಬೇಕಾಗಿದೆ. ಕ್ರೌರ್ಯ, ಹಿಂಸೆ, ಅಸಹಾಯಕತೆಗೆ ಗುರಿಮಾಡುವಿಕೆ, ನರನರಳಿ ಸಾಯುವಂತೆ ಮಾಡುವುದು, ಚಿತ್ರಹಿಂಸೆ ಕೊಡುವುದು, ಮುಂತಾದ ಕೆಲವರ ಹಿಂಸಾತ್ಮಕ ನಡವಳಿಕೆ ಕುರಿತು

ಇಂದಿನ ಜನರ ಪ್ರತಿಕ್ರಿಯೆ ಸಹ ಆಶ್ಚರ್ಯಕರವಾಗಿರುತ್ತದೆ. 'ಹಾಗೆ ಮಾಡುವುದನ್ನು ನೀವು ತಪ್ಪೆಂದು ತಿಳಿಯಬಹುದು; ಅವರ ದೃಷ್ಟಿಯಲ್ಲಿ ಅದು ಸರಿ. ನಿಮ್ಮ ಅನಿಸಿಕೆಯೇ ಸರಿ ಎಂದು ಹೇಗೆ ತೀರ್ಮಾನಿಸುವಿರಿ? ಅವರದ್ದು ತಪ್ಪು ಎಂದು ಹೇಳಲು ನಿಮಗೇನು ಅಧಿಕಾರ ? ಎನ್ನುತ್ತಾರೆ. ಈ ತರಹ ಪ್ರತಿಕ್ರಿಯೆ, ಹಿಂಸಾಚಾರಿಗಳಿಗೆ ಪ್ರೋತ್ಸಾಹವನ್ನಿತ್ತಂತಾಗುತ್ತದೆ. ಆಗ ಹಿಂಸಾಚಾರ ಸಮಾಜದಲ್ಲಿ ವ್ಯಾಪಕಗೊಳ್ಳುತ್ತದೆ. ಹೀಗಾದಾಗ ಯಾರಿಗೂ ನೆಮ್ಮದಿ ಇರುವುದಿಲ್ಲ. ಏಕೆಂದರೆ ಹಿಂಸಾಚಾರದ ರೀತಿ ಸರಿಯಲ್ಲ ಎನಿಸಿದವರೂ ತಮ್ಮ ಉಳಿವಿಗಾಗಿ ಅಂತಹದೇ-ಮಾರ್ಗ ಹಿಡಿಯಬೇಕಾಗುತ್ತದೆ. ಅದಕ್ಕಾಗಿಯೇ ಈಗೀಗ ಗೂಂಡಾಗಿರಿ ದಿನದಿನಕ್ಕೂ ಹೆಚ್ಚುತ್ತಿದೆ. ಈಗಿನ ಕಾಲದಲ್ಲಿ ಉತ್ತಮ ಮೌಲ್ಯಗಳನ್ನು ಕಲಿಸಬೇಕಾದ ತಾಯಂದಿರೂ ಸಹ ತಮ್ಮ ಮಕ್ಕಳಿಗೆ 'ಯಾರಾದರೂ ನಿನಗೆ ಒಂದು ಏಟು ಹಾಕಿದರೆ, ನೀನು ಎರಡು ಏಟು ಹಾಕಿ ಬಾ, ನಿನ್ನ ಒಂದು ಸಾಮಾನನ್ನು ಅವನು ಕಸಿದುಕೊಂಡರೆ ನೀನು ಅವನ ಎರಡು ಸಾಮಾನುಗಳನ್ನು ಕಸಿದುಕೊಂಡು ಬಾ' ಎಂದು ಹೇಳಿಕೊಡುತ್ತಾರೆ, ಹೀಗೆ ಮಕ್ಕಳಿಗೆ ಕಲಿಸದಿದ್ದರೆ ಮುಂದೆ ಅವರು ಅಸಹಾಯಕರಾಗಿ ಬದುಕಬೇಕಾಗುತ್ತದೆ ಎನ್ನುವುದು ಅವರ ವಾದ. ಇದು ನಿಜವಾದರೂ, ಈ ರೀತಿಯಲ್ಲಿ ಬೆಳೆದ ಮಕ್ಕಳ ಮುಂದಿನ ಸಮಾಜದ ಗತಿ ಏನು? ಆ ಸಮಾಜವು ಪ್ರೀತಿ- ಸಹಕಾರಗಳಿಲ್ಲದ, ನೆಮ್ಮದಿಯ ನೆರಳನ್ನೂ ಕಾಣದ, ಹೊಡೆದಾಟ - ಬಡಿದಾಟಗಳಿಂದ ತುಂಬಿದ, ಗೂಂಡಾಗಿರಿಯ ಕ್ರೌರ್ಯ ಮನೋಭಾವದ ಜನರಿಂದ ನಿಸ್ಸಂಶಯವಾಗಿ ತುಂಬಿರುತ್ತದೆ ಎನ್ನಬಹುದು.

ಮಕ್ಕಳಲ್ಲಿ ಮೌಲ್ಯಾಂಕುರಾರ್ಪಣ.

ಇಂತಹ ದುಷ್ಟ ಬೆಳವಣಿಗೆಯನ್ನು ಹೇಗೆ ತಡೆಗಟ್ಟಬೇಕು ಎಂದು ಎಲ್ಲರೂ ಯೋಚಿಸಿ ಕಾರ್ಯ ಪ್ರವೃತ್ತರಾಗಬೇಕಾಗಿದೆ. ಇಲ್ಲದಿದ್ದಲ್ಲಿ ಬಹಳ ಅಸಹನೀಯವಾದ ಸ್ಥಿತಿಗೆ ಗುರಿಯಾಗುತ್ತೇವೆ. ಎಲ್ಲರೂ ಈ ದಿಶೆಯಲ್ಲಿ ಮಕ್ಕಳ ಬೆಳವಣಿಗೆಯ ಮೊದಲ ಹಂತದಿಂದಲೇ ಪ್ರಯತ್ನಿಸಬೇಕು. ಈ ಯತ್ನದಲ್ಲಿ ಮನೆಯ ಪ್ರಭಾವ ಮುಖ್ಯವಾದುದು. ನೀತಿಯುತ ಬದುಕಿನ ಬೆಳವಣಿಗೆ ಮನೆಯಿಂದಲೇ ಪ್ರಾರಂಭವಾಗಬೇಕು; ಬುನಾದಿ ಅಲ್ಲಿಯೇ ಬೀಳಬೇಕು. ಇದಕ್ಕೆ ಪಾಲಕರ ಪಾತ್ರ ಬಹಳ ಮಹತ್ವದ್ದು, ಶಾಲೆಯೂ ಅಷ್ಟೇ ಮಹತ್ವದ್ದಾದರೂ ಶಾಲೆಯಲ್ಲಿ ಪಡುವ ಪ್ರಯತ್ನಕ್ಕೆ ಮನೆಯ ಸಹಕಾರವಿಲ್ಲದಿದ್ದರೆ ಶಾಲೆ ಏನೂ ಮಾಡಲಾರದು. ಶಿಕ್ಷಕರ ನಡೆ ನುಡಿಗಳು ಮಕ್ಕಳ ಬೆಳವಣಿಗೆಯಲ್ಲಿ ಶಾಲಾ ಹಂತದಲ್ಲಿ ಬಹು ಪ್ರಭಾವಕಾರಿ. ಅದರಂತೆ ಬಾಲ್ಯದಲ್ಲಿ ಮನೆಯ ಹಿರಿಯರ, ತಂದೆ - ತಾಯ್ಗಳ ಗುಣ- ಸ್ವಭಾವಗಳೂ, ರೀತಿ - ನೀತಿಗಳೂ ಅಷ್ಟೇ ಪರಿಣಾಮಕಾರಿ, ಶಿಕ್ಷಕರು ಪಾಲಕರು, ಒಂದುಗೂಡಿ

ಪ್ರಯತ್ನಿಸದಿದ್ದರೆ ಈಗಿನ ಕಾಲದಲ್ಲಿ ಅಗಾಧವಾಗಿ ಹಬ್ಬುತ್ತಿರುವ ಪಾಶ್ಚಾತ್ಯ ಸಂಸ್ಕೃತಿ, ಟಿ.ವಿ. ಸಂಸ್ಕೃತಿ, ನೈಟ್‌ಕ್ಲಬ್ ಸಂಸ್ಕೃತಿಗಳ ಪ್ರಭಾವಕ್ಕೆ ಯುವಕರು ಸುಲಭವಾಗಿ ಬಲಿಬೀಳುತ್ತಾರೆ. ಎಲಿಕ್ಟ್ರಾನಿಕ್ ಮಾಧ್ಯಮಗಳು, ಜಾಹೀರಾತುಗಳು, ಮಗುವಿನ ಬಯಕೆಯನ್ನು ತನ್ನ ನೈಜ ಜೀವನಕ್ಕಿಂತ ಹೆಚ್ಚು ಎತ್ತರಗೊಳಿಸಿ ಅವರು ಹತಾಶರಾಗುವಂತೆ ಮಾಡುತ್ತದೆ.

ತಂದೆ ತಾಯ್ಗಳು ತಾವು ಮಕ್ಕಳು ಹೇಗಿರಬೇಕೆಂದು ಬಯಸುತ್ತಾರೋ, ಹಾಗೆ ತಾವೇ ಬದುಕಿ ಮಕ್ಕಳಿಗೆ ತೋರಿಸಬೇಕು. ತಾವು ಸುಳ್ಳು ಹೇಳುತ್ತಾ, ಲಂಚ ತಿನ್ನುತ್ತಾ ಮಕ್ಕಳು ಹಾಗಿರಬಾರದೆಂದು ಬೋಧಿಸಿದರೆ ಉಪಯೋಗವಿಲ್ಲ ದುಶ್ಚಟಗಳಿಗೆ ಮಕ್ಕಳು ಒಳಗಾಗಬಾರದೆಂದು ಬಯಸುವ ತಂದೆ ಮೊದಲು ತಾನು ಅವುಗಳಿಂದ ದೂರವಿರಬೇಕು. ಸಿಟ್ಟು ಮಾಡಬಾರದು, ಎಲ್ಲರೊಡನೆ ಸ್ನೇಹದಿಂದ ತನ್ನ ಮಕ್ಕಳು ಇರಬೇಕೆಂದು ಬಯಸುವ ತಾಯಿ ಮೊದಲು, ತಾನು ಸಮಾಧಾನಿಯಾಗಿ ಎಲ್ಲರೊಡನೆ ಹೊಂದಿಕೊಂಡಿರಬೇಕು. ಶಾಲೆಗಳಲ್ಲಿ ಶಿಕ್ಷಕರೂ ಆದರ್ಶ ವ್ಯಕ್ತಿತ್ವ ಹೊಂದಿದ್ದರೆ ಮಾತ್ರ ಮಕ್ಕಳಿಗೆ ಮಾರ್ಗದರ್ಶನವನ್ನು ಪರಿಣಾಮಕಾರಿಯಾಗಿ ಮಾಡಲು ಸಾಧ್ಯ. ಶಾಲಾ ಹಂತದಲ್ಲಿ ಮಕ್ಕಳಿಗೆ ಶಿಕ್ಷಕರೇ ಬಹಳ ಆದರ್ಶ, ಅವರು ಹೇಗೆ ಮಾಡುತ್ತಾರೋ ಹಾಗೇ ಮಕ್ಕಳು ಅನುಕರಿಸುತ್ತಾರೆ. ಆದ್ದರಿಂದ ಶಿಕ್ಷಕರು ಅದರ ಲಾಭ ಪಡೆದು ಮಕ್ಕಳನ್ನು ತಿದ್ದಬೇಕು. ಅಲ್ಲದೆ ಶಾಲೆಯ ವ್ಯವಸ್ಥೆ, ಚಟುವಟಿಕೆಗಳ ಮೂಲಕವೇ ಅವರಲ್ಲಿ ಮೌಲ್ಯಗಳನ್ನು ರೂಪಿಸಬಹುದು. ಮಧ್ಯಾಹ್ನದ ಊಟಕ್ಕೆ ಶಿಕ್ಷಕರು ವಿದ್ಯಾರ್ಥಿಗಳೆಲ್ಲರೂ ಒಂದೆಡೆ ಸೇರುವಂತೆ ಮಾಡಿ, ಅಲ್ಲಿ ಉತ್ತಮ ವಿಷಯಗಳ ಚರ್ಚೆಗಳಿಗೆ ಅವಕಾಶ ಮಾಡಿ, ಚರ್ಚೆಯನ್ನು ಶಿಕ್ಷಕರು ನಿರ್ವಹಿಸಬೇಕು. ಆಗ ಉತ್ತಮ ವಿಷಯಗಳು ನಡೆ – ನುಡಿಗಳು ಮಕ್ಕಳಿಗೆ ಮನದಟ್ಟಾಗುವಂತೆ ಮಾಡಬಹುದು. ಅಲ್ಲಿ ಮಕ್ಕಳು ಪರಸ್ಪರ ಸ್ನೇಹದಿಂದ ಮಾತನಾಡುತ್ತಾ, ತಾವು ತಂದುದನ್ನು ಹಂಚಿ ತಿನ್ನುತ್ತಾ ವಿಚಾರ ವಿನಿಮಯ ಮಾಡಿಕೊಳ್ಳಲು ಆಸ್ಪದವಿರಬೇಕು; ಮತ್ತು ತಮ್ಮ ವಿಚಾರಗಳನ್ನು ಸ್ವತಂತ್ರವಾಗಿ ಅಭಿವ್ಯಕ್ತಪಡಿಸಲು ಅವಕಾಶ ಮಾಡಿಕೊಡಬೇಕು, ಪೌಷ್ಟಿಕ ಆಹಾರವನ್ನು ಹೆಚ್ಚು ಖರ್ಚಿಲ್ಲದೆ ತಯಾರಿಸುವ ವಿಧಾನ, ಸರಳ ಹಾಗೂ ಪರಿಶುದ್ಧ ಜೀವನ ಲಾಭ, ಸಹಕಾರ ಜೀವನದ ಪ್ರಯೋಜನ ಮುಂತಾದ ಮೌಲ್ಯಾಧಾರಿತ ವಿಷಯಗಳು ಚರ್ಚೆಗೆ ಬರುವಂತೆ ಶಿಕ್ಷಕರು ಪಾತ್ರವಹಿಸಬೇಕು. ಪಿಕ್‌ನಿಕ್ ಹೋದಾಗಲೂ ಹೀಗೆ ಮಾಡಲು ಸಾಧ್ಯವಿದೆ. ಆಗ ಮಕ್ಕಳು ಆಡಾಡುತ್ತಲೇ, ತಮಗೆ ಅರಿವಿಲ್ಲದಂತೆ ಒಳ್ಳೆಯ ವಿಚಾರಗಳಿಗೆ ಮಹತ್ವ ಕೊಡುವ ಸ್ವಭಾವ ಬೆಳೆಸಿಕೊಳ್ಳುತ್ತಾರೆ. ಉತ್ತಮ ಹಾಗೂ ಉತ್ತಮರ ಉದಾಹರಣೆಗಳನ್ನು ಕೊಡುವ ಮೂಲಕವೂ ಮಕ್ಕಳಿಗೆ ನೀತಿ ಬೋಧನೆ ಮಾಡಬಹುದು. ಹಿಂದಿನವರಿಗಿಂತ, ಇಂದು ಸಾಮಾನ್ಯ ಜೀವನ ನಡೆಸುತ್ತಿದ್ದರೂ,

ಉದಾತ್ತವಾಗಿ ಬಾಳುತ್ತಿರುವವರ ಉದಾಹರಣೆ ಹೆಚ್ಚು ಫಲಕಾರಿ. ಶಾಲೆಯಲ್ಲಿ ಗುಂಪು ಚಟುವಟಿಕೆಗಳನ್ನು ಹಮ್ಮಿಕೊಂಡು ಸಹಕಾರ ಮನೋಭಾವ, ನಿಯಮಗಳನ್ನು ಪಾಲಿಸುವಿಕೆ, ದಕ್ಷತೆಯಿಂದ ಕೆಲಸ ನಿರ್ವಹಣೆ, ಸಮಯ ಪರಿಪಾಲನೆ, ಪ್ರಾಮಾಣಿಕತೆ, ಮುಂತಾದ ಅನೇಕ ಉತ್ತಮ ಗುಣಗಳನ್ನು ರೂಢಿಸಿಕೊಳ್ಳಲು ಸಹಾಯಕವಾಗಬಹುದು. ರಾಷ್ಟ್ರೀಯ, ಹಬ್ಬಗಳನ್ನು ಪರಿಣಾಮಕಾರಿಯಾಗಿ ಆಚರಿಸುವ ಮೂಲಕ ರಾಷ್ಟ್ರೀಯ ಭಾವನೆ ಗಟ್ಟಿಗೊಳ್ಳುವಂತೆ ಮಾಡಲು ಸಾಧ್ಯ.

ಶಾಲೆ – ಪಾಲಕರ ದಿಗ್ದರ್ಶನ.

ಇದರ ಜೊತೆಗೆ ಶಾಲೆಯು ಮಗುವಿನ ಮನೆಯೊಡನೆ ಉತ್ತಮ ಸಂಬಂಧವಿಟ್ಟುಕೊಳ್ಳಬೇಕು. ಆ ಮೂಲಕ ಮಗುವಿನ ಆರ್ಥಿಕ ಸ್ಥಿತಿ. ಮನೆಯ ಪರಿಸರ, ಜವಾಬ್ದಾರಿ ಮುಂತಾದವುಗಳನ್ನು ಕೂಲಂಕುಶವಾಗಿ ತಿಳಿದುಕೊಂಡು, ಮಗುವನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕು. ಶಾಲೆಯಲ್ಲಿ ಪ್ರತಿ ಮಗುವಿಗೂ ಒಂದು ದಾಖಲಾತಿ ಪುಸ್ತಕವಿಟ್ಟುಕೊಂಡು ಮಗುವಿನ ಮನೆಯೊಡನೆ ಸಂಬಂಧವಿಟ್ಟುಕೊಂಡಿರುವ ಶಿಕ್ಷಕಿ, ಅದರಲ್ಲಿ ಮಗುವಿಗೆ ಸಂಬಂಧಿಸಿದ ಎಲ್ಲಾ ವಿಚಾರಗಳನ್ನು ವರ್ಷವಿಡೀ ಗುರುತಿಸಿಕೊಳ್ಳುತ್ತಾ ಹೋಗಬೇಕು. ಆಗ ಮಗುವಿನೊಡನೆ ಹೇಗೆ ವ್ಯವಹರಿಸಬೇಕು ಎಂಬ ಅಂಶ ತಿಳಿಯುತ್ತದೆ. ನಂತರ ಮಗುವಿಗೆ ಅಗತ್ಯವಾದ ರೀತಿಯಲ್ಲಿ ಮಾರ್ಗದರ್ಶನ ಮಾಡುತ್ತಾ, ಅದರ ಪ್ರಗತಿಗೆ ಸಹಾಯಕವಾಗಬಹುದು. ಹೀಗೆ ಕಿರಿಯ ವಯಸ್ಸಿನಲ್ಲಿ ಪಾಲಕರು ಹಾಗೂ ಶಿಕ್ಷಕರು ಜವಾಬ್ದಾರಿಯ ಪಾತ್ರ ವಹಿಸಿದರೆ ಈಗಿನ ನಿರಾಶಾದಾಯಕ ಪರಿಸ್ಥಿತಿಯಲ್ಲಿ ಉತ್ತಮ ಬದಲಾವಣೆ ಕಾಣಲು ಕಷ್ಟವೇನಾಗುವುದಿಲ್ಲ. ಇಂತಹ ಒಂದು ಪ್ರಯೋಗ ಮುಂಬಯಿಯ ಒಂದು ಶಾಲೆಯಲ್ಲಿ ನಡೆಯುತ್ತಿದೆ, ಅದು ಸಾಕಷ್ಟು ಯಶಸ್ವಿಯಾಗಿದೆ; ಎಂಬುದು ಅತ್ಯಂತ ಸಂತಸದಸಂಗತಿ.

■

## ೧೦. ಜಾಣಮಕ್ಕಳ ಶಿಕ್ಷಣಕ್ಕೊಂದು ರಾಷ್ಟ್ರೀಯ ಯೋಜನೆ.

ದೇಶದ ಉನ್ನತ ಶಿಕ್ಷಣದ ಮಟ್ಟವನ್ನು ಉತ್ತಮ ಸ್ಥಿತಿಯಲ್ಲಿಡುವುದು, ದೇಶವು ವಿಜ್ಞಾನ ತಾಂತ್ರಿಕ ಮುಂತಾದ ಕ್ಷೇತ್ರದಲ್ಲಿ ಪ್ರಗತಿ ಹೊಂದುವಂತಹ ಶಿಕ್ಷಣವನ್ನೊದಗಿಸುವುದು ಸಂವಿಧಾನದ ಪ್ರಕಾರ ಕೇಂದ್ರಸರ್ಕಾರದ ಕರ್ತವ್ಯವಾಗಿದೆ. ಅದಕ್ಕಾಗಿಯೇ ಕೇಂದ್ರವು ಯು.ಜಿ.ಸಿ. ಮೂಲಕ ದೇಶಾದ್ಯಂತ ಉನ್ನತ ಶಿಕ್ಷಣದ ಪ್ರಗತಿಗೆ ಸಹಾಯ - ಸಹಕಾರಗಳನ್ನು ಒದಗಿಸುತ್ತಿದೆ. ಅನೇಕ ರೀತಿಯಿಂದ ಎಲ್ಲಾ ವಿಧದ ಎಲ್ಲಾ ಹಂತದ ಶಿಕ್ಷಣಕ್ಕೂ ಕೇಂದ್ರಸರ್ಕಾರ ತನ್ನ ಪಾಲಿನ ಕೊಡುಗೆಯನ್ನು ಕೊಡುತ್ತಿದೆಯಾದರೂ, ಅದು ನಿರೀಕ್ಷಿತ ಮಟ್ಟವನ್ನು ಮುಟ್ಟಿದೆ, ತೃಪ್ತಿಕರವಾದ ಪ್ರಗತಿಯಾಗಿದೆ ಎಂದು ಹೇಳಲು ಸಾಧ್ಯವಿಲ್ಲ. ಎಲ್ಲೋ ಯಾವುದೋ ತಪ್ಪಿನಿಂದಾಗಿ ಕೆಲವರಿಗೆ ತಮಗೆ ಸರಿಹೊಂದುವ ಅವಕಾಶ ದೊರೆಯದೆ, ಮತ್ತು ಕೆಲವರಿಗೆ ತಮಗೆ ಸೂಕ್ತವಲ್ಲದ ಶಿಕ್ಷಣ ದೊರೆತು ಶಿಕ್ಷಣ ಕ್ಷೇತ್ರದಲ್ಲಿ ಅಸ್ತವ್ಯಸ್ತತೆ ಉಂಟಾಗಿದೆ.

ಹಾಗಾಗಿಯೇ ಅನೇಕ ಕ್ಷೇತ್ರಗಳಲ್ಲಿ ಬಹಳ ಮಟ್ಟಿಗೆ ಅದಕ್ಷತೆ ಪ್ರತಿಯೊಬ್ಬರ ಅನುಭವಕ್ಕೂ ಬರುತ್ತಿದೆ. ದಕ್ಷನಾಧವನಿಗೆ ತಕ್ಕಂತಹ ಶಿಕ್ಷಣ, ಸ್ಥಾನಗಳು ದೊರೆಯುತ್ತಿಲ್ಲವೆಂದು ಪರಿತಪಿಸುವ ಹಲವಾರು ಉದಾಹರಣೆಗಳಿದ್ದರೆ, ತನ್ನ ಕೆಲಸಕ್ಕೆ ತಕ್ಕ ಯೋಗ್ಯತೆಯೇ ಇಲ್ಲದೆ ಉನ್ನತ ಸ್ಥಾನ ಪಡೆದು ಅದನ್ನು ಅದಕ್ಷತೆಯಿಂದ ನಿರ್ವಹಿಸುತ್ತಾ ಹೇಗೋ ಮುಂದುವರಿಸಿಕೊಂಡು ಹೋಗುತ್ತಿರುವ ಉದಾಹಣೆಗಳೂ ಲೆಕ್ಕವಿಲ್ಲದಷ್ಟು, ನಿಜವಾದ ಪ್ರಗತಿಯಾಗಬೇಕಾದರೆ, ಶಿಕ್ಷಣ ಉತ್ತಮ ಹಾಗೂ ಉನ್ನತವಾದುದಾಗಬೇಕಾದರೆ ಹೀಗಾಗಬಾರದು.

ನಮ್ಮ ದೇಶದಲ್ಲಂತೂ ಪ್ರಾಕೃತಿಕ ಸಂಪತ್ತು ಹೇರಳ. ಹಾಗೆಯೇ ಜನ ಸಂಪತ್ತು ಕೂಡ, ಬೌದ್ಧಿಕ ಮಟ್ಟವೇನೂ ಕಡಿಮೆಯದಲ್ಲ. ಮೂಲ ಬೌದ್ಧಿಕ ಶಕ್ತಿಯ ವಿಕಸನಕ್ಕೆ ಸಕಾಲಿಕ ಮತ್ತು ಯೋಗ್ಯ ಮಾರ್ಗದರ್ಶನ ನೀಡುವಂತಹ ಶಿಕ್ಷಣಕ್ಕೆ ಅವಕಾಶವಿದ್ದರೆ ನಮ್ಮಲ್ಲಿ ಇಡೀ ವಿಶ್ವಕ್ಕೇ ಛಾಲೆಂಜ್ ಕೊಡುವಂತಹ ಇಂಟಲಿಜಂಟ್ ಜಯಂಟ್ ಆಗಬಲ್ಲ ಪ್ರತಿಭೆ ಇದೆ. ಮೇಧಾವಿಗಳು ರಾಷ್ಟ್ರದ ಅಮೂಲ್ಯ ಆಸ್ತಿ, ರಾಷ್ಟ್ರಪ್ರೇಮಿಗಳಾದ ಮೇಧಾವಿಗಳಿಂದಲೇ ಏನನ್ನಾದರೂ ಸಾಧಿಸಬಹುದು, ಅವರು

ಸಂಪನ್ಮೂಲಗಳನ್ನು ಹೆಚ್ಚಿಸಬಲ್ಲರು, ಶಾಂತಿ ನೆಲಸುವಂತೆ ಮಾಡಬಲ್ಲರು, ಯಾರಿಗೆ ಯಾವುದು ಶಕ್ತವೋ ಅವಶ್ಯಕವೋ ಅದು ದೊರೆಯುವಂತೆ ಮಾಡಬಲ್ಲವರೂ ಅವರೆ, ಅದಿಲ್ಲದೆ ಹೋದಲ್ಲಿ ತಾಳ – ಮೇಳವಿಲ್ಲದೆ ಹೊಂದಾಣಿಕೆ ಇಲ್ಲದೆ ಎಲ್ಲವೂ ಭತ್ತ ಮೊಸರು ಕಲಸಿದಂತಾಗುತ್ತದೆ.

ಮೇಧಾಶಕ್ತಿಯನ್ನು ಗುರುತಿಸಿ, ಅವರ ವಿಕಸನಕ್ಕೆ ಹಾಗೂ ಅಂತಹವರಲ್ಲಿ ಉತ್ತಮ ಮೌಲ್ಯ ಬೆಳೆಯಲು ತಕ್ಕ ಅವಕಾಶ ವ್ಯವಸ್ಥೆಗಳು ದೊರೆಯುವಂತೆ ಮಾಡುವುದು ಈ ದಿಶೆಯಲ್ಲಿ ಅತಿ ಮುಖ್ಯವಾದ ಹಾಗೂ ಮೊಟ್ಟ ಮೊದಲನೆಯ ಅಗತ್ಯ. ಕರ್ನಾಟಕದಲ್ಲಿ ಹೈಯರ್ ಪ್ರೈಮರಿ ಅಂತ್ಯದ ಅವಧಿಯಲ್ಲಿ ಪ್ರತಿಭಾವಂತರನ್ನು ಗುರುತಿಸುವ ಹಾಗೂ ಪ್ರೋತ್ಸಾಹಿಸುವ ಪ್ರಯತ್ನ ಇತ್ತೀಚೆಗೆ ಪ್ರಾರಂಭವಾಗಿದೆ, ನಿಜವಾಗಿಯೂ ಅಭಿನಂದನೀಯ ಪ್ರಯತ್ನವೇ ಸರಿ. ಆದರೆ ಅದು ಪೂರ್ಣ ಸಮರ್ಪಕವೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಹಾಗೆ ಅತ್ಯಂತ ಮೇಧಾವಿಗಳೆಂದೂ ಆರಿಸಲ್ಪಡುವ ವಿಧಾನದಲ್ಲಿ ಲೋಪ – ದೋಷಗಳಾಗಲು ಅವಕಾಶವಿರುವುದರಿಂದ, ಆರಿಸಲ್ಪಟ್ಟ ಹುಡುಗರು ಆ ಗುಂಪಿನ ಅತ್ಯಂತ ಮೇಧಾವಿಗಳೆಂದು ಹೇಳಲಿಕ್ಕೆ ಬಾರದು, ಇಲ್ಲಿ ನಿಜವಾಗಿಯೂ ಮೇಧಾವಿಗಳಾದವರು ಅಲಕ್ಷಿಸಲಪಟ್ಟು, ಅಲ್ಲದವರು ಆರಿಸಲ್ಪಟ್ಟಿದ್ದರೂ ಇರಬಹುದು. ಈ ಹಂತದಲ್ಲಿಯೂ ಸ್ವಲ್ಪ ಮಾರ್ಪಾಡು ಅಗತ್ಯ. ಇನ್ನೊಂದು ಹಂತವೆಂದರೆ ಆರಿಸಲ್ಪಟ್ಟ ಹುಡುಗರಿಗೆ ಆರ್ಥಿಕ ನೆರವೇನೋ ದೊರೆಯುತ್ತದೆ ನಿಜ. ಆರ್ಥಿಕ ದೆಸೆಯಿಂದ ಬುದ್ಧಿವಂತರಾದ ಮಕ್ಕಳು ಹಿಂದುಳಿಯದಂತೆ ಸರ್ಕಾರ ಮಾಡುತ್ತದೆಯೆಂದು ಒಪ್ಪಿಕೊಂಡರೂ, ಆ ಹಣದ ಸದುಪಯೋಗವಾಗುತ್ತದೆ ಎಂದು ಹೇಳಲು ಬರುವುದಿಲ್ಲ. ಆ ವಯಸ್ಸಿನಲ್ಲಿ ಮಕ್ಕಳು ಇನ್ನೂ ತಮ್ಮ ಮೇಲೆ ಹತೋಟಿ ಇಟ್ಟುಕೊಳ್ಳುವಷ್ಟು ಮಾನಸಿಕ ಪರಿಪಕ್ವತೆ ಪಡೆದಿರುವುದಿಲ್ಲ. ದಕ್ಷರೀತಿಯ ಮಾರ್ಗದರ್ಶನ ಬೇಕಾದ ವಯಸ್ಸು ಅದು, ಆದುದರಿಂದ ಅಂತಹ ಮಾರ್ಗದರ್ಶನ ಹಾಗೂ ಶಿಕ್ಷಣ ಒದಗಿಸುವಂತಹ ಶಾಲೆಗಳಲ್ಲಿಯೇ ಆ ಮಕ್ಕಳು ಓದುವಂತಾಗಬೇಕು.

ಇನ್ನು ಮೇಧಾವಿಗಳನ್ನು ಜರಡಿಹಿಡಿಯುವ ಮತ್ತೊಂದು ಹಂತವೆಂದರೆ ಶಾಲಾ ಶಿಕ್ಷಣದ ಕೊನೆಯಲ್ಲಿ ಎಂದರೆ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ. ಈ ಪರೀಕ್ಷೆಗೆ ಪ್ರತಿ ರಾಜ್ಯದಲ್ಲಿಯೂ ಲಕ್ಷಾಂತರ ವಿದ್ಯಾರ್ಥಿಗಳು ಕುಳಿತುಕೊಳ್ಳುತ್ತಾರೆ. ಮೊದಲನೆಯ ೩೦ ವಿದ್ಯಾರ್ಥಿಗಳನ್ನು ರ‍್ಯಾಂಕ್ ವಿದ್ಯಾರ್ಥಿಗಳೆಂದು ಗಣಿಸಿದರೂ ಮೊದಲನೆಯ ರ‍್ಯಾಂಕ್ ಗಳಿಸಿದ ವಿದ್ಯಾರ್ಥಿ ಅವನಿಗಿಂತ ಜಾಣನೆಂದಾಗಲೀ ಮೂವತ್ತನೆಯ ರ‍್ಯಾಂಕ್ ಗಳಿಸಿದ ವಿದ್ಯಾರ್ಥಿ ಅವನಿಗಿಂತ ಕಡಿಮೆ ಜಾಣನೆಂದಾಗಲೀ ಹೇಳಲಿಕ್ಕೆ ಬಾರದು, ಅಂಕಗಳಲ್ಲಿ ಅನೇಕ ಕಾರಣಗಳಿಂದ ಅಂತರವಿದ್ದರೂ, ಬೌದ್ಧಿಕ

ಮಟ್ಟದಲ್ಲಿ ಅವರೆಲ್ಲಾ ಒಂದೇ ಮಟ್ಟ ಎಂದು ಹೇಳಲಡ್ಡಿಯಿಲ್ಲ, ಅಷ್ಟೇ ಏಕೆ ? ಆ ಲಕ್ಷಾಂತರ ವಿದ್ಯಾರ್ಥಿಗಳಲ್ಲಿ ಮೊದಲ ಸಾವಿರ ವಿದ್ಯಾರ್ಥಿಗಳು ಹೆಚ್ಚು ಕಡಿಮೆ ಒಂದೇ ಮಟ್ಟದ ಮೇಧಾವಿಗಳೆಂದೂ ಹೇಳಬಹುದು.

ಅಂತಹ ಮೇಧಾವಿಗಳನೇಕರು ಸರಿಯಾದ ಮಾರ್ಗದರ್ಶನವಿಲ್ಲದೆಯೋ, ಸರಿಯಾದ ಶಿಕ್ಷಣ ಸಂಸ್ಥೆಗಳಲ್ಲಿ 'ಓದಲು ಹೋಗದೆಯೇ' ಮನೆಯ ಕಾರಣದಿಂದಲೋ ಸಾಧ್ಯವಾಗಬಹುದಾದ ಉನ್ನತ ಮಟ್ಟವನ್ನು ಮುಟ್ಟದೇ, ಕಾರಕೂನರಾಗಿಯೋ, ವ್ಯಾಪಾರಿಗಳಾಗಿಯೋ, ಒಂದು ಸಣ್ಣ ಶಾಲೆಯ ಮಾಸ್ತರಾಗಿಯೋ ಅಥವಾ ಗೊತ್ತುಗುರಿಯಿಲ್ಲದೆ ಕಾಲಯಾಪನೆ ಮಾಡುತ್ತಲೋ ಬದುಕುತ್ತಿರುವ ಸಂಗತಿಗಳು ಹೇರಳ. ಹೀಗಾಗಬಾರದು, ಹೀಗಾಗುತ್ತಿರುವುದೇ ಅತೃಪ್ತಿಯ, ಅಸಹಕಾರದ, ಪುಂಡತನದ, ವಿನಾಶಕಾರದ ಪ್ರವೃತ್ತಿಯ ವಾತಾವರಣ ಉಂಟುಮಾಡುವ ಯುವಕರು ಹೆಚ್ಚಾಗಲು ಕಾರಣವಾಗಿದೆ. ಅಲ್ಲದೆ ದೇಶದ ಅಮೂಲ್ಯ ಆಸ್ತಿಯಾದ ಮೇಧಾವಿ ಶಕ್ತಿಯು ವ್ಯರ್ಥವಾಗಲು, ಅವಕಾಶವಿದ್ದರೆ, ದೇಶದ ಸಂಪತ್ತೆಲ್ಲ ವ್ಯರ್ಥವಾಗದಂತೆಯೇ, ಆದುದರಿಂದ, ದೇಶಾದ್ಯಂತದ ಮೇಧಾವಿಗಳನ್ನು ಆರಿಸಿ, ಕೂಡಿಸಿ ಅವರವರಿಗೆ ತಕ್ಕ ಶಿಕ್ಷಣ ದೊರೆಯುವಂತೆ ಮಾಡಿದರೆ ಶಿಕ್ಷಣ ಕ್ಷೇತ್ರದ ಮುಖ್ಯ ಕೆಲಸ ಒಂದನ್ನು ಸಮರ್ಪಕ ರೀತಿಯಲ್ಲಿ ಮಾಡಿದಂತಾಗುತ್ತದೆ.

ಅದಕ್ಕಾಗಿ ಪ್ರತೀ ರಾಜ್ಯದಲ್ಲಿಯೂ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ತೇರ್ಗಡೆಯಾದ ಮೊದಲ ಸಾವಿರ ಎರಡು ಸಾವಿರ ವಿದ್ಯಾರ್ಥಿಗಳಿಗಾಗಿಯೇ ಕೇಂದ್ರಸರ್ಕಾರವು ಪ್ರತಿರಾಜ್ಯದಲ್ಲಿಯೂ ಜ್ಯೂನಿಯರ್ ಕಾಲೇಜುಗಳನ್ನು ತೆರೆಯಬೇಕು,ಆ ಕಾಲೇಜಿನ ಶಿಕ್ಷಕವರ್ಗವು ಅಸಾಮಾನ್ಯ ಪ್ರತಿಭೆಯುಳ್ಳದ್ದಾಗಿರಬೇಕಲ್ಲದೆ, ವ್ಯವಸ್ಥೆ, ಸೌಲಭ್ಯಗಳೂ ಅಸಾಧಾರಣ ಮಟ್ಟದವುಗಳಾಗಿರಬೇಕು. ಅಲ್ಲಿ ಓದುವ ವಿದ್ಯಾರ್ಥಿಗಳಿಗೆ ಶೀಕ್ಷಣ ಒದಗಿಸುವ ಜವಾಬ್ದಾರಿಯೂ ಕೇಂದ್ರದ್ದೇ ಆಗಬೇಕು. (ಅಲ್ಲಿಗೆ ಆ ಸಾವಿರ – ೨ ಸಾವಿರ ನಿಗದಿಮಾಡಿದಂತೆ ವಿದ್ಯಾರ್ಥಿಗಳನ್ನು ಮಾತ್ರ ತೆಗೆದುಕೊಳ್ಳಬೇಕು) ಅವರನ್ನು ಸೇರಿಸಿಕೊಳ್ಳುವಾಗಲೂ ಆರಿಸಿಕೊಳ್ಳುವ ಕ್ರಮ ಬಿಕ್ಕಟ್ಟಿನದಾಗಿರಬೇಕು. ೧೦,೦೦೦ ವಿದ್ಯಾರ್ಥಿಗಳಿಗೆ ಸಂದರ್ಶನ ಇದ್ದರೆ ಮೊದಲ ೨,೦೦೦ ವಿದ್ಯಾರ್ಥಿಗಳಿಗೆ ಆದ್ಯತೆ ಕೊಡಬೇಕು. ಶಾಲೆಯ ಲಿಖಿತ ದಾಖಲೆ ಸಹ ಅವರ ಮೇಧಾವಿತನಕ್ಕೆ ಪೂರಕವಾಗುವಂತಹ ಸಾಕ್ಷಿಯಂತಿರಬೇಕು. ದಾಖಲೆ ಸಹ ಒಂದು ಅಳತೆಗೋಲೆಂದು ಪರಿಗಣಿಸಬೇಕು. ಇಷ್ಟು ಜನರನ್ನು ಒಂದೇ ಗುಂಪಾಗಿ ಸಂದರ್ಶನ ತೆಗೆದುಕೊಳ್ಳುವ ಬದಲು ಜಿಲ್ಲೆಗೊಂದುಕಡೆ ಏರ್ಪಡಿಸುವುದಲ್ಲದೆ, ಸಂದರ್ಶನ ತೆಗೆದುಕೊಳ್ಳುವವರು ಉನ್ನತ

ಮಟ್ಟದವರಾಗಿರುವುದಲ್ಲದೆ ಆಯಾ ಸ್ಥಳಗಳಿಗೆ ಸಂಬಂಧಿಸಿದವರಾಗಿರಬಾರದು, ರಾಜ್ಯದ ಹೊರಗಿನವರಾದರೆ ಇನ್ನೂ ಉತ್ತಮ. ಆದರೆ ಭಾಷಾ ಪ್ರಶ್ನೆ ಬರುವುದರಿಂದ ಅದು ಸಾಧ್ಯವಾಗಲಾರದು, ಈ ವ್ಯಕ್ತಿಗಳನ್ನು ಸಂದರ್ಶನ ತೆಗೆದುಕೊಳ್ಳುವ ೨-೩ ದಿನ ಪಾತ್ರ ಮೊದಲು ನೇಮಿಸಿ, ಈ ನೇಮಕವನ್ನು ಅತ್ಯಂತ ಗುಪ್ತವಾಗಿ ಕಾಯ್ದುಕೊಳ್ಳಬೇಕು. ಇಲ್ಲದಿದ್ದಲ್ಲಿ ಡೆಮಾಕ್ರಸಿಯ ದಾಕ್ಷಿಣ್ಯ - ಪರಿಸ್ಥಿತಿಯಲ್ಲಿ ಮಾಡಿದ ಇಷ್ಟೆಲ್ಲಾ ಪ್ರಯತ್ನಗಳೂ ಹೊಳೆಯಲ್ಲಿ ಹುಣಸೆಹಣ್ಣು ಹಿಂಡಿದಂತೆ ನಿಷ್ಫಲವಾಗಲು ಸಾಧ್ಯವಿದೆ. ಆ ವಿದ್ಯಾರ್ಥಿಗಳಿಗೆ ಕೇಂದ್ರ ನಡೆಸುವ ಜ್ಯೂನಿಯರ್ ಕಾಲೇಜಿನಲ್ಲಿ ಅತ್ಯುತ್ತಮ ಶಿಕ್ಷಣ ಒದಗಿಸುತ್ತಿದ್ದಂತೆಯೇ ಅವರು ಯಾವ ಯಾವ ಕ್ಷೇತ್ರದಲ್ಲಿ ಪ್ರಗತಿ ಹೊಂದಬಲ್ಲವರು ಯಾವ ಕ್ಷೇತ್ರದಲ್ಲಿ ಅವರ ಆಸಕ್ತಿ ಇದೆ ಎಂಬುದನ್ನೂ ಕಂಡುಹಿಡಿಯುವ, ನಿರ್ಣಯಿಸುವ ವ್ಯವಸ್ಥೆಯನ್ನು ಮಾಡಿ ಆ ಕಾಲೇಜಿನ ಕೊನೆಯ ಹೊತ್ತಿಗೆ ಅವರ ಮುಂದಿನ ಶಿಕ್ಷಣದ ನಿರ್ಧಾರವಾಗಬೇಕು, ಆ ಕಾಲೇಜಿನಲ್ಲಿ ನಪಾಸಾಗುವ ಅಥವಾ ಸಾಮಾನ್ಯರೀತಿಯಲ್ಲಿ ಪಾಸಾಗುವ ಪ್ರಶ್ನೆಯೇ ಉದ್ಭವಿಸಲಾರದ ಸ್ಥಿತಿ ಇರಬೇಕು. ಎಲ್ಲರೂ ಸಮ, ಅಲ್ಪ - ಸ್ವಲ್ಪ ಅಂತರಮಾತ್ರ, ಇಲ್ಲಿಯತನಕ ಶಿಕ್ಷಣವನ್ನು ರಾಜ್ಯಗಳಲ್ಲಿಯೇ ಒದಗಿಸುವ ವ್ಯವಸ್ಥೆ ಇರಬೇಕು. ಶಿಕ್ಷಣಮಾಧ್ಯಮ ಇಂಗ್ಲಿಷಿನಲ್ಲಿರಬೇಕು, ಏಕೆಂದರೆ ಅವರುಗಳು ಮುಂದೆ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಮಟ್ಟದಲ್ಲಿ ಕೆಲಸ ಮಾಡುವವರಾದುದರಿಂದ ಮಾಧ್ಯಮ ಪ್ರಾದೇಶಿಕ ಭಾಷೆಯಾದರೆ ಅವರು ಕೆಲಸ ಮಾಡುವ ಕ್ಷೇತ್ರವನ್ನು ಸಂಕುಚಿತಗೊಳಿಸುತ್ತದೆ. ಆದರೂ ಶಾಲಾ ಮಟ್ಟದಲ್ಲಿ ಆಯಾ ಪ್ರಾದೇಶಿಕ ಭಾಷೆಯನ್ನು ಕಡ್ಡಾಯವಾಗಿ ಕಲಿಯುವ ವ್ಯವಸ್ಥೆ ಇರುವುದಗತ್ಯ.

ಪ್ರತಿಭಾವಂತರ ನಂತರದ ವಿವಿಧ ಶಿಕ್ಷಣಕ್ಕೂ ಕೇಂದ್ರವೇ ಮುಂದೆ ಬರಬೇಕು. ದೇಶದ ವಿವಿಧ ಕ್ಷೇತ್ರಗಳ ಬೇಕುಗಳಿಗೆ ತಕ್ಕಂತಹ ಪರಿಣತರನ್ನು ತಯಾರಿಸಿ ಒದಗಿಸಲು ವಿವಿಧ ಶಿಕ್ಷಣ ಸಂಸ್ಥೆಗಳನ್ನು ದೇಶಾದ್ಯಂತ ಅಲ್ಲಲ್ಲಿ ಸ್ಥಾಪಿಸಿ, ಅವರವರ ಅಭಿರುಚಿಗೆ ತಕ್ಕಂತಹ ವಿಷಯಗಳನ್ನು ಬೋಧಿಸುವ ಸಂಸ್ಥೆಗಳಿಗೆ, ಎಲ್ಲಾ ರಾಜ್ಯಗಳ ಕೇಂದ್ರೀಯ ಜ್ಯೂನಿಯರ್ ಕಾಲೇಜು ವಿದ್ಯಾರ್ಥಿಗಳನ್ನು ಹಂಚಬೇಕು. ಅಲ್ಲಿಯೂ ವ್ಯವಸ್ಥೆಗಳಾಗಲೀ, ಶಿಕ್ಷಕ ವರ್ಗವಾಗಲೀ ಉನ್ನತ ಮಟ್ಟದ್ದಿರಬೇಕು, ಆಗ ಈ ಅನಪೇಕ್ಷಿತ ವಾತಾವರಣವನ್ನು ತಡೆಗಟ್ಟಲು ಸಾಧ್ಯವಾಗಬಹುದಲ್ಲದೆ ಕೇಂದ್ರವು ಸಂವಿಧಾನದಿಂದ ಒಪ್ಪಿಸಲ್ಪಟ್ಟ ಜವಾಬ್ದಾರಿಯನ್ನು ಸಮರ್ಪಕವಾದ ರೀತಿಯಲ್ಲಿ ನಿರ್ವಹಿಸಲು ಸಾಧ್ಯವಾಗುತ್ತದೆ ಎಂದು ಹೇಳಲಡ್ಡಿಯಿಲ್ಲ.

■

## ೧೧. ಗಿಡವಾಗಿ ಬಗ್ಗದ್ದು.

ನಾವು ಮಕ್ಕಳನ್ನು ಗಮನಿಸಿ ನೋಡಿದರೆ ಒಂದೊಂದರ ಸ್ವಭಾವ ಒಂದೊಂದು ರೀತಿ ಇರುತ್ತದೆ. ಅವರ ಕೆಲವು ಮುಖ್ಯ ಸ್ವಭಾವಗಳಿಗನುಸರಿಸಿ ಬೇರೆ ಬೇರೆ ಪಂಗಡಗಳನ್ನಾಗಿ ವಿಂಗಡಿಸಬಹುದು, ಅಂತಹ ಪಂಗಡಗಳಲ್ಲಿ ಒಳ್ಳೆಯ ಸ್ವಭಾವ ಹಾಗೂ ವಿಚಾರಃ ಧ್ಯೇಯಗಳಿದ್ದರೂ ಅದನ್ನು ಸಾಧಿಸಲಾಗದ ಸ್ಥಿತಿ. ಅದನ್ನು ಈಗ ವಿಶ್ಲೇಷಿಸೋಣ.

ಕೆಲವು ಮಕ್ಕಳು ಬುದ್ಧಿವಂತರಿರುತ್ತಾರೆ. ಮನಸಿಟ್ಟು ಪ್ರಯತ್ನಿಸಿದರೆ ಅದ್ಭುತವನ್ನು ಸಾಧಿಸಬಲ್ಲ ಶಕ್ತಿಯೂ ಇರುತ್ತದೆ. ಅಂತಹ ವಿಚಾರಗಳಿನ್ನೂ ಮಾಡುತ್ತಾರೆ. ಆದರೆ ಏನನ್ನೂ ಸಾಧಿಸಲಾರರು, ಕಾರಣ ಸೋಮಾರಿತನ, ವಿಚಾರಗಳಿದ್ದರೂ, ಕಾರ್ಯಪ್ರವೃತ್ತರಾಗುವ ಮನಸ್ಸಿಲ್ಲ, ಇದಕ್ಕೆ ಮುಖ್ಯ ಕಾರಣವೆಂದರೆ ದೃಢ ನಿರ್ಧಾರವಿಲ್ಲದಿರುವಿಕೆ, ಹಿಡಿದ ಕೆಲಸವನ್ನು ಯೋಚಿಸಿಕೊಂಡಂತೆ ಮುಗಿಸಬೇಕಾದರೆ ಸತತವಾದ ಪ್ರಯತ್ನ, ಕಾರ್ಯಸಾಧನಾ ಮನೋಭಾವ, ಚುರುಕುತನ ಬೇಕು, ಆದರೆ ಇದಕ್ಕೆಲ್ಲಾ ದೃಢ ಸಂಕಲ್ಪದ ಸ್ವಭಾವ ಬೆಳೆಸುವುದು ಅತ್ಯವಶ್ಯಕ.

ಹುಟ್ಟುತ್ತಲೇ ದೃಢ ನಿರ್ಧಾರ ಪ್ರವೃತ್ತಿ ವ್ಯಕ್ತಿಯಲ್ಲಿ ಬಂದಿರುವುದಿಲ್ಲ. ಅದನ್ನು ಮೊದಲಿನಿಂದಲೂ ಮಗುವಿನಲ್ಲಿ ಪ್ರಯತ್ನಪಟ್ಟು ಬೆಳೆಸಬೇಕಾಗುತ್ತದೆ. ಮಗುವು ಹುಟ್ಟಿದಂದಿನಿಂದ ಸಿಗುವ ಅವಕಾಶಗಳು, ಹಿರಿಯರು ಮಗುವನ್ನು ಬೆಳೆಸುವ ರೀತಿ ಇವುಗಳಿಂದ ಈ ಪ್ರವೃತ್ತಿ ರೂಪಿತವಾಗುತ್ತದೆ. ಮಗುವಿಗೆ ಸ್ವಲ್ಪ ತಿಳಿವಳಿಕೆ ಬರುತ್ತಲೇ ಅದು ಕೆಲವು ಬಣ್ಣಬಣ್ಣದ ವಸ್ತುಗಳಿಂದ ಆಕರ್ಷಿತವಾಗುವುದು. ಬರುಬರುತ್ತಾ ಅವು ಬೇಕು, ಅವನ್ನು ಹಿಡಿದುಕೊಳ್ಳಬೇಕು ಎಂದು ಆಶಿಸುತ್ತದೆ. ಅದಕ್ಕೆ ಚಲನ ಶಕ್ತಿ ಬಂದನಂತರ ತನ್ನ ಪ್ರಯತ್ನದಿಂದ ಅದನ್ನು ಪಡೆಯುವಂತೆ ಹಿರಿಯರಾದವರು ಮಾಡಬೇಕು, ಮಗುದೊಡ್ಡದಾದಂತೆ ತನಗೆ ಬೇಕಾದುದಕ್ಕೆ ಅದು ಪ್ರಯತ್ನಪಟ್ಟು ಪಡೆಯಲು ಅವಕಾಶ ಮಾಡಿಕೊಡಬೇಕು. ಉದಾ: ಸ್ವಲ್ಪ ಸ್ವಲ್ಪ ನಡೆಯಲು ಕಲಿತ ಮಗುವಿನ ಆಟದ ಸಾಮಾನು ಪೆಟ್ಟಿಗೆಯ ಮೇಲೆಯೋ ಗೂಡಿನಲ್ಲೋ ಇರುತ್ತದೆ. ಸುಲಭವಾಗಿ ಕೈಗೆ ಎಟುಕುವಂತಿರುವುದಿಲ್ಲ. ಪಡೆಯಲು ಸ್ವಲ್ಪ ಪ್ರಯತ್ನಪಡಬೇಕಾಗುತ್ತದೆ, ಅಂತಹ ಸಂದರ್ಭದಲ್ಲಿ ಹಿರಿಯರು ಮಗುವಿನ

ಸಹಾಯಕ್ಕೆ ಹೋಗಿ ಅದು ಸುಲಭವಾಗಿ ದೊರೆಯುವಂತೆ ಮಾಡಬಾರದು. ಅವರು ಸ್ವಲ್ಪ ಸುಮ್ಮನಿದ್ದರೆ ಆ ಮಗುವೇ ಪ್ರಯತ್ನಿಸುತ್ತದೆ. ಸುಲಭವಾಗಿ ದೊರೆಯದಿದ್ದರೆ ಸಮೀಪದಲ್ಲಿರುವ ದಿಂಬನ್ನೋ, ಕಡೆಗೆ ಪುಸ್ತಕವನ್ನೋ ಹಾಕಿಕೊಂಡು ಅದರ ಮೇಲೆ ನಿಂತು ತೆಗೆದುಕೊಳ್ಳಲು ಪ್ರಯತ್ನಿಸುವ ದೃಷ್ಟಿ ರಂಜನೀಯ. ಆ ಆನಂದವನ್ನು ತಮ್ಮ ತಾಳ್ಮೆಯಿಂದ ಹಿರಿಯರು ಪಡೆಯಬಹುದು. ತನ್ನ ಸ್ವಪ್ರಯತ್ನದಿಂದ ತಾನು ಬಯಸಿದ್ದು ದೊರೆತಾಗ ಮಗುವಿಗಾಗುವ ಆನಂದವನ್ನು ಅಂತಹ ಅವಕಾಶ ಒದಗಿಸಿಯೇ ನೋಡಬೇಕು. ಇಬ್ಬರಿಗೂ ಆಗುವ ಆನಂದದ ಜೊತೆಗೆ ಮಗು ತಾನು ಬಯಸಿದುದನ್ನು ಪಡೆಯಲು ಪ್ರಯತ್ನ ತತ್ಪರವಾಗಬೇಕಾದುದನ್ನು ಅರಿಯುತ್ತದೆ. ತನ್ನ ಗುರಿಸಾಧಿಸಲು ಸತತ ಪ್ರಯತ್ನ ಪಡುವುದನ್ನು ಕಲಿಯುತ್ತದೆ.

ಮಕ್ಕಳು ಒಂದೂವರೆ ವರ್ಷದವರಾಗುತ್ತಲೇ ತಾವೇ ಸ್ವತ: ಊಟ ಮಾಡಬೇಕೆಂದು ಇಚ್ಛಿಸುತ್ತವೆ. ಬಹಳ ಮಕ್ಕಳಿರುವ ಮನೆಗಳಲ್ಲಿ ಹಿರಿಯರಿಗೆ ಇಷ್ಟಕ್ಕೆಲ್ಲಾ ಗಮನಕೊಡಲು ಸಮಯವಿಲ್ಲದಿರುವುದರಿಂದ ಪ್ರಯತ್ನವಿಲ್ಲದೆ ಇಷ್ಟಾರ್ಥ ಈಡೇರುತ್ತದೆ. ಹಾಗಿಲ್ಲದ ಕಡೆ, ಮಗು ಊಟದ ಮನೆಯನ್ನೆಲ್ಲಾ ಹೊಲಸುಮಾಡುತ್ತದೆ; ಬಟ್ಟೆ ಬರೆ, ಮೈ-ಕೈಯನ್ನೆಲ್ಲಾ ಮುಸುರೆ ಮಾಡಿಕೊಳ್ಳುತ್ತದೆಯೆಂದು ಅದಕ್ಕೆ ಅವಕಾಶ ಕೊಡದೆ ತಾಯಿಯೋ, ಅಕ್ಕನೋ ಮತ್ತಿನ್ನಾರೋ ಆ ಕೆಲಸ ಮಾಡಿ ಬಿಡುತ್ತಾರೆ. ಆದರೆ ನೌಕರಿಯಲ್ಲಿರುವ ಮಹಿಳೆಯು ಬೇರೊಂದು ಕಾರಣಕ್ಕಾಗಿ ಮಗುವಿನ ಊಟವನ್ನು ತಾನೇ ಮಾಡಿಸುತ್ತಾಳೆ. ಮಗುವು ತಾನೇ ಊಟ ಮಾಡಲು ಬಹಳ ವೇಳೆ ಬೇಕಾಗುತ್ತದೆ, ಅನಂತರ ಮಗುವನ್ನೂ ಮನೆಯನ್ನೂ ಸ್ವಚ್ಛಗೊಳಿಸಲು ಮತ್ತಷ್ಟು ವೇಳೆ ಮತ್ತು ಬಿಡುವು ಬೇಕು, ಆಕೆಗೆ ಸಮಯ ಮತ್ತು ಬಿಡುವು ಚಿನ್ನಕ್ಕಿಂತಲೂ ಅಮೂಲ್ಯ. ಆಗ ಬೇರಾವುದಕ್ಕೂ ಲಕ್ಷ್ಯ ಕೊಡದೆ ಗಡಿಬಿಡಿಯಲ್ಲಿ ಆ ಕೆಲಸವನ್ನು ಮುಗಿಸಿಬಿಡುತ್ತಾಳೆ. ಇಂತಹ ಸಂದರ್ಭದಲ್ಲಿ ಮಗುವಿಗೆ ಮೊದಮೊದಲು ಅಸಮಾಧಾನವಾಗುತ್ತದೆ. ನಂತರ ಇದೇ ರೂಢಿಯಾಗಿ, ಬೇರೆ ಯಾರಾದರೂ ಊಟಮಾಡಿಸಿದರೇನೇ ಅದಕ್ಕೆ ಸಮಾಧಾನವಾಗುತ್ತದೆ, ಆರೇಳು ವರ್ಷ ವಯಸ್ಸಾದರೂ ಅಮ್ಮ ಬಂದು ಊಟ ಮಾಡಿಸುವವರೆಗೂ ಹಸಿದುಕೊಂಡೇ ಇರುವಂತಹ ಸೋಮಾರಿತನದ ಪ್ರವೃತ್ತಿ ಬಂದುಬಿಡುತ್ತದೆ.

ಮಗುವಿಗೆ ಸುಮಾರು ಮೂರು ವರ್ಷಗಳಾದಂತೆ ತನ್ನೆಲ್ಲಾ ಕೆಲಸಗಳನ್ನು ತಾನೇ ಮಾಡಬೇಕೆಂಬ ಇಚ್ಛೆಯಾಗುತ್ತದೆ. ತನ್ನ ಷೂ ತಾನೇ ಕಟ್ಟಿಕೊಳ್ಳಬೇಕು, ಸ್ನಾನಮಾಡುವಾಗ ತಾನೇ ಮೈ ಉಜ್ಜಿಕೊಳ್ಳಬೇಕು, ಬಟ್ಟೆತಾನೇ ಹಾಕಿಕೊಳ್ಳಬೇಕು, ಹೀಗೆ ಎಲ್ಲದರಲ್ಲಿಯೂ ತನ್ನತನವನ್ನು ಮೆರೆಯಲು ಆಶಿಸುತ್ತದೆ. ಈ ಅವಧಿ

ಅತ್ಯಮೂಲ್ಯವಾದದ್ದು, ಹಿರಿಯರಾದವರು, ಮುಖ್ಯವಾಗಿ ತಂದೆ ತಾಯಿಯರು ಈ ಅವಧಿಯ ಲಾಭ ಪಡೆದು, ಮಗುವಿನಲ್ಲಿ ಸ್ವಾವಲಂಬನೆ, ಶಿಸ್ತು ದೃಢಸಂಕಲ್ಪ ಬೆಳೆಯುವಂತೆ ನೋಡಿಕೊಳ್ಳದೆ ಅಲಕ್ಷ್ಯ ಮಾಡಿದರೆ ಅಥವಾ ಅವಕಾಶ ಕೊಡದಿದ್ದರೆ ಮುಂದೆ ಹಿರಿಯರೂ ಪಶ್ಚಾತ್ತಾಪ ಪಡಬೇಕಾಗುವುದು, ಮಗುವೂ ಮುಂದೆ ಪರಿಸ್ಥಿತಿಗೆ ಹೊಂದಿಕೊಂಡು ನಡೆಯಲು ಕಷ್ಟವಾಗಿ ವ್ಯಥೆಗೆ ಗುರಿಯಾಗಬಹುದು. ಒಂದು ಗಿಡವನ್ನು ಚಿಕ್ಕದಿರುವಾಗ ಬೇಕಾದ ಕಡೆಗೆ ಬಗ್ಗಿಸಬಹುದು. ಆದರೆ ಮರವಾದಾಗ ಬಗ್ಗಿಸುವುದು ಕಷ್ಟವಾಗುತ್ತದೆ.

ಮಗುವಿಗೆ ತನ್ನ ಕೆಲಸಗಳನ್ನು ತಾನೇ ಮಾಡಿಕೊಳ್ಳಲು ಕಲಿಸಿದ ನಂತರ, ಬೇರೆಯವರಿಗಾಗಿ ಮನೆಯ ಸಣ್ಣ – ಪುಟ್ಟ ಕೆಲಸ ಮಾಡುವುದನ್ನು ಕಲಿಸಬೇಕು. ದೃಢ ನಿರ್ಧಾರ ಪ್ರವೃತ್ತಿ ಮೊಳೆಯಲು ಮಗುವು ಬೇರೆಯವರಿಗಾಗಿ ಮಾಡುವ ಕೆಲಸಗಳು ಬಹು ಮುಖ್ಯವಾಗಿ ಪರಿಣಾಮವನ್ನುಂಟು ಮಾಡುತ್ತವೆ. ಅಂತಹ ಅವಕಾಶವಿಲ್ಲದಿದ್ದರೆ ಅವನು ಸ್ವಾರ್ಥಿಯಾಗಿ ಬೆಳೆಯಬಹುದು. ಇಂತಹ ಗುಣಗಳು ಬೆಳೆದರೆ ನಾಲ್ಕು ಜನರ ಮಧ್ಯೆ ಪರಸ್ಪರ ಸಹಾಯಕವಾಗಬೇಕಾದ ಸನ್ನಿವೇಶಗಳಲ್ಲಿ ಇವನು ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುವುದಲ್ಲದೆ ಬೇರೆಯವರ ದೂಷಣೆಗೆ ಗುರಿಯಾಗಿ ದು:ಖಿತನಾಗುತ್ತಾನೆ. ಆದುದರಿಂದ ಅವನು ಬೆಳೆದಂತೆ ಅವನು ಕೆಲಸ ಮಾಡಬೇಕಾದ ಕ್ಷೇತ್ರವೂ ವಿಸ್ತಾರಗೊಳ್ಳಬೇಕು. ಎಷ್ಟೇ ಸೌಲಭ್ಯಗಳಿದ್ದರೂ ತಾನು ಮಾಡಬೇಕಾದ ಕೆಲಸಗಳನ್ನು ತಾನೇ ಮಾಡುವಂತೆ ಹಿರಿಯರು ನೋಡಿಕೊಳ್ಳಬೇಕು. ಹೀಗಲ್ಲದೆ ಅವನ ಪುಸ್ತಕ, ಉಡುಗೆ, ಊಟ ಮುಂತಾದುವುಗಳಲ್ಲೂ ಹಿರಿಯರು ಅವನಿಗೆ ಅವಕಾಶವನ್ನೇ ಕೊಡದೆ ತಾವೇ ಅಣಿ ಮಾಡಿಬಿಟ್ಟರೆ ಎಲ್ಲದಕ್ಕೂ ಪರರನ್ನು ಅವಲಂಬಿಸುವ ಸ್ವಭಾವ ಅವನಲ್ಲಿ ಬೆಳೆಯುತ್ತದೆ. ಮೈಗಳ್ಳನೂ, ಸೋಮಾರಿಯೂ ಆಗುತ್ತಾನೆ. ಯಾವ ಕೆಲಸ ಮಾಡಲು ಅವನಿಗೆ ನಿರುತ್ಸಾಹ, ಬೇಜಾರು, ತನಗೆ ಬೇಕಾದುದನ್ನು ಮಾತ್ರ ಮಾಡುವುದು, ಬೇಡವಾದಾಗ ಬಿಡುವುದು ಅವಶ್ಯಕತೆಯನ್ನನುಸರಿಸಿ ಕೆಲಸ ಮಾಡುವುದನ್ನು ಬಿಟ್ಟು ಬೇಕಾದಾಗ ಮಾಡುವುದು, ಬೇಡವಾದಾಗ ಬಿಡುವುದು, ಯಾವಾಗಲೋ ಊಟ, ನಿದ್ದೆ, ಇಂತಹ ಅನಪೇಕ್ಷಣೀಯ ಪ್ರವೃತ್ತಿ ಬೆಳೆಯುತ್ತದೆ. ಹೀಗಾಗಬಾರದೆಂದು ತಂದೆ ತಾಯಿಯರ ಇಚ್ಛೆಯಿದ್ದಲ್ಲಿ ಮಗು ಹುಟ್ಟಿದಾಗಿನಿಂದಲೂ ಅವರು ಎಚ್ಚರವಹಿಸಿ ಬೆಳೆಸಬೇಕು; ಹಾಗಿಲ್ಲದಿದ್ದರೆ ಆಕಸ್ಮಾತ್ತಾದ ಅವಕಾಶಗಳು ಮಗುವಿನ ಬೆಳವಣಿಗೆಯ ಮೇಲೆ ಪರಿಣಾಮ ಬೀರುತ್ತವೆ. ಒಮ್ಮೊಮ್ಮೆ ಅವು ಅಕಸ್ಮಾತ್ತಾಗಿ ಅಪೇಕ್ಷಣೀಯವಾದುವುಗಳೇ ಆಗಿರಬಹುದು. ಆದರೆ ಬಹಳ ಸಾರಿ ಅವು ಅನಪೇಕ್ಷಣೀಯವಾಗಿರುತ್ತವೆ, ಆದುದರಿಂದ ಈ ನಿಟ್ಟಿನಲ್ಲಿ ತಂದೆ ತಾಯಿಯರ ಕರ್ತವ್ಯ ಬಹಳ ಮಹತ್ವದ್ದಿರುತ್ತವೆ. ಒಮ್ಮೊಮ್ಮೆ ತಮ್ಮ ಮನಸ್ಸಿಗೆ ವಿರುದ್ಧವಾದರೂ,

ಮಗುವಿಗೆ ಅಸಂತೋಷಕರವಾದರೂ ಕೆಲವೊಂದು ಕಾರ್ಯಗಳಿಗೆ ಒತ್ತಾಯ ಪೂರ್ವಕವಾಗಿ ಮಗುವನ್ನು ತೊಡಗಿಸಬೇಕಾಗುತ್ತದೆ. ಅಂತಹ ದೃಢ ನಿರ್ಧಾರ ಪ್ರವೃತ್ತಿ ತಂದೆ ತಾಯಿಯರಿಲ್ಲದಿದ್ದರೆ ಮಗುವಿನಲ್ಲೂ ಅದನ್ನು ಬೆಳೆಸಿದ ದೋಷಕ್ಕೆ ಅವರು ಗುರಿಯಾಗಬೇಕಾಗುತ್ತದೆ. ಮಗುವು ಅಸಂತೋಷಗೊಳ್ಳುವುದೆಂದು ಅವರು ಅವನ ಇಚ್ಛೆಗನುಸರಿಸಿ ನಡೆದರೆ, ತಾನು ಅಸಮಾಧಾನ ವ್ಯಕ್ತಪಡಿಸಿ ತನಗೆ ಬೇಡವಾದುದರಿಂದ ತಪ್ಪಿಸಿಕೊಳ್ಳಬಹುದೆಂಬ ಮನೋಭಾವನೆ ಅವನಲ್ಲಿ ಬೆಳೆಯಲು ಅವಕಾಶವಾಗುತ್ತದೆ. ಹಾಗಾಗಿ ಎಲ್ಲದಕ್ಕೂ ಕುಂಟುನೆಪ ಒಡ್ಡಿ ಆಲಸೀ ಪ್ರವೃತ್ತಿಯನ್ನು ಬೆಳೆಸಿಕೊಳ್ಳುತ್ತಾನೆ. ಹಾಗಿಲ್ಲದೆ ಅವಶ್ಯಕವಾದುದನ್ನು ಮಾಡಲೇಬೇಕೆಂಬ ಒತ್ತಾಯವನ್ನು ತಂದೆ – ತಾಯಿಯರು ಹೇರಿದರೆ, ತನಗಿಷ್ಟವಿರಲಿ ಇಲ್ಲದಿರಲಿ ಕೆಲವೊಂದು ಕರ್ತವ್ಯಗಳನ್ನು ತಾನು ಮಾಡಲೇ ಬೇಕಾಗುತ್ತದೆ – ಎಂಬ ಅಂಶದ ಅರಿವು ಅವನಲ್ಲಾಗುತ್ತದೆ. ಹೀಗಾಗಿ ಅವನು ತನ್ನ ಮನಸ್ಸನ್ನು ಹರಿದಂತೆ ಹೋಗಲು ಬಿಡದೆ ತನ್ನ ಹತೋಟಿಯಲ್ಲಿಟ್ಟುಕೊಂಡು ಕೆಲಸ ಮಾಡುವುದನ್ನು ಕಲಿಯುತ್ತಾನೆ.

ಇಂತಹ ಅಪೇಕ್ಷಣೀಯ ಪ್ರವೃತ್ತಿಗಳು ಬೆಳೆಯ ಬೇಕಾದರೆ ಮುನ್ನೆಚ್ಚರಿಕೆ ಬೇಕು. ಗಿಡವಾಗಿದ್ದಾಗಲೇ ಬಗ್ಗಿಸಬೇಕೇ ಹೊರತು ಮರವಾದಾಗ ಬಗ್ಗಿಸುವುದು ಸಾಧ್ಯವಿಲ್ಲ.

■

## ೧೨. ವಿದ್ಯಾರ್ಥಿಗಳಲ್ಲಿ ಅಶಿಸ್ತು

ಆಡು ಮುಟ್ಟದ ಸೊಪ್ಪಿಲ್ಲ ಎಂಬಂತೆ ಇಂದು ಶಿಕ್ಷಣದ ಬಗ್ಗೆ ಮಾತನಾಡದ ಜನರಿಲ್ಲ ಎನ್ನಬಹುದು. ಸಧ್ಯದ ಪರಿಸ್ಥಿತಿಯಲ್ಲಿ ಶಿಕ್ಷಣದ ಬಗ್ಗೆ ಮಾತನಾಡುವುದು ಎಂದರೆ, ಟೀಕಿಸುವುದು ಎಂದೇ ಆಗಿಬಿಟ್ಟಿದೆ. ಎಲ್ಲರೂ ಟೀಕಿಸಲಿಕ್ಕೆ ಕಾರಣವಿಲ್ಲದೆಯೂ ಇಲ್ಲ. ಸದ್ಯದ ನೈತಿಕ, ಸಾಮಾಜಿಕ, ಬೌದ್ಧಿಕ ಆರ್ಥಿಕ ಮೊದಲಾದ ಸಮಸ್ಯೆಗಳು ವಿದ್ಯಾರ್ಥಿಗಳ ಸಮಸ್ಯೆಗಳೇ ಆಗಿವೆ.

ವಿದ್ಯಾರ್ಥಿಗಳ ಅಶಿಸ್ತು ನಮ್ಮ ರಾಷ್ಟ್ರದ ಒಂದು ದೊಡ್ಡ ಸಾಮಾಜಿಕವ್ಯಾಧಿ, ಆದರೆ ಇದಕ್ಕೆ ಕಾರಣ, ವಿದ್ಯಾರ್ಥಿಗಳು ಮಾತ್ರವಲ್ಲ ಎಂಬುದನ್ನು ಎಲ್ಲರೂ ಅರಿಯಬೇಕು, ಯುವಕರಲ್ಲಿ ಕಾಣುವ ಅಶಿಸ್ತು, ಅತೃಪ್ತಿ, ಅಶಾಂತಿ ಮತ್ತು ಬೇಜವಾಬ್ದಾರಿ ನಡವಳಿಕೆಗೆ ಅವರವಲ್ಲದ ಅನೇಕ ಕಾರಣಗಳಿವೆ. ಮತ್ತು ಅವು ಇಂದಿನ ಕಾರಣಗಳಲ್ಲ, ಅವರು ಹುಟ್ಟಿದಂದಿನಿಂದಲೂ ಅವರೊಡನೆಯೇ ಬೆಳೆದುಕೊಂಡು ಬಂದವುಗಳು, ಮುಖ್ಯವಾಗಿ ಪಾಲಕರೂ ಅದಕ್ಕೆ ಬಾಧ್ಯಸ್ಥರಾಗಿದ್ದಾರೆ.

ಮಗು ಬೆಳೆಯುವ ವಾತಾವರಣ ಹಿತಕರವಿರಬೇಕು. ಅವನ ಪರಿಸರದಲ್ಲಿ ಪ್ರೀತಿಗೆ ಕೊರತೆ ಇರಬಾರದು; ಮನದ ಆಸೆಗಳನ್ನು ಅದುಮಿಟ್ಟುಕೊಳ್ಳುವ ಪ್ರಸಂಗಗಳು ಬರದಿರಬೇಕು; ವಯಸ್ಸಿಗೆ ಸಹಜವಾದ ಅನಿಸಿಕೆಗಳ ಪೂರೈಕೆ ತೃಪ್ತಿಕರ ಆಗುವಂತೆ ತಂದೆ – ತಾಯಿಯರು ಎಚ್ಚರವಹಿಸಬೇಕು. ಮಕ್ಕಳನ್ನು ಶಾಲೆಗೆ ಸೇರಿಸಿದ ನಂತರ ಮಕ್ಕಳ ಬೆಳವಣಿಗೆಯ ಜವಾಬ್ದಾರಿ – ಮನೆಯಲ್ಲಿ ತಂದೆ – ತಾಯಿಯರೂ, ಶಾಲೆಯಲ್ಲಿ ಉಪಾಧ್ಯಾಯರದೂ ಆಗತ್ತದೆ. ಶಾಲೆ ಎಂದರೆ ಮಕ್ಕಳ ತಲೆಯಲ್ಲಿ ವಿಷಯ ತುಂಬುವ ಕಾರ್ಖಾನೆಯಲ್ಲವೆಂಬುದನ್ನು ಪಾಲಕರೂ ಶಿಕ್ಷಕರೂ ಮೊದಲು ತಿಳಿದಿರಬೇಕಾದುದು ಅತ್ಯಗತ್ಯ. Education is nolonger a process of giving knowledge. It means guiding the learner in the best development of his Capacisies for an effient living in almost revolutionised society.

ಆದುದರಿಂದ ಮಗುವಿನ ಸರ್ವತೋಮುಖ ಬೆಳವಣಿಗೆಗೆ ಅವಕಾಶ ಮಾಡಿಕೊಟ್ಟು, ತಾನಿರುವ ಸಮಾಜದಲ್ಲಿ, ತನ್ನ ಜೀವನದಲ್ಲಿ ಸಮಸ್ಯೆಗಳುಂಟಾಗಲು

ತಾನೇ ಕಾರಣನಾಗದಂತೆ ನಡೆಯುವುದಲ್ಲದೆ, ಇರುವ ಸಮಸ್ಯೆಗಳನ್ನು ಸಮರ್ಥವಾಗಿ ಬಗೆಹರಿಸಬಲ್ಲ ಕರ್ತೃತ್ವ ಶಕ್ತಿ ಪಡೆಯುವಂತೆ ಎಚ್ಚರಿಕೆ ವಹಿಸಬೇಕು. ಈ ಕಾರ್ಯವನ್ನು ಶಾಲೆಯೊಂದೇ ಮಾಡಲು ಸಾಧ್ಯವಿಲ್ಲ. ನಮ್ಮಲ್ಲಿ ಬಹುಪಾಲು ಪಾಲಕರು ಅವಿದ್ಯಾವಂತರೂ, ಅಜ್ಞಾನಿಗಳೂ, ಸರಿಯಾದ ವಾತಾವರಣ ಉಂಟು ಮಾಡಲು ಅಸಾಧ್ಯವಾದ ಬಡತನವುಳ್ಳವರೂ ಆಗಿರುವುದರಿಂದ ಬರೀ ಅವರದೇ ಈ ಜವಾಬ್ದಾರಿ ಎಂದು ಹೇಳುವುದು ಹಾಸ್ಯಾಸ್ಪದವಾಗುತ್ತದೆ.

ಈ ದಿಶೆಯಲ್ಲಿ ಶಾಲೆಗಳು ಮಹತ್ತರ ಪಾತ್ರ ವಹಿಸಬೇಕು, ನಿಜ ಆದರೆ, ಅಲ್ಲಿ ವಿಧ– ವಿಧವಾದ ಪರಿಸರಗಳಿಂದ ಬಂದ ಮಕ್ಕಳಿರುತ್ತಾರೆ. ಒಂದೊಂದು ಮಗುವಿನ ರೀತಿ, ನಡೆ– ನುಡಿಯೂ ಒಂದೊಂದು ವಿಧ. ಅವುಗಳ ಸ್ವಭಾವಕ್ಕೆ ಕಾರಣ ತಿಳಿದುಕೊಳ್ಳಬೇಕಾದರೆ ಅವರ ಮನೆಯ ಪರಿಸರ ತಿಳಿದುಕೊಳ್ಳಬೇಕು. ಮಕ್ಕಳಲ್ಲಿ ಕೆಲವೊಂದು ಸುಧಾರಣೆ ಮಾಡಬೇಕಾದರೆ, ಶಿಸ್ತು ಬೆಳೆಸಬೇಕಾದರೆ ಮನೆಯಲ್ಲಿ ಪಾಲಕರ ಸಹಕಾರವೂ ಬೇಕು. ಮಕ್ಕಳು ಸ್ವಚ್ಛವಾಗಿ, ಹೊತ್ತಿಗೆ ಸರಿಯಾಗಿ ಶಾಲೆಗೆ ಬರಬೇಕು, ಗೃಹಕೃತ್ಯದ ಪಾಠಗಳನ್ನು ತಪ್ಪದೇ ಮಾಡಿಕೊಂಡು ಬರಬೇಕು ಎಂಬ ಶಾಲೆಯ ನಿಯಮ ಪಾಲಿಸಬೇಕಾದರೆ ಪಾಲಕರೂ ಮನೆಯಲ್ಲಿ ಇವಕ್ಕೆಲ್ಲಾ ಬೇಕಾದ ಸೌಲಭ್ಯ ಒದಗಿಸಿ, ನಿಯಮಗಳನ್ನು ಪಾಲಿಸುವಂತೆ ತಾವೂ ಲಕ್ಷ್ಯ ವಹಿಸಬೇಕಾಗುತ್ತದೆ.

ಮುಂದೆ ಮಕ್ಕಳು ಕೌಮಾರ್ಯಾವಸ್ಥೆಗೆ (adolescent period) ಬಂದಾಗ ಶಿಕ್ಷಕರ ಹಾಗೂ ಪಾಲಕರ ಜವಾಬ್ದಾರಿ ಇನ್ನೂ ಹೆಚ್ಚಾಗುತ್ತದೆ. ಈ ವಯಸ್ಸಿನಲ್ಲಿ ಮಕ್ಕಳಲ್ಲಿ ಮಾನಸಿಕ, ದೈಹಿಕ, ಬೌದ್ಧಿಕವಾದ ತೀವ್ರತರ ಬೆಳವಣಿಗೆ ಉಂಟಾಗಿ ಮಕ್ಕಳ ಮನಸ್ಸಿನಲ್ಲಿ ತುಮುಲ, ಘರ್ಷಣೆ ಪ್ರಾರಂಭವಾಗುತ್ತದೆ. ಅನೇಕ ರೀತಿಯ ಭಾವನೆಗಳು ಮೂಡುತ್ತವೆ. ವಿಧ ವಿಧವಾದ ಪ್ರಶ್ನೆಗಳು ಏಳುತ್ತವೆ. ಹೀಗಾಗಿ ಅವರ ನಡವಳಿಕೆಯಲ್ಲಿಯೂ ವಿಚಿತ್ರ ರೀತಿಯ ಪರಿವರ್ತನೆಯನ್ನು ಕಾಣುತ್ತೇವೆ. ಈ ಸಂದರ್ಭದಲ್ಲಿ ಪಾಲಕರು ಹಾಗೂ ಶಿಕ್ಷಕರು ಇವು ವಿಪರೀತ ನಡವಳಿಕೆಗಳೆಂದು ಅಸಮಾಧಾನಗೊಳ್ಳದೆ, ಸಿಟ್ಟಿಗೇಳದೆ, ತಾಳ್ಮೆಯಿಂದ ಸಮರ್ಪಕ ಮಾರ್ಗದರ್ಶನವನ್ನು ಅಪರೋಕ್ಷವಾಗಿ ತಮ್ಮ ನಡೆ – ನುಡಿಗಳಿಂದಲೇ ತೋರಿಸಬೇಕಲ್ಲದೆ ಬರೀ ಉಪದೇಶ ಸಲ್ಲದು. ಈ ಕಾಲದಲ್ಲಿ ಅವರಲ್ಲಿ ಉಂಟಾಗುವ ಅಮಿತವಾದ ಉತ್ಸಾಹ ಮತ್ತು ಸಾಮರ್ಥ್ಯವನ್ನು ಸದುಪಯೋಗಪಡಿಸಿಕೊಳ್ಳುವಂತಹ ಅವಕಾಶಗಳನ್ನೊದಗಿಸಬೇಕು; ಅವರ ಸಮಸ್ಯೆಗಳಿಗೆ ಸೂಕ್ತ ಪರಿಹಾರವೂ, ಅತೃಪ್ತಿ ಅಸಮಾಧಾನಗೊಳ್ಳದಂತಹ ಎಚ್ಚರಿಕೆಯೂ ಅಗತ್ಯ. ಇಲ್ಲದಿದ್ದಲ್ಲಿ ಕೆಲವು ಸಹಜ ಪ್ರವೃತ್ತಿಗಳು ಪ್ರಬಲವಾಗಿ ಮಕ್ಕಳನ್ನು ತಪ್ಪು ದಾರಿಗೆ ಹೋಗುವಂತೆ ಮಾಡಬಹುದು, ಒಮ್ಮೆ ತಪ್ಪು ಮಾಡಿದರೆಂದರೆ ಅವರ ಮನಸ್ಸಿನಲ್ಲಿ ಒಳಿತು ಕೆಡಕುಗಳ ಘರ್ಷಣೆ

ಪ್ರಾರಂಭವಾಗಿ ಆ ವಿದ್ಯಾರ್ಥಿಯ ಮನಶ್ಯಾಂತಿಯೇ ಕಲಕಿಹೋಗಿಬಿಡುತ್ತದೆ. ಆಗ ಅವನಿಗೆ ಬೇರಿನ್ನಾವುದರ ಕಡೆಗೂ ಲಕ್ಷ ಉಳಿಯುವುದಿಲ್ಲ, ಬೇಗ ಸಿಟ್ಟಿಗೇಳುವುದು, ಸಣ್ಣ ಸಣ್ಣ ಕಾರಣಗಳಿಗೆ ಜಗಳವಾಡುವುದು, ಅವಿಧೇಯನಾಗಿ ನಡೆಯುವುದು ಬೇರೆಯವರಿಗೆ ಕಿರುಕುಳ ಕೊಡುವುದು, ಬೇರೆಯುವರನ್ನು ನೋಡಿ ಅಸಹನೆಗೊಳ್ಳುವುದು ಮುಂತಾದ ದುಷ್ಟ ಪ್ರವೃತ್ತಿಗಳು ಮೊಳೆತು ಅವನು ಸಮಸ್ಯಾತ್ಮಕ ವ್ಯಕ್ತಿಯಾಗಿ, ಉಳಿದವರಿಗೆ ತೊಂದರೆ ಕೊಡುವುದಷ್ಟೇ ಅಲ್ಲದೆ, ತಾನೂ ದಾರುಣವಾದ ನೋವನ್ನು ಸಣ್ಣ ಸಣ್ಣ ಕಾರಣಗಳಿಂದಲೂ ಅನುಭವಿಸುತ್ತಾನೆ. ಹೀಗಾದ ಯುವಕರೇ ಮುಂದೆ ಸಮಾಜದಲ್ಲಿ ಘಾತುಕವಾದ ಕೃತ್ಯಗಳಲ್ಲಿ ತೊಡಗುವರು. ಅಂತಹವರನ್ನು ದಾರಿಗೆ ತರುವುದು ಸಾಮಾನ್ಯ ಶಿಕ್ಷಕನಿಗೆ ಅಸಾಧ್ಯ ಆದುದರಿಂದ ಮಕ್ಕಳು ದುರ್ಮಾಗ ಪ್ರವೃತ್ತರಾಗದಂತೆ ನೋಡಿಕೊಳ್ಳುವುದು ಅಗತ್ಯ. ಹೀಗೆ ನೋಡಿಕೊಳ್ಳುವುದು ಪಾಲಕರ ಹಾಗೂ ಶಿಕ್ಷಕರ ಜಂಟಿ ಹೊಣೆಗಾರಿಕೆಯಾಗಿದೆ. ಶಾಲೆಯಲ್ಲಿ ಮಕ್ಕಳ ಅವಶ್ಯಕತೆಗಳೇನು ಎಂಬುದನ್ನು ತಿಳಿದುಕೊಳ್ಳಲು ಪಾಲಕರು ಶಾಲೆಯೊಡನೆ ಸಂಬಂಧವಿಟ್ಟುಕೊಂಡಿರಬೇಕು, ಮಕ್ಕಳ ಸಮಸ್ಯಾತ್ಮಕ ನಡವಳಿಕೆಯ ಕಾರಣಗಳನ್ನು ತಿಳಿಯಲು ಮನೆಯ ಪರಿಸ್ಥಿತಿಯನ್ನು ಶಿಕ್ಷಕರು ತಿಳಿದುಕೊಳ್ಳಬೇಕಾಗುತ್ತದೆ. ಹೀಗಾಗಿ ಶಿಕ್ಷಕರು ಪಾಲಕರೊಡನೆ ಸಂಕರ್ಪವಿಟ್ಟುಕೊಳ್ಳಬೇಕು. ಹೀಗೆ ಶಾಲೆಗೂ ಮನೆಗೂ ಉತ್ತಮವಾದ ಸಂಪರ್ಕವಿದ್ದು ಶಿಕ್ಷಕರೂ ಪಾಲಕರೂ ವಿಚಾರ ವಿನಿಮಯ ಮಾಡಿಕೊಂಡು, ಮಕ್ಕಳ ಕುಂದುಕೊರತೆ, ಬೇಕು – ಬೇಡಗಳನ್ನು ಸರಿಯಾಗಿ ಅರ್ಥಮಾಡಿಕೊಂಡು ಇಬ್ಬರೂ ಎಚ್ಚರಿಕೆ ವಹಿಸಿದರೆ, ಮಕ್ಕಳು ತುಲನಾತ್ಮಕವಾದ ವ್ಯಕ್ತಿತ್ವವನ್ನು ಹೊಂದುತ್ತಾರೆ. ಸಮಾಜದಲ್ಲಿ ಅಶಿಸ್ತಿಗೆ ಅವಕಾಶವಿರುವುದಿಲ್ಲ.

ಆದರೆ ನಮ್ಮ ದೇಶದಲ್ಲಿ ಬಹುಮಂದಿ ಪಾಲಕರು ಶಾಲೆಗೆ ಮಕ್ಕಳನ್ನು ಸೇರಿಸಿಬಿಟ್ಟರೆ ತಮ್ಮ ಕರ್ತವ್ಯ ಮುಗಿಯಿತು ಎಂದು ಶಾಲೆಗೆ ಸೇರಿಸಿ ಕೈ ಕಟ್ಟಿ ಕುಳಿತುಬಿಡುತ್ತಾರೆ. ಮಕ್ಕಳು ಸರಿಯಾಗಿ ನಡೆಯದಿದ್ದರೆ, ಓದಿನಲ್ಲಿ ಸರಿಯಾದ ಪ್ರಗತಿ ತೋರಿಸದಿದ್ದರೆ ತಮ್ಮಲ್ಲೇನಾದರೂ ತಪ್ಪಿರಬಹುದೇ, ಶಾಲೆಯಲ್ಲೇನಾದರೂ ಅದಕ್ಕೆ ಪೂರಕವಾದ ಕಾರಣಗಳಿರಬಹುದೇ ಎಂದು ಯೋಚಿಸಲೂ ಹೋಗುವುದಿಲ್ಲ. ತಪ್ಪೆಲ್ಲಾ ಮಗುವಿನದೇ ಎಂದು ತಿಳಿದು ಅವನನ್ನೇ ದೂಷಿಸಿ, ದಂಡಿಸುತ್ತಾರೆ. ಇದರಿಂದ ಮಕ್ಕಳ ಮನಸ್ಸಿಗೆ ನೋವಾಗಿ ಅವರಲ್ಲಿ ಸಮಸ್ಯಾತ್ಮಕ ನಡವಳಿಕೆಗಳು ಮತ್ತೂ ಹೆಚ್ಚುತ್ತವೆ.

ಕೆಲವು ಜನ ಪಾಲಕರು ಪ್ರತಿಯೊಂದಕ್ಕೂ ಶಾಲೆ ಹಾಗೂ ಶಿಕ್ಷಕರನ್ನೇ ಹೊಣೆಮಾಡಿ, ಮಾತೆತ್ತಿದರೆ ಶಾಲೆಗೆ ಹೋಗಿ ಶಿಕ್ಷಕರೊಡನೆ, ಜಗಳ ಕಾಯುತ್ತಾರೆ. ತಮ್ಮ ಮಗುವಿನ ವ್ಯಕ್ತಿತ್ವ ವಿಕಸನಕ್ಕೆ ತಮ್ಮ ಹೊಣೆಗಾರಿಕೆಯೂ ಅಗತ್ಯ ಎಂಬುದನ್ನು

ಸಂಪೂರ್ಣ ಮರೆತುಬಿಡುವರು. ಹಾಗಾಗಿ ಯಾವಾಗಲೂ ಮಕ್ಕಳ ಮುಂದೆ ಶಾಲೆಯನ್ನೂ ಶಿಕ್ಷಕರನ್ನೂ ಟೀಕಿಸಿ, ಮಕ್ಕಳಿಗೆ ಆ ಬಗ್ಗೆ ಗೌರವವಾಗಲೀ, ಆಸಕ್ತಿಯಾಗಲೀ ಇಲ್ಲದಂತೆ ಮಾಡುತ್ತಾರೆ. ಹಾಗಾದಾಗಲೂ ಮಕ್ಕಳ ವ್ಯಕ್ತಿತ್ವ ಸಮಸ್ಯಾತ್ಮಕವಾಗಿ ರೂಪಿತವಾಗುತ್ತದೆ.

ಅಂದರೆ ಶಾಲೆಗಳು ಪಾಲಕರೊಡನೆ ಸಂಪರ್ಕವಿಟ್ಟುಕೊಂಡು ಮಕ್ಕಳ ಶ್ರೇಯೋಭಿವೃದ್ಧಿಗೆ ಶ್ರಮಿಸಲು ತುಂಬ ಉತ್ಸುಕರಾಗಿರುವ ಸನ್ನಿವೇಶಗಳೇ ಎಲ್ಲೆಲ್ಲೂ ಇವೆ ಎಂದು ಹೇಳಲೂ ಬರುವುದಿಲ್ಲ. ಅನೇಕ ವಿದ್ಯಾವಂತ ಪಾಲಕರು ತಮ್ಮ ಮಕ್ಕಳ ಸಮಸ್ಯೆಗಳನ್ನು ವಿವರಿಸಲು ಶಾಲೆಗೆ ಹೋದರೆ, ತಮ್ಮ ಮೇಲೆ ಮಕ್ಕಳು ದೂರು ಹೇಳುತ್ತಾರೆ ಎಂದು ತಿಳಿದು ಶಿಕ್ಷಕರು ಆ ಮಕ್ಕಳನ್ನು ಮಲತಾಯಿ ಧೋರಣೆಯಿಂದ ನಡೆಸಿಕೊಂಡ ಉದಾಹರಣೆಗಳಿಗೂ ಕೊರತೆಯಿಲ್ಲ. ಆದುದರಿಂದ ಅನೇಕ ಪಾಲಕರು ತಾವು ಶಾಲೆಗೆ ಹೋದರೆ ತಮ್ಮ ಮಕ್ಕಳಿಗೆ ಒಳಿತಾಗುವುದಕ್ಕಿಂತ ಕೆಡುಕೇ ಹೆಚ್ಚಾದೀತೆಂಬ ಭಯದಿಂದ ಅಸಹಾಯಕರಾಗಿ, ಬಂದುದನ್ನು ಸರಿ ಹೊಂದಿಸಿಕೊಂಡು ಹೋಗಲು ಮಕ್ಕಳಿಗೇ ಬುದ್ಧಿವಾದ ಹೇಳುತ್ತಾರೆ. ಅಸಹಾಯಕತೆಯಿಂದ ಹೊಂದಿಕೊಂಡು ಹೋಗುವ ಪ್ರಸಂಗ ಬಂದಾಗ, ಬೆಳೆಯುವ ವಯಸ್ಸಿನ ಮಕ್ಕಳ ಮನಸ್ಸಿನ ಮೇಲೆ ಅಗಾಧವಾದ ದುಷ್ಪರಿಣಾಮ ಉಂಟಾಗಿ ಆ ಮಕ್ಕಳು ಯುವಕರಾದಾಗ ಎಲ್ಲದಕ್ಕೂ ಪ್ರತಿಭಟಿಸುವ ಮನೋಭಾವ ಬೆಳೆಸಿಕೊಳ್ಳ ಬಹುದು.

ಇದಕ್ಕೆಲ್ಲಾ ಸೂಕ್ತ ಪರಿಹಾರವೆಂದರೆ ಪ್ರತಿ ಶಾಲೆಯಲ್ಲೂ ಪಾಲಕರು ಶಾಲೆಯೊಡನೆ ಪರಿಣಾಮಕಾರಿಯಾದ ಸಂಬಂಧವನ್ನು ಬೆಳೆಸಿಕೊಳ್ಳಲು, ವಿಚಾರ ವಿನಿಮಯ ಮಾಡಿಕೊಳ್ಳಲು ಅನುಕೂಲವಾದ ಏರ್ಪಾಟಿರಬೇಕು. ಈ ದಿಶೆಯಲ್ಲಿ ಅನೇಕ ಶಾಲೆಗಳು ವಿಧ – ವಿಧವಾದ ಏರ್ಪಾಟು ಮಾಡಿಕೊಂಡಿದೆ. ಕೆಲವು ಶಾಲೆಗಳಲ್ಲಿ ಪಾಲಕರ ದಿನಾಚರಣೆ ಮಾಡಿದರೆ, ಕೆಲವು ಶಾಲೆಗಳು ಪಾಲಕರ ಸಪ್ತಾಹವನ್ನಾಚರಿಸುತ್ತಿವೆ. ಮತ್ತೆ ಕೆಲವು ಶಾಲೆಗಳು ಪ್ರತಿ ತಿಂಗಳ 'ಪ್ರಗತಿ ಪತ್ರ ' ವನ್ನು ಪಾಲಕರ ಸಹಿಗೆಂದು ಮನೆಗೆ ಕಳಿಸಿಕೊಡುತ್ತದೆ. ಒಂದು ದಿನ ಪಾಲಕರನ್ನು ಶಾಲೆಗೆ ಕರೆಸುವುದರಿಂದಾಗಲೀ, ಯಾಂತ್ರಿಕವಾಗಿ 'ಪ್ರಗತಿ ಪತ್ರ ' ಕ್ಕೆ ಸಹಿ ಮಾಡಿಸಿ ತರಿಸುವುದರಿಂದಾಗಲೀ, ಬೇಕಾದ ಫಲ ದೊರೆಯುವುದಿಲ್ಲ. ಪ್ರತಿ ಶಾಲೆಯಲ್ಲಿಯೂ ಪಾಲಕರ ಸಂಘವಿರಬೇಕು. ಅದು ವಾರಕ್ಕೆ ಒಮ್ಮೆಯಾದರೂ ಶಾಲೆಯಲ್ಲಿ ಕೂಡಬೇಕು. ಅಲ್ಲಿ ತಮ್ಮ ಮಕ್ಕಳ ಬೆಳವಣಿಗೆಯ ಬಗೆಗೆ ಸರಿಯಾದ ಜ್ಞಾನವಿಲ್ಲದ ಪಾಲಕರಿಗೆ ತಮ್ಮ ಜವಾಬ್ದಾರಿಗಳೇನು ಎಂದು ತಿಳಿಸಿ ಕೊಡುವ ವ್ಯವಸ್ಥೆ ಇರಬೇಕು. ಮುಖ್ಯವಾಗಿ ತಾಯಂದಿರಿಗೆ ತಿಳಿವಳಿಕೆಯನ್ನುಂಟು ಮಾಡಿದರೆ ಹೆಚ್ಚು ಪ್ರಯೋಜನ

ಕಾರಿಯಾಗುತ್ತದೆ. ಏಕೆಂದರೆ ಉದ್ಯೋಗ ನಿರತವಾದ ತಂದೆಯು ಪ್ರತಿವಾರವೂ ಶಾಲೆಗೆ ಹೋಗಲು ಮತ್ತು ಮಕ್ಕಳ ಬಗ್ಗೆ ಬೇಕಾದ ವ್ಯವಸ್ಥೆ ಮಾಡಲು, ಮಾರ್ಗದರ್ಶನ ನೀಡಲು ತನ್ನ ಜವಾಬ್ದಾರಿಗಳಲ್ಲಿ ಸಾಧ್ಯವಾಗದಿರಬಹುದು (ಮನೆಯಿಂದ ಆಫೀಸು ದೂರವಿರುವ, ಬಸ್ಸಿಗಾಗಿ ಕ್ಯೂನಲ್ಲಿ ಕಾಯುವ ನಗರಗಳಲ್ಲಿಯಂತೂ ಈ ಸಮಸ್ಯೆ ಇನ್ನೂ ಹೆಚ್ಚು) ಪಾಲಕರು ಮೀಟಿಂಗ್‌ನಲ್ಲಿ ಸೇರಿದಾಗ ತಮ್ಮ ಮಕ್ಕಳ ಉತ್ತಮ ಹಾಗೂ ದುಷ್ಟ ಗುಣಗಳ ಬೆಳವಣಿಗೆಯ ಬಗೆಗೆ, ಅಥವಾ ಮತ್ತಾವುದೇ ರೀತಿಯ ಮಗುವಿನ ಶಂಕೆ, ಕುತೂಹಲಗಳ ಬಗೆಗೆ ವಿಚಾರ ವಿನಿಮಯ ಮಾಡಿಕೊಳ್ಳಲು ಅವಕಾಶವಿರಬೇಕು. ಹಾಗೆಯೇ ಶಿಕ್ಷಕರೂ ಸಹ ಮನೆಯ ಕಾರಣದಿಂದ ಮಕ್ಕಳಿಗುಂಟಾಗುವ ಅನಾನುಕೂಲಗಳ ವಿಷಯವಾಗಿಯೂ, ಪಾಲಕರು ಮಗುವಿನ ಬಗೆಗೆ ಮನೆಯಲ್ಲಿ ಗಮನಿಸಬೇಕಾದ ಅಂಶಗಳ ಬಗೆಗೂ ಸಲಹೆ, ಸೂಚನೆ ಕೊಡಲು ಸಾಧ್ಯವಾಗಬೇಕು. ಹೀಗೆ ಎಲ್ಲಾ ಪಾಲಕರೂ ಒಂದೆಡೆ ಸೇರಲು ಅವಕಾಶಗಳೂ ಒದಗಬಹುದು. ಶ್ರೀಮಂತರಾದ ಪಾಲಕರು ಶಾಲೆಯ ಅನೇಕ ಅವಶ್ಯಕತೆಗಳನ್ನು ಪೂರೈಸಲೂ ಮುಂದೆ ಬರಬಹುದು. ಅಲ್ಲದೆ ಶಿಕ್ಷಕರೂ ಸಹ ಪ್ರತಿಯೊಂದು ಮಗುವಿನ ಸರ್ವತೋಮುಖವಾದ ಬೆಳವಣಿಗೆಯ ಬಗೆಗೆ, ನಿರ್ಲಕ್ಷ್ಯ ವಹಿಸದೆ ಲಕ್ಷ ಕೊಟ್ಟೇ ಕೊಡಬೇಕಾಗುತ್ತದೆ. ಬೇಜವಾಬ್ದಾರಿಯ ಸ್ವಭಾವ ಉಳ್ಳ ಶಿಕ್ಷಕನೂ ಸಹ ದಕ್ಷತೆಯಿಂದ ವ್ಯವಸ್ಥಿತ ರೀತಿಯಿಂದ ಕೆಲಸ ಮಾಡಲೇಬೇಕಾಗುತ್ತದೆ. ಹಾಗೆಯೇ ಪಾಲಕರು ಸಹ ನಿರ್ಲಕ್ಷ್ಯ ಮನೋಭಾವದಿಂದಿರಲು ಸಾಧ್ಯವಾಗದೆ, ಮಕ್ಕಳ ಪ್ರಗತಿಗೆ ಸಹಾಯಕವಾದ ಶಾಲೆಯ ಕೆಲಸಗಳಲ್ಲಿ ತಮ್ಮ ಸಹಕಾರವನ್ನು ನೀಡಬೇಕಾಗುತ್ತದೆ.

ಈಗ ಕಡ್ಡಾಯ, ಸಾರ್ವಜನಿಕ ಶಿಕ್ಷಣವನ್ನು ತಂದಿರುವುದರಿಂದ ಶಾಲೆಗಳು ವಿದ್ಯಾರ್ಥಿಗಳಿಂದ ತುಂಬಿ ತುಳುಕುತ್ತಿವೆ. ಶಿಕ್ಷಕನು ಬಿಡುವಿಲ್ಲದ ಅನೇಕ ಕೆಲಸಗಳಲ್ಲಿ ನಿರತನಾಗಿರಬೇಕಾಗಿದೆ. ಹೀಗಿರುವಾಗ ಈ ಜವಾಬ್ದಾರಿಯನ್ನೂ ವ್ಯವಸ್ಥಿತವಾಗಿ ನೋಡಿಕೊಂಡು ಹೋಗಬೇಕೆಂದು ಅಪೇಕ್ಷಿಸುವುದು ಸರಿಯಲ್ಲ. ಬಡತನ, ಅನಾದರ, ನಿರ್ಲಕ್ಷ್ಯಗಳಿಗೆ ತುತ್ತಾಗಿರುವ ಶಿಕ್ಷಕ ವರ್ಗವು ತನ್ನ ಕರ್ತವ್ಯವನ್ನು ನಿಷ್ಠೆಯಿಂದ ನಿರ್ವಹಿಸಬೇಕೆಂದು ಕಡ್ಡಾಯ ಮಾಡುವುದು ಅವ್ಯವಹಾರದ ಆದರ್ಶ ಎಂಬ ಕೆಲವರ ಅಭಿಪ್ರಾಯದಲ್ಲಿ ಸತ್ಯಾಂಶವಿದೆ. ಆದರೆ ಹಾಗೆಂದು ಶಾಲೆ ಮನೆಗಳು ಸಮರಸದಿಂದ ಕೆಲಸ ನಿರ್ವಹಿಸದಿದ್ದರೆ, ಶಿಕ್ಷಣದ ಗುರಿಯೇ ಬುಡಮೇಲಾಗಿ ಶಾಲೆ, ಸಮಾಜ, ಮನೆ ಎಲ್ಲವೂ ಅಶಿಸ್ತೆಂಬ ಬೆಂಕಿಗೆ ಅಹುತಿಯಾಗಬೇಕಾಗುತ್ತದೆ. ಆದ್ದರಿಂದ ಏನೇ ಕಷ್ಟವಾದರೂ ಈ ದಿಶೆಯಲ್ಲಿ ವ್ಯವಸ್ಥೆ ಮಾಡುವುದು ಅತ್ಯಗತ್ಯ. ಇಂಥ ಸೂಕ್ತ ವ್ಯವಸ್ಥೆ ಆದಾಗ ಶಾಲೆಗಳೂ ಸಮರ್ಪಕವಾಗಿ ಕೆಲಸ ಮಾಡುತ್ತವೆ; ಪಾಲಕರ ಸಹಕಾರವೂ ದೊರೆಯುತ್ತದೆ; ಮಕ್ಕಳ ವ್ಯಕ್ತಿತ್ವದ ಬೆಳವಣಿಗೆಯೂ

ಸಮರ್ಪಕವಾಗುತ್ತದೆ. ಅವರು ಯುವಕರಾದಾಗ ಸಮಸ್ಯಾತ್ಮಕ ವ್ಯಕ್ತಿಗಳಾಗದೆ, ವಿಧ್ವಂಸಕ ಕೃತ್ಯಗಳಲ್ಲಿ ತೊಡಗದೆ, ಅತೃಪ್ತಿ ಅಸಹನೆಯೊಂದ ಬಾಳದೆ ತಮ್ಮೆಲ್ಲ ಕೆಲಸಗಳನ್ನೂ ಪರಿಣಾಮಕಾರಿಯಾಗಿ ನಿರ್ವಹಿಸಲು ಸಮರ್ಥರಾಗುತ್ತಾರೆ; ಸಮಸ್ಯೆಗಳನ್ನು ಬಗೆಹರಿಸಲು ಶಕ್ತರಾಗುತ್ತಾರೆ, ಆಗ, ಈಗಿರುವ ಸಮಸ್ಯೆ ಇಲ್ಲವಾಗುವುದು.

■

# ೧೩. ಶಾಲೆಗೊಂದು ಸಂಪರ್ಕ ಸೇತುವೆ

ಶಿಕ್ಷಣ ಮಗುವಿನ ಜೀನವದಲ್ಲಿ ಮಹತ್ತರ ಪಾತ್ರ ವಹಿಸುತ್ತದೆ. ಅದರಂತೆ ರಾಷ್ಟ್ರೀಯ ಜೀವನದಲ್ಲಿ ಅದರ ಪಾತ್ರ ಅತ್ಯಂತ ಪ್ರಮುಖವಾದುದು. ಮಗುವು ಪಡೆದ ಶಿಕ್ಷಣ, ಮಗುವಿನ ಹಾಗೂ ರಾಷ್ಟ್ರದ ಭವಿಷ್ಯತ್ತಿನ ಆಗುಹೋಗುಗಳಿಗೆ ಕಾರಣವಾಗತ್ತದೆ. ಎಂದರೆ ತಪ್ಪಾಗಲಾರದು. ಇಲ್ಲಿ ಶಿಕ್ಷಣದ ಅರ್ಥವನ್ನು ಕೇವಲ, ಮಗುವಿನ ವಿಷಯ ಸಂಗ್ರಹಣೆ ಅಥವಾ ಅವನು ಪಡೆಯುವ ಪದವಿಗಳಷ್ಟೇ ಸೀಮಿತಗೊಳಿಸಬಾರದು. ಅದರ ಜೊತೆಗೆ, ಮಗುವಿನ ದಕ್ಷತೆ, ಆರೋಗ್ಯ ವೈಯಕ್ತಿಕವಾಗಿ, ಕೌಟುಂಬಿಕವಾಗಿ, ಸಾಮಾಜಿಕವಾಗಿ, ರಾಷ್ಟ್ರೀಯವಾಗಿ ಇರುವ ಅವನ ನಡೆ – ನುಡಿ ಪ್ರತಿಕ್ರಿಯೆಗಳನ್ನು ರೂಪಿಸಲು ಸಹಾಯಕವಾಗುವ ತರಬೇತಿಯನ್ನೂ, ಅನುಭವ ಅವಕಾಶಗಳನ್ನು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಆದುದರಿಂದ ಮಗು ಉತ್ತಮ ರೀತಿಯ ವ್ಯಕ್ತಿತ್ವವನ್ನು ಪಡೆಯಬೇಕಾದರೆ, ಮನೆಯಲ್ಲಿ ತಂದೆ – ತಾಯಿಯರು, ಶಾಲೆಯಲ್ಲಿ ಶಿಕ್ಷಕರು ಅತ್ಯಂತ ಜವಾಬ್ದಾರಿಯುತವಾದ ಪಾತ್ರವನ್ನು ವಹಿಸಬೇಕಾಗುತ್ತದೆ. ಮಗುವಿನ ಜೀವನದಲ್ಲಿ ಅದರಲ್ಲೂ ಬಾಲ್ಯದಲ್ಲಿ ಶಾಲೆ ಹಾಗೂ ಮನೆಯ ಮಹತ್ವದ ಬಗ್ಗೆ ಎಷ್ಟು ಹೇಳಿದರೂ ಕಡಿಮೆಯೇ ಸರಿ.

**ಮಗುವಿನ ಭವಿಷ್ಯದ ಶಿಲ್ಪಿಗಳು : ಪಾಲಕರು – ಶಿಕ್ಷಕರು.**

ಶಿಕ್ಷಕರು ಮತ್ತು ಪಾಲಕರು ಒಗ್ಗೂಡಿ ಮಗುವಿನ ಬಗ್ಗೆ ಯೋಚಿಸಿ ಸೂಕ್ತ ಕ್ರಮ ತೆಗೆದುಕೊಂಡರೆ ಮಾತ್ರ ಅದು ಸರಿಯಾದ ಶಿಕ್ಷಣವಾಗುತ್ತದೆ. ಆದುದರಿಂದ ಶಾಲೆ ಹಾಗೂ ಮನೆಗೆ ಸ್ನೇಹ – ಸಂಬಂಧದ ಸೇತುವೆ ಇರಬೇಕು. ಪಾಲಕರು ಮಕ್ಕಳ ಬೆಳವಣಿಗೆಯನ್ನು (ಎಲ್ಲಾ ವಿಧದಲ್ಲೂ) ಗಮನಿಸುತ್ತಿರಬೇಕು. ಯಾವುದೇ ರೀತಿಯ ಕೊರತೆ ಮಗುವಿನಲ್ಲಿ ಕಾಣಿಸಿದರೆ, ಅದನ್ನು ಕೂಡಲೇ ಸರಿಗೊಳಿಸಲು ತಂದೆ – ತಾಯಿಯರು ಪ್ರಯತ್ನಿಸಬೇಕು ಅದು ತಮ್ಮ ಅಳವಿಗೆ ಸಾಧ್ಯವಾಗದಿದ್ದರೆ, ಆ ದೋಷ ಅಥವಾ ಕೊರತೆಗೆ ಮನೆ ಕಾರಣವಾಗದಿದ್ದರೆ, ಶಾಲೆಗೆ ಹೋಗಿ ಕಾರಣ ಕಂಡುಕೊಳ್ಳಬೇಕು. ಆಗ ಶಿಕ್ಷಕರೂ ಸಹ ಪಾಲಕರ ಅನಿಸಿಕೆಗಳಿಗೆ ಸೂಕ್ತ ಗಮನಕೊಟ್ಟು, ಕಾರಣ ಕಂಡುಹಿಡಿದು, ಲೋಪದೋಷಗಳನ್ನು ಸರಿಪಡಿಸುವ ಮನೋಭಾವ, ಮಗುವಿನ ಸೂಕ್ತ ಬೆಳವಣಿಗೆಯಲ್ಲಿ ಬಹಳಷ್ಟು ಸಹಾಯಕವಾಗುತ್ತದೆ.

ಕೆಲವೊಂದು ಸಾರಿ ಮಗುವಿನ ಅಭ್ಯಾಸದಲ್ಲಿ ಲೋಪದೋಷಗಳನ್ನು ಶಿಕ್ಷಕರು ಗಮನಿಸುವುದುಂಟು, ಅದಕ್ಕೆ ಶಾಲೆ ಕಾರಣವಲ್ಲದಾಗ, ಪಾಲಕರಿಗೆ ಹೇಳಿ ಕಳುಹಿಸಿ, ಆ ಬಗ್ಗೆ ಅವರೊಡನೆ ಚರ್ಚಿಸಿ ಸರಿಗೊಳಿಸಬಹುದು. ಹೀಗೆ ಸಕಾಲದಲ್ಲಿ ಇಬ್ಬರೂ ಮಗುವಿನ ಬೆಳವಣಿಗೆಯ ಬಗ್ಗೆ ಆಸಕ್ತಿಯಿಂದ ಗಮನಿಸಿ, ಕೆಲಸ ನಿರ್ವಹಿಸಿದರೆ ಮಗುವಿನ ಭವಿಷ್ಯ ಬಂಗಾರವಾಗುವುದರಲ್ಲಿ ಸಂಶಯವಿಲ್ಲ.

ಆದರೆ ಇಂದು ನಮ್ಮ ಮಕ್ಕಳ ಸ್ಥಿತಿಯನ್ನು ನಾವು ಗಮನಿಸಿದರೆ, ಇದಾವುದೂ ನಡೆಯುತ್ತಿಲ್ಲ ಎಂಬ ಅಂಶ ಸ್ಪಷ್ಟವಾಗಿ ಕಾಣಿಸುತ್ತದೆ. ಇದಕ್ಕೆ ಕಾರಣ ತಂದೆ – ತಾಯಿಯರ ಬಹಳಷ್ಟು ಮಂದಿ ತಮ್ಮ ಮಕ್ಕಳನ್ನು ಶಾಲೆಗೆ ಸೇರಿಸಿ, ಅವರಿಗೆ ಬೇಕಾದ ಪುಸ್ತಕ, ಫೀ, ಬಟ್ಟೆ-ಬರೆ ಕೊಡಿಸಿ ಬಿಟ್ಟರೆ ತಮ್ಮ ಜವಾಬ್ದಾರಿ ಮುಗಿಯಿತು. ಉಳಿದುದೆಲ್ಲಾ ಶಿಕ್ಷಕರ ಜವಾಬ್ದಾರಿ ಎಂದುಕೊಂಡು ಬಿಡುತ್ತಾರೆ. ಬಹಳೆಂದರೆ, ಮನೆಯಲ್ಲಿ ಓದುವುದಿಲ್ಲ ಎಂದು ಬಯ್ಯುವುದನ್ನಷ್ಟೇ ಮಾಡುತ್ತಾರೆ, ಮಗು ಹಿಂದುಳಿದನೆಂದರೆ ಅದಕ್ಕೆ ತಾವೆಷ್ಟು ಹೊಣೆ, ಎಂದು ವಿಚಾರ ಮಾಡದೆ ಮಗುವನ್ನೇ ಮೂದಲಿಸುತ್ತಾರೆ, 'ದಡ್ಡ' ಎಂಬ ಹಣೆಪಟ್ಟಿಯನ್ನು ಕಟ್ಟಿಬಿಡುತ್ತಾರೆ, ಮಕ್ಕಳ ಸ್ವಭಾವಕ್ಕೆ ಶಾಲೆ ಹಾಗೂ ಮನೆಯಲ್ಲಿರುವ ವಾತಾವರಣ, ಸ್ನೇಹ ಸಂಬಂಧ ಅಥವಾ ಮನೆಯಲ್ಲಿಯ ಹಿರಿಯರು; ಶಾಲೆಯಲ್ಲಿಯ ಶಿಕ್ಷಕರು ಮಕ್ಕಳೊಡನೆ ವ್ಯವಹರಿಸುವ ರೀತಿಯೇ ಮುಖ್ಯ ಎಂಬುದನ್ನು ಬಹಳಷ್ಟು ಮಂದಿ ಯೋಚಿಸುವುದೇ ಇಲ್ಲ. ಕೆಲವರಿಗಂತೂ ಗೊತ್ತೂ ಇರುವುದಿಲ್ಲ. ಬಹಳಷ್ಟು ಶಾಲೆಗಳಲ್ಲಿ ಶಿಕ್ಷಕರೂ ಅಷ್ಟೆ 'ತಮ್ಮ ಪಾಲಿಗೆ ಬಂದಿರುವ ಪಠ್ಯ ಕ್ರಮವನ್ನು ವರ್ಷದ ಕೊನೆಯೊಳಗಾಗಿ ಮುಗಿಸಿ ಬಿಟ್ಟರೆ ಆಯಿತು' ಎಂದುಕೊಂಡು ಬಿಡುತ್ತಾರೆ, ಪಾಠವನ್ನು ಮಾಡುವಾಗಲೂ ಅಷ್ಟೆ, ಮಕ್ಕಳಿಗೆ ಅರ್ಥವಾಯಿತೆ? ಇಲ್ಲವೆ? ಎಷ್ಟು ಜನಕ್ಕೆ ಅರ್ಥವಾಯಿತು ? ಎಂದು ತಿಳಿದುಕೊಳ್ಳುವ ಗೊಡವೆಗೆ ಅನೇಕ ಶಿಕ್ಷಕರು ಹೋಗುವುದೇ ಇಲ್ಲ. ಪಾಠ ಮುಗಿಸಿದರಾಯಿತು ಎಂಬುದಕ್ಕಷ್ಟೆ ಗಮನ. ಕೆಲವರಂತೂ ಮೊದಲನೆ ಟರ್ಮಿನ್ನಲ್ಲಿ ಒಂದೆರಡು ಪಾಠಗಳನ್ನು ಮಾತ್ರ ಮಾಡಿ, ಉಳಿದೆಲ್ಲಾ ಪಾಠಗಳನ್ನು ಎರಡನೆಯ ಟರ್ಮಿನಲ್ಲಿ ಆತುರದಿಂದ ಮಾಡಿ ಮುಗಿಸಿ ಬಿಡುತ್ತಾರೆ, ವರ್ಷದ ಪ್ರಾರಂಭದಲ್ಲಿ ಒಂದು ತಿಂಗಳಾದರೂ ಒಂದು ಪಾಠ ಸಹ ಮುಗಿಸದೆ ಎಳೆದುಕೊಂಡು ಹೋದಾಗ, ಹುಡುಗರಿಗೆ ಆಸಕ್ತಿ ಹುಟ್ಟದೆ ಏನೂ ಕಲಿತುಕೊಳ್ಳುವುದಿಲ್ಲ. ಎರಡನೆಯ ಟರ್ಮಿನಲ್ಲಿ ಅವಸರದಲ್ಲಿ ದಿನಕ್ಕೆ ಒಂದು ಅಥವಾ ಕೆಲವು ವೇಳೆ ಎರಡೆರಡು ಪಾಠಗಳನ್ನು ಮುಗಿಸುವಾಗಲೂ ಮಕ್ಕಳಿಗೆ ಏನೂ ಅರ್ಥವಾಗುವುದಿಲ್ಲ (ಇದೆಲ್ಲಾ ಗಮನಿಸಿಯೂ ಅನೇಕ ವೇಳೆ ಪಾಲಕರು ಅಸಹಾಯಕತೆಯಿಂದ ಸುಮ್ಮನಿರುವ ಸ್ಥಿತಿ). ಪಾಠ ಕಲಿಸುವುದೇ ಈ ಸ್ಥಿತಿಯಾದ ಮೇಲೆ ಮೌಲ್ಯಗಳನ್ನು ಬೆಳೆಸುವುದಂತೂ ದೂರವೇ ಉಳಿಯಿತು. ಹೀಗಾಗಿ ಮಕ್ಕಳು ವರ್ಷವೆಲ್ಲಾ ಕಲಿತಿದ್ದು ಸೊನ್ನೆ, ಏನೂ

ಕಲಿಯದಿದ್ದುದೊಂದು ರೀತಿಯ ನಷ್ಟವಾದರೆ, ಶಾಲೆಗೆ ಬಂದ ಮಕ್ಕಳಿಗೆ ಕೆಲವು ಕಡೆ ಸರಿಯಾದ ಮೇಲ್ವಿಚಾರಣೆಯಾಗಲೀ, ಮಾರ್ಗದರ್ಶನವಾಗಲೀ ಇಲ್ಲದೆ, ಸ್ವಂತ ವಿಚಾರ ಮಾಡುವ ಶಕ್ತಿ ಇನ್ನೂ ಬೆಳೆದಿರುವುದಿಲ್ಲವಾಗಿ, ಆ ತರಗತಿಯಲ್ಲಿ ಶಿಕ್ಷಕರಿಲ್ಲದ ವೇಳೆಯ ದುರ್ಲಾಭ ಪಡೆದುಕೊಂಡು ಅನೇಕ ಅನಪೇಕ್ಷಣೀಯ ಗುಣಗಳನ್ನು ಬೆಳೆಸಿಕೊಂಡು ಬಿಡುತ್ತಾರೆ. ಅನೇಕ ಶಾಲೆಗಳು ಅಸಮರ್ಪಕ ರೀತಿಯಲ್ಲೂ, ಬೇಜವಾಬ್ದಾರಿಯಿಂದಲೂ ನಡೆಯುತ್ತಿರುವುದರಿಂದ ಅಂತಹ ಶಾಲೆಯ ಮಕ್ಕಳು, ಬೇಜವಾಬ್ದಾರಿತನ ಬೆಳೆಸಿಕೊಂಡು ಮುಂದೆ ಸಮಾಜದ ಅವ್ಯವಹಾರಗಳಿಗೆ, ಅನೀತಿಯುತ ಕಾರ್ಯಗಳಿಗೆ, ಹೊಣೆಗೇಡಿತನಕ್ಕೆ, ನೀತಿ - ನಿಯಮಗಳನ್ನು ತಮಗೆ ಅನುಕೂಲವಾಗುವಂತೆ ತಿರುಚಿಕೊಂಡು, ಸಮಾಜದಲ್ಲಿ ಅವ್ಯವಸ್ಥೆ ಉಂಟಾಗುವಂತಹ ಸ್ಥಿತಿಗೆ ಕಾರಣರಾಗುತ್ತಾರೆ. ಇವರು ಮನೆಯಲ್ಲೂ ಸಹ ಸಮಸ್ಯೆಗಳನ್ನುಂಟು ಮಾಡಿ ಕುಟುಂಬದಲ್ಲಿಯ ಶಾಂತಿ ಇಲ್ಲವಾಗುವಂತೆ ಮಾಡುತ್ತಾರೆ ಇಂತಹ ಪರಿಸ್ಥಿತಿ ಶಾಲೆಯಲ್ಲಿ ಇದ್ದರೂ, ವರ್ಷದ ಕೊನೆಯಲ್ಲಿ ಪರೀಕ್ಷೆ ಮಾತ್ರ ಬಂದು ಬಿಡುತ್ತದೆ. ತಂದೆ – ತಾಯಿಯರು ಬೇರೆ ನೂರಕ್ಕೆ ಎಂಬತ್ತು, ತೊಂಭತ್ತು ಅಂಕ ತಮ್ಮ ಮಕ್ಕಳು ಪಡೆಯಬೇಕೆಂದು ಬಯಸುತ್ತಾರೆ. ಕೆಲವರಂತೂ ಅಷ್ಟು ಅಂಕ ತರಲೇ ಬೇಕು, ಇಲ್ಲದಿದ್ದರೆ ಶಿಕ್ಷೆ ಎಂಬ ರೀತಿಯಲ್ಲೂ ಹೆದರಿಸುತ್ತಾರೆ, ಮತ್ತೆ ಕೆಲವು ಪಾಲಕರು ತರಗತಿಗೆ ಫಸ್ಟ್ ಬಂದರೆ ವಾಚ್ ಕೊಡಿಸುತ್ತೇನೆ, ಸೈಕಲ್ ಕೊಡಿಸುತ್ತೇನೆ, ಒಳ್ಳೆಯ ಬಟ್ಟೆ ಹೊಲಿಸುತ್ತೇನೆ, ದುಡ್ಡು ಕೊಡುತ್ತೇನೆ ಎಂದು ಏನೇನೋ ಆಮಿಷಗಳನ್ನು ಒಡ್ಡಿ ಓದಿಸಲು ಪ್ರಚೋದಿಸುತ್ತಾರೆ. ಮಕ್ಕಳೂ ಸಹ ಶಿಕ್ಷೆಯಾಗುತ್ತದೆ ಎಂಬ ಭಯದಿಂದ ಏನೇನೋ ದೊರೆಯುತ್ತದೆ ಎಂಬ ಆಸೆಯಿಂದ ಪರೀಕ್ಷೆ ಹತ್ತಿರ ಬಂದಂತೆ ಓದಲು ಪುಸ್ತಕ ತೆರೆದು ಕುಳಿತುಕೊಳ್ಳುತ್ತಾರೆ. ಆದರೆ ಓದಿದ್ದೊಂದೂ ಅರ್ಥವಾಗುವುದಿಲ್ಲ. ಅರ್ಥವಾಗುವುದಿಲ್ಲವಾಗಿ ಓದುವ ಆಸಕ್ತಿ ಉಳಿಯುವುದಿಲ್ಲ. ಶಿಕ್ಷೆಯಾಗುತ್ತದೆಂಬ ಭಯಕ್ಕಾಗಿ, ಏನೇನೋ ಸಿಕ್ಕಬಹುದೆಂಬ ಆಸೆಯಿಂದಾಗಿ, ಫೇಲಾಗಿ ಅಸಹ್ಯವಾಗಬಾರದೆಂಬ ಕಾರಣಕ್ಕಾಗಿ, ಓದಬೇಕೆಂದು ಪ್ರಯತ್ನಿಸುತ್ತಾರೆ, ಆದರೆ ಪಾಲಕರಿಂದಾಗಲೀ, ಶಿಕ್ಷಕರಿಂದಾಗಲೀ ಸರಿಯಾದ ಮಾರ್ಗದರ್ಶನವಿಲ್ಲದ ಕಾರಣ, ಅವರಿಗೆ ಓದಿದ್ದೊಂದೂ ಅರ್ಥವಾಗುವುದೇ ಇಲ್ಲ. ಆಗ ಅವರು ಓದುವುದು ಬಿಟ್ಟು ಸಣ್ಣ ಕಾರಣವನ್ನು ನೆಪಮಾಡಿಕೊಂಡು ಎದ್ದು ಬಿಡುತ್ತಾರೆ ಅಥವಾ ಓದಿನಂತೆ ನಟಿಸುತ್ತಾ ಕುಳಿತಿರುತ್ತಾರೆ. ಹೀಗಾಗಿ ಮಕ್ಕಳಲ್ಲಿ ಅಶಿಸ್ತಿನ ಸ್ವಭಾವ, ಅತೃಪ್ತಿ, ಅಸಮಾಧಾನ, ಅನಾಸಕ್ತಿ, ಅಸಹಾಯಕತೆಗಳು ಮೊಳೆಯುತ್ತವೆ. ಪರೀಕ್ಷೆಯಲ್ಲಿ ಚೆನ್ನಾಗಿ ಬರೆಯಲಾಗುವುದಿಲ್ಲ, ಅಂಕಗಳು ಕಡಿಮೆ ಬೀಳುತ್ತವೆ ಆಗ ಶಾಲೆಯಲ್ಲಿ ಶಿಕ್ಷಕರಿಂದ, ಮನೆಯಲ್ಲಿ ಪಾಲಕರಿಂದ ಬೈಗುಳಗಳನ್ನು ಮಕ್ಕಳು ಅಸಹಾಯಕರಾಗಿ

ಸಹಿಸಿಕೊಳ್ಳಬೇಕಾಗುತ್ತದೆ. ಮಗುವಿನ ಆ ಸ್ಥಿತಿಗೆ ತಾವೇ ಕಾರಣವೆಂದು ಶಿಕ್ಷಕರೂ ತಿಳಿದುಕೊಳ್ಳವುದಿಲ್ಲ; ಪಾಲಕರೂ ಅರ್ಥಮಾಡಿಕೊಳ್ಳುವುದಿಲ್ಲ ಆದರೆ ಮಗುವಿಗೆ ಮಾತ್ರ ಸುಮ್ಮನೆ ಹಿಂಸೆ.

**ಮಿತಿಯಿಲ್ಲದ ಮಕ್ಕಳು – ಗತಿಯಿಲ್ಲದ ಶಾಲೆಗಳು :**

ಈಗಂತೂ ಜನಸಂಖ್ಯೆ ಮಿತಿಯಿಲ್ಲದೆ ಬೆಳೆಯುತ್ತಿರುವುದರಿಂದಲೂ ರಾಷ್ಟ್ರವು ಶಿಕ್ಷಣದ ಪ್ರಚಾರಕ್ಕೆ ಮಹತ್ವ ಕೊಟ್ಟಿರುವುದರಿಂದಲೂ, ತಮ್ಮ ಮಕ್ಕಳ ಭವಿಷ್ಯ ಶಿಕ್ಷಣದಿಂದ ಉತ್ತಮಗೊಳ್ಳುವುದೆಂಬ ಪ್ರಜ್ಞೆ ಪಾಲಕರಲ್ಲಿ ಮೂಡಿರುವುದರಿಂದಲೂ, ಎಲ್ಲಾ ಶಾಲೆಗಳಲ್ಲೂ ನೂಕು ನುಗ್ಗಲು, ಸಾಧಾರಣ ಶಾಲೆಗಳಲ್ಲೂ ನೂಕು, ನುಗ್ಗಲು, ಸಾಧಾರಣ ಶಾಲೆಗಳಲ್ಲೂ ಪ್ರವೇಶಕ್ಕೆ ಪರದಾಟ, ಶಾಲೆ ಯಾವುದಾದರಾಗಲಿ, ಎಲ್ಲಿಯಾದರೂ ಒಂದು ಕಡೆ ಪ್ರವೇಶ ಮಕ್ಕಳಿಗೆ ಸಿಕ್ಕಿದರೆ ಸಾಕು ಎನ್ನುವ ಪರಿಸ್ಥಿತಿ,. ಪ್ರವೇಶ ಪಡೆದುಕೊಳ್ಳಲು ಒತ್ತಾಯ, ಒತ್ತಡ, ವಶೀಲಿ, ಈ ಸ್ಥಿತಿಯ ಲಾಭ ಪಡೆದುಕೊಂಡು ಅನೇಕ ಶಾಲೆಗಳು ಹಣ ಮಾಡುವ ಪ್ರಯತ್ನದಲ್ಲಿ ತೊಡಗಲೂ ಸಾಧ್ಯ. ಇಷ್ಟೆಲ್ಲಾ ಮಾಡುವುದರಿಂದ ಕಡೆಗಾಗುವುದೇನು? ಪ್ರತಿ ತರಗತಿಯಲ್ಲೂ ನೂರಾರು ಜನ ವಿದ್ಯಾರ್ಥಿಗಳು. ಅನೇಕ ಶಾಲೆಗಳಲ್ಲಿ ಕುಳಿತುಕೊಳ್ಳಲೂ ಸರಿಯಾದ ಕೊಠಡಿಗಳಿರುವುದಿಲ್ಲ. ಬೋಧನೆಗೆ ಅವಶ್ಯಕವಾದ ಕನಿಷ್ಠ ಸೌಲಭ್ಯಗಳೂ ಇರುವುದಿಲ್ಲ. ಈ ಮಟ್ಟದ ಶಾಲೆಗಳು ನಮ್ಮ ದೇಶದಲ್ಲಿ ಅನೇಕ. ಇಷ್ಟೊಂದು ಶಾಲೆಗಳನ್ನು ಸಮರ್ಪಕವಾಗಿ ನಡೆಸಲು ಸಾಕಷ್ಟು ಹಣವಿಲ್ಲದ ಕಾರಣ ಮೀಸಲಾತಿಯ ಕಾರಣ ಶಿಕ್ಷಕರನ್ನು ಕೆಲಸಕ್ಕೆ ನೇಮಿಸಿಕೊಳ್ಳುವಾಗ ಅವರ ಆಸಕ್ತಿ, ಬುದ್ಧಿಶಕ್ತಿ, ಅವರ ಹಿನ್ನೆಲೆ, ನಡೆ–ನುಡಿ ಏನನ್ನೂ ಗಮನಿಸಲಾಗುವುದಿಲ್ಲ. ವ್ಯಕ್ತಿಯು ಆಯಾ ಕೆಲಸಕ್ಕೆ ಬೇಕಾದ ಶಿಕ್ಷಣ ಪಡೆದಿರುವ ಆಧಾರದ ಮೇಲೆ, ಮೀಸಲಾತಿಯ ಪ್ರಕಾರ ನೇಮಕಾತಿಯಾಗುತ್ತದೆ. ಇಷ್ಟೇ ಸಾಲದೆಂಬಂತೆ, ಶಾಲೆಗೆ ಗ್ರ್ಯಾಂಟ್ ಇನ್ನೂ ಬರುತ್ತಿಲ್ಲವೆಂಬ ಕಾರಣದಿಂದಲೋ ಶಿಕ್ಷಕರಿಗೆ ಅತ್ಯಂತ ಕನಿಷ್ಠ ವೇತನ, ಇದರಿಂದ ಅಸಂತುಷ್ಟಿಗೆ ಒಳಗಾದ ಶಿಕ್ಷಕರೂ ಸಹ ಶ್ರದ್ಧೆ ಬದಿಗಿಟ್ಟು, ಕಾಲಯಾಪನೆ ಮಾಡಿಕೊಂಡು ಹೋಗುವ ಉದಾಹರಣೆಗೂ ಕೊರತೆ ಇಲ್ಲ. ಆ ಪರಿಸ್ಥಿತಿಯಲ್ಲಿ ಅವರಿಗೆ ತಮ್ಮ ಅರ್ಹತೆಗಳನ್ನು, ಕೆಲಸ ಮಾಡುವ ಕೌಶಲ್ಯವನ್ನು ಬೆಳೆಸಿಕೊಳ್ಳಬೇಕೆಂಬ ಆಸಕ್ತಿಯು ಉಂಟಾಗುವುದಿಲ್ಲ. ತಮ್ಮ ಅಸಹಾಯಕತೆಯ ಲಾಭತೆಗೆದುಕೊಂಡು ತಮ್ಮ ಶೋಷಣೆಯಾಗುತ್ತಿದೆ ಎಂದು ಅಸಮಾಧಾನಗೊಂಡು, ಕೆಲಸವನ್ನು ತೃಪ್ತಿಕರವಾಗಿ ಮಾಡುವುದಿಲ್ಲ. ಅಲ್ಲದೆ ತರಗತಿಯಲ್ಲೂ ಬೇರೆ ಬೇರೆಯ ಸಾಮಾಜಿಕ ಮಟ್ಟದಿಂದ ಬಂದ, ವಿಧ ವಿಧ ರೀತಿಯ ಮನೋಭಾವವುಳ್ಳ ಮಕ್ಕಳು ಮಿತಿಮೀರಿದ ಸಂಖ್ಯೆಯಲ್ಲಿರುತ್ತಾರೆ. ಆ ನೂರಾರು ಮಕ್ಕಳನ್ನು ನಿಯಂತ್ರಣದಲ್ಲಿಡುವುದೇ ಶಿಕ್ಷಕರಿಗೊಂಡು ದೊಡ್ಡ ಕೆಲಸವಾಗಿ

ಬಿಡುತ್ತದೆ. ಈ ಗದ್ದಲದಿಂದ ರೋಸಿ ಹೋದ ಶಿಕ್ಷಕರು ಪಾಠವನ್ನೇ ಮಾಡದಿದ್ದರೂ ಆಶ್ಚರ್ಯವಿಲ್ಲ.

**ಪಾಲಕರು – ಶಾಲೆ – ಶಿಕ್ಷಕ:** ಇನ್ನು ಪಾಲಕರ ಬಗ್ಗೆ ಗಮನಿಸಿದರೆ ಅವರಲ್ಲಿ ಅನೇಕ ಬಗೆಯವರಿರುತ್ತಾರೆ. ಬುದ್ಧಿವಂತರೂ, ವಿದ್ಯಾವಂತರೂ, ಅಜ್ಞಾನಿಗಳು, ತಿಳುವಳಿಕೆ ಇದ್ದರೂ ಮಕ್ಕಳ ಶಿಕ್ಷಣದ ಕಡೆಗೆ ಲಕ್ಷ್ಮ ಕೊಡಲು ಸಮಯವಿಲ್ಲದವರು, ಸಮಯವಿದ್ದರೂ ಸರಿಯಾಗಿ ಮಾರ್ಗದರ್ಶನ ಮಾಡಲಾಗದವರು, ಏನು ಮಾಡಬೇಕೆಂಬುದೇ ತಿಳಿಯದವರು ಮುಂತಾದವರಿರುತ್ತಾರೆ. ಸ್ವಲ್ಪ ಜವಾಬ್ದಾರಿಯೂ, ತಿಳಿವಳಿಕೆಯೂ ಇರುವ ಪಾಲಕರು ತಮ್ಮ ಕರ್ತವ್ಯವನ್ನು ಮನೆಯಲ್ಲಿ ಮಕ್ಕಳಿಗೆ ಸಾಧ್ಯವಾದಷ್ಟು ಮಾಡುತ್ತಾರೆ. ಆಗ ಶಾಲೆಯು ಅವರೊಡನೆ ಸಹಕರಿಸಿದರೆ ಪ್ರಯೋಜನವಾಗುತ್ತದೆ. ಶಾಲೆಯಲ್ಲಿ, ಮಗುವಿನ ಒಳಿತಿಗೆ ಅಭ್ಯಾಸಕ್ಕೆ ತಕ್ಕ ವಾತಾವರಣವಿಲ್ಲದಿದ್ದರೆ, ಅವರ ಬೆಳವಣಿಗೆ ಸರಿಯಾಗಿ ಆಗುವುದಿಲ್ಲ. ಕೆಲವು ಶಾಲೆಗಳಲ್ಲಂತೂ ಪಾಲಕರು ಶಾಲೆಗೆ ಹೋದರೂ, ಶಿಕ್ಷಕರು ಅವರೊಡನೆ ಸ್ನೇಹದಿಂದ ಮಾತನಾಡದೆ ಅವರು ತಮ್ಮ ಮರ್ಜಿಗಾಗಿ ಬಂದವರೆಂಬಂತೆ ಕಾಯಿಸಿ – ಬೇಯಿಸಿ, ಅಲಕ್ಷಿಸಿ ನಂತರ ಭೇಟಿಯಾದಾಗಲೂ ತಾಳ್ಮೆಯಿಂದ ಅವರ ಮಾತುಗಳನ್ನು ಕೇಳದೆ, ಉದಾಸೀನತೆ ತೋರಿಸಿ ಕಳುಹಿಸುವುದುಂಟು, ಇಂತಹ ಅನುಭವಗಳು ಉಂಟಾದರೆ ಪಾಲಕರು ಮುಂದೆ ಶಾಲೆಗೆ ಹೋಗುವುದನ್ನೇ ನಿಲ್ಲಿಸಿ ಬಿಡುತ್ತಾರೆ. ಹೀಗಾದಾಗ ಮನೆಯ ಶಾಲೆಯ ಸಂಬಂಧ ಇಟ್ಟುಕೊಂಡು ಅದಕ್ಕೆ ಬೇಕಾದ ಖಷ್ಟ ಕ್ರಮಗಳನ್ನು ತೆಗೆದುಕೊಳ್ಳಲು ಸಾಧ್ಯವೆಲ್ಲಿಯದು ? ಈ ರೀತಿಯ ಸ್ಥಿತಿ ಒಂದು ಕಡೆಯಾದರೆ ಮತ್ತೊಂದು ರೀತಿಯ ಸ್ಥಿತಿ ಕೆಲವು ಕಡೆ, ಶಿಕ್ಷಕರು "ನಮಗೇ ತಲೆ ತಿನ್ನುವಷ್ಟು ಕೆಲಸ, ಪ್ರತೀ ತರಗತಿಯಲ್ಲೂ ನೂರಾರು ಹುಡುಗರು, ಅವರ ಜಗಳ ಪರಿಹರಿಸುವುದರಲ್ಲೇ ಸಾಕಾಗಿಬಿಡುತ್ತದೆ. ಮೇಲಾಗಿ ತಿದ್ದುವ ಕೆಲಸ ಬೇರೆ, ಬಿಡುವಿಲ್ಲದ ಕೆಲಸ. ನಮ್ಮ ಸ್ವಂತ ಮಕ್ಕಳಿಗೂ ಸಹ ವೈಯಕ್ತಿಕ ಲಕ್ಷ್ಯ ಕೊಡಲು ಬಿಡುವಿಲ್ಲದಿರುವಾಗ, ಶಾಲೆಗೆ ಬರುವ ನೂರಾರು ಹುಡುಗರಿಗೆ ವೈಯಕ್ತಿಕ ಲಕ್ಷ್ಯ ಕೊಡಲು ಸಮಯವೆಲ್ಲಿ ಸಿಗಬೇಕು? ತಾಳ್ಮೆ ಎಲ್ಲಿ ಉಳಿಯಬೇಕು? ಎಂದು ತಮ್ಮ ಸ್ಥಿತಿಯ ವಿವರಣೆ ಕೊಟ್ಟಾಗ, ಅದೂ ನಿಜವೆ, ಅವರೂ ಮನುಷ್ಯರೆ– ಯಂತ್ರಗಳಲ್ಲವಲ್ಲ! ಎಂದು ಹ್ಲೂಗುಡಬೇಕಾಗುತ್ತದೆ. ಕೆಲವೊಂದು ಸಾರಿ, ಕೆಲವು ಶಾಲೆಗಳಲ್ಲಿ ಕೆಲವರು ಆದರ್ಶವಾದಿಗಳಿರುತ್ತಾರೆ. "ನಾವು ಈ ಉದ್ಯೋಗಕ್ಕೆ ಬಂದ ಮೇಲೆ, ಮಕ್ಕಳಿಗೆ ಶಿಕ್ಷಣ ಕೊಡುವ ಜವಾಬ್ದಾರಿ ವಹಿಸಿಕೊಂಡ ಮೇಲೆ, ನಮಗೆ ಸಾಧ್ಯವಾದಷ್ಟು ಮಟ್ಟಿಗಾದರೂ ಉತ್ತಮ ರೀತಿಯಿಂದ ಶಿಕ್ಷಣದ ಗುರಿ ಸಾಧಿಸಲು ಶ್ರಮಿಸುವುದು ನಮ್ಮ ಕರ್ತವ್ಯ ಎಂದು ಭಾವಿಸುತ್ತಾರೆ. ಅಂತಹವರು ಯಾವುದಾದರೂ ಮಗುವಿನಲ್ಲಿ ಏನಾದರೂ ಕೊರತೆ ಕಂಡರೆ ಅದಕ್ಕೆ ಸೂಕ್ತ ಉಪಕ್ರಮ ಕೈಗೊಳ್ಳುತ್ತಾರೆ, ಮಗುವಿನ

ಹಿನ್ನೆಲೆ ತಿಳಿದುಕೊಳ್ಳಲು ಪ್ರಯತ್ನಿಸುತ್ತಾರೆ. ಮನೆಯವರನ್ನು ಸಂಪರ್ಕಿಸಿ, ಅವರ ಸಹಕಾರದಿಂದ, ಅವರೊಡನೆ ಚರ್ಚಿಸಿ, ದೋಷ ಪರಿಹಾರ ಮಾಡುವ ತನಕ ಬಿಡುವುದಿಲ್ಲ ಇಂತಹ ಸಂದರ್ಭದಲ್ಲಿ ಪಾಲಕರು ತಮ್ಮ ಹೊಣೆ ಅರಿತವರಾಗಿದ್ದರೆ, ಶಿಕ್ಷಕರೊಡನೆ ಸಹಕರಿಸುವವರಾಗಿದ್ದರೆ, ಶಿಕ್ಷಕರ ಕೆಲಸ ಸುಲಭ. ಆದರೆ ನಮ್ಮ ದೇಶದಲ್ಲಿ ಬಹಳ ಮಂದಿ ತಂದೆ – ತಾಯಿಯರು ಅವಿದ್ಯಾವಂತರೂ, ತಮ್ಮ ಮಕ್ಕಳ ಬಗ್ಗೆ ಹೊಣೆಗಾರಿಕೆ ತಿಳಿಯದವರೂ ಆಗಿದ್ದಾರೆ. ಕೆಲ ಪಾಲಕರು ವಿದ್ಯಾವಂತರಿರಬಹುದು. ಆದರೆ ಅವರಿಗೆ ಬಿಡುವಿಲ್ಲದಿದ್ದರೆ ತಮ್ಮ ಹೊಣೆಗಾರಿಕೆಯನ್ನು ಸರಿಯಾಗಿ ನಿರ್ವಹಿಸುವುದಿಲ್ಲ. ಮತ್ತೆ ಕೆಲವರು ಬಡತನದ ಕಾರಣದಿಂದ ಮಗುವಿಗೆ ಅವಶ್ಯಕವಾದ ಸೌಲಭ್ಯಗಳನ್ನು ಒದಗಿಸದಿರಬಹುದು. ಆಗಲೂ ಶಿಕ್ಷಕನ ಪ್ರಾಮಾಣಿಕ ಪ್ರಯತ್ನಕ್ಕೆ ಯಾವ ಫಲವೂ ದೊರೆಯುವುದಿಲ್ಲ, ಶಿಕ್ಷಕ ಮಗುವಿನ ಬಗ್ಗೆ ಕಳಕಳಿ ಉಳ್ಳವನೂ ತನ್ನ ಕರ್ತವ್ಯಪ್ರಜ್ಞೆ ಉಳ್ಳವನೂ ಆಗಿ, ಪಾಲಕರೂ ವಿದ್ಯಾವಂತರೂ, ಮನೆಯಲ್ಲಿ ಮಗುವಿನ ಅಭ್ಯಾಸಕ್ಕೆ ಬೇಕಾದ ಸಹಾಯ – ಸೌಲಭ್ಯಗಳನ್ನು ಒದಗಿಸಬಲ್ಲವರೂ, ಶಾಲೆಯೊಡನೆ ಸಹಕರಿಸುವವರೂ ಆಗಿದ್ದರೆ, ಮಗುವಿನ ಭವಿಷ್ಯದ ಬಾಗಿಲು ತೆರೆದಂತೆಯೇ ಸರಿ.

**ಸ್ವತಂತ್ರ ಭಾರತದಲ್ಲಿ ಶಿಕ್ಷಣದ ಜವಾಬ್ದಾರಿ :**

ಪರಿಸ್ಥಿತಿ ಮಕ್ಕಳ ಸೂಕ್ತ ಶಿಕ್ಷಣಕ್ಕೆ ಅನುಕೂಲವಿಲ್ಲ. ಇದ್ದುದಕ್ಕೇ ಒಗ್ಗಿಕೊಂಡು ಹೋಗಬೇಕೆಂದು ಸುಮ್ಮನೆ ಕುಳಿತುಕೊಳ್ಳಲು ಬರುವುದಿಲ್ಲ. ಜನರ ಮನೋಭಾವ ಉತ್ತಮವಾಗಿದ್ದರೆ, ರಾಷ್ಟ್ರ ಕ್ಷೇಮವಾಗಿರಲು ಸಾಧ್ಯ. ಬೇಜವಾಬ್ದಾರಿಯ ಮೌಲ್ಯಗಳೇ ಇಲ್ಲದೆ, ಅದಕ್ಷರಾದ, ಸ್ವಾರ್ಥಿಗಳೂ, ಬೇರೆಯವರ ಒಳಿತನ್ನು ಸಹಿಸದ ದುಷ್ಟ ಪೀಳಿಗೆಯಿಂದ ರಾಷ್ಟ್ರ ಬದುಕಲಾರದು, ಕಾಲಾನುಕ್ರಮದಲ್ಲಿ ಅಂತಹ ರಾಷ್ಟ್ರದ ಪ್ರಗತಿ ಇಳಿಮುಖವಾಗುತ್ತಾ, ದೇಶದಲ್ಲಿ ಅಶಾಂತಿ, ಅತೃಪ್ತಿಗಳು ತುಂಬಿ, ಎಲ್ಲಿಯೂ ನೆಮ್ಮದಿಯ ವಾತಾವರಣವಿಲ್ಲದೆ, ಭಯಾನಕ ಪರಿಸ್ಥಿತಿಯನ್ನು ಸಮಾಜವು ಪ್ರತಿಕ್ಷಣವೂ ಎದುರಿಸಬೇಕಾಗುತ್ತದೆ. ಬಹಳಷ್ಟು ತ್ಯಾಗಮಾಡಿ, ಗಾಂಧೀಜಿ ಮುಂತಾದ ಮಹನೀಯರು ಪರಕೀಯರ ಹಿಡಿತದಿಂದ ನಮ್ಮ ರಾಷ್ಟ್ರವನ್ನು ಬಿಡುಗಡೆ ಮಾಡಿದ್ದಾರೆ. ಆದುದರಿಂದ ಭಾರತೀಯರಾದ ನಾವು ಜಗತ್ತಿನಲ್ಲಿ ಸ್ವತಂತ್ರ ವ್ಯಕ್ತಿಗಳಾಗಿ ತಲೆ ಎತ್ತಿ ಬದುಕುತ್ತಿದ್ದೇವೆ. ದೊರೆತ ಸ್ವಾತಂತ್ರ್ಯವನ್ನು ಸೂಕ್ತ ರೀತಿಯಿಂದ ಉಪಯೋಗಿಸಿಕೊಂಡು, ನಮ್ಮ ರಾಷ್ಟ್ರ ಸ್ಥಾನ ಜಗತ್ತಿನಲ್ಲಿ ಉನ್ನತವಾಗಿ ಬಾಳುವಂತೆ ಮಾಡಿದರೆ ನಮ್ಮನ್ನೇ ನಾವು ಉದ್ಧರಿಸಿಕೊಂಡಂತೆ, ನಾವು ಸ್ವಾರ್ಥಿಗಳಾಗಿ, ಹೊಟ್ಟೆಕಿಚ್ಚಿನ ಸ್ವಭಾವದವರಾಗಿ ಬದುಕಿದರೆ ಕೆಡಕು ಕಟ್ಟಿಟ್ಟದ್ದು, ಜನರು ಸಹಕಾರದಿಂದ, ಒಕ್ಕಟ್ಟಿನಿಂದ ಬಾಳಿದಾಗ ರಾಷ್ಟ್ರದ ಪ್ರಗತಿ, ಆದುದರಿಂದ ಶಿಕ್ಷಣ, ವಿಷಯ ಸಂಗ್ರಹಣೆಯ

ಜೊತೆಗೆ, ಉತ್ತಮ ಗುಣಗಳು ಮಕ್ಕಳಲ್ಲಿ ಮನೆ ಮಾಡುವಂತೆ ಬಾಲ್ಯಾವಸ್ಥೆಯಿಂದಲೇ ನಿಗಾ ವಹಿಸಬೇಕು, ಅವರಲ್ಲಿ ವೈಯಕ್ತಿಕ ಜೀವನಕ್ಕೂ, ಕೌಟುಂಬಿಕ ಜೀವನಕ್ಕೂ ಬೇಕಾದ ಉದಾತ್ತ ಗುಣಗಳು ಮೊಳೆಯುವಂತೆ ಮಾಡಬೇಕು. ಸಾಮಾಜಿಕ ಹಾಗೂ ರಾಷ್ಟ್ರೀಯ ಭಾವನೆಗಳನ್ನು ಮೂಡಿಸಿ ಪೋಷಿಸಬೇಕು. ಇಂತಹ ಗುಣಗಳನ್ನು ಮಕ್ಕಳಲ್ಲಿ ಉಂಟು ಮಾಡಲು ಸಹಾಯವಾಗುವಂತಹ ವಿಷಯಗಳು ಪಠ್ಯದಲ್ಲಿ ಸೇರಿಸಲ್ಪಡಬೇಕು. ಅಲ್ಲದೆ ಯೋಗ್ಯ ಕಾರ್ಯಕ್ರಮಗಳನ್ನು ಸಹ ಪಠ್ಯ ಚಟುವಟಿಕೆಗಳಲ್ಲಿ ಅಳವಡಿಸಿಕೊಂಡು ಸಾಧಿಸಲೂಬಹುದು, ಆದರೆ ಇಂದಿನ ದಿನಗಳಲ್ಲಿ ಯೋಗ್ಯ ಶಿಕ್ಷಣ ಕೊಡುವ ದಿಶೆಯಲ್ಲಿ ಯಾವುದೇ ರೀತಿಯ ಪ್ರಯತ್ನ ಮಾಡದೆ ನಾವು ಲಾಲ್ ಬಹದ್ದೂರ್ ಶಾಸ್ತ್ರಿಗಳಂತಹ ಮೌಲ್ಯಗಳುಳ್ಳ, ಡಾ: ರಾಧಾಕೃಷ್ಣನ್‌ರವರಂತೆ ಪಾಂಡಿತ್ಯ ಪಡೆದ, ಡಾ: ಶ್ಯಾಮ್ ಪ್ರಸಾದ್ ಮುಖರ್ಜಿಯವರಂತೆ ನಿರ್ಭಿಡೆಯ ಕತೃತ್ವ ಶಕ್ತಿಯಿಂದ ಕೂಡಿದ, ಸರ್ದಾರ್ ವಲ್ಲಭಭಾಯ್ ಪಟೇಲ್‌ರಲ್ಲಿದ್ದಂತಹ ಖಂಡ ತುಂಡ ಪ್ರವೃತ್ತಿ, ಗುರಿಯನ್ನು ಸಾಧಿಸುವ ದೃಢ ಮನಸ್ಸುಳ್ಳ ಪೀಳಿಗೆಯನ್ನು ಬಯಸುತ್ತಿದ್ದೇವೆ, ಪರಿಸ್ಥಿತಿ ಒಂದು, ಬಯಸುವುದು ಮತ್ತೊಂದು, ಬೇವು ಬಿತ್ತಿ ಮಾವು ಬೆಳೆಯಬಹುದೆ? ಆಧುನಿಕ ಸ್ಥಿತಿಯಲ್ಲಿ ಮೇಲೆ ಹೇಳಿದ ಶಿಕ್ಷಣ ಕೊಟ್ಟು ಸಮಾಜದಲ್ಲೂ ಮನೆಯಲ್ಲೂ, ಶಾಲೆಯಲ್ಲೂ ಮಾರ್ಗದರ್ಶನವಿಲ್ಲದ ವಾತಾವರಣ ನಿರ್ಮಿಸಿ ದೇಶದ ಒಗ್ಗಟ್ಟಿಗಾಗಿ ಹೋರಾಡುವ, ಅಭಿವೃದ್ಧಿಗಾಗಿ ಶ್ರಮಿಸುವ, ಸಹಕಾರದಿಂದ ಕೆಲಸ ಮಾಡುವ ಪೀಳಿಗೆಯನ್ನು ಪಡೆಯಲು ಸಾಧ್ಯವೆ?

ಆದುದರಿಂದ ಶಿಕ್ಷಕರು ಹಾಗೂ ಪಾಲಕರು ತಮಗಿರುವ ಅಸಹಾಯಕತೆಯನ್ನೂ; ಅನಾನುಕೂಲಗಳನ್ನು ಮುಂದುಮಾಡಿ, ಕೈಚಲ್ಲಿ ಕುಳಿತೆ, ಶಿಕ್ಷಣಕ್ಕಾಗಿ ಮಾಡುವ ಖರ್ಚು, ವ್ಯವಸ್ಥೆ ಎಲ್ಲಾ ಅಪವ್ಯಯವಾಗಿ ಒಳಿತಾಗುವುದಿರಲಿ ದೇಶಕ್ಕೆ ಕೆಡುಕಾಗುವಂತಹ ಸ್ಥಿತಿ ನಿರ್ಮಾಸಿದಂತಾಗುತ್ತದೆ, ಆದುದರಿಂದ ಈ ಕ್ಷೇತ್ರವನ್ನು ಎಂದಿಗೂ ಕಡೆಗಣಿಸಬಾರದು, ಎಲ್ಲಾ ಕೆಲಸಗಳಿಗಿಂತಲೂ ಈ ಕೆಲಸಕ್ಕೆ ಹೆಚ್ಚು ಮಹತ್ವ ಕೊಡುವುದು ಅವಶ್ಯ. ಯೋಗ್ಯ ಶಿಕ್ಷಕರನ್ನು ನೇಮಿಸಿ, ಅವರಿಗೆ ಅವಶ್ಯಕ ಸೌಲಭ್ಯ ಕೊಟ್ಟು, ಅವರು ತಮ್ಮ ಕರ್ತವ್ಯವನ್ನು ಮಾಡಿಯೇ ತೀರಬೇಕಾಗುವಂತಹ ವ್ಯವಸ್ಥೆ ಮಾಡಬೇಕು, ಹಣಕಾಸು, ಅವಶ್ಯಕ ವ್ಯವಸ್ಥೆ, ನುರಿತ ಶ್ರೇಷ್ಠ ಶಿಕ್ಷಕರು ಮುಂತಾದ ಬೇಡಿಕೆಗಳನ್ನು ಸರಿ ತೂಗಿಸುವುದು ರಾಷ್ಟ್ರಕ್ಕೆ ಕಷ್ಟವಾದರೂ, ಇದ್ದ ಪರಿಸ್ಥಿತಿಯಲ್ಲಿ ಎಷ್ಟರ ಮಟ್ಟಿನ ಅವಶ್ಯಕತೆ ಪೂರೈಸಲು ಸಾಧ್ಯವೋ ಅಷ್ಟನ್ನು ಮಾಡಿ, ಶಿಕ್ಷಣದ ನಿರೀಕ್ಷಿತ ಗುರಿಯನ್ನು ಸಾಧ್ಯವಾದಷ್ಟು ಮಟ್ಟಿಗೆ ಸಾಧಿಸುವಂತೆ ಮಾಡಬೇಕಾದುದು ಅನಿವಾರ್ಯ.

**ಪಾಲಕರ ಶಿಕ್ಷಣಕ್ಕೊಂದು ಯೋಜನೆ :**

ಈ ದಿಶೆಯಲ್ಲಿ ಪಾಲಕರು ತಮ್ಮ ಮಕ್ಕಳ ಶಿಕ್ಷಣದ ಬಗ್ಗೆ ನಿಗಾವಹಿಸುವಂತೆ ಮಾಡುವುದೂ ಒಂದು ಮುಖ್ಯ ಹೆಜ್ಜೆ. ಏಕೆಂದರೆ ಬಹಳ ಜನ ಪಾಲಕರಿಗೆ ಮನೆಯಲ್ಲಿ ತಮ್ಮ ಮಕ್ಕಳ ಬಗ್ಗೆ ತಮ್ಮ ಹೊಣೆ ಏನು ? ಅದನ್ನು ಹೇಗೆ ನಿರ್ವಹಿಸಬೇಕು. ಎಂಬುದೇ ಗೊತ್ತಿರುವುದಿಲ್ಲ. ಅದಕ್ಕಾಗಿ ಒಂದು ವ್ಯವಸ್ಥೆ ಮಾಡಬೇಕು. ಪ್ರತಿ ಊರಿನಲ್ಲಿ ಶಿಕ್ಷಣ ಇಲಾಖೆಯವರು ಒಂದು Course ನ್ನು ಪಾಲಕರ ಸಲುವಾಗಿ ಪ್ರತಿ ಶೈಕ್ಷಣಿಕ ವರ್ಷದ ಪ್ರಾರಂಭದಲ್ಲಿ ಏರ್ಪಡಿಸಬಹುದು. ಇದಕ್ಕಾಗಿ ಹೆಚ್ಚಿನ ಹಣದ ಹೊರೆಬೀಳದಂತೆಯೂ ನಿರ್ವಹಿಸಬಹುದು. ಅದೇ ಊರಿನಲ್ಲಿರುವ ಪರಿಣತರಾದ ಶಿಕ್ಷಕರು ಹಾಗೂ ಶಿಕ್ಷಣಾಧಿಕಾರಿಗಳನ್ನು ಸೇರಿಸಿಕೊಂಡು (ಆ ದಿನ ಶಾಲೆಯಲ್ಲಿ ಕೆಲಸ ಮಾಡುವ ಬದಲು, ಇಲ್ಲಿ ಕೆಲಸ ಮಾಡುವಂತೆ ವ್ಯವಸ್ಥೆ ಮಾಡಬೇಕು) ಕೆಲಸ ತೂಗಿಸಿಕೊಳ್ಳಬಹುದು. ಶಾಲೆಯ ಕೆಲಸಗಳಿಗೆ ತೊಂದರೆಯಾಗದಂತೆ, ಶಾಲೆಯಿಂದ, ಒಂದು ದಿನಕ್ಕೆ ಒಬ್ಬ ಶಿಕ್ಷಕನನ್ನು ಮಾತ್ರ ತೆಗೆದುಕೊಳ್ಳಬೇಕು. ಈ ಕೆಲಸವನ್ನು ಶಿಕ್ಷಕರು ತಮ್ಮ ನೌಕರಿಯ ಒಂದು ಅಂಶ ಎಂದು ಅರಿಯುವಂತೆ ಮಾಡಬೇಕು. ಪಾಲಕರಿಗೆ ಇಂತಹ ಒಂದು Course ನಲ್ಲಿ ಭಾಗವಹಿಸುವುದರಿಂದ ತಮ್ಮ ಮಕ್ಕಳ ಶಿಕ್ಷಣಕ್ಕೆ ಸಹಾಯವಾಗುತ್ತದೆ ಎಂಬ ಅರಿವು ಮಾಡಿಕೊಟ್ಟರೆ ಅವರುಗಳು ಇದರಲ್ಲಿ ತಪ್ಪದೆ ಭಾಗವಹಿಸುತ್ತಾರೆ. ಇದರ ಪ್ರಯೋಜನ ಪಡೆದುಕೊಳ್ಳುತ್ತಾರೆ. ಹಳ್ಳಿಗಳಲ್ಲಿರುವ ಪಾಲಕರಿಗೂ ಇಂತಹದೊಂದು ವ್ಯವಸ್ಥೆಬೇಕು. ಹಳ್ಳಿಗರಿಗೆ ಕೆಲಸವಿಲ್ಲದಂತಹ ಸಮಯ ನೋಡಿಕೊಂಡು, ಸುತ್ತ ಮುತ್ತಲ ಹಳ್ಳಿಯವರು ನಡೆದುಕೊಂಡು ಸುಲಭವಾಗಿ ಬರಬಹುದಾದಂತಹ ಒಂದು ಶಿಕ್ಷಣ ಕೇಂದ್ರದಲ್ಲಿ, ಪಾಲಕರಿಗೆ ಮಾರ್ಗದರ್ಶನ ಮಾಡಲು ಸಹಾಯಕವಾಗುವಂತಹ ಭಾಷಣಗಳನ್ನು ಏರ್ಪಡಿಸಬಹುದು, ಆಯಾ ಶಿಕ್ಷಣಾಧಿಕಾರಿಗಳೂ, ಆ ಭಾಷಣಗಳ ಉಪಯೋಗವನ್ನು ಪಾಲಕರಿಗೆ ಮನದಟ್ಟು ಮಾಡಬೇಕು, ಆಗ ಆ ಮುಗ್ಧ ಹಳ್ಳಿಗರು ಪ್ರೀತಿಯಿಂದ, ಗೌರವದಿಂದ ಬಂದು ಅದರ ಪ್ರಯೋಜನ ಪಡೆದುಕೊಳ್ಳುವುದರಲ್ಲಿ ಯಾವ ಸಂಶಯವೂ ಇಲ್ಲ. ಮುಖ್ಯವಾಗಿ ಸಂಬಂಧಿಸಿದ ಅಧಿಕಾರಿಗಳು ಆಸ್ತೆಯಿಂದ ಕೆಲಸ ಮಾಡುವುದು ಮಹತ್ವ

ಹೀಗೆ ಮಾಡುವುದರಿಂದ ಶಾಲೆಯಲ್ಲಿ ಮಾಡುವ ಕೆಲಸಗಳಿಗೆ ಪಾಲಕರ ಸಹಕಾರ ಸಿಕ್ಕಿ, ಶಿಕ್ಷಕರ ಕೆಲಸ ಸುಲಭವಾಗುತ್ತದೆ. ಹಾಗಾದಾಗ ಶಿಕ್ಷಕರೂ, ಪಾಲಕರೂ ಹೊಣೆಯರಿತು ನಡೆಯಲೇಬೇಕಾದ ಸ್ಥಿತಿ ಉಂಟಾಗುತ್ತದೆ. ಪಾಲಕರು ಆಗಾಗ್ಗೆ ಬಂದು ವಿಚಾರಿಸಿಕೊಳ್ಳಲು ಶಾಲೆಯಲ್ಲಿ ಆಸ್ಪದವಿದ್ದರೆ, ಮೇಲಾಧಿಕಾರಿಯು ಪಾಲಕರ

ಅನಿಸಿಕೆಗಳತ್ತ ಸೂಕ್ತ ಲಕ್ಷ್ಯಕೊಡುವಂತಿದ್ದರೆ, ಶಿಕ್ಷಕನು ಶ್ರದ್ಧೆವಹಿಸಿ ಕೆಲಸ ಮಾಡಿಯೇ ತೀರುತ್ತಾನೆ, ಶಿಕ್ಷಕನ ನಿಜವಾದ ಸಮಸ್ಯೆಗಳಿಗೆ ಲಕ್ಷ್ಯ ಕೊಡಬೇಕಲ್ಲದೆ, ಅವನನ್ನು ಕೂಲಿಕಾರನಂತೆ ನಡೆಸಿಕೊಳ್ಳಲೂ ಆಗದು, ಒಟ್ಟಿನಲ್ಲಿ ಶಾಲೆ ಹಾಗೂ ಮನೆ ಅಂದರೆ, ಶಿಕ್ಷಕರು ಮತ್ತು ಪಾಲಕರು ಕೂಡಿಯೇ ಮಕ್ಕಳ ಅಭಿವೃದ್ಧಿಯ ಬಗ್ಗೆ ಪ್ರಯತ್ನಿಸಿದರೆ ಯೋಗ್ಯ ಶಿಕ್ಷಣ ನಮ್ಮ ಪೀಳಿಗೆಗೆ ದೊರೆಯುವುದು ನಿಸ್ಸಂಶಯ, ಶಿಕ್ಷಣ, ಜೀವನ ಸಮಾಜ ರಾಷ್ಟ್ರದ ಸಂಪರ್ಕ ಸೇತುವೆಯಾಗುತ್ತದೆ. ದೇಶ ಮುಂದುವರಿಯುತ್ತದೆ, ಯಾವುದೇ ಹಂತದ ಶಿಕ್ಷಣಕ್ಕೂ, ಮನೆಯ ಪ್ರಭಾವ ಮಹತ್ವದ್ದು, ಮಗುವಿನ ಪ್ರತಿ ಚಲನವಲನಕ್ಕೂ, ಅನಿಸಿಕೆಗೂ ಆಸೆ – ಆಕಾಂಕ್ಷೆಗಳಿಗೂ, ನಡೆ – ನುಡಿಗಳಿಗೂ ಕುಟುಂಬವೇ ಬಹಳಷ್ಟು ಕಾರಣವೆನ್ನಬಹುದು.

ಮಗುವಿಗೆ ಮನೆಯಲ್ಲಿ ಸುಭದ್ರತೆಯಾಗಲೀ ಮೆಚ್ಚುಗೆಯಾಗಲೀ ದೊರೆಯದಿದ್ದರೆ, ಅದಕ್ಕೆ ಒಂದು ರೀತಿಯ ಅಸಹಾಯಕ ಮನೋಭಾವ ಉಂಟಾಗುತ್ತದೆ, ಅಸಮಾಧಾನ, ಅತೃಪ್ತಿ ಬೆಳೆಯುತ್ತದೆ. ಅದರಿಂದುಂಟಾದ ಕೊರತೆಯನ್ನು ನೀಗಿಸಿಕೊಳ್ಳಲು ಅವನು ಅಸಾಮಾಜಿಕ ನಡವಳಿಕೆಗಳಲ್ಲಿ ತೊಡಗುತ್ತಾನೆ. ಮನೆಯಲ್ಲಿ ಜಾಗರೂಕತೆಯಿಂದ ಬೆಳೆಸುವುದಲ್ಲದೆ ಹೊರಗಿನ ಸ್ನೇಹವೂ ಉತ್ತಮವಾಗಿರುವಂತೆ ಎಚ್ಚರಿಕೆ ವಹಿಸುವುದವಶ್ಯ. ಬೆಳೆಯುವ ಅವಧಿಯ ಬಹಳ ಸಹಯವನ್ನು ಶಾಲೆಯಲ್ಲೇ ಕಳೆಯುವುದರಿಂದ ಉತ್ತಮ ಶಿಕ್ಷಣ ದೊರೆಯವಂತಹ ಶಾಲೆಗೆ ಮಕ್ಕಳನ್ನು ಕಳಿಸುವ. ಅದು ಹೇಗೆ ಮುಂದುವರಿಯುತ್ತದೆ ಎಂಬುದನ್ನು ಸದಾ ನಿರೀಕ್ಷಿಸಿ ಸಕಾಲದಲ್ಲಿ ಅವಶ್ಯಕ ಮಾರ್ಗದರ್ಶನ ಮಾಡುವ ಹೊಣೆಗಾರಿಕೆಯೂ ಪಾಲಕರದ್ದೇ ಆಗಿದೆ.

■

## ೧೪. ನಮ್ಮ ಜಾಣ ಮಕ್ಕಳು ದಡ್ಡರಾದರೇಕೆ ?

ಎಲ್ಲರ ಬಾಯಲ್ಲಿ 'ಈಗಿನ ಮಕ್ಕಳ ವಿದ್ಯಾಭ್ಯಾಸ ಏನೂ ಉಪಯೋಗವಿಲ್ಲ; ನಮ್ಮ ಕಾಲದಲ್ಲಿ ಹಾಗಿತ್ತು – ಹೀಗಿತ್ತು. ಮೂರನೇ ತರಗತಿಯಲ್ಲಿದ್ದಾಗಲೇ ಬರೆಯುವಾಗ ಒಂದೂ ತಪ್ಪೂ ಇರುತ್ತಿರಲಿಲ್ಲ, ಅಕ್ಷರ ಮುತ್ತಿನಂತಿರುತ್ತಿದ್ದವು, ಉಚ್ಚಾರ ತುಂಬಾ ಸ್ಪಷ್ಟ ಹಾಗೂ ನಿರ್ದಿಷ್ಟ. ಈಗಿನ ಗ್ರಾಜ್ಯುಯೇಟ್‌ಗಳು ಕೂಡ ಕನ್ನಡ ಸರಿಯಾಗಿ ಬರೆಯುವುದಿಲ್ಲ. ನಾವು ಓದುವಾಗ 'ಓದು' ಎನ್ನುವವರು ದಿಕ್ಕಿರಲಿಲ್ಲ. ಈಗಿನವರಿಗೆ ಬೇಕಾದ ಹಾಗೆ ಸೌಲಭ್ಯ ಒದಗಿಸಿಕೊಟ್ಟರೂ 'ಓದು – ಬರಹ ಸಹ ನೆಟ್ಟಗೆ ಕಲಿಯರು' ಎಂದು ಅನೇಕ ರೀತಿಯ ಟೀಕಾತ್ಮಕವಾದ ಮಾತುಗಳನ್ನು ಕೇಳುತ್ತೇವೆ. ಆದರೆ ಈಗ ಅನೇಕರ ಅನುಭವದ ಹಾಗೂ ಪ್ರಯೋಗಸಿದ್ಧವಾದ ಸ್ಥಿತಿ ಎಂದರೆ ಈಚೆಗೆ ಹುಟ್ಟಿದ ಮಕ್ಕಳ ಬುದ್ಧಿಶಕ್ತಿ ಹಾಗೂ ಗ್ರಹಣಶಕ್ತಿ ಮೊದಲಿನ ಮಕ್ಕಳಿಗಿಂತಲೂ ಹೆಚ್ಚು ಎಂಬುದು. ಇದು ನಿಜವಾದರೆ ಮೇಲಿನ ಟೀಕೆಗೂ ಈಗಿನ ಮಕ್ಕಳ ಬುದ್ಧಿಚುರುಕೆಂಬ ಅನುಭವಕ್ಕೂ ಸಂಬಂಧವೇ ಇಲ್ಲ. ಹಾಗಾದರೆ ಯಾವುದು ಸುಳ್ಳು ? ಯಾವುದು ನಿಜ?

ಯಾವುದೂ ಸುಳ್ಳಲ್ಲ. ಎರಡೂ ನಿಜವೆ. ಈಚಿನ ಮಕ್ಕಳ ಬೌದ್ಧಿಕ ಮಟ್ಟ ಸಾಮಾನ್ಯವಾಗಿ ಹೆಚ್ಚಿದೆ ಎಂಬುದು ಬಹುಜನರ ಅನುಭವದ ಅಂಶ. ಒಂದು ತಿಂಗಳ ಮಗು ಮಗುಚಿಕೊಂಡಿತು. ಒಂದೂವರೆ ತಿಂಗಳಿಗೆ ತಾಯಿಯನ್ನು ಗುರುತಿಸತೊಡಗಿತು. ಎರಡು ತಿಂಗಳಿಗೆ ಮಾತನಾಡಿದರೆ ನಗು, ಸಿಟ್ಟಿಗೆದ್ದರೆ ಅಳುವಿನ ಪ್ರತಿಕ್ರಿಯೆ ತೋರಿಸುವ ಅನುಭವಗಳು ಈಗಿನ ಮಕ್ಕಳ ಬೌದ್ಧಿಕ ಮಟ್ಟ ಹುಟ್ಟುತ್ತಲೇ ಹೆಚ್ಚಾಗಿರುತ್ತದೆ ಎಂಬ ಅಭಿಪ್ರಾಯಕ್ಕೆ ಪೋಷಕವಾದ ಉದಾಹರಣೆಗಳಾಗಿವೆ. ಹಾಗಿದ್ದರೂ ಬರುಬರುತ್ತಾ ಬಹಳ ಮಕ್ಕಳ ಬುದ್ಧಿ ಕುಂಠಿತವಾಗಲು ಕಾರಣ ಮೂಲದಲ್ಲಿಲ್ಲ. ಪರಿಸರದಲ್ಲಿರಬಹುದು ಎನ್ನಿಸುತ್ತದೆ.

ಮೂಲತ: ಮಕ್ಕಳ ಸ್ವಭಾವ ಅನುಕರಣೀಯ. ಅನುಕರಣೀಯ ರೀತಿ ಒಂದೇ ತೆರನಾಗಿರುವುದಿಲ್ಲ. ಅದು ಅವರ ಮೆದುಳಿನ ಮೂಲ ಬಂಡವಾಳವನ್ನು ಅವಲಂಬಿಸಿರುತ್ತದೆ. ಆದ್ದರಿಂದಲೇ ಒಂದೇ ರೀತಿಯ ವಾತಾವರಣ, ಒಂದೇ ತೆರನಾದ ಶಿಕ್ಷಣಗಳಿದ್ದರೂ ಸಾಧನೆಯ ಮಟ್ಟ ಒಂದು ಮಗುವಿನಂತೆ

ಮತ್ತೊಂದರದ್ದಿರುವುದಿಲ್ಲ, ಕೆಟ್ಟ ಪರಿಸರದ ಹಾಗೂ ಒಳ್ಳೆಯ ವಾತಾವರಣದ ಪ್ರಭಾವ ಮಕ್ಕಳ ಮೇಲೆ ಭಿನ್ನ - ಭಿನ್ನವಾದ ಪರಿಣಾಮ ಬೀರಬಹುದು. ಆದರೆ ಮಗು ಪರಿಸರದ ಪ್ರಭಾವಕ್ಕೆ ಒಳಗಾಗುವುದು ಮಾತ್ರ ಸಹಜ ಸತ್ಯ.

ಹಿಂದಿನ ಪೀಳಿಗೆಯ ಅನೇಕ ಮಕ್ಕಳು, ಹಳ್ಳಿಯಿಂದ ಬಂದರೂ, ಬಡತನದಲ್ಲಿ ಹುಟ್ಟಿದ್ದರೂ, ಬುದ್ಧಿ ವಿಕಾಸಕ್ಕೆ ಹೆಚ್ಚು ಸೌಲಭ್ಯವಿಲ್ಲದ ಕುಟುಂಬದಲ್ಲಿ ಹುಟ್ಟಿ ಬೆಳೆದು ಬಂದರೂ ಸಹ ಶಿಕ್ಷಣ ಕ್ಷೇತ್ರದಲ್ಲಿ ಉನ್ನತ ಸಾಧನೆ ಮಾಡಿರುವ, ಉಚ್ಚಮಟ್ಟ ಮುಟ್ಟಿರುವ ಅನೇಕ ಉದಾಹರಣೆಗಳನ್ನು ಕೇಳಿದ್ದೇವೆ, ಕಂಡಿದ್ದೇವೆ, ಅಂತಹ ಉತ್ತಮೋತ್ತಮ ಕೆಲವು ಉದಾಹರಣೆಗಳೆಂದರೆ, ಸರ್, ಎಂ.ವಿ. ಯವರು, ಭಾರತರತ್ನ ಸರ್ವಪಲ್ಲಿಯವರು, ಪದ್ಮವಿಭೂಷಣ ಪ್ರಶಸ್ತಿಯನ್ನು ಪಡೆದ ಪಾವಟೆಯವರು, ಡಾ: ಆರ್.ಸಿ. ಹಿರೇಮಠರು, ಹೀಗೆಯೇ ವಿವಿಧ ಕ್ಷೇತ್ರಗಳಲ್ಲಿ ಅನೇಕ ಜನರು ಸಾಧನೆಗೈದ ಸಾವಿರಾರು ನಿದರ್ಶನಗಳಿವೆ. ಆದರೆ, ಈಚೀಚೆಗೆ ಮಕ್ಕಳ ಪ್ರಗತಿ ಅಷ್ಟಾಗಿ ಕಂಡುಬರುತ್ತಿಲ್ಲ. ಅದಕ್ಕೆ ಕಾರಣವೇನಿರಬಹುದೆಂದು ವಿವೇಚಿಸಿದರೆ ಅನೇಕ ಅಂಶಗಳು ಗೋಚರಿಸುವುವು. ಮಕ್ಕಳ ಸರ್ವತೋಮುಖವಾದ ಬೆಳವಣಿಗೆಗೆ ಮುಖ್ಯ ಪಾತ್ರಧಾರಿಗಳು ಮನೆಯಲ್ಲಿ ತಂದೆ - ತಾಯಿಯರು, ಶಾಲೆಯಲ್ಲಿ ಉಪಾಧ್ಯಾಯರು, ಮಕ್ಕಳಿಗೆ ಎರಡೂ ಕಡೆಯಿಂದಲೂ ಯೋಗ್ಯ ಮಾರ್ಗದರ್ಶನ ದೊರೆಯುವಂತಿದ್ದರೆ ಅತ್ಯುತ್ತಮ. ಹಾಗಿಲ್ಲದಿದ್ದರೆ ಒಂದು ಕಡೆಯಿಂದಲಾದರೂ ದೊರೆತರೆ ಎಷ್ಟೋ ವಾಸಿ. ಎರಡೂ ಅಷ್ಟಕ್ಕೆ ಇದ್ದರೆ ಮಾತ್ರ ಮಕ್ಕಳು ಹುಟ್ಟಿನಿಂದ ಜಾಣರಿದ್ದರೂ ಬರುಬರುತ್ತಾ ದಡ್ಡರಾಗುತ್ತಾರೆ.

ನಮ್ಮ ಭಾರತದಲ್ಲಿ ಬಹುತೇಕ ಮನೆಗಳಲ್ಲಿ ತಂದೆ ತಾಯಿಯರು ಅನಕ್ಷರಸ್ಥರಾದ ಕಾರಣ, ಮಕ್ಕಳನ್ನು ಹೇಗೆ ಬೆಳೆಸಬೇಕೆಂಬ ಅನುಭವ ತಿಳಿವಳಿಕೆ ಇಲ್ಲದಕಾರಣ ಅವಶ್ಯಕವಾದ ರೀತಿಯಲ್ಲಿ ಮಕ್ಕಳನ್ನು ಬೆಳೆಸಲು ಸಾಧ್ಯವಿಲ್ಲದವರಾಗಿದ್ದಾರೆ. ಆದ್ದರಿಂದ ಮಕ್ಕಳ ಉತ್ತಮ ಬೆಳವಣಿಗೆಗೆ ಶಾಲೆಯನ್ನೇ ಅವಲಂಬಿಸಬೇಕಾಗುತ್ತದೆ. ಹಿಂದೆ ಶಾಲೆಗಳ ಸಂಖ್ಯೆ ಹೆಚ್ಚಿರಲಿಲ್ಲ. ಆದರೆ ಉಪಾಧ್ಯಾಯ ವೃತ್ತಿಯಲ್ಲಿ ತೊಡಗುತ್ತಿದ್ದವರು ಸಾಮಾನ್ಯವಾಗಿ, ಉತ್ತಮ ಮಾರ್ಗದರ್ಶನ ನೀಡಬಲ್ಲವರೂ, ಉನ್ನತ ಧ್ಯೇಯವಾದಿಗಳ ಕೈಯಲ್ಲಿ ಪಳಗಿದವರೂ ಆಗಿದ್ದರು. ವಿದ್ಯಾರ್ಥಿಗಳಲ್ಲಿ ತಾರತಮ್ಯ ಮಾಡದೆ ಅವರನ್ನು ತಮ್ಮ ಮಕ್ಕಳಂತೆ ಕಾಣುವ ಮನೋಭಾವವಿರುತ್ತಿತ್ತು. ಅವರಿಗೆ ಹೆಚ್ಚಾಗಿ ಜಾತಿ ,ಭಾಷೆ ಮೊದಲಾದ ಯಾವ ಭೇದಭಾವವೂ ಇಲ್ಲದೆ ಸದ್ಗುಣ ಹಾಗೂ ಬುದ್ಧಿವಂತನಾ(ಳಾ)ದ ವಿದ್ಯಾರ್ಥಿಗೆ ಎಲ್ಲರೀತಿಯ ಪ್ರೋತ್ಸಾಹ ಕೊಟ್ಟು ಮುಂದೆ ತರುತ್ತಿದ್ದರು, ಉತ್ತಮ ಗುಣವುಳ್ಳವರು ಆದರಿಸಲ್ಪಡುತ್ತಿದ್ದುದರಿಂದ ಪ್ರತಿಯೊಬ್ಬ ವಿದ್ಯಾರ್ಥಿಯೂ ಗುಣವಂತನಾಗಬೇಕೆಂದು ಪ್ರಯತ್ನಿಸುತ್ತಿದ್ದನು. ಪರಿಶ್ರಮಕ್ಕೆ ತಕ್ಕ

ಫಲ ದೊರೆಯುತ್ತಿದ್ದುದರಿಂದ ಹೆಚ್ಚು ಹೆಚ್ಚು ಸಾಧನೆ ಮಾಡಲು, ತಮ್ಮ ಗುರುಗಳ ಮೆಚ್ಚುಗೆ ಪಡೆಯಲು ಶ್ರಮಿಸುತ್ತಿದ್ದರು, ಮೇಲಾಗಿ ಉಪಾಧ್ಯಾಯರ ಜೀವನ ನಡೆ, ನುಡಿ, ರೀತಿ ನೀತಿಗಳೇ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡುವಂತಿದ್ದುದರಿಂದ ಚಿಕ್ಕವಯಸ್ಸಿನಲ್ಲಿ ಬೆಳೆಸಿಕೊಳ್ಳಬೇಕಾದ ಉತ್ತಮ ಸ್ವಭಾವಗಳು ಹೆಚ್ಚಿನ ಪ್ರಯತ್ನವಿಲ್ಲದೆ ಸ್ವಭಾವತಃ ಬೆಳೆದು ಬಂದುಬಿಡುತ್ತಿದ್ದವು, ಭಾಷೆಯ ಸರಿಯಾದ ಉಚ್ಚಾರ, ಪ್ರಯೋಗ ಮುಂತಾದ ಬುನಾದಿಯ ಕಲಿಕೆಗಳು ಉಪಾಧ್ಯಾಯರುಗಳ ಪ್ರಭಾವದಿಂದಾಗಿ ಹೆಚ್ಚು ಶ್ರಮವಿಲ್ಲದೆ ಸಹಜವಾಗಿ ಬಾಲ್ಯದಲ್ಲಿಯೇ ಮಕ್ಕಳು ಕಲಿತುಬಿಡುತ್ತಿದ್ದರು, ಮೇಲಾಗಿ ಈಗಿನಂತೆ ಎಲ್ಲರೂ ಶಾಲೆಗೆ ಹೋಗುತ್ತಿರಲಿಲ್ಲ. ಯಾರಿಗೆ ಓದಿನ ಬಗ್ಗೆ ದಾಹವಿರುತ್ತಿತ್ತೋ, ಯಾರಿಗೆ ಈ ದಿಶೆಯಲ್ಲಿ ಮುಂದುವರಿಯಲು ಉತ್ಕಟೇಚ್ಛೆ ಇರುತ್ತಿತ್ತೋ, ಯಾರಿಗೆ ಓದೇ ಜೀವನದ ಗುರಿಯಾಗಿತ್ತೋ ಅವರು ಮಾತ್ರ ಶಿಕ್ಷಣಾರ್ಥಿಗಳಾಗುತ್ತಿದ್ದರು. ಆದ್ದರಿಂದ ಶ್ರದ್ಧೆಯಿಂದ ಅಭ್ಯಾಸ ಮಾಡುತ್ತಿದ್ದರು. ಈ ಕಾರಣದಿಂದ ವಿದ್ಯೆ ಕಲಿಯುವವರಿಗಾಗಲೀ, ಕಲಿಸುವವರಿಗಾಗಲೀ ತ್ರಾಸದಾಯಕವಾಗುತ್ತಿರಲಿಲ್ಲ. ಭದ್ರವಾದ ಬುನಾದಿಯ ಮೇಲೆ ಕುಶಲ ಕಲೆಗಾರನೂ, ಬಲವಾದ ಬಂಡವಾಳಗಾರನೂ ಬೇಕಾದಂತಹ ಭವ್ಯ ಭವನ ನಿರ್ಮಿಸಬಹುದಾದಂತೆ, ಇಂತಹ ಬುನಾದಿಯುಳ್ಳ ವಿದ್ಯಾರ್ಥಿಗಳಿಗೆ ಉತ್ತಮ ಶಿಕ್ಷಕರು ವಿದ್ಯಾರ್ಥಿಗಳ ಮೂಲ ಬಂಡವಾಳಕ್ಕನುಗುಣವಾಗಿ ಶಿಕ್ಷಣವಿತ್ತು ಮುಂದೆ ತರುತ್ತಿದ್ದರು.

ಆದರೆ ಈಚೆಗೆ ಆಗಿರುವುದೇನು, ? ಪ್ರಜಾಪ್ರಭುತ್ವದಲ್ಲಿ ಎಲ್ಲರಿಗೂ ಸಮಾನಾವಕಾಶವಿರಬೇಕು. ಎಲ್ಲರೂ ವಿದ್ಯಾವಂತರಾಗಬೇಕಾದುದೂ ಅವಶ್ಯಕ. ಆದ್ದರಿಂದ ಕಡ್ಡಾಯ ಶಿಕ್ಷಣ ಅನಿವಾರ್ಯವಾಯಿತು. ಕಡ್ಡಾಯ ಶಿಕ್ಷಣದೊಂದಿಗೆ ವಿದ್ಯಾಸಂಸ್ಥೆಗಳ ಸಂಖ್ಯೆಯೂ ಬೆಳೆಯಿತು. ಓದನ್ನು ಕಡ್ಡಾಯ ಮಾಡಿದ ಮೇಲೆ ಓದಿನ ಸೌಲಭ್ಯ ಒದಗಿಸುವುದೂ ಕರ್ತವ್ಯವಾಗುತ್ತದೆ. ಇಲ್ಲದಿದ್ದಲ್ಲಿ ಯಾವುದೋ ಊರಲ್ಲಿರುವ ಶಾಲೆಗೆ ಮೂಲೆ – ಮೂಲೆಯಲ್ಲಿರುವ ಹಳ್ಳಿಗರು ತಮ್ಮ ಮಕ್ಕಳನ್ನು ಎಷ್ಟೇ ಬಡತನವಿದ್ದರೂ ಖರ್ಚು ಮಾಡಿ ಪರಊರಿಗೆ ಕಳಿಸಿ ವಿದ್ಯೆ ಕಲಿಸಲು ಸಾಧ್ಯವೇ? ಎಲ್ಲರಿಗೂ ಕೈಗೆಟುಕುವ ರೀತಿಯಲ್ಲಿ ವಿದ್ಯೆಗೆ ಅವಕಾಶವನ್ನೊದಗಿಸುವುದು ಕಡ್ಡಾಯ ಮಾಡಿದವರ ಕರ್ತವ್ಯವಾಗುತ್ತದೆ. ಅದಕ್ಕಾಗಿ ಹಳ್ಳಿ – ಹಳ್ಳಿಗೂ ಶಾಲೆ ! ಮನೆ – ಮನೆಯ ಮಕ್ಕಳಿಗೂ ಶಾಲೆ ! ಶಾಲೆಯ ಮತ್ತು ಕಲಿಯುವ ಮಕ್ಕಳ ಸಂಖ್ಯೆ ಬೆಳೆದಂತೆ ಶಿಕ್ಷಕರ ಸಂಖ್ಯೆಯೂ ಬೆಳೆಯಬೇಕಷ್ಟೆ. ಮುಖ್ಯವಾಗಿ ಪ್ರಾಥಮಿಕ ಹಾಗೂ ಅದರ ಪೂರ್ವದ ಶಿಕ್ಷಣ, ಮಕ್ಕಳಿಗೆ ಬುನಾದಿ ಇದ್ದಂತೆ. ಈ ಶಿಕ್ಷಣ ಅತಿ ಮಹತ್ವವಾದದ್ದು, ಆದ್ದರಿಂದ ಶಿಕ್ಷಣದ ರೀತಿ, ಸೌಲಭ್ಯ, ಶಿಕ್ಷಕರ ಮಟ್ಟ, ನಡೆ – ನುಡಿತಕ್ಕದಾಗಿರಬೇಕು. ಇಲ್ಲಿ ಅವ್ಯವಸ್ಥೆಯಾದರೆ ಅವರ ಮುಂದಿನ ಪ್ರಗತಿ ಅವ್ಯವಸ್ಥೆಯಾದಂತೆ, ಮೂಲವನ್ನೇ ಸಮೂಲ ನಾಶಮಾಡಿ, ಅಭದ್ರಗೊಳಿಸಿ ಮುಂದೆ

ಅವರಿಗೆ ಸಾಧ್ಯವಾಗದುದನ್ನು ಸಾಧ್ಯವಾಗಿಸಿಕೊಳ್ಳಲು, ಅರಗಿಸಿಕೊಳ್ಳಲಾಗದುದನ್ನು ಅರಗಿಸಿಕೊಳ್ಳಲು ಒತ್ತಾಯಿಸಿದರೆ, ಆ ಮಕ್ಕಳಿಗೆ ಅಜೀರ್ಣವಾಗದೆ? ಅವರು ರೋಗರುಜಿನಗಳಿಗೆ ಗುರಿಯಾಗಲಾರರೆ? ಅವರಲ್ಲಿರುವ ರೋಗಾಣುಗಳು ಒಬ್ಬರಿಂದೊಬ್ಬರಿಗೆ ಪಸರಿಸಿ ಇಡೀ ಸಮಾಜವನ್ನು ವ್ಯಾಪಿಸಲಾರವೆ? ಪ್ರಾರಂಭದಲ್ಲಿ ಮೂಲ ಶಿಕ್ಷಣ ಸರಿಯಾಗಿಲ್ಲದಿದಲ್ಲಿ ಮುಂದಿನ ವಿದ್ಯಾಭ್ಯಾಸ ಮಾಡಿಸುವವರು ಎಷ್ಟೇ ನಿಪುಣರಿದ್ದರೂ ಧ್ಯೇಯವಾದಿಗಳಿದ್ದರೂ ಅದು ಬಂಡೆಯ ಮೇಲೆ ಸುರಿಯುವ ಮಳೆಯಂತೆ ನಿಷ್ಪ್ರಯೋಜಕವಾಗುತ್ತದೆ.

ಆದ್ದರಿಂದ ಪ್ರಾಥಮಿಕ ಮಟ್ಟದ ಶಿಕ್ಷಣ ಅವಕಾಶ, ಸೌಲಭ್ಯ ಮತ್ತು ಶಿಕ್ಷಕರು ಸಮರ್ಪಕ ರೀತಿಯಲ್ಲಿರಬೇಕು. ಈಗ ಹಾಗಿಲ್ಲದುದೇ ಈಗಿನ ಶಿಕ್ಷಣ ಮಟ್ಟ ಕಡಿಮೆಯಾಗಿದೆಯೆಂದು ಭಾವಿಸಲು, ಮಕ್ಕಳ ಮೂಲ ಬೌದ್ಧಿಕ ಮಟ್ಟ ಹೆಚ್ಚಾಗಿ ಇದ್ದರೂ ಅದರ ಸದುಪಯೋಗವಾಗದಿರಲು, ಶಿಕ್ಷಣ ಪಡೆದರೂ ಕೆಲ ಬುದ್ಧಿವಂತ ಮಕ್ಕಳು ಹಿಂದುಳಿಯಲು, ದಡ್ಡರಾಗಲು ಕಾರಣವಾಗಿದೆ. ಶಿಕ್ಷಣಕ್ಕೆ ಅವಶ್ಯಕತೆಗನುಗುಣವಾಗಿ ಸೌಲಭ್ಯ ಮಾಡಿಕೊಡಲು ಸಾಕಷ್ಟು ಹಣ ಒದಗಿಸುವುದು ಸಾಧ್ಯ.

ಈ ಕಡೆ ಹಣದ ಕೊರತೆಯಾದರೆ ಆ ಕಡೆ ಕಲಿಯುವವರ ಸಂಖ್ಯೆ ದಿನ - ದಿನಕ್ಕೂ ಬೆಳೆಯುತ್ತಿದೆ. ಎಲ್ಲ ರೀತಿಯ ಮನೆಗಳಿಂದಲೂ ವಿದ್ಯಾರ್ಥಿಗಳು ಶಾಲೆಗೆ ಬರತೊಡಗಿದ್ದಾರೆ. ಸುಸಂಸ್ಕೃತ ಹಾಗೂ ಸುಶಿಕ್ಷಿತ ತಂದೆ ತಾಯಿಗಳನ್ನು ಪಡೆದವರೂ ಪಡೆಯದಿದ್ದವರೂ, ಮನೆಯಲ್ಲಿ ಬೌದ್ಧಿಕ ಪರಿಸರ ಉಳ್ಳವರು ಇಲ್ಲದವರೂ, ಬುದ್ಧಿವಂತರೂ ಬುದ್ಧಿ ಚುರುಕಿಲ್ಲದವರು, ಕಲಿಯಲು ಸೌಲಭ್ಯ ಇದ್ದವರೂ ಇಲ್ಲದವರೂ ಎಲ್ಲರೂ ಒಂದೇ ಶಾಲೆಗೆ ಬರುತ್ತಾರೆ. ಎಲ್ಲರಿಗೂ ಒಂದೇ ತೆರವಾದ ಶಿಕ್ಷಣ ಹಾಗೂ ಶಿಕ್ಷಣ ಸೌಲಭ್ಯ, ಅವರವರ ಅಭಿರುಚಿಗೆ ಹಾಗೂ ಬುದ್ಧಿಶಕ್ತಿಗೆ ತಕ್ಕಂತೆ ಶಿಕ್ಷಣ ನೀಡುವುದು ಹಣದ ಅಭಾವದ ಜೊತೆಗೆ ಇನ್ನೂ ಅನೇಕ ಕಾರಣಗಳಿಂದಾಗಿ ಅಸಾಧ್ಯ.

ಇಂತಹ ಪರಿಸ್ಥಿತಿಯಲ್ಲಿ ಸಾಧಾರಣ ಬುದ್ಧಿಶಕ್ತಿಯುಳ್ಳ ಮಕ್ಕಳೂ ನಡೆಯಬೇಕಾಗಿ ಅವರ ಬೌದ್ಧಿಕ ಬೆಳವಣಿಗೆ ಕುಂಠಿತವಾಗುವ ಸಂಭವವೂ, ಜಾಣರ ವೇಗದಲ್ಲಿ ದಡ್ಡರೂ ಓದಬೇಕಾಗಿ, ಅವರುಗಳೂ ಓದಿನ ಬಗ್ಗೆ ಉತ್ಸಾಹಹೀನರಾಗುವ, ನಿರಾಶರಾಗುವ ಪರಿಸ್ಥಿತಿ ಅನಿವಾರ್ಯ, ಇದರ ಜೊತೆಗೆ ಶಿಕ್ಷಣ ನೀಡುವವರ ಪರಿಸ್ಥಿತಿಯನ್ನೂ ವಿಶ್ಲೇಷಿಸಬೇಕು. ಏಕೆಂದರೆ ಇವರ ವ್ಯಕ್ತಿತ್ವದ ಪ್ರಭಾವ ಮಕ್ಕಳ ಬೆಳವಣಿಗೆಯ ಮೇಲೆ ಮಹತ್ವಪೂರ್ಣವಾದ ಪರಿಣಾಮ ಬೀರುತ್ತದೆ. ಆದುದರಿಂದ ಇರುವ ತಮ್ಮ ಕೆಲಸದಲ್ಲಿ ದಕ್ಷರೂ, ಮಾರ್ಗದರ್ಶನ ನೀಡಬಲ್ಲ ವ್ಯಕ್ತಿತ್ವ ಉಳ್ಳವರೂ

ಆಗಿರುವುದು ಅವಶ್ಯಕ. ಮೊದಲು ಶಿಕ್ಷಕರ ವೃತ್ತಿಗೆ ತೊಡಗುತ್ತಿದ್ದ ಬಹುಪಾಲು ಜನ ಶುದ್ಧಾಚರಣೆ ಉಳ್ಳವರೂ ಕರ್ತವ್ಯವನ್ನು ದಕ್ಷತೆಯಿಂದ ನಿರ್ವಹಿಸಬಲ್ಲವರೂ ಆಗಿರುತ್ತಿದ್ದರು. ಈಗಿನ ಪರಿಸ್ಥಿತಿಯಲ್ಲಿ ತಮ್ಮ ವಿದ್ಯಾರ್ಥಿಗಳು ಯಾರು ಯಾರು ಎಂಬುದನ್ನು ಗುರುತಿಸುವುದೂ ಕಷ್ಟಸಾಧ್ಯವಾಗಿದೆ.

ಪ್ರೈಮರಿ ಹಂತದಲ್ಲಿ ಶಿಕ್ಷಕರಾಗುವವರು ಪದವೀಧರರಲ್ಲದವರು, ಪದವೀಧರರಾಗದೆ ಶಿಕ್ಷಣ ನಿಲ್ಲಿಸಿ ವೃತ್ತಿ ಕೈಗೊಳ್ಳುವವರು, ಪದವೀಧರರಾಗುವಷ್ಟು ಹಣದ ಸೌಲಭ್ಯವಾಗಲೀ, ಅನುಕೂಲವಾಗಲೀ ಇಲ್ಲದವರು, ಇಷ್ಟೇ ಸಾಲದೆಂಬಂತೆ ಪದವೀಧರರಲ್ಲದೆ ವೃತ್ತಿ ಕೈಗೊಳ್ಳುವವರು ಸಹ ಶಿಕ್ಷಣ ಕ್ಷೇತ್ರದಲ್ಲಿ ನೌಕರಿಗೆ ಬರುವ ಮೊದಲು ಹೆಚ್ಚು ಮಂದಿ ಉಳಿದ ಕ್ಷೇತ್ರಗಳಲ್ಲಿ ನೌಕರಿ ದೊರೆಯದಿದ್ದಾಗ ಅನ್ಯಮಾರ್ಗವಿಲ್ಲದೆ ಬಂದವರು, ಅವರಲ್ಲಿ ದಕ್ಷತೆ ಇದ್ದವರನ್ನೂ ಮಾತ್ರ ಆರಿಸಿಕೊಂಡು ಉಪಾಧ್ಯಾಯ ವೃತ್ತಿಗೆ ತೆಗೆದುಕೊಳ್ಳುವುದೊಳಿತೆಂದರೆ ಕಡ್ಡಾಯ ಶಿಕ್ಷಣ ಹಾಗೂ ಜನಸಂಖ್ಯೆಯ ಬೆಳವಣಿಗೆಯ ಕಾರಣ, ಶಾಲೆಗಳ ಸಂಖ್ಯೆಯೂ ಬೆಳೆದಿದೆ. ಶಾಲೆಗಳ ಸಂಖ್ಯೆಗನುಗುಣವಾಗಿ ಶಿಕ್ಷಕರ ಸಂಖ್ಯೆಯೂ ಬೆಳೆಯಬೇಕು. ಆದ್ದರಿಂದ ಬಂದವರೆನ್ನೆಲ್ಲಾ ಶಿಕ್ಷಕರನ್ನಾಗಿ ನೇಮಿಸಿಕೊಂಡರೂ ಅನೇಕ ಕಡೆ ಶಿಕ್ಷಕರ ಕೊರತೆ ಇರುವಾಗ,ಆರಿಸಿ ಶಿಕ್ಷಕರನ್ನು ನೇಮಿಸುವ ಪ್ರಶ್ನೆಯೇ ಬರುವುದಿಲ್ಲ. ಹೀಗಾಗಿ ಉನ್ನತ ಧ್ಯೇಯುವಾದಿಗಳಲ್ಲದವರೂ, ಉತ್ತಮ ಮಾರ್ಗದರ್ಶನದ ನಡೆನುಡಿಗಳಿಲ್ಲದವರೂ, ಭಾಷೆಯನ್ನೂ ಶುದ್ಧವಾಗಿ ಮಾತನಾಡಲು ಬಾರದ ಬಹಳಷ್ಟು ಮಂದಿ, ಶಿಕ್ಷಕ ವೃತ್ತಿಯನ್ನವಲಂಬಿಸಿರುವುದು ಅನೇಕರ ಅನುಭವಕ್ಕೆ ಬಂದ ಅಂಶವಾಗಿದೆ. ಮಕ್ಕಳು ತಮ್ಮ ಬಹುಪಾಲು ವೇಳೆಯನ್ನು ಶಾಲೆಯಲ್ಲಿ ಶಿಕ್ಷಕರೊಂದಿಗೇ ಕಳೆಯುವುದರಿಂದ ಅವರ ವ್ಯಕ್ತಿತ್ವದ ಪ್ರಭಾವ, ನಡೆ–ನುಡಿಯಿಂದ ಹಿಡಿದು ಎಲ್ಲಾ ರೀತಿಯಲ್ಲೂ ವಿಕಸಿಸಬೇಕಾದ ಮೊಗ್ಗೆಯಂತಿರುವ ಮಕ್ಕಳ ಮೇಲೆ ಆಗುತ್ತದೆ. ಹೀಗಿರುವಾಗ ಕಳ್ಳತನವೊಂದರ ಪ್ರಕರಣದಲ್ಲಿ, ಮೋಸ ಪ್ರಕರಣದಲ್ಲಿ, ಕೆಲವು ಶಾಲಾ ಶಿಕ್ಷಕರು ಶಾಮೀಲಾಗಿದ್ದ ಅನೇಕ ಘಟನೆಗಳನ್ನು ನೋಡಿದರೆ ಶಿಕ್ಷಕ ವೃತ್ತಿಗೆ ಎಲ್ಲಾ ರೀತಿಯ ಜನರೂ ಸೇರುವ ಅಂಶ ಕಂಡುಬರುತ್ತದೆ. ಇಂತಹವರಿಂದ ದೊರೆತ ಶಿಕ್ಷಣದಿಂದ ಮಕ್ಕಳ ಗತಿ ಏನಾಗಬಹುದು ಎಂದು ಭಯಪಡುವಂತಾಗಿದೆ, ಮತ್ತೆ ಕೆಲವರು 'ಅಕ್ಕಿ' ಅಣ್ಣು ತಿಂದು ಅರಿ ಓಯಿತು, ( ಹಕ್ಕಿ ಹಣ್ಣು ತಿಂದು ಹಾರಿ ಹೋಯಿತು ) ಎಂದು ಹೇಳುವವರಿದ್ದಾರೆ. ಇದನ್ನೇ ಮೇಲಿಂದ ಮೇಲೆ ಕೇಳಿ ಕಲಿತ ಮಕ್ಕಳ ಉಚ್ಚಾರ ಮುಂದೆ ಸರಿಯಾಗಬೇಕೆಂದರೆ ಹೇಗೆ ಸಾಧ್ಯ ? ಹೇಳಿಕೊಡುವವರ ಅಕ್ಷರಗಳೇ ಓದಲಾಗದಂತಿದ್ದರೆ ಅದನ್ನು ನೋಡಿ ಕಲಿಯುವ ಮಕ್ಕಳ ಅಕ್ಷರ ಮುದ್ದಾಗಿರಬೇಕೆಂದು ಬಯಸುವುದು ಈಚಲು ಬೀಜವನ್ನು ಬಿತ್ತಿ ಉತ್ತುತ್ತಿ ಹಣ್ಣನ್ನು ಅಪೇಕ್ಷಿಸಿದಂತಾಗುತ್ತದೆ. ಎಲ್ಲಾ ಉಪಾಧ್ಯಾಯರು

ಹೀಗಿರುತ್ತಾರೆಂದಲ್ಲ, ಅನೇಕ ಶಾಲೆಗಳಲ್ಲಿ ಬಹು ಮಂದಿ ಶಿಕ್ಷಕರು ಹೀಗಿರುವ ನಿದರ್ಶನಗಳು ಈಗೀಗ ಹೆಚ್ಚು ಕಂಡುಬರುತ್ತಿವೆ. ಪ್ರತಿಯೊಂದು ಹಳ್ಳಿಯಲ್ಲಿಯೂ ಶಾಲೆಗಳಿರುವುದರಿಂದ, ಹಳ್ಳಿಯ ಶಾಲೆಗಳಿಗೆ ಬಹುಮಂದಿ ಶಿಕ್ಷಕರು ಹೋಗಲು ಇಷ್ಟಪಡುವುದಿಲ್ಲವಾಗಿ, ಯಾರು ಅಲ್ಲಿಗೆ ಹೋಗಲು ಇಷ್ಟಪಡುತ್ತಾರೋ ಅಂತಹ ಶಿಕ್ಷಕರನ್ನೇ ನೇಮಿಸಬೇಕಾಗುತ್ತದೆ. ಅಲ್ಲಿ ದೊರೆಯುವ ಶಿಕ್ಷಣ ಹೇಗೆ ಇದ್ದರೂ, ಪೋಷಕರು ಅಲ್ಲಿಗೇ ಕಳುಹಿಸುತ್ತಾರೆಯೇ ಹೊರತು ಪ್ರೈಮರಿ ಶಿಕ್ಷಣಕ್ಕಾಗಿ ಬೇರೆ ಊರಿಗೆ ಕಳಿಸುವುದನ್ನು ನಿರೀಕ್ಷಿಸಲು ಅಸಾಧ್ಯ. ಹೀಗಾಗಿ ಸಣ್ಣ ಊರುಗಳಲ್ಲಿರುವ ಮಕ್ಕಳು ಉತ್ತಮ ಮಟ್ಟದ ಶಾಲೆಗಳನ್ನು ಕಾಣುವುದು ಅಸಾಧ್ಯವಾಗಿದೆ. ಅಡಿಪಾಯವೇ ಅಭದ್ರವಾಗುವುದರಿಂದ ಈಗೀಗ ಹಳ್ಳಿಯ ಮಕ್ಕಳು ಮೊದಲಿನಂತೆ ಉತ್ತಮ ಮಟ್ಟಕ್ಕೆ ಬರುವುದು ಅಪರೂಪವಾಗುತ್ತಿದೆ. ಮೊದಲು ಎಲ್ಲಾ ಊರುಗಳಲ್ಲೂ ಶಾಲೆ ಇಲ್ಲದ ಕಾರಣ ಓದಲು ಇಚ್ಛೆಯುಳ್ಳ ಮಕ್ಕಳು ಶಾಲೆ ಇದ್ದ ಊರುಗಳಿಗೆ ಹೋಗಬೇಕಾಗುತ್ತಿತ್ತು. ಆಗ ಶಾಲೆಗಳು ಕೆಲವೇ ಇದ್ದರೂ ಬಹು ಶಾಲೆಗಳು ಸಮರ್ಪಕ ರೀತಿಯಿಂದ ಕೆಲಸ ಮಾಡುತ್ತಿದ್ದವು, ಆದುದರಿಂದ ಮಕ್ಕಳು ಬುದ್ಧಿ ಶಕ್ತಿಗೆ ತಕ್ಕ ಪ್ರಗತಿಯನ್ನು ಪಡೆಯಲು ಸಾಧ್ಯವಾಗಿತ್ತು. ಈಗ ಅಸಮರ್ಪಕವಾಗಿ ಕೆಲಸ ಮಾಡುವ ಶಾಲೆಗಳಿಂದಾಗಿ ಜಾಣ ಮಕ್ಕಳು ದಡ್ಡರಾಗಿರುವ ಅನೇಕ ಉದಾಹರಣೆಗಳಿವೆ.

ಮನೆಯಲ್ಲಿ ಸರಿಯಾದ ಮಾರ್ಗದರ್ಶನ ನೀಡಬಹುದಾದ ತಂದೆ ತಾಯಿಗಳು ನಮ್ಮ ದೇಶದಲ್ಲಿ ಬಹು ಕಡಿಮೆ, ಇದ್ದ ಕೆಲವರಿಗೆ ಗಮನ ಕೊಡಲು ಸಾಕಷ್ಟು ವೇಳೆ ಇಲ್ಲದಿರಬಹುದು. ಮತ್ತೆ ಕೆಲವರು ಹೇಗೂ ಶಾಲೆಗೆ ಕಳುಹಿಸುತ್ತಿದ್ದೇವಲ್ಲ ಎಂದು ನಿಶ್ಚಿಂತರಾಗಿರಬಹುದು, ಹೀಗಾಗಿ, ಬುನಾದಿ ಬೀಳಬೇಕಾದ ವಯಸ್ಸಿನಲ್ಲಿ ಮಕ್ಕಳಿಗೆ ಸರಿಯಾದ ಮಾರ್ಗದರ್ಶನ ಮನೆಯಲ್ಲೂ ಇಲ್ಲ, ಶಾಲೆಯಲ್ಲೂ ಇಲ್ಲ ಎಂಬಂತಾಗಿದೆ. ಅಂತಹ ಮಕ್ಕಳು ಮುಂದೆ ಎಂಥ ದಕ್ಷ ಶಿಕ್ಷಕರಲ್ಲಿ ಕಲಿತರೂ ನಿರೀಕ್ಷಿತ ಮಟ್ಟ ಮುಟ್ಟುವುದು ಅಸಂಭವ. ಹೀಗೆ ಸಾಮಾನ್ಯ ಮಟ್ಟವೇ ಕೆಳಮಟ್ಟಕ್ಕೆ ಇಳಿದಾಗ ಇದ್ದುದರಲ್ಲಿಯೇ ಉತ್ತಮರಾದವರು ತೇರ್ಗಡೆಯಾಗುತ್ತಾರೆ; ಅನಂತರ ವಿವಿಧ ಕ್ಷೇತ್ರಗಳಲ್ಲಿ ಕಾರ್ಯ ನಿರತರಾಗುತ್ತಾರೆ. ಅವರುಗಳೇ ಶಿಕ್ಷಣ ಕ್ಷೇತ್ರದ ವಿವಿಧ ಹಂತಗಳಲ್ಲಿಯೂ ಕಾಲಿಡುತ್ತಾರೆ. ಅಂಥವರಿಂದ ಶಿಕ್ಷಣ ಪಡೆದ ಪೀಳಿಗೆಯ ಬಹುಮಂದಿ ತಮ್ಮ ಹಿಂದಿನ ಪೀಳಿಗೆಯವರಿಗಿಂತ ದಕ್ಷತೆಯಲ್ಲಿ ಕಡಿಮೆಸ್ಥಾನ ಪಡೆಯುತ್ತಾರೆ. ಕೆಲಸದ ಮಟ್ಟವನ್ನು ಉತ್ತಮಗೊಳಿಸುವ ಸಲುವಾಗಿ ಶೈಕ್ಷಣಿಕ ಸಾಧನೆ ಉನ್ನತ ಮಟ್ಟವಿರಬೇಕೆಂಬ ನಿಯಮವಿರುವುದರಿಂದ, ಈ ಮಟ್ಟವನ್ನು ಪಡೆಯಲು ಸ್ವಶಕ್ತಿಯಿಂದ ಅಸಾಧ್ಯವಾದಾಗ ಅನಪೇಕ್ಷಿತ ಮಾರ್ಗಗಳಿಂದ ಪಡೆಯುವ ಪ್ರಯತ್ನಗಳೂ ತಲೆದೋರುತ್ತಿವೆ. ಈ ಮಾರ್ಗಗಳಿಂದ ಕೆಲವರು ಸುಲಲಿತವಾಗಿ

ಉತ್ತಮ ಫಲ ಪಡೆದಾಗ, ಕುಮಾರ್ಗದಲ್ಲಿ ತೊಡಗಬಾರದೆಂಬ ಆದರ್ಶಗಳನ್ನಿಟ್ಟುಕೊಂಡು ಉತ್ತಮ ಪರಿಸರದಲ್ಲಿ ಬೆಳೆದು ಬಂದವರೂ ಸಹ ಅಂಥ ಕುಮಾರ್ಗ ಅನುಸರಿಸಿ ಆಸೆಗೆ ಬಲಿಯಾದರೆ ಆಶ್ಚರ್ಯವೇನಲ್ಲ. ಕೆಲವರು ಆಸೆಗೆ ಒಳಗಾಗದಿದ್ದರೂ ಮಾನಸಿಕ ಹೋರಾಟದಿಂದ ಜರ್ಝರಿತರಾಗಿ ಅವರ ಉತ್ಸಾಹ, ಶಕ್ತಿ ಕುಂದಿ, ದಕ್ಷತೆ ಕಡಿಮೆಯಾಗುವ ಸಾಧ್ಯತೆ ಇದೆ.

ಹೀಗೆ ಎಲ್ಲಾ ರೀತಿಯಿಂದಲೂ ದಕ್ಷತೆ ಕುಂದಿ, ಉತ್ತಮ ಸಾಮಾಜಿಕ ಮೌಲ್ಯಗಳು ಮರೆಯಾಗಬಹುದಾದ ಪರಿಸ್ಥಿತಿಗಳೇ ಹೆಚ್ಚಾಗಿ, ಪೀಳಿಗೆಯಿಂದ ಪೀಳಿಗೆ ಹಿನ್ನಡೆಯುತ್ತಿರುವುದಕ್ಕೆ ಕಾರಣವಾಗಿದೆ. ಒಳ್ಳೆಯ ಪರಿಸರ, ಸರಿಯಾದ ಮಾರ್ಗದರ್ಶನ ಬುದ್ಧಿವಂತ ಪಾಲಕರು ಹಾಗೂ ಸೌಲಭ್ಯಗಳನ್ನು ಪಡೆದಿರುವ ಕೆಲವು ಮಕ್ಕಳು ಅತ್ಯುತ್ತಮ ಶೈಕ್ಷಣಿಕ ಸಂಸ್ಥೆಗಳಲ್ಲಿ ವಿದ್ಯೆ ಪಡೆದು ಮಹೋನ್ನತಿಯನ್ನು ಪಡೆದ ಉದಾಹರಣೆಗಳು ಈಗ ಮೊದಲಿಗಿಂತ ಹೆಚ್ಚಾಗಿವೆ, ಆದರೆ ಈ ಸಂಖ್ಯೆ ಹಿನ್ನಡೆಯುತ್ತಿರುವ ಸಂಖ್ಯೆಗೆ ಹೋಲಿಸಿದರೆ ಅತ್ಯಲ್ಪ. ಇದನ್ನು ಸರಿಪಡಿಸಬೇಕೆಂಬ ಹಂಬಲ ಪ್ರತಿಯೊಬ್ಬರದಾಗಿದ್ದರೂ, ಈಗ ಪರಿಸ್ಥಿತಿಯನ್ನು ಹದಕ್ಕೆ ತರಲು ಅಸಾಧ್ಯವೇನೋ ಎಂಬಷ್ಟು ಮುಂದೆ ಹೋಗಿ, ಈಗ ' ಇರುವಂತೆಯೇ ಬಿಡುವುದೂ ಕಷ್ಟ, ಬದಲಾವಣೆ ಮಾಡುವುದೂ ಅಸಾಧ್ಯ' ಎನ್ನುವ ಸ್ಥಿತಿ ಕಾಣುತ್ತಿದೆ. ಇನ್ನೂ ಅನೇಕ ಮಂದಿ ದಕ್ಷರನ್ನು ಸಮಾಜಕ್ಕೆ ಒದಗಿಸಿದ ನಂತರ ಕಡ್ಡಾಯ ಶಿಕ್ಷಣ ಜಾರಿಗೆ ತಂದಿದ್ದರೆ ಒಳಿತಾಗುತ್ತಿತ್ತೇನೊ ಎನ್ನುವ ಮಾತಿನಲ್ಲಿ ಹುರುಳಿಲ್ಲವೆನ್ನುವಂತಿಲ್ಲ. ಆದರೆ ಇಷ್ಟು ಮುಂದುವರಿದ ಮೇಲೆ ಆ ಬಗ್ಗೆ ಚಿಂತಿಸಿಯೂ ಉಪಯೋಗವಿಲ್ಲ. ಆದರೆ ಇನ್ನಾದರೂ ಸಂಖ್ಯೆಗಿಂತ ಮಿಗಿಲಾಗಿ ದಕ್ಷತೆಯ ಕಡೆಗೆ ಎಲ್ಲರ ದೃಷ್ಟಿಹರಿಯಬೇಕಾಗಿದೆ, ಎಲ್ಲದಕ್ಕೂ ಸರಕಾರವನ್ನೇ ಅವಲಂಬಿಸಿ ತಮ್ಮ ಜವಾಬ್ದಾರಿ ಏನೂ ಇಲ್ಲವೆಂಬುಂತೆ ಪ್ರಜಾಸರ್ಕಾರದ ಜನರು ಕೈಕಟ್ಟಿ ಕುಳಿತುಕೊಳ್ಳಲಾಗದು. ಆದ್ದರಿಂದ ಶಿಕ್ಷಕರೂ ಪೋಷಕರೂ ಸಂಘ ಸಂಸ್ಥೆಗಳೂ ಆಡಳಿತಗಾರರೂ ಎಲ್ಲರೂ ಶಿಕ್ಷಣದ ಮಟ್ಟ ಎಲ್ಲ ರೀತಿಯಿಂದ ಉತ್ತಮಗೊಳ್ಳಲು ಪ್ರಯತಿಸಬೇಕು, ಜನಜಾಗೃತಿಯಿಂದ ಪರಿಸ್ಥಿತಿ ಉತ್ತಮಗೊಳ್ಳಲು ಶಕ್ಯವಿದೆ, ಪ್ರಜಾಪ್ರಭುತ್ವದಲ್ಲಿ ಪ್ರತಿಯೊಬ್ಬ ಪ್ರಜೆಯೂ ಹೊಣೆಯರಿತು ನಡೆಯದ ಹೊರತು ಯಾವುದೂ ಸಾಧನೆಯಾಗುವುದಿಲ್ಲ. ಎಲ್ಲರೂ ಹೊಣೆಯರಿತು ನಡೆಯುವುದು ಸಾಧ್ಯವಾದರೆ ಸಮಸ್ಯೆಗಳನ್ನು ಸುಲಭವಾಗಿ ಬಗೆಹರಿಸಬಹುದು.

■

## ೧೫. ಬಾಲಾಪರಾಧ – ಒಂದು ಆಧುನಿಕ ವಿವೇಚನೆ

ಅನುವಾದ

ಪಟ್ಟಣಗಳು ಬೆಳೆ – ಬೆಳೆದಂತೆ ನಾಗರಿಕ ಜೀವನ ಜಟಿಲವಾಗುವಂತೆ ಬಾಲಾಪರಾಧಗಳು, ದುಷ್ಕೃತ್ಯಗಳು, ಮಾನಸಿಕ ಅಸ್ವಾಸ್ಥತೆ ಮುಂತಾದ ಸಮಸ್ಯೆಗಳು ಉದ್ಭವಿಸುತ್ತವೆ. ನಿಕಟ ಸಂಪರ್ಕವುಳ್ಳ ಹಳ್ಳಿಗಳಲ್ಲಿ ಪರಿಮಿತ ಜನಸಮುದಾಯದಲ್ಲಿ ಅಪರಾಧ ಮತ್ತು ಮಾನಸಿಕ ಅಸ್ವಾಸ್ಥತೆಯ ಸಮಸ್ಯೆಗಳು ಹೆಚ್ಚಾಗಿ ಇರುವುದಿಲ್ಲ.

ಅಪರಾಧವು ಸಾಮಾಜಿಕ ವಿಷಯ ಎಂಬುದನ್ನು ನಾವು ಮೊದಲು ಮನಗಾಣಬೇಕು. ಪ್ರತಿಯೊಂದು ಸಮಾಜವು ತನ್ನ ನಂಬಿಕೆಗೆ ಮತ್ತು ಭಾವನೆಗೆ ಒಪ್ಪಿಗೆಯಾದ ಕೆಲವೊಂದು ರೀತಿ – ನೀತಿಗಳನ್ನು, ನಡೆನುಡಿಗಳನ್ನು ರೂಪಿಸಿಕೊಂಡಿರುತ್ತದೆ. ಈ ಸಾಮಾಜಿಕ ಕಟ್ಟಳೆಗಳನ್ನು ಕಡೆಗಣಿಸುವ ವ್ಯಕ್ತಿ ಸಮಾಜ ಮತ್ತು ಕಾನೂನನ್ನು ಎದುರು ಹಾಕಿಕೊಳ್ಳಬೇಕಾಗುತ್ತದೆ. ಅಪರಾಧಿಯು ತನ್ನ ದುಷ್ಕೃತ್ಯಗಳಿಂದ ಸಮಾಜದಲ್ಲಿಯ ಜನರಿಗೋ ಅಥವಾ ಅವರ ಸ್ವತ್ತಿಗೋ ಧಕ್ಕೆಯುಂಟುಮಾಡುತ್ತಾನೆ. ಯಾವುದರಿಂದ ಧಕ್ಕೆಯುಂಟಾಗುತ್ತದೆ, ಯಾವ – ಯಾವ ಕೃತ್ಯಗಳು ಅಪರಾಧವೆಂದು ಪರಿಗಣಿಸಲ್ಪಡುತ್ತವೆ ಎನ್ನುವ ಸಂಗತಿ ಆಯಾ ಸಮಾಜದ ಕಾನೂನು – ಕಟ್ಟಳೆಗಳನ್ನು ಅವಲಂಬಿಸುತ್ತದೆ.

ದುಷ್ಕೃತ್ಯಗಳನ್ನು ಮಾಡುವ ಪ್ರವೃತ್ತಿ ಸ್ವಭಾವಜನ್ಯವಾದುದಲ್ಲ, ಕಲಿತ ನಡೆಗಳಿಂದ ಉಂಟಾಗುತ್ತದೆ. ದುಷ್ಕೃತ್ಯಗಳನ್ನು ಮಾಡುವುದರಿಂದ ಅಂತಹವರಿಗೆ ಮೊದಮೊದಲು ತೃಪ್ತಿಯುಂಟಾಗುತ್ತದೆ. ಆದುದರಿಂದ ಅವರು ಮೇಲಿಂದ ಮೇಲೆ ಆ ರೀತಿಯ ಕೆಲಸಗಳಲ್ಲಿ ತೊಡಗುತ್ತಾರೆ. ಕ್ರಮೇಣವಾಗಿ ಅದು ಅವರ ಸ್ವಾಭಾವಿಕ ಪ್ರವೃತ್ತಿಯಾಗಿಬಿಡುವುದು. ಒಮ್ಮೆ ಅಂತಹ ಚಟಕ್ಕೆ ಒಳಗಾಗಿಬಿಟ್ಟವರು, ತಾವೇ ಅದನ್ನು ಬಿಡಬೇಕೆಂದು ಮನಸ್ಸು ಮಾಡಿದರೂ, ಬಯಸಿದರೂ ಬಿಡಲಿಕ್ಕೆ ಸಾಧ್ಯವಾಗದಂತಹ ಪರಿಸ್ಥಿತಿ ಉಂಟಾಗಿಬಿಡುತ್ತದೆ.

---

Modern Concept of Juvenile Delinquency by Vinod Kumar Singh, M.A. Dip. in Guidance (Alld) D.M. & S.P. (Calcutta) The Educational Review. June Vol. LXXVI No. 6

ಸುಸಂಸ್ಕೃತವಾದ ವಿಶಾಲ ಸಮಾಜದಲ್ಲಿಯ ಹಾಗೂ ಅಸಂಸ್ಕೃತವಾದ ಸಣ್ಣ ಗುಂಪಿನಲ್ಲಿ ಇರುವ ಸಾಮಾಜಿಕ ಮೌಲ್ಯಗಳ ತಾರತಮ್ಯವೇ ಅಪರಾಧದ ಇನ್ನೊಂದು ಮುಖ. ಅಪರಾಧೀ ಕೃತ್ಯಗಳು 'ಗ್ಯಾಂಗಿ' ನವರಿಂದ ಮೆಚ್ಚುಗೆ ಪಡೆಯಬಹುದು; ಹೊಗಳಲ್ಪಡಬಹುದು, ಆದರೆ ಕಾನೂನಾಗಲೀ, ಕುಟುಂಬವಾಗಲೀ, ಸಮಾಜವಾಗಲೀ ಅವುಗಳನ್ನು ಒಪ್ಪುವುದಿಲ್ಲ. ಆಗ ಅಪರಾಧಿಯಾದ ಹುಡುಗನು ತನ್ನ ಕೃತ್ಯವನ್ನು ಬಹುಜನ ಸಮಾಜವು ಒಪ್ಪುವುದಿಲ್ಲವೆಂಬ ಹೆದರಿಕೆಯಿಂದ ಇನ್ನೂ ಹೆಚ್ಚಿನ ಎಚ್ಚರಿಕೆಯಿಂದ ಮಾಡಲು ಪ್ರಯತ್ನಿಸುತ್ತಾನೆ.

ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡುವುದು ಸಮಾಜದ ಒಂದು ಅತೀ ಮುಖ್ಯ ಹೊಣೆ. ಅದರಲ್ಲಿಯೂ ಪ್ರಜಾಪ್ರಭುತ್ವವು ಎಲ್ಲರಿಗೂ ಸಾಧ್ಯವಾದಮಟ್ಟಿಗೆ ಅಗತ್ಯವಾದ ಶಿಕ್ಷಣ ಒದಗಿಸಲು ಪ್ರಯತ್ನಿಸುತ್ತವೆ. ಈ ಪ್ರಯತ್ನ ಜನಪ್ರಿಯವಾದುದು ಮತ್ತು ಆದರ್ಶಮಯವಾದುದೇನೋ ಹೌದು. ಆದರೆ ಸಂಪೂರ್ಣವಾಗಿ ಅದನ್ನು ಈಡೇರಿಸಲು ಸಮಾಜ ಅಸಮರ್ಥವಾಗಿದೆ. ನಮ್ಮ ಶಾಲೆಗಳಲ್ಲಿ ಬಹಳಷ್ಟು ಮಕ್ಕಳಿಗೆ ಸಂಪೂರ್ಣ ಮಟ್ಟದಲ್ಲಿ ವಿದ್ಯೆ ಕೊಡುವುದು ಸಾಧ್ಯವಾಗಿಲ್ಲ. ಆದುದರಿಂದ ಅಂತಹ ಮಕ್ಕಳಲ್ಲೇ ಅನೇಕರು ಬಾಲಾಪರಾಧಿಗಳಾಗಿದ್ದಾರೆ. ಈಗ ಅಂತಹ ಮಕ್ಕಳ ಬಗ್ಗೆ ವಿಶೇಷ ಆಸಕ್ತಿ ತೀವ್ರವಾಗಿ ಬೆಳೆಯುತ್ತಿದೆ.

ಪರಿಣತರಾದ ತಜ್ಞರು ಈ ದಿಶೆಯಲ್ಲಿ ಆಸಕ್ತಿ ವಹಿಸಬೇಕು. ಅವರು ತಮ್ಮ ಬುದ್ಧಿ, ಚಾತುರ್ಯ, ಕೌಶಲ್ಯ, ಪರಿಶೀಲನ ಮುಂತಾದ ಶಕ್ತಿಗಳನ್ನು ಬಾಲಾಪರಾಧಿಗಳ ವಿಷಯದಲ್ಲಿ ಉಪಯೋಗಿಸುವುದು ಅವಶ್ಯವಿದೆ. ಈ ಅಪರಾಧಿಗಳಲ್ಲಿ ಸಾಕಷ್ಟು ಬುದ್ಧಿಶಕ್ತಿ ಇರುತ್ತದೆ. ಆದರೆ ಅದನ್ನು ಅವರು ತಮ್ಮ ಬೌದ್ಧಿಕ ಬೆಳವಣಿಗೆಗೆ ಉಪಯೋಗಿಸಿಕೊಂಡು ಸಾಮಾಜಿಕ ಹಾಗೂ ವಿದ್ಯಾಭ್ಯಾಸದ ಗುರಿಮುಟ್ಟಲು ಬಳಸಿಕೊಳ್ಳುವುದಿಲ್ಲ. ಕುಮಾರ್ಗದಲ್ಲಿ ಉಪಯೋಗಿಸಿಕೊಳ್ಳುತ್ತಾರೆ. ಅಪರಾಧಿಯೆಂದರೆ ಸಾಮಾನ್ಯವಾಗಿ ಜೀವನದಲ್ಲಿ 'ಗೆಲುವಿನ ಮಾದರಿ' ಯ ಬದಲು ಸೋಲಿನ ಮಾದರಿಯನ್ನು ಪಡೆದವನು ಎಂದು ಹೇಳಬಹುದು.

ಸಮಾಜದಲ್ಲಿ ಈ ಸಮಸ್ಯೆ ಹಲವರ ವಿಚಾರಗಳನ್ನು ಪ್ರಚೋದಿಸಿತು. ಅನೇಕರು ಈ ಅಪರಾಧ ಪ್ರವೃತ್ತಿಗೆ ಕಾರ್ಯ ಕಾರಣಗಳನ್ನು ಕಂಡು ಹಿಡಿಯಬೇಕೆಂದು ಮಹತ್ತರ ಪ್ರಯತ್ನಗಳನ್ನು ಮಾಡಿದರು. ಆದರೆ ಅವರೆಲ್ಲಾ ಈ ಪ್ರವೃತ್ತಿ ಒಂದು ರೀತಿಯ 'ನೈತಿಕ ಭ್ರಾಂತಿ' ಯ ರೂಪದ ಮಾನಸಿಕ ರೋಗ ಎಂಬ ಅಭಿಪ್ರಾಯಕ್ಕೆ ಎಡೆಗೊಡುವ ನಿರ್ಣಯಕ್ಕೆ ಬಂದರು. ೧೯೧೮ ರಲ್ಲಿ ಗ್ರೋಹಮನ್ನರು ಇದು ನೈತಿಕ ಅಧಃಪತನ ಎಂದು ಭಾವಿಸಿದನು. ಇಪ್ಪತ್ತನೆಯ ಶತಮಾನದಲ್ಲಿ ಅಪರಾಧಗಳ ಅಭ್ಯಾಸದ ಬಗೆಗೆ ವಿಶೇಷವಾದ ಬದಲಾವಣೆಯು ಕಂಡುಬಂದಿದೆ. ಸಮಾಜ

ವಿರೋಧಿ ಕೃತ್ಯಗಳನ್ನು ಈ ಮೊದಲು ಮುಯ್ಯಿಗೆ ಮುಯ್ಯಿ ತೀರಿಕೊಳ್ಳುವ ಮಾರ್ಗ ಮತ್ತು ತಮಗಾದ ಅನ್ಯಾಯಕ್ಕೆ ತಕ್ಕಂತೆ ತೋರಿಸುವ ಪ್ರತೀಕಾರ ಮನೋಭಾವ ಎಂದು ಭಾವಿಸುತ್ತಿದ್ದರು, ಆದರೆ ಅದನ್ನು ಈಗ ಹಾಗೆ ಭಾವಿಸುವುದಿಲ್ಲ. ಅಂತಹ ಕೃತ್ಯಗಳು ಮಗುವಿನ ವ್ಯಕ್ತಿತ್ವವನ್ನು ಅಭ್ಯಸಿಸಲು ದೊರೆತಿರುವ ನಿಷ್ಪಕ್ಷಪಾತವಾದ ಕುರುಹು ಎಂದು ಪರಿಗಣಿಸಲ್ಪಟ್ಟಿವೆ. ಇದೇ ಅಪರಾಧಗಳ ಅಭ್ಯಾಸದ ಬಗೆಗೆ ಉಂಟಾಗಿರುವ ಮಹತ್ತರ ಬದಲಾವಣೆ.

ಸಿದ್ಧಾಂತ:

ಡೆಲಿಂಕ್ವೆನ್ಸಿ ಎನ್ನುವುದು ಒಂದು ಸೂಚ್ಯಪದ. ಏಕೆಂದರೆ ಇದರಲ್ಲಿ ವ್ಯಾಖ್ಯಾಕಾರನು ಈ ಪದದ ವ್ಯಾಖ್ಯೆ ಮಾಡುವಾಗ ತನಗೆ ಬೇಕಾದುದನ್ನು ಸೇರಿಸಲು ಹಾಗೂ ಬೇಡವಾದುದನ್ನು ಬಿಡಲೂ ಸಾಧ್ಯವಿದೆ. ತಾಂತ್ರಿಕವಾಗಿ ಹೇಳುವುದಾದರೆ ಇಂತಿಷ್ಟು ವಯಸ್ಸಿನವರೆಗಿನ ಮಕ್ಕಳು ಶಾಸನ ಮತ್ತು ಕಾಯಿದೆಗಳನ್ನು ಕಡೆಗಣಿಸಿ ಮಾಡುವ ದುಷ್ಕೃತ್ಯಗಳಿಗೆ ಬಾಲಾಪರಾಧವೆನ್ನುತ್ತಾರೆ, ತೌರಿಯು ವ್ಯಕ್ತಿ ಮತ್ತು ಸಮಾಜಕ್ಕೆ ಒಪ್ಪಿತವಾದ ನಾಲ್ಕು ರೀತಿಯ ನಡತೆಗಳನ್ನು ಹೇಳುತ್ತಾನೆ.

೧) ನಡತೆಯು ಸಾಮಾಜಿಕವಾಗಿ ಒಪ್ಪಿತವಾಗಿರಬಹುದು. ಆದರೆ ಆ ವ್ಯಕ್ತಿಯ ಅವಶ್ಯಕತೆಗಳನ್ನು ಪೂರೈಸುವಂತಿಲ್ಲದಿದ್ದರೆ, ಅದು ಯಾವುದೋ ರೀತಿಯಿಂದ ಆ ವ್ಯಕ್ತಿಯ ಅಂತರಂಗ ಶಾಂತಿಯನ್ನು ಕಲಕುತ್ತದೆ ಅಥವಾ ಅಂತರಂಗದ ಕಾಯಿಲೆಯ ರೂಪದಲ್ಲಿ ವ್ಯಕ್ತವಾಗುತ್ತದೆ.

೨) ಕೆಲವೊಮ್ಮೆ ಕೆಲವು ನಡತೆಗಳು ವ್ಯಕ್ತಿಗೆ ಸಂತೋಷ, ತೃಪ್ತಿಗಳನ್ನುಂಟು ಮಾಡಬಹುದು. ಆದರೆ ಸಮಾಜಕ್ಕೆ ಸಮ್ಮತವಾಗಿರುವುದಿಲ್ಲ. ಅಂತಹ ಕಾರ್ಯ 'ಸಮಸ್ಯಾತ್ಮಕ ನಡತೆ' ಅಥವಾ ಬಾಲಾಪರಾಧವೆನ್ನಿಸುತ್ತದೆ.

೩) ಕೆಲವು ವೇಳೆ ಕೆಲವು ನಡತೆಗಳು ವ್ಯಕ್ತಿಗೂ ತೃಪ್ತಿ ನೀಡದೇ, ಸಮಾಜಕ್ಕೂ ಒಪ್ಪಿತವಾಗಿರುವುದಿಲ್ಲ. ಆಗ ಅಂತಹ ಕೃತ್ಯಗಳು ಒಂದು ರೀತಿಯ ಮಾನಸಿಕ ಅಸ್ಪಷ್ಟತೆ ಅಥವಾ ನರದೌರ್ಬಲ್ಯದಿಂದುಂಟಾದ ಅಪರಾಧಗಳೆಂದು ಸೂಚಿಸಲ್ಪಡುತ್ತವೆ.

೪) ಕೆಲವು ಕೃತ್ಯಗಳು ವ್ಯಕ್ತಿಗೂ ತೃಪ್ತಿ ಉಂಟು ಮಾಡುವುದಲ್ಲದೆ ಸಮಾಜಕ್ಕೂ ಒಪ್ಪಿತವಾಗುವಂತೆ ಯೋಗ್ಯವಾಗಿರುತ್ತವೆ. ಅಂತಹ ಕೃತ್ಯಗಳು ವ್ಯಕ್ತಿಗಾಗಲೀ ಸಮಾಜಕ್ಕಾಗಲೀ ಯಾವ ರೀತಿಯ ಸಮಸ್ಯೆಯನ್ನೂ ಉಂಟು ಮಾಡುವುದಿಲ್ಲ.

ಸುಳ್ಳು ಹೇಳುವುದು, ಕದಿಯುವುದು, ಅವಿಧೇಯತೆ, ಅಕ್ರಮಕಾರೀ

ಮನೋಭಾವ, ಟೆಂಪರ ಟ್ಯಾಂಟ್ರಮ್, ಮನೆ ಬಿಟ್ಟು ಓಡಿ ಹೋಗುವುದು, ಮೈಗಳ್ಳತನ, ಕ್ರೂರತನ ವಿನಾಶಕಾರಿ ಮನೋಭಾವ, ಬೆಂಕಿ ಹಚ್ಚುವುದು, ಊಟ ಬಿಡುವುದು ಮುಂತಾದ ವರ್ತನೆಗಳು ಬಾಲಾಪರಾಧಗಳ ಪಟ್ಟಿಯಲ್ಲಿ ಬರುತ್ತವೆ.

ಸಾಮಾನ್ಯವಾಗಿ ಮಗುವಿಗೆ ಮೊದಲು ಸ್ವಇಚ್ಛೆಯಿಂದ ಇದ್ದ ವಿಷಯಗಳನ್ನು ಮುಚ್ಚಿ ಹೇಳಲು ಗೊತ್ತಿರುವುದಿಲ್ಲ. ಅದಕ್ಕೆ ಮೊದಲು ನಾಲ್ಕು ವರ್ಷಗಳವರೆಗೂ ಹಾಗೆ ಸುಳ್ಳು ಹೇಳಬಹುದೆಂಬ ಕಲ್ಪನೆಯೂ ಇರುವುದಿಲ್ಲ. ಆದರೆ ವಿಚಾರ ಶಕ್ತಿ ಬೆಳೆದಂತೆ ವಾತಾವರಣದ ಪ್ರಭಾವದಿಂದ ಅದನ್ನು ಕಲಿಯುತ್ತದೆ. ಸುಳ್ಳಿನ ಎರಡು ಮುಖ್ಯ ಪ್ರಮಾಣಗಳೆಂದರೆ ಮಗುವಿಗೆ ತಾನು ಹೇಳಿದ ಸುಳ್ಳಿನ ಅರಿವು ಮತ್ತು ಸುಳ್ಳು ಹೇಳುವುದರಿಂದ ತನಗೆ ದೊರೆಯಬಹುದಾದ ಲಾಭದ ಆಸೆ ಅಥವಾ ಹೇಳದಿದ್ದರೆ ತನಗಾಗಬಹುದಾದ ಅಸಂತೋಷವನ್ನು ನಿವಾರಿಸಿಕೊಳ್ಳುವ ಗುರಿ. ನೈತಿಕ ಶಾಸ್ತ್ರಪ್ರಕಾರವಾಗಿ 'ಕದಿಯುವಿಕೆ' ಮಹತ್ವವಾದ ವಿಚಾರ. ಏಕೆಂದರೆ ಇದರಿಂದ ಒಬ್ಬ ವ್ಯಕ್ತಿಯ ಸ್ವತ್ತು ನಷ್ಟವಾಗಿ ಆ ವಸ್ತುವಿನ ಮೇಲಿನ ಯಜಮಾನ್ಯ ಅನ್ಯಾಯವಾಗಿ ಇಲ್ಲವಾಗುತ್ತದೆ. ಕದಿಯುವ ಭಾವನೆಯೂ ಸಹ ಮಗುವಿಗೆ ಶೈಶವಾವಸ್ಥೆಯಲ್ಲಿ ಇರುವುದಿಲ್ಲ. ವಸ್ತು ಪರಿಜ್ಞಾನ ಮತ್ತು ಅದನ್ನು ತನ್ನದಾಗಿಸಿಕೊಳ್ಳಬೇಕೆಂಬ ವಿಚಾರ ಮಗುವಿನಲ್ಲಿ ಬೆಳೆದ ನಂತರ ಕಳ್ಳತನದ ಭಾವನೆ ಬೆಳೆಯಲು ಸಾಧ್ಯ. ಈ ಭಾವನೆಗಳು ಬೆಳೆಯಲು ಅನೇಕ ಕಾರಣಗಳಿರಬಹುದು; (೧) ಮಗುವಿಗೆ ಒಂದು ವಸ್ತು ತನ್ನಲ್ಲಿಲ್ಲದೇ ಬೇರೆಯವರಲ್ಲಿದ್ದಾಗ ಅದು ತನ್ನದಾಗಬೇಕೆಂಬ ಆಸೆಯುಂಟಾದರೆ (೨) ಮನೆಯಲ್ಲಿ ತನಗೆ ದೊರೆಯಬೇಕಾದ ಸ್ಥಾನವು ದೊರೆಯದಿದ್ದರೆ (೩) ಎಲ್ಲರಿಂದಲೂ ಮನ್ನಣೆ ಪಡೆಯಬೇಕು. ಪ್ರತಿಷ್ಠೆ ಗಳಿಸಬೇಕು ಎಂಬ ಆಸೆ ಇದ್ದಾಗ ಅದು ದೊರೆಯದಿದ್ದರೆ (೪) ಸಾಹಸ ಪ್ರವೃತ್ತಿಗಾಗಿ (೫) ಹೊಟ್ಟೆ ಕಿಚ್ಚಿನ ಮನೋಭಾವದಿಂದ (೬) ಬಡತನ ಅಥವಾ ಕದಿಯುವ ಗೀಳು ಇನ್ನೂ ಮುಂತಾದವುಗಳು.

ಅವಿಧೇಯತೆಯು ಅಧಿಕಾರ ವಿರುದ್ಧದ ಪ್ರತಿಭಟನೆ. ಆದರೆ ವಿಧೇಯತೆ ಇಲ್ಲದೆ ಮಗುವು ಉತ್ತಮ ರೀತಿಯ ಮತ್ತು ಹೊಂದಿಕೊಂಡು ಬಾಳುವ ಸ್ವಭಾವವನ್ನು ಕಲಿಯಲು ಆಗುವುದಿಲ್ಲ. ವಿಧೇಯತೆಯ ಅಧಿಕಾರ ಮತ್ತು ಮಗುವಿಗಿರುವ ಹೊಂದಾಣಿಕೆಯನ್ನು(Emotional relationship) ಅವಲಂಬಿಸಿರುತ್ತದೆ. ಒಂದು ಅವಧಿಯಲ್ಲಿ ಪ್ರತಿ ಸಾಮಾನ್ಯ ಮಗುವಿಗೂ ಪ್ರತಿರೋಧಕ ಶಕ್ತಿ ಬರುತ್ತದೆ. ಅದನ್ನು ನಾವು ಅವಿಧೇಯತೆಯೆಂದು ತಿಳಿಯಬಾರದು ಸಂಪೂರ್ಣ ವಿಧೇಯತೆಯು ಆ ಹುಡುಗನಲ್ಲಿ ಸ್ವಂತ ವಿಚಾರ, ಸ್ವಂತ ಅಸ್ತಿತ್ವಗಳೇ ಇಲ್ಲದಂತೆ ಮಾಡುವುದಲ್ಲದೆ ಅವನು ಮುಂದೆ, ಅನಾರೋಗ್ಯಕರ ರೀತಿಯಲ್ಲಿ ಶರಣಾಗುವಂತಹ ಮನೋಭಾವ

ಪಡೆಯುತ್ತಾನೆ. ಇದರಿಂದ ಅವನು ಮುನ್ನುಗ್ಗಿ, ಕಾರ್ಯಪ್ರವೃತ್ತನಾಗುವ ಮತ್ತು ಸ್ವಂತ ಅಭಿಪ್ರಾಯವನ್ನು ಹೊಂದುವ ಶಕ್ತಿಯನ್ನು ಕಳೆದುಕೊಳ್ಳುತ್ತಾನೆ. ಇದು ಸ್ವಯಂಸ್ಫೂರ್ತಿಯಿಂದ ಕೆಲಸ ಮಾಡುವ ಪ್ರವೃತ್ತಿಯನ್ನೇ ಹತ್ತಿಕ್ಕಿ ಎಲ್ಲದಕ್ಕೂ ಶರಣಾಗುವ ಮಾನಸಿಕ ದುರ್ಬಲತೆಯನ್ನುಂಟು ಮಾಡುತ್ತದೆ ಮತ್ತು ವ್ಯಕ್ತಿಯಲ್ಲಿ ತಪ್ಪಿತಸ್ಥ ಮನೋಭಾವವನ್ನುಂಟು ಮಾಡಿ ಸ್ವಭಾವ – ಸಹಜವಾದ ಸ್ವಪ್ರತಿಪಾದನಾ ಶಕ್ತಿಗೆ ಆಘಾತವನ್ನುಂಟು ಮಾಡುತ್ತದೆ. ಮಕ್ಕಳಲ್ಲಿನ ಅವಿಧೇಯತೆಗೆ ತಂದೆ – ತಾಯಿಗಳ ಮನೋವೃತ್ತಿಯೇ ಕಾರಣ. ಪರಿಮಿತಿ ಇಲ್ಲದಷ್ಟು ಅಂಕೆ ಅಥವಾ ಸಲುಗೆ, ತಂದೆ ತಾಯಿಗಳ ಮತ್ತು ಮಕ್ಕಳ ಸಂಬಂಧದಲ್ಲಿ ಹೊಂದಾಣಿಕೆಯಾಗಲೀ ಅವರ ಅಭಿಪ್ರಾಯಗಳಲ್ಲಿ ಸ್ಥಿರತೆಯಾಗಲೀ ಇಲ್ಲದಿರುವಿಕೆ ಅಂತಹ ಉದಾಹರಣೆಗಳಲ್ಲಿ ಕೆಲವು.

ಇದ್ದಕ್ಕಿದ್ದಂತೆ ಹೊರಹೊಮ್ಮುವ ಕೋಪಕ್ಕೆ 'ಟೆಂಪರ ಟ್ಯಾಂಟ್ರಮ್' ಎಂದು ಹೇಳುತ್ತಾರೆ. ಮೇಲಿಂದ ಮೇಲೆ ನಿರಾಶೆಯುಂಟಾಗುವ ಘಟನೆಗಳಿಂದ ಬಾಂಬು ಸಿಡಿದಂತಹ ಕೋಪದ ಪ್ರತಿಕ್ರಿಯೆ ಉಂಟಾಗುತ್ತದೆ. ಈ ಪ್ರತಿಕ್ರಿಯೆ ಮೇಲಿಂದ ಮೇಲೆ ಹೊರಹೊಮ್ಮಲು ಅವಕಾಶವಾದರೆ ವ್ಯಕ್ತಿಯು ವಿನಾಶಕಾರಿಯಾಗುತ್ತಾನೆ. ಟ್ಯಾಂಟ್ರಂ ಪ್ರತಿಕ್ರಿಯೆಯು ಹೆಚ್ಚಾಗಿ ಮನಸ್ಸಿನ ತಳಮಳ ಆತಂಕ, ಕಳವಳಗಳಿಂದುಂಟಾದ ಕೋಪ, ಅಸಹಾಯಕತೆಯ ಸ್ಥಿತಿ ಮತ್ತು ಸುರಕ್ಷಿತತೆ ಇಲ್ಲ ಎಂಬ ಭಾವನೆಯಿಂದ ಉಂಟಾಗುತ್ತದೆ.

ಕೆಲವು ಮಕ್ಕಳು ಹೇಳದೆ – ಕೇಳದೆ ಮನೆ ಬಿಟ್ಟು ಹೋಗುತ್ತಾರೆ.ಇದಕ್ಕೆ ಹೊಸ ಸ್ಥಳಗಳನ್ನು ನೋಡಬೇಕೆಂಬ ಅಪೇಕ್ಷೆಯಿಂದಲೋ ಹೊಸ ಅನುಭವಗಳನ್ನು ಪಡೆಯಬೇಕೆಂಬ ಆಸೆಯಿಂದಲೋ ಉಂಟಾದ ಅಲೆದಾಡುವ ಬಯಕೆಯೇ ಕಾರಣವಿರಬೇಕು. ಅಲ್ಲದೆ ಆನಂದದಾಯಕವಲ್ಲದ ಮನೆಯ ವಾತಾವರಣ, ತಂದೆ ತಾಯಿಯರ ಹಿತವಲ್ಲದ ಮನೋವೃತ್ತಿ, ದಾಯಾದಿ ಮತ್ಸರ (Sibling rivalry) ತಂದೆ ತಾಯಿಯರಿಬ್ಬರೂ ಅಥವಾ ಇವರಲ್ಲೊಬ್ಬರು ಇಲ್ಲದಿರುವಿಕೆ, ಸಾಹಸ ಕಾರ್ಯದಲ್ಲಿ ಆಸಕ್ತಿಗಳೂ ಕಾರಣವಿರಬಹುದು.

ಶಾಲೆಯಿಂದ ತಪ್ಪಿಕೊಂಡು ಓಡಿಹೋಗುವ ಪ್ರವೃತ್ತಿಗೆ ಟ್ರೂಅನ್ಸಿ ಎನ್ನುತ್ತಾರೆ. ಈ ಪ್ರವೃತ್ತಿಗೆ (೧) ಶಾಲೆಯು ಬಗ್ಗೆ ಇಷ್ಟವಿಲ್ಲದಿರುವಿಕೆ (೨) ಅಲ್ಲಿ ಶಿಕ್ಷೆಯಾಗಬಹುದೆಂಬ ಭಯ (೩) ಶಾಲೆಯ ಬಗ್ಗೆ ಮಗುವಿನ ಅಭಿಪ್ರಾಯ ರೂಪಿಸುವ ವಿಷಯದಲ್ಲಿ ತಂದೆ – ತಾಯಿಯರ ಮನೋವೃತ್ತಿ (೪) ಸಾಹಸ ಕಾರ್ಯಗಳ ಅಪೇಕ್ಷೆ ಮುಂತಾದವುಗಳು ಕಾರಣವಾಗಿರಬಹುದು.

**ಕಾರಣಗಳು:**

ಹಜಾರಿಬಾಗ್‌ನ ರಿಫಾರ್ಮೇಟರಿ ಶಾಲೆಯಲ್ಲಿ ಬಾಲಾಪರಾಧದ ಕಾರಣಗಳನ್ನು ಕಂಡುಹಿಡಿಯುವ ಅಭ್ಯಾಸ ನಡೆಯಿತು. ಒಟ್ಟು ೧೩೬ ಮಂದಿ ಮಕ್ಕಳನ್ನು ಅಭ್ಯಸಿಸಿದರು. ಆ ಅಭ್ಯಾಸದ ಸಾರಾಂಶ ಕೆಳಗಿನಂತಿದೆ.

ಸೈಕೋಫಿಝಿಕಲ್ ಫ್ಯಾಕ್ಟರ್ಸ್
(ಮನೋವ್ಯಾಪಾರವನ್ನು ಕುರಿತು
ಶಾರೀರಿಕ ಅಂಶಗಳು)

೨೦.೩%

ಹೋಂ ಫ್ಯಾಕ್ಟರ್ಸ್
(ಮನೆಯ ಸಂಬಂಧಿ ಅಂಶಗಳು)

೩೬.೧%

ನೆರೆಹೊರೆಯ ಅಂಶಗಳು

೨೬.೯%

ಶಾಲಾ ಸಂಬಂಧಿ ಅಂಶಗಳು

೬.೭%

ಮೇಲೆ ಹೇಳಿದ ಅಂಶಗಳನ್ನು ವಿಶ್ಲೇಷಿಸಿದಾಗ ಹೆಚ್ಚಿನ ಸಂದರ್ಭಗಳಲ್ಲಿ ಪ್ರತ್ಯೇಕವಾದ ಯಾವುದೇ ಒಂದು ಅಂಶವೇ ಕಾರಣ ಎಂದು ಹೇಳಲು ಆಗುವುದಿಲ್ಲ ಎಂಬ ವಿಷಯ ಕಂಡುಬಂದಿತು. ಆದುದರಿಂದ ಬಾಲಾಪರಾಧೀ ನಡವಳಿಕೆಗೆ ಯಾವುದೋ ಒಂದು ನಿರ್ದಿಷ್ಟ ಕಾರಣವನ್ನು ಕೊಟ್ಟು ವಿವರಿಸಲು ಅಸಾಧ್ಯವೆಂಬುದು ಸ್ಪಷ್ಟವಾಗುತ್ತದೆ. ಏಕೆಂದರೆ ಈ ಪ್ರವೃತ್ತಿ ಅನೇಕ ಅಂಶಗಳ ಪರಸ್ಪರ ಕ್ರಿಯೆಯ ಫಲಿತಾಂಶ.

ಮನೆ, ನೆರೆಹೊರೆ, ಶಾಲೆ, ಮಾನಸಿಕ ಎಂದು ಪ್ರತ್ಯೇಕವಾದ ನಾಲ್ಕು ಗುಂಪುಗಳನ್ನು ಮಾಡಿ, ಒಂದಕ್ಕೊಂದು ಸಂಬಂಧವಿಲ್ಲವೆಂಬಂತೆ ವಿಚಾರ ಮಾಡಬಾರದು, ನಿಜವಾಗಿ ಹೇಳುವುದಾದರೆ ಬಾಲಾಪರಾಧೀ ಪ್ರವೃತ್ತಿಗೆ ಮೇಲೆ ಹೇಳಿದ ಎಲ್ಲಾ ಅಂಶಗಳೂ, ಜೊತೆಗೂಡಿ ಪರಿಣಾಮವನ್ನುಂಟು ಮಾಡುತ್ತವೆ. ಮನೆ ಮತ್ತು ನೆರೆ–ಹೊರೆ ಶೇಡಕಾ ೭೯.೭ ರಷ್ಟು ಪರಿಣಾಮ ಬೀರುತ್ತವೆ ಎಂಬ ವಿಷಯವು ಮೇಲಿನ ಅಂಶಗಳಿಂದ ಕಂಡುಬಂದಿದೆ. ಇದರಿಂದ ಮನೆ ಮತ್ತು ಸುತ್ತಮುತ್ತಲಿನ ಪರಿಸರಗಳು ಬಾಲಾಪರಾಧಕ್ಕೆ ಅಪಾಯಕರವಾದ ಕಾರಣಗಳು ಎಂಬ ಸಂಗತಿ ಸ್ಪಷ್ಟವಾಗುತ್ತದೆ. ಆದುದರಿಂದ ಈ ಪ್ರವೃತ್ತಿಯನ್ನು ತಡೆಗಟ್ಟಲು ಮನೆ ಮತ್ತು ನೆರೆ – ಹೊರೆಯ ಬಗ್ಗೆ ಹೆಚ್ಚು ನಿಗಾ ಇಡುವುದು ಅವಶ್ಯಕ.

**ಸೈಕೋಫಿಸಿಕಲ್ ಅಂಶಗಳು:**

ಆನುವಂಶ, ದೇಹ ಪ್ರಕೃತಿ, ದೈಹಿಕ ನ್ಯೂನತೆ, ಮಾನಸಿಕ ಕೊರತೆ, ಉನ್ನತ ಬೌದ್ಧಿಕಶಕ್ತಿ ಅಥವಾ ಅಸ್ವಾಭಾವಿಕವಾದ ಮಾನಸಿಕ ಅವ್ಯವಸ್ಥೆ, ಸೈಕೋಪಥಿಕ್

ವ್ಯಕ್ತಿತ್ವ (ಮನೋವ್ಯಾಧಿಗ್ರಸ್ತ) ಭಗ್ನ ಮನೋರಥದಿಂದುಂಟಾದ ಪ್ರವೃತ್ತಿ (frustration) ಮುಂತಾದವುಗಳನ್ನು ವಿಶ್ಲೇಷಿಸಿದರೆ ಬಹು ಜಾಗರೂಕತೆಯಿಂದ ಪತ್ತೆ ಹಚ್ಚಬೇಕಾದಂತಹ ಕೆಲವು ಮುಖ್ಯ ಅಂಶಗಳಿವೆಯೆಂಬುದು ಗೋಚರವಾಯಿತು.

**ಮನೆಯ ಅಂಶಗಳು:**

ಬಡತನ, ಕಿಕ್ಕಿರಿದು ತುಂಬಿದ ಮನೆ, ಹಳೆಯ ಪೀಳಿಗೆಯವರೊಡನೆ ವೈರತ್ವ, ಮನೆ ವಿಭಾಗವಾಗುವಿಕೆ, ವಿಚ್ಛೇದನ, ಮನೆತೊರೆಯುವಿಕೆ ಮುಂತಾದವು ಇವುಗಳ ಪಟ್ಟಿಯಲ್ಲಿ ಬರುತ್ತವೆ. ಈ ಪರಿಸರದಲ್ಲಿ ಬಾಲಾಪರಾಧಕ್ಕೆ ಕಾರಣವಾಗುವ ಅಂಶಗಳೆಂದರೆ ಎಮೋಷನಲ್ ಸೆಕ್ಯೂರಿಟಿಯ ಕೊರತೆ, ಒಂದು ನಿರ್ದಿಷ್ಟವಾದ ಅಥವಾ ಯೋಗ್ಯವಾದ ಶಿಸ್ತಿನ ಕೊರತೆ, ತಂದೆ ತಾಯಿಗಳು ಮಗುವಿನ ಬಗ್ಗೆ ತಿರಸ್ಕಾರದಿಂದ ನಡೆಯುವುದು, ಅವನ ಬಗ್ಗೆ ಅಲಕ್ಷ್ಯ ರೀತಿಯಿಂದ ವರ್ತಿಸುವುದು, ಅವನ ಚಟುವಟಿಕೆಗಳಲ್ಲಿ ಆಸಕ್ತಿ ಇಲ್ಲದಿರುವಿಕೆ ಮೊದಲಾದವುಗಳು.

ನೆರೆಹೊರೆಯ ಅಂಶಗಳು – ಉದಾಹರಣೆಗಳು: ಸಾಕಷ್ಟು ಎಚ್ಚರಿಕೆಯ ಮತ್ತು ರಕ್ಷಣೆಯ ಅಭಾವ, ಮನಸ್ಸಿನಲ್ಲಿ ಘರ್ಷಣೆಯನ್ನುಂಟು ಮಾಡುವ ಕಾನೂನು ಅಥವಾ ನೀತಿಗೆ ತಲೆಬಾಗುವ ಪ್ರಸಂಗ, ದುಷ್ಟ ಸಹವಾಸ; ನೈತಿಕ ಬಾಲಾಪರಾಧಕ್ಕೆ ಕಾರಣವಾಗಬಲ್ಲವು.

**ಶಾಲಾ ಸಂಬಂಧವಾದ ಅಂಶಗಳು:**

ಶಾಲೆಯಲ್ಲಿ ಆಯಾ ವಯಸ್ಸಿಗೆ ಮೀರಿದ ಕಷ್ಟಕರವಾದ ಕೆಲಸಗಳು, ಶಾಲೆಯ ಬಗ್ಗೆ ಇಷ್ಟವಿಲ್ಲದಿರುವಿಕೆ, ಟ್ರೂಅನ್ಸಿ, ಕೆಲವು ಉಪಾಧ್ಯಾಯರು ಕೆಲವೊಂದು ಮಕ್ಕಳನ್ನು ತಿರಸ್ಕಾರ ದೃಷ್ಟಿಯಿಂದ ನಡೆಸಿಕೊಳ್ಳುವುದು ಮುಂತಾದವು ಬಾಲಪರಾಧ ಪ್ರವೃತ್ತಿಯನ್ನುಂಟು ಮಾಡುವುದರಲ್ಲಿ ಮುಖ್ಯ ಪಾತ್ರ ವಹಿಸುತ್ತವೆ.

ಹೊರ ಪ್ರಪಂಚದ ಅಂಶಗಳು, ಅದರಲ್ಲಿಯೂ ಮುಖ್ಯವಾಗಿ ಮನೆ ಮತ್ತು ನೆರೆ – ಹೊರೆಯಲ್ಲಿಯವು, ಬಾಲಾಪರಾಧೀ ರೀತಿಯ ನಡವಳಿಕೆಗೆ ಬಹಳ ಮಟ್ಟಿಗೆ ಹೊಣೆ. ಇವು ಮಗುವಿನ ಮಾನಸಿಕ ಬೆಳವಣಿಗೆಯ ಮೇಲೆ ಬಹುಮಟ್ಟಿಗೆ ಹೊಣೆ. ಇವು ಮಗುವಿನ ಮಾನಸಿಕ ಬೆಳವಣಿಗೆಯ ಮೇಲೆ ಬಹು ಹೆಚ್ಚಿನ ಪರಿಣಾಮವನ್ನುಂಟು ಮಾಡುತ್ತವೆ. ಸಾಮಾನ್ಯವಾಗಿ ಸೈಕೋಫಿಸಿಕಲ್ ಅಥವಾ ಸಂದರ್ಭೋಚಿತವಾದ ಅಂಶಗಳ ಬಗ್ಗೆ ಹೆಚ್ಚು ಪ್ರಾಧ್ಯಾನ್ಯತೆ ಕೊಡುವ ಪ್ರವೃತ್ತಿ ಇದೆ. ಬೆಳವಣಿಗೆಯ ಹಂತಗಳಲ್ಲಿ ಪರಸ್ಪರ ಪರಿಣಾಮ ಬೀರುವ ವಿಧಾನವು ಅತೀ ಮುಖ್ಯವಾದ ಅಂಶ. ನಡತೆಯ ವಿಧಾನವನ್ನು ರೂಪಿಸುವುದರಲ್ಲಿ ಜೀವನದ ಮೊದಲನೆಯ ಅವಧಿಯು ಅತ್ಯಂತ ಮುಖ್ಯವಾದುದು. ಆದುದರಿಂದ ಕುಟುಂಬದ

ಪ್ರತಿಯೊಂದು ಅಂಶದ ಕಡೆಗೂ ಲಕ್ಷ್ಯವನ್ನು ಕೇಂದ್ರೀಕರಿಸಿ ತಂದೆ – ತಾಯಿಗಳಾದವರು, ತಮ್ಮ ಮಕ್ಕಳ ಬೆಳವಣಿಗೆಗೆ ಅನುಕೂಲಕರವಾದ ಒಳ್ಳೆಯ ಪರಿಸರವನ್ನುಂಟು ಮಾಡಲು ಮಾರ್ಗದರ್ಶನ ನೀಡುವ ಶಿಕ್ಷಣ ಕೊಡಬೇಕು.

ವಿಯೆನ್ನದ ಮನೋವಿಶ್ಲೇಷಣ ಶಾಸ್ತ್ರಜ್ಞನಾದ ಅಥಾರ್ನ್ನ ಪ್ರಕಾರ ಮಗುವು ಅವಶ್ಯಕತೆಯಿಂದ ಹೆಚ್ಚು ಪ್ರೀತಿ ಮತ್ತು ರಕ್ಷಣೆಯನ್ನು ಪಡೆದರೆ, ಅವನು ಹಾಳಾಗುವುದಲ್ಲದೇ ಹೊರ ಜಗತ್ತಿಗೆ ಹೊಂದಿಕೊಳ್ಳಲು ಸ್ವಲ್ಪವೂ ದಣಿವು ಮಾಡಿಕೊಳ್ಳದಂತಹ ಮನೋವೃತ್ತಿಯನ್ನು ಪಡೆಯುತ್ತಾನೆ. ಅಂತಹ ಹುಡುಗನು ಫ್ರಾಯಿಡನ ಮಾತಿನಲ್ಲಿ ಹೇಳಬೇಕೆಂದರೆ, ವಿಲಾಸೀ ಮಟ್ಟದಲ್ಲಿ ಬದುಕುತ್ತಾನೆ ಅತೀ ಪ್ರೀತಿಯನ್ನು ಪಡೆದ ಮಗು ಶಿಕ್ಷೆ, ಅಧಿಕಾರ, ಜವಾಬ್ದಾರಿ ಇವುಗಳನ್ನು ಪ್ರತಿಭಟಿಸುತ್ತಾನೆ. ಮತ್ತು ವಿರೋಧಿಸುತ್ತಾನೆ, ಸಾಮಾನ್ಯವಾಗಿ ತಂದೆ – ತಾಯಿಗಳು ಉದ್ವಿಗ್ನತೆಯಿಂದ ಕೂಡಿದ, ಕಾತರ ಮತ್ತು ಅರಕ್ಷಿತತೆಯ ಕಾರಣದಿಂದಾಗಿ ಮಗುವನ್ನು ಅತಿಯಾಗಿ ಪ್ರೀತಿಸುತ್ತಾರೆ. ತಂದೆ – ತಾಯಿಗಳ ಇಂತಹ ಭಯ ಮತ್ತು ಪುಕ್ಕಲುತನದ ಕಾರಣ ಮಗುವಿನಲ್ಲಿ ನಿರ್ಭಯ ಮತ್ತು ನಿರ್ದಾಕ್ಷಿಣ್ಯದ ಪ್ರವೃತ್ತಿ ಬೆಳೆಯುತ್ತವೆ. ಆದುದರಿಂದ ಮಗುವು ಬಾಲಿಷ ರೀತಿಯಿಂದ ವರ್ತಿಸಿದರೆ ತನ್ನ ಇಷ್ಟಾರ್ಥಗಳ ಪೂರೈಕೆಯಾಗುವುದರಿಂದ ಆ ಮಾರ್ಗವನ್ನು ಅನುಸರಿಸುತ್ತದೆ. ಅತಿಯಾದ ಪ್ರೀತಿಯಿಂದ ಯುವಕರು ಅಪರಾಧಿಗಳಾಗಿ ಪರಿವರ್ತಿತರಾಗಿರುವ ಉದಾಹರಣೆಗಳು ಅಷ್ಟೊಂದು ವಿಶೇಷವಾಗಿಲ್ಲವೆಂದು ಅಥಾರ್ನ್‌ನ್ ಹೇಳುತ್ತಾನೆ.

ಬಾಲಾಪರಾಧಿಗಳು ಒಂದು ಕಡೆ ಪ್ರೀತಿ ಮತ್ತು ಮಮತೆಯಿಂದ ವಂಚತರಾಗಿ ದು:ಖಕ್ಕೆ ಗುರಿಯಾದರೆ ಮತ್ತೊಂದು ಕಡೆ ಅಲಕ್ಷ್ಯ, ಶಿಕ್ಷೆ ಮತ್ತು ಕಾರ್ಯ ಇವುಗಳಿಂದ ವ್ಯಥೆಗೊಳಗಾಗುತ್ತಾರೆ ಎಂದು ಅಥಾರ್ನ್‌ನೇ ವಿವರಿಸುವಂತೆ ಬಾಲಾಪರಾಧಿ ಮಗುವಿನ ಕುಟುಂಬದ ರೀತಿಯೆಂದರೆ ಕ್ರೂರಿಯಾದ ತಂದೆ, ದುರ್ಬಲ ಮತ್ತು ಲೋಲುಪ್ತಳಾದ ತಾಯಿ.

**ಬಾಲಾಪರಾಧ ಹಾಗೂ ಅಕ್ರಮಣಕಾರಿ ನಡತೆ:**

ಹುಡುಗನಿಗೆ ಸುಮಾರು ಹನ್ನೆರಡು ವರ್ಷಗಳಾದಾಗ ಅವನಲ್ಲಿ ಅನೇಕ ಆಸಕ್ತಿಗಳು ಬೆಳೆದಿರುತ್ತವೆ. ಆದರೆ ಕೆಲವರು ಮನೆಯಲ್ಲಿ ಅವನನ್ನು ಇನ್ನೂ ಎಳೆಯ ಮಗುವಿನಂತೆ ಪರಿಗಣಿಸಿ ನೋಡುತ್ತಾರೆ, ಆಗ ಮಗುವಿನ ಮನಸ್ಸಿನಲ್ಲಿ ಹೋರಾಟ ಉಂಟಾಗುತ್ತದೆ. ತನಗೆ ತನ್ನ ಮನೆಯಲ್ಲಿ ಸಿಗಬೇಕಾದ ಸ್ಥಾನ ಸಿಕ್ಕಿಲ್ಲವೆಂದು ಒಳಗೊಳಗೇ ಅಸಮಾಧಾನಗೊಳ್ಳುತ್ತಾನೆ, ಅತೃಪ್ತಿಪಟ್ಟುಕೊಳ್ಳುತ್ತಾನೆ. ಈ ಅಸಮಾಧಾನವು ಅಕ್ರಮಣಕಾರಕ, ತಿರುಗಿಬೀಳುವ ಹಾಗೂ ಸಾಮಾಜಿಕವಲ್ಲದ ಕೃತ್ಯಗಳಿಗೆ ಕಾರಣವಾಗುತ್ತದೆ. ಇಂತಹ ಆಕ್ರಮಣವನ್ನು ಉದಯಶಂಕರರು

ಬಾಲಾಪರಾಧವಿರುವ ಪರಿಸರವನ್ನು ನಾಶಮಾಡಬೇಕು, ಮುರಿದು ಹಾಕಬೇಕು ಅಥವಾ ಬದಲಾಯಿಸಿಕೊಳ್ಳಬೇಕು ಎಂಬ ಉದ್ದೇಶದಿಂದ ಮಾಡಿದ ಆಕ್ರಮಣಕಾರಿ ಪ್ರತಿಭಟನೆಯೆಂದು ಹೇಳಿದ್ದಾರೆ. ಈ ಪ್ರತಿಭಟನೆ, ತನ್ನ ವ್ಯಕ್ತಿಗತವಾದ ಅವಶ್ಯಕತೆಗಳನ್ನು ಪೂರೈಸದಿರುವ ಸಾಮಾಜಿಕ ಪರಿಸ್ಥಿತಿಗಳ ವಿರುದ್ಧವಾದುದು. ಆದರೆ ಅವನು ತನ್ನಂತಹವರೊಂದಿಗೇ ಇದ್ದಾಗ ತನ್ನ ಅಭಿಲಾಷೆಗೆ ಅನುಗುಣವಾದ ಅನುಮೋದನೆ ಪಡೆಯುತ್ತಾನೆ, ತೃಪ್ತಿ ಹೊಂದುತ್ತಾನೆ.

**ಉದಯಶಂಕರರ ಅಧ್ಯಯನ:**

ಉದಯಶಂಕರರು ತಾವು ದೆಹಲಿಯಲ್ಲಿ ಅಧ್ಯಯನ ಮಾಡಿದ ೧೪೦ ಮಂದಿ ಬಾಲಾಪರಾಧಿಗಳ ಬಗ್ಗೆ ವರದಿ ಕೊಟ್ಟಿದ್ದಾರೆ. ಆ ಅಪರಾಧಿಗಳ ವಯಸ್ಸು ೭ ರಿಂದ ೧೯ ವರ್ಷಗಳವರೆಗೆ ಇತ್ತು. ಅದರಲ್ಲಿ ಶೇಕಡಾ ೧೬ರಷ್ಟು ಜನರು ಜೇಬುಗಳ್ಳತನಕ್ಕೆ ಸಂಬಂಧಿಸಿದ ಅಪರಾಧನಗಳಲ್ಲೂ ತೊಡಗಿದ್ದರು. ಆ ೧೪೦ ಜನರಲ್ಲಿ ಶೇ; ೬೦ ರಷ್ಟು ಹುಡುಗರು ಮನೆಯಿಂದಲೋ ಅಥವಾ ಶಾಲೆಯಿಂದಲೋ ಓಡಿಹೋದ ಸಂಬಂಧದಲ್ಲಿ ತಪ್ಪುಗಾರರಾಗಿದ್ದರು.

ಬಾಲಾಪರಾಧಿಗೆ ಅಂತರಾತ್ಮವೇ ಇರುವುದಿಲ್ಲ. ಉದ್ವೇಗವನ್ನು ಹತೋಟಿಗೆ ತರಬಲ್ಲ ಅಂತರಾತ್ಮವೇ ಇಲ್ಲದಿರುವುದರಿಂದ ಅಪರಾಧಿಯು ತನ್ನ ಉದ್ವೇಗದ ಕರುಣೆಯಲ್ಲಿ ಬಿದ್ದಿರಬೇಕಾಗುತ್ತದೆ. ಆದ್ದರಿಂದ ಅವನು ಸಾಮಾಜಿಕ ನೈಜತೆಯೊಡನೆ ಸಂಘರ್ಷಿಸಬೇಕಾಗುತ್ತದೆ. ಸಂಘರ್ಷಣೆಯಲ್ಲಿ ಅವನು ಒಳಗೊಳಗೇ ವ್ಯಥೆಪಡಬೇಕಾಗುವುದಿಲ್ಲ. ತದ್ವಿರುದ್ಧವಾಗಿ ಪ್ರಬಲ ಅಂತರಾತ್ಮವಿರುದ್ಧ ವ್ಯಕ್ತಿಯಲ್ಲಿ ಅಂತರಾತ್ಮಕ್ಕೂ ಮನಸ್ಸಿನ ಉದ್ವೇಗಕ್ಕೂ ಪ್ರಬಲ ಹೋರಾಟವಾಗುತ್ತದೆ. ಇದರಿಂದ ಅವನು ಅನೇಕ ರೀತಿಯ ವ್ಯಥೆಗೆ ಒಳಗಾಗುತ್ತಾನೆ, ಇದನ್ನು ನರಸಂಬಂಧಿ ತೊಂದರೆ ಎನ್ನುತ್ತಾರೆ. ಇಂತಹ ನರದೌರ್ಬಲ್ಯಕ್ಕೆ ಒಳಗಾದವನು ತನ್ನೆಲ್ಲಾ ನೋವುಗಳನ್ನು ತನ್ನಂತರಂಗದಲ್ಲೇ ಅರಗಿಸಿಕೊಳ್ಳುತ್ತಾನೆ. ಆದರೆ ಸಾಮಾನ್ಯ (typical) ಬಾಲಾಪರಾಧಿಯು ತನ್ನ ಸಂಘರ್ಷಣೆಗಳನ್ನು ಹೊರಹೊಮ್ಮಿಸುತ್ತಾನೆ.

ಐತಿಹಾಸಿಕವಾದ ಆಕಸ್ಮಿಕಗಳಿಂದ ಮನೋರೋಗ ಚಿಕಿತ್ಸಾ ಶಾಸ್ತ್ರದ ತಂತ್ರಗಳು ಮೊದಲು ನರರೋಗಿಗೆ ಸಂಬಂಧಿಸಿ ಬೆಳೆದು ಬಂದುವು. ಆದರೆ ಈಚೀಚೆಗೆ ಈ ತಂತ್ರಗಳನ್ನು ಅಪರಾಧಗಳ ಸಂಬಂಧವಾಗಿಯೂ ಬಳಸಿಕೊಳ್ಳುತ್ತಿದ್ದಾರೆ. ಈ ರೀತಿಯ ಪ್ರಯತ್ನವು ವಿಧವಿಧವಾದ ಪರಿಷ್ಕಾರಗಳು ತಲೆ ಎತ್ತಲು ಸಹಕಾರಿಯಾಗಿದೆ. ಅಂತಹವುಗಳಿಂದ ಗುಣಪಡಿಸುತ್ತಾರೆ. ಅವನಲ್ಲಿ ಅಂತರಾತ್ಮವನ್ನು ಉಂಟುಮಾಡುವವರೆಗೆ ಅಥವಾ ಬಲಗೊಳಿಸುವವರೆಗೆ ಪೂರ್ವಸ್ಥಿತಿಸ್ಥಾಪನೆ ಸಾಧ್ಯವೇ ಇಲ್ಲ.

ದುಷ್ಕರ್ಮಿಗಳಾಗಿ ರೂಪುಗೊಳ್ಳುತ್ತಿರುವ ಮಕ್ಕಳನ್ನು ಆದಷ್ಟು ಬೇಗ ಗುರುತಿಸಲು ಬೇಕಾದ ಪ್ರಯತ್ನಗಳನ್ನು ಮಾಡಬೇಕೆಂಬುದು ನಿರ್ವಿವಾದವಾದ ಸಂಗತಿ. ಯಾವ ಮಕ್ಕಳು ಅಧಿಕಾರಯುತ ಜಗತ್ತಿನಲ್ಲಿ ಸ್ವಯಂಪ್ರೇರಣೆಯಿಂದ ಮುಂದುವರಿಯಲು ಸಾಧ್ಯವಿಲ್ಲದೆ ದುಃಖಕ್ಕೆ ಒಳಗಾಗಿರುವರೋ ಅವರನ್ನು ಗುರ್ತಿಸಿ, ಸಮಯದಲ್ಲಿ ಸಹಾಯ ಮಾಡಬೇಕು, ಈ ಕೆಲಸಕ್ಕೆ ಸಾಕಷ್ಟು ಅನುಭವ ಮತ್ತು ಉತ್ತಮ ತರಬೇತಿಯುಳ್ಳ, ಉದ್ಯೋಗ ಮಂಡಲಿಯುಳ್ಳ, ಮಕ್ಕಳ ಮಾರ್ಗದರ್ಶನ ಮಾಡುವ ರುಗ್ಣಾಲಯಗಳನ್ನು ಸ್ಥಾಪಿಸಿ, ಸಮಸ್ಯೆಗಳನ್ನು ಬಗೆಹರಿಸಬೇಕಾದ ಅಗತ್ಯ ಇಂದು ಬಹಳವಾಗಿ ಇದೆ.

■

# ೧೬. ಶಾಲೆಗಳು 'ಗ್ಯಾಂಗು' ಗಳ ಉಗಮಸ್ಥಾನಗಳೇ ?

ಅಂದು ಭಾನುವಾರ ಮಗನಿಗೆ ಎಣ್ಣೆನೀರು ಹಾಕಬೇಕಿತ್ತು. ಬೆಳೆಯುವ ವಯಸ್ಸಿನಲ್ಲಿ ಮಕ್ಕಳಿಗೆ ವಾರಕ್ಕೊಮ್ಮೆಯಾದರೂ ಚೆನ್ನಾಗಿ ಎಣ್ಣೆ ನೀರಿನ ಸ್ನಾನ ಮಾಡಿಸಿದರೆ ಮಕ್ಕಳಿಗೆ ಒಳ್ಳೆಯದೆಂದು ತಾಯಿಯಿಂದ ಪಾಠ ಕಲಿತಿದ್ದ ಸುಧಾ ನಾಲ್ಕನೆಯ ತರಗತಿಯಲ್ಲಿ ಓದುತ್ತಿದ್ದ ಅರುಣನಿಗೆ ಪ್ರತಿ ವಾರವೂ ಎಣ್ಣೆ ಎರೆದು ಸ್ನಾನ ಮಾಡಿಸುತ್ತಿದ್ದಳು. ಮಗನನ್ನು ಬಚ್ಚಲಿಗೆ ಕರೆದುಕೊಂಡು ಹೋಗಿ ತಲೆಗೆ ಎಣ್ಣೆ ಹಚ್ಚತೊಡಗುತ್ತಲೇ,

'ಹಾ;ತಲೆ' ಎಂದು ನರಳಿದ ಅರುಣ– ಸುಧಾ ಗಾಬರಿಯಾಗಿ 'ಏಕೆ ಏನಾಯ್ತು ಮರಿ' ಎಂದಾಗ 'ತಲೆಯೊಳಗೆಲ್ಲಾ ಏನೋ ಒಂದು ತರಹ ಜುಂ ಎನಿಸುತ್ತದೆ' ಎಂದ.

'ಎಲ್ಲೋ ತಲೆಗೆ ಪೆಟ್ಟು ಬಿದ್ದರಬೇಕು, ಎಲ್ಲಾದರೂ ಬಿದ್ದೆಯಾ? ತಲೆಗೇನಾದರೂ ಬಡಿಸಿಕೊಂಡೆಯಾ ? ಏನಾಯ್ತು ?

'ನಿನ್ನೆ ಸ್ಕೂಲ್ ಬಿಟ್ಟಾಗ, ಏಳನೆಯ ತರಗತಿಯ ಹುಡುಗ ಮೆಟ್ಟಿಲುಗಳ ಮೇಲಿಂದ ತಳ್ಳಿಬಿಟ್ಟ, ಮೆಟ್ಟಲಿನಿಂದ ಉರುಳಿ ಕೆಳಗೆ ಬಿದ್ದುಬಿಟ್ಟೆ'

'ಏಕೆ ಹಾಗೆ ಮಾಡಿದ ? ನೀನವನಿಗೇನಾದರೂ ಮಾಡಿರಬೇಕು'

'ಇಲ್ಲ, ನಾನೇನೂ ಮಾಡಿಲ್ಲ, ಬೇಕಾದರೆ ಶಾಲೆಗೆ ಬಂದು ಕೇಳು'

'ಸುಮ್ಮ ಸುಮ್ಮನೆ ನಿನ್ನನ್ನೇಕೆ ತಳ್ಳುತ್ತಾನೆ ? ನಿನ್ನದೇನೋ ಕಿತಾಪತಿ ಇರಬೇಕು' ಯಾರ ತಂಟೆಗೂ ಹೋಗಬೇಡ, ನಿನ್ನ ಓದು, ಬರಹ ಆಕಡೆ ಲಕ್ಷ ಕೊಡೂಂದ್ರೆ ಕೇಳ್ತೀಯಾ, ಕೀಟ್ಲೆ ಮಾಡಿದ್ರೆ, ಅವ್ರು ಬಿಡ್ತಾರಾ?

'ಇಲ್ಲಮ್ಮಾ ನಾನೇನ್ಮಾಡ್ಲಿಲ್ಲ, ನಾವು ಮೆತ್ತಗಿದ್ರೇ ಹಂಗ್ಮಾಡ್ತಾರೆ, ದೊಡ್ಡವ್ರು ಚಿಕ್ಕವ್ರಿಗೆ ಏನಾದರೂ ಮಾಡಿ ಸತಾಯಿಸ್ತಲೇ ಇರ್ತಾರೆ. ಜೋರಿದ್ದೋರ ತಂಟೆಗೆ ಹೋಗೋಲ್ಲ, ಮೆತ್ತಗಿದ್ರೆ ಕಾಡಿಸ್ತಾರೆ'

'ಟೀಚರ್‌ಗೆ ಹೇಳ್ಬೇಕಾಗಿತ್ತು'

ಹೇಳಿದ್ರೆ ಟೀಚರ್ರೂ ಏನೂ ಮಾಡೋದಿಲ್ಲ, ನಮ್ಮನ್ನೇ ಬೈದು ಕಳಿಸ್ತಾರೆ, ತುಂಟ ಹುಡುಗ್ರು ಟೀಚರ್ರೂಗ್ಗಿ ಹೆದ್ರೋದಿಲ್ಲ. ಪ್ರಿನ್ಸಿಪಾಲರ ಎದುರ್ಗಷ್ಟೆ ಸುಮ್ನಿರ್ತಾರೆ ಹೊರಗ್ಬಂದು ಅವ್ರಿಗೂ ಸಿಕ್ಕಾಪಟ್ಟೆ ಕೆಟ್ಟ ಮಾತೆಲ್ಲ ಆಡ್ತಾರೆ, ಟೀಚರ್ಗೇ ಏನೇನೋ ಅಂತಾರೆ, ಅದಕ್ಕೆ ಟೀಚರ್ರೂ ಅಂತಹ ಹುಡುಗ್ರ ತಂಟೆಗೇ ಹೋಗೋಲ್ಲ' ಎಂದ ಅರುಣ.

ಸುಧಾ ಈಗಿನ ಕಾಲದಲ್ಲೂ 'ಮೈಟ ಈಸ ರೈಟ್ ' ಎನ್ನುವ ಸ್ಥಿತಿ ಕೇಳಿ ಆಶ್ಚರ್ಯವಾಯ್ತು. ಒಳ್ಳೆಯ ಸ್ಕೂಲಿಗೆ ಕಳ್ಸಿದ್ರೆ, ಓದೋದ್ರಲ್ಲಿ, ನಡತೆಯಲ್ಲಿ ಚೆನ್ನಾಗಿ ಮುಂದುವರಿದು ಮಗ ವಿದ್ಯಾವಂತನಾಗುತ್ತಾನೆ. ಒಳ್ಳೆಯ ಪ್ರಜೆಯಾಗ್ತಾನೇಂತ, ಗಂಡನ ಸಂಬಳ ಜೀವನಕ್ಕೆ ಸಾಲುವಂತಿಲ್ಲದಿದ್ದರೂ ಜಾಣತನದಿಂದ ಸಂಸಾರ ತೂಗಿಸಿಕೊಂಡು, ಪ್ರೈಮರಿ ತರಗತಿಗೇ ತಿಂಗಳಿಗೆ ಮೂವತ್ತು ರೂಪಾಯಿಯಂತೆ ಹನ್ನೆರಡೂ ತಿಂಗಳೂ ಫೀಸ್ ತುಂಬುವ ಶಾಲೆಗೆ ಕಳಿಸುತ್ತಿದ್ದ ಅವಳಿಗೆ ಮಗನು ಹೇಳಿದ ವಿಚಾರ ಕೇಳಿ ದಿಕ್ಕೇ ತೋಚದಂತಾಯ್ತು. ಹೀಗಾದರೆ ಮಗುವಿನ ಗತಿ ಏನು? ಚಿಕ್ಕ ಹುಡುಗರನ್ನು ದೊಡ್ಡವರು ಹೊಡೆಯುತ್ತಾ ಚಿಕ್ಕಮಕ್ಕಳು ಅಸಹಾಯಕರಾಗಿ ಸಹಿಸುತ್ತಾ ಹೋದರೆ ಮಕ್ಕಳ ಗತಿ ಏನು ? ಎಂದುಕೊಂಡು ಹೇಗಾದರಾಗಲಿ, ಒಂದು ದಿನ ಶಾಲೆಗೆ ಹೋಗಿ ಟೀಚರನ್ನು ಕಂಡು ಮಾತಾಡಿ ಬರಬೇಕೆಂದು ಹೋದಳು. ಶಿಕ್ಷಕಿಯು ಕರಿ ಹಲಗೆಯ ಮೇಲೆ ಕೆಲವು ಪ್ರಶ್ನೆಗಳನ್ನು ಅವಕ್ಕೆ ಉತ್ತರವನ್ನೂ ಬರೆದು ಮಕ್ಕಳಿಗೆ ಕಾಫಿ ಮಾಡಿಕೊಳ್ಳಲು ಹೇಳುತ್ತಿದ್ದಳು. ತರಗತಿಯಲ್ಲಿ ತೊಂಬತ್ತು ಪುಟ್ಟ ಮಕ್ಕಳು ಬೇರೆ ಬೇರೆಯ ವಾತಾವರಣದಲ್ಲಿ ಬೆಳೆದವರು. ವಿಧ ವಿಧದ ಆರ್ಥಿಕ ಮಟ್ಟದ ಮನೆಗಳಿಂದ ಬಂದವರು. ಕೆಲವು ಮಕ್ಕಳು ಕಾಫಿ ಮಾಡಿಕೊಳ್ಳುವುದರಲ್ಲಿ ತಲ್ಲೀನರಾಗಿದ್ದರೆ, ಮತ್ತೆ ಕೆಲವರು ಮಾತನಾಡುತ್ತಿದ್ದರು. ಇನ್ನು ಕೆಲವರು ಜಗಳಾಡುತ್ತಿದ್ದರು, ಹಿಂದಿನ ಬೆಂಚಿನ ಹುಡುಗರು ಕೈ ಕೈ ಮಿಲಾಯಿಸುತ್ತಿದ್ದರು, ಕ್ಲಾಸಿನಲ್ಲಿ ದೊಂಬಿಯೋ ದೊಂಬಿ, ಮಕ್ಕಳ ಗದ್ದಲವನ್ನು ನಿಲ್ಲಿಸಲು ಪ್ರಯತ್ನಿಸಿ ಸಾಧ್ಯವಾಗದೇ ಅಸಹಾಯಕತೆಯಿಂದ ದೃಷ್ಟಿಯಿಂದ ನಿಂತಿದ್ದಳು ಶಿಕ್ಷಕಿ, ಟೀಚರ್ಗೆ ತನ್ನ ಮಗನನ್ನು ಮೇಲಿಂದ ತಳ್ಳಿದ ವಿಷಯ ಹೇಳಲು ಬಂದ ಸುಧಾಗೆ ಆಕೆಯ ಅಸಹಾಯಕತೆಯನ್ನು ನೋಡಿ, 'ಹೇಳಿದರೂ ಆಗುವ ಪ್ರಯೋಜನ ಅಷ್ಟೆ' ಎನ್ನಿಸಿತು. ಆದರೂ ಹೇಳುವ ಶಾಸ್ತ್ರಮಾಡಿ ಬಂದಳು.

ಒಂದು ವಾರ ಕಳೆದಿರಬಹುದು, ಅರುಣ ಗೆಲುವಾಗಿದ್ದ, ಹೊಡಿಸಿಕೊಂಡು ಬಂದ ದೂರನ್ನು ಈಚೆಗೆ ಹೇಳಿರಲಿಲ್ಲ. ಆದುದರಿಂದ ಶಿಕ್ಷಕಿ ತನ್ನ ಮಾತಿಗೆ ಗಮನ ಕೊಟ್ಟು ಏನೋ ವ್ಯವಸ್ಥೆ ಮಾಡಿರಬೇಕೆನ್ನಿಸಿ,

'ಈಗ ಯಾರೂ ನಿನ್ನ ತಂಟೆಗೆ ಬರುವುದಿಲ್ಲಾ ಅಲ್ವಾ ? ಎಂದಳು

'ಹೂಂ ಬರ್ತಾರೆ ? ಬಂದ್ರೆ ಅವ್ನೆ ಫಜೀತಿ ಎದ್ದು ಹೋಗ್ತಾನೆ'

'ಟೀಚರ್ ಚೆನ್ನಾಗಿ ಹೆದರ್ಸಿರ್ಬೇಕು ಅಲ್ವಾ ?

'ಯಾವ ಟೀಚರ್ ? ಟೀಚರ್ರೇ ಹೆದರ್ತಾರೆ ಅಂತಹ ಹುಡುಗರ್ಗೆ'

'ಮತ್ತೆ ಈಗ್ಹೆಂಗೆ ಸುಮ್ನಾದ?'

'ಈಗ ನಮ್ದೂ ಒಂದ ಗ್ಯಾಂಗ್ ಕಟ್ಕೋಂಡಿದ್ದೀವಿ, ನಮ್ಮ ಪೈಕಿ ಯಾರ್ಗಾದ್ರೂ ಒಬ್ರಿಗೆ ಹೊಡೆದ್ರೂ ನಮ್ಗ್ಯಾಂಗ್‌ನವರೆಲ್ಲಾ ಒಟ್ಟಾಗಿ ಹೋಗಿ ಅವನ್ನ ಹೊಡೆದುಬಡ್ದು ತುಳುದ್ಬಿಟ್ತೀವಿ, ಈಗ್ಯಾಕೆ ನಮ್ತಂಟೇಗ್ಯಾರುಬರ್ತಾರೆ ಬರ್ಲಿ' ಎಂದು ಸೆಡ್ಡು ಹೊಡೆದಂತೆ ಮಾತಾಡಿದ. ಸುಧಾ ಹೌಹಾರಿದಳು. ಈ ವಯಸ್ಸಿಗೇ ಗ್ಯಾಂಗು, ಹೊಡೆದಾಟ – ಬಡಿದಾಟ ಎಂದರೆ, ಈ ಮಕ್ಕಳು ಮುಂದೆ ಏನಾಗಬಹುದು? ಆದರೆ ಹೀಗೆ ಮಾಡಿಕೊಳ್ಳದಿದ್ದರೆ ಶಾಲೆಯಲ್ಲಿ ಅವರು ಬಚಾಗುವುದು ಕಷ್ಟ. ಟಾಂ ಬಾಯ್ಸ್‌ಗಳ ಹಿಡಿತದಿಂದ ಪಾರಾಗಿ ಬರುವುದು ಸಾಧ್ಯವಿಲ್ಲ. ಸಂಭಾವಿತತನ ಹೇಡಿತನವೆಂಬ ಭಾವನೆ ಮಕ್ಕಳು ಮೊಳೆಯುವಾಗಲೇ ಮೂಡುವಂತಹ ವಾತಾವರಣವಿದ್ದರೆ, ಅವರು ಉತ್ತಮಗುಣಗಳನ್ನು ಬೆಳೆಯಿಸಿಕೊಳ್ಳಲು ಹೇಗೆ ಸಾಧ್ಯ? ಮೌಲ್ಯಗಳಿಗೆ ಹೇಗೆ ತಾನೆ ಮಹತ್ವಕೊಟ್ಟಾರು? ಆ ಮೌಲ್ಯಗಳೇ ಮಕ್ಕಳಿಗೆ ಮುಳುವಾದರೆ ಮಕ್ಕಳು ಅವುಗಳನ್ನು ಗಾಳಿಗೆ ತೂರದೆ ಏನು ಮಾಡಿಯಾರು ? ತಂದೆ ತಾಯಿಗಳು ಶಾಲೆಯಲ್ಲಿನ ತಮ್ಮ ಸಮಸ್ಯೆಗಳನ್ನು ಪರಿಹಾರ ಮಾಡಲು ಬರುವಂತಿಲ್ಲ. ಶಿಕ್ಷಕರು ಅಸಹಾಯಕರು. ಆಗ ಮಕ್ಕಳು ತಮ್ಮ ಬಚಾವಣೆಗೆ ತಾವೇ ಪರಿಹಾರ ಕಂಡುಕೊಳ್ಳುವುದು ಸಹಜ. ಅಗಿನ್ನೇನು ಮಾಡಿಯಾರು? ಗ್ಯಾಂಗ್ ಕಟ್ಟಿಕೊಂಡು ದುಷ್ಟರಿಗಿಂತ ದುಷ್ಟರಾಗಿ ರೂಪುಗೊಂಡಾಗ ಮಾತ್ರ ಅವರಿಗೆ ಉಳಿಗಾಲ. ಈಗಿನ ಬಹುತೇಕ ಶಾಲೆಗಳಲ್ಲಿ ಈ ಸ್ಥಿತಿ, ಇದಾದರೂ ಉತ್ತಮ ಶಿಕ್ಷಕರಿರುವ ತಿಂಗಳಿಗೆ ಮೂವತ್ತು ರೂ. ಫೀಸು ಕೊಡಬಲ್ಲ. ಶಿಕ್ಷಣದ ಬಗ್ಗೆ ಮಹತ್ವ ತಿಳಿದ ಪಾಲಕರ ಮನೆಯ ಮಕ್ಕಳು ಬರುವಂತಹ ಸ್ಕೂಲಿನಲ್ಲಿಯ ಸ್ಥಿತಿ – ಹಾಗಾದರೆ ಉಳಿದ ಶಾಲೆಗಳ ಸ್ಥಿತಿ ಹೇಗಿರಬೇಕು ಎಂದು ಸುಧಾಳಿಗೆ ಊಹಿಸಿಕೊಳ್ಳಲೂ ಸಾಧ್ಯವಾಗಲಿಲ್ಲ. ಈ ರೀತಿ ಬೆಳೆದ ಮಕ್ಕಳು ಹೊಣೆಗಾರ ಪ್ರಜೆಗಳಾಗಿ ಬಾಳಲು ಸಾಧ್ಯವೆ? ತಮ್ಮ ರಾಷ್ಟ್ರ ಎಂಬ ಪ್ರಜ್ಞೆಯಿಂದ ಬದುಕಬಲ್ಲರೆ? ಬಹುಶ: ಹೀಗಾಗಿಯೇ ಇಂದಿನ ದಿನಗಳಲ್ಲಿ ದೇಶದ ತುಂಬಾ ಅಶಾಂತಿ, ದ್ವೇಷ, ಮೋಸ, ರಾಷ್ಟ್ರದ್ರೋಹ, ಭ್ರಷ್ಟಾಚಾರ ತುಂಬಿಕೊಂಡಿದೆಯೆನ್ನಿಸಿತಾಕೆಗೆ, ಇಂತಹ ಶಾಲೆಗಳಿರುವುದಕ್ಕಿಂತ ಮುಚ್ಚಿದರಾದರೂ ಒಳ್ಳೆಯದೇನೋ ಎನ್ನಿಸದೆಯೂ ಇರಲಿಲ್ಲ– ಅವಳಿಗೆ. ಹೀಗೆಯೇ ಆಳವಾಗಿ ಯೋಚಿಸುತ್ತಾ ಕುಳಿತವಳಿಗೆ ಅರುಣ ಬಂದು 'ಅಮ್ಮಾ' ಎಂದಾಗಲೇ ಎಚ್ಚರ.

'ಅಮ್ಮಾ ತುಂಬಾ ತಲೆನೋವು, ಹೊಟ್ಟೆಯಲ್ಲಿ ಸಂಕಟ'

'ಏಕೆ ಮಧ್ಯಾಹ್ನ ಊಟ ಮಾಡ್ಲಿಲ್ವಾ, ಡಬ್ಬಿಯಲ್ಲಿ ತಿಂಡಿ ಕಟ್ಟಿಕೊಟ್ಟಿದ್ನಲ್ಲಾ ತಿಂದೆ ತಾನೆ?'

'ತಿನ್ನೋಕೋ ಆಗ್ಲಿಲ್ಲಮ್ಮಾ, ತಿನ್ನೋಕೇ ಬೇಜಾರು ಅಲ್ಲ, ಡಬ್ಬಿ ತೆಗೀತಿದ್ದಂತೆ ನಾಯಿಗಳು ಬಂದು ಬಾಲ ಅಲ್ಲಾಡಿಸ್ಕೊತಾ ನಿಂತುಬಿಡುತ್ವೆ, ಭಿಕ್ಷಕರು ಹಲ್ಕಿರ್‍ಕೊಂಡು ಮುಂದೆ ನಿಂತ್ಕೊತಾರೆ, ಎಲ್ಲಿಂದಾನೋ ಹದ್ದೋ ಕಾಗ್ಯೋ ಬಂದು ರಪ್ಪಂತ ಬಡ್ಡು ಚಪಾತೀನ ಕಚ್ಕೊಂಡು ಹೋಗಿಬಿಡುತ್ತೆ. ತಿನ್ನೋಕೇ ಬೇಜಾರು'

ಸುಧಾಗೆ ಏನು ಮಾಡ್ಬೇಕೋ ತಿಳೀಲಿಲ್ಲ. ಬೆಳಿಗ್ಗೆ ಹತ್ತುಗಂಟೆಗೇ ಅವಸರದಲ್ಲಿ ಒಂದಿಷ್ಟು ತಿಂದು ಹೋದ ಮಕ್ಕಳು ಸಂಜೆ ಆರಾದ್ರೂ ಏನೂ ತಿನ್ದೇ ಇದ್ರೆ, ಮಕ್ಕಳ ಆರೋಗ್ಯ ಏನು'? ಬರೀ ಹೊಟ್ಟೇಲಿ, ಮಧ್ಯಾಹ್ನ ಪಾಠ ತಾನೆ ಏನ್ಕಲಿತುಕೊಳ್ತಾರೆ ಎಂದು ಬಹಳ ಬೇಜಾರೆನ್ನಿಸಿತು. ತನ್ನ ಮಗ ಇಂಥ ಸ್ಕೂಲ್ನಲ್ಲಿ ಓದಿ ಮುಂದೆ ಬರಬಹುದೆ ಎನ್ನಿಸಿತು. ತನ್ನ ಹಾಗೆ ಎಷ್ಟು ಜನ ತಂದೆ – ತಾಯಿಯರು ಒದ್ದಾಡ್ತಿದಾರೋ ಎಂದುಕೊಂಡಳು. ಈ ಬಗ್ಗೆ ಎಲ್ಲಾ ಯೋಚಿಸಿ, ಯೋಚಿಸಿ ತಲೆ ಚಿಟ್ಟು ಹಿಡಿದಂತಾಯ್ತು. ತನ್ನ ಫ್ರೆಂಡ್ ವಿನುತ ತರಬೇತಿ ಕಾಲೇಜಿನಲ್ಲಿ ಶಿಕ್ಷಕಿಯಾಗಿದ್ದಾಳೆ, ಅವಳೇನು ಹೇಳ್ತಾಳೆ ನೋಡೋಣ ಅವಳೊಂದಿಗೆ ಮಾತಾಡ್ಕೊಂಡ್ಬಂದ್ರೆ ಸ್ವಲ್ಪ ಛೇಂಜ್ ಆದ್ರೂ ಆಗಿ ಮನಸ್ಸಿಗೆ ನೆಮ್ಮದಿ ಸಿಕ್ಕೀತೂಂತ ಹೊರಟಳು.

ಯಾವಾಗಲೂ ಬಿಡುವೇ ಇಲ್ಲದ ವಿನುತಾ ಅಂದು ಏಕೋ ಫ್ರೀಯಾಗಿ ಕೂತಿದ್ಲು, ತನ್ನ ಗೆಳತಿ ಸುಧಾ ಬಂದದ್ದನ್ನು ನೋಡಿ ಅವ್ಳಿಗೂ ಖುಷಿಯಾಯ್ತು. ಏಕೆಂದ್ರೆ ಸುಧಾ ಉಳಿದ ಹೆಣ್ಣುಮಕ್ಕಳಂತೆ ಕಾಡು ಹರಟೆ ಹೊಡೆಯುತ್ತಿರಲಿಲ್ಲ. ಕೇವಲ ಸೀರೆ, ಒಡವೆ, ಸಿನಿಮಾಗಳ ಬಗ್ಗೆ ಮಾತಾಡ್ತಿರಲಿಲ್ಲ. ಅವ್ಳೇನೇ ಮಾತಾಡಿದ್ರೂ ಉಪಯೋಗಕರವಾದ ವಿಚಾರ ಕುರಿತು ಮಾತಾಡ್ತಿದ್ಲು. ಅದಕ್ಕಾಗಿ ಸುಧಾ ಬಂದದ್ದು ವಿನೂತಗೆ ಸಂತೋಷವೇ ತಂದಿತ್ತು. ಇಬ್ಬರೂ ಸಾಕಷ್ಟು ಮಾತನಾಡಿದ್ರು, ಸುಧಾ ತನ್ನೆಲ್ಲಾ ಸಮಸ್ಯೆಗಳನ್ನು ಅನಿಸಿಕೆಗಳನ್ನು ವಿನೂತಾ ಮುಂದೆ ತೋಡಿಕೊಂಡಳು.

'ಹೌದು, ಸುಧಾ, ನೀನು ಹೇಳಿದಂತೆ ಈಗಿನ ಬಹಳಷ್ಟು ಶಾಲೆಗಳಲ್ಲಿ ಸಮಸ್ಯೆಗಳು ತುಂಬಿವೆ. ಶಿಸ್ತಿನ ಗಂಧವೇ ಇಲ್ಲವಾಗಿದೆ. ಗ್ಯಾಂಗಿನ ಉಗಮ ಸ್ಥಾನಗಳಾಗಿವೆ. ಸಮಾಜ ಕಂಟಕರಾಗಿ ಬಾಳುವಂತಹ ಪ್ರಜೆಗಳ ತರಬೇತಿಯ ಕೇಂದ್ರಗಳಾಗಿವೆಯೆಂದರೂ ತಪ್ಪೇನಿಸುವುದಿಲ್ಲ.

'ಅಂದ್ರೆ ಇದನ್ನು ಸರಿಪಡ್ಸೋದು ಹೇಗೆ ? ಶಿಕ್ಷಕರು ಯಾಕೆ ಇರೋದು ?

ಇಂತಹ ಸ್ಕೂಲಗಳನ್ನು ನಡ್ಸೋಕೆ ಸರ್ಕಾರ್ದೋರು ಪರವಾನಗಿ ಏಕೆ ಕೊಡಬೇಕು? ಶಿಕ್ಷಣ ಕೊಡೋ ಹೆಸರ್ನಲ್ಲಿ, ಶಾಲೆಗಳು ದೇಶದ್ರೋಹಿಗಳನ್ನು ನಿರ್ಮಿಸಿದಂತಾಗುವುದಿಲ್ಲವೇ? ಇದಕ್ಕೆಲ್ಲಾ ಶಿಕ್ಷಕರೇ ಶಾಲೆಗಳೇ ಕಾರಣಗಳಲ್ಲವೆ?

'ಹೌದು ಮೇಲ್ನೋಟಕ್ಕೆ ಹಾಗನ್ನಿಸುತ್ತದೆ. ಆದ್ರೆ ಶಿಕ್ಷಕರು ಏನ್ಮಾಡ್ಬೇಕು ಹೇಳು? ಒಂದು ಕ್ಲಾಸಿನಲ್ಲಿ ತೊಂಬತ್ತು – ನೂರು ಮಕ್ಕಳಿದ್ದರೆ ಒಬ್ಬ ಶಿಕ್ಷಕಿ ಅವ್ರನ್ನ ನಿಯಂತ್ರಿಸಲು ಸಾಧ್ಯವೇ? ಪಾಠ ಕಲಿಸಬೇಕೆ? ನೀತಿ ಬೋಧಿಸಬೇಕೆ ? ಏನ್ಮಾಡ್ಬೇಕು ಹೇಳು, ಮನೆಯಲ್ಲಿ ಎರಡು ಮೂರು ಮಕ್ಕಳಿದ್ದರೇ ಅವ್ರನ್ನ ನೋಡಿಕೊಳ್ಳಲು ಸಾಕ್ಸಾಗುತ್ತೇಂತ ತಂದೆ – ತಾಯ್ಗಳೇ ಹೇಳ್ತಾರೆ. ಹಾಗಿದ್ದಾಗ ಬೇರೆ ಬೇರೆ ಸ್ವಭಾವದ ಅಷ್ಟೊಂದು ಮಕ್ಕಳನ್ನು ಒಬ್ಬ ಟೀಚರ್ ಹೇಗೆ ಸುಧಾರಿಸ್ಬೇಕು? ಯಾವಾಗ ಪಾಠ ಹೇಳ್ಬೇಕು ? ಇದನ್ನು ಯಾರೂ ವಿಚಾರ ಮಾಡೋದೇ ಇಲ್ಲ. ಪಠ್ಯವನ್ನು ಮುಗಿಸ್ಬೇಕೂಂತ ಕಟ್ಟಳೆ ಇರುತ್ತೆ. ಅದಕ್ಕೆ ಅವರು ದಿನಕ್ಕೊಂದು ಪಾಠದ ಪ್ರಶ್ನೋತ್ತರಗಳನ್ನು ಕಪ್ಪು ಹಲಗೆ ಮೇಲೆ ಪ್ರತಿಯೊಂದು ವಿಷಯದಲ್ಲೂ ಬರೆಯುತ್ತಾರೆ. ಮನೆಯಲ್ಲಿ ಮಕ್ಕಳ ಶಿಕ್ಷಣದ ಬಗೆಗೆ ಕಾಳಜಿ ವಹಿಸುವಂತೆ ತಿಳಿಸುತ್ತಾರೆ. ಮಕ್ಕಳು, ಶಾಲೆಯಲ್ಲಿ ಹೇಳಿದುದನ್ನು ಬರೆದುಕೊಂಡು ಹೋಗುತ್ತಾರೆ. ಕೆಲವು ತಂದೆ – ತಾಯಿಗಳು ಅವುಗಳನ್ನು ಮನೆಯಲ್ಲಿ ಕಂಠಪಾಠ ಮಾಡಿಸುತ್ತಾರೆ. ಉಳಿದ ಮಕ್ಕಳು ಅದೂ ಇಲ್ಲ ಇಲ್ಲಿ, ಬಂದು ಜಗಳವಾಡಿ, ಹೊಡೆದಾಡಿ, ಆಟ ಆಡಿ, ಗ್ಯಾಂಗ್ ಕಟ್ಟಿ, ಕುಣಿದು, ನೆಗೆದು, ಮನೆಗೆ ಹೋಗುತ್ತಾರೆ ಮನೆಯಲ್ಲಿ ಪಾಲಕರು ಏನೂ ಕಲಿತಿಲ್ಲ ಎಂದು ಬಯ್ತಾರೆ. ಶಾಲೆಯಲ್ಲೊ ಏನೂ ಓದ್ಕೊಂಡು ಬಂದಿಲ್ಲಾಂತೆ ಶಿಕ್ಷಿಸುತ್ತಾರೆ, ಎರಡೂ ಕಡೆಯ ಬಯ್ಗಳ ಮಧ್ಯೆ, ಮಕ್ಕಳಿಗೆ ತಮ್ಮಂತೆಯೇ ಬೇಜವಾಬ್ದಾರಿಯಿಂದ ಇರುವ ಮಕ್ಕಳೊಡನೆ ಗ್ಯಾಂಗ್‌ಕಟ್ಟಿಕೊಂಡು ಜೋರು ಮಾಡಿಕೊಂಡು ಬದುಕುವುದೇ ಪರಿಹಾರವೆನ್ನಿಸುತ್ತದೆ. ಎಲ್ಲಿಯೂ ರೆಕಗ್ನಿಷನ್ ಸಿಕ್ಕದ ಆ ಮಕ್ಕಳಿಗೆ ತಮ್ಮ ಗ್ಯಾಂಗಿನಲ್ಲಿ ಹೆಚ್ಚು ಧೀರತನ ತೋರಿಸಿದ ಹುಡುಗನಿಗೆ ಮಹತ್ವ ದೊರೆಯುತ್ತದೆ. ಆಗ ಗ್ಯಾಂಗಿನ ಪ್ರತಿಯೊಬ್ಬರೂ ಒಬ್ಬರಿಗಿಂತ ಒಬ್ಬರು ದುಷ್ಟತನದಲ್ಲಿ ಮೇಲಾಗಲು ಪ್ರಯತ್ನಿಸುತ್ತಾರೆ. ಮನೆಯಲ್ಲಿ ಶಾಲೆಯಲ್ಲಿ ಬೈಗಳಿಂದ ತಪ್ಪಿಸಿಕೊಳ್ಳಲು ಎದುರು ಮಾತನಾಡುವುದು, ಜೋರು ಮಾಡುವುದು, ಜಗಳವಾಡುವುದು ಕಲಿಯುತ್ತಾರೆ. ಆಗ ಶಿಕ್ಷಕರು ಅವರ ತಂಟೆಗೇ ಹೋಗುವುದನ್ನು ಬಿಡುತ್ತಾರೆ. ಮನೆಯಲ್ಲಿ ದಿನವೂ ಬಯ್ಯುತ್ತಾರೆ. ಇಲ್ಲಿಗೆ ಅವರ ಬೌದ್ಧಿಕ ಬೆಳವಣಿಗೆ ಮುಕ್ತಾಯವಾದಂತೆ.

'ಅಂದರೆ ಮಕ್ಕಳನ್ನು ಹಾಳು ಮಾಡಲೆಂದೇ ಶಾಲೆಗೆ ಕಳಿಸಿದಂತೆ ಎನ್ನುತ್ತೀಯಾ? ಇದಕ್ಕೆ ಪರಿಹಾರವೇ ಸಾಧ್ಯವಿಲ್ಲವೇ ? ತರಗತಿಯಲ್ಲಿ ಅಷ್ಟೊಂದು ಮಕ್ಕೇಕಿರಬೇಕು? ಇನ್ನೂ ಹೆಚ್ಚು ಡಿವಿಜನ್ಸ್‌ನ್ನು ತೆಗೆಯಬಾರದೇಕೆ?

ನೀನು ಹೇಳುವುದು ಸರಿ, ಪ್ರೈಮರಿ ಹಂತದಲ್ಲಿ, ಒಂದೊಂದು ತರಗತಿಯಲ್ಲಿ ಮೂವತ್ತು ಅಥವಾ ಮೂವತ್ತೈದು ಮಕ್ಕಳಿದ್ದರೆ, ಶಿಕ್ಷಕರು ಪ್ರತಿಯೊಂದು ಮಗುವಿನ ವಿಷಯಗಳನ್ನೆಲ್ಲಾ ತಿಳಿದುಕೊಂಡು ವೈಯಕ್ತಿಕಯವಾದ ಲಕ್ಷ್ಯಕೊಟ್ಟು ಅವರ ಬೌದ್ಧಿಕ ನೈತಿಕ ಮುಂತಾದ ಸರ್ವತೋಮುಖವಾದ ಬೆಳವಣಿಗೆಗೆ ಸಹಾಯಕವಾಗಲು ಸಾಧ್ಯವಾಗುತ್ತದೆ. ಆದರೆ ನಮ್ಮ ದೇಶದ ಜನಸಂಖ್ಯೆ ಹೆಚ್ಚು, ಅದಕ್ಕನುಗುಣವಾಗಿ ಸಣ್ಣ ಸಣ್ಣ ತರಗತಿಗಳನ್ನು ಮಾಡುತ್ತಾ ಹೋದರೆ, ಶಾಲೆಯಲ್ಲಿ ಕೊಠಡಿಗಳ ಸಂಖ್ಯೆ ಹೆಚ್ಚಿಸಬೇಕಾಗುತ್ತದೆ. ಶಿಕ್ಷಕಿಯರ ಸಂಖ್ಯೆಯನ್ನು ಹೆಚ್ಚಿಸಬೇಕಾಗುತ್ತದೆ. ಪೀಠೋಪಕರಣ ಬೋಧನೋಪಕರಣಗಳ ಸಂಖ್ಯೆಯನ್ನು ಬೆಳೆಸಬೇಕು. ಜೊತೆಗೆ ಪುಸ್ತಕ, ಶಿಕ್ಷಕೇತರ ಸಿಬ್ಬಂದಿಯ ಸಂಖ್ಯೆಯನ್ನು ಬೆಳೆಸಬೇಕಾಗುತ್ತದೆ. ಇದಕ್ಕೆ ಅಪಾರವಾದ ಹಣಬೇಕು. ಹಾಸಿಗೆ ಇದ್ದಷ್ಟು ಕಾಲುಚಾಚಬೇಕಲ್ಲವೆ ? ಹಾಗಾಗಿ ಶಾಲೆಗಳಲ್ಲಿ ಮಕ್ಕಳ ಸಂಖ್ಯೆ ಹೆಚ್ಚಿದ್ದರೂ ಹೆಚ್ಚು ತರಗತಿಗಳನ್ನು ತೆರೆಯಲು ಸರ್ಕಾರ ಪರವಾನಿಗಿ ಕೊಡುವುದಿಲ್ಲ. ಸರ್ಕಾರವೂ ಶಿಕ್ಷಣಕ್ಕಾಗಿ ಇಂತಿಷ್ಟು ಹಣವೆಂದು ಖರ್ಚು ಮಾಡಬಹುದು. ಅದಕ್ಕಿಂತ ಹೆಚ್ಚು ಖರ್ಚು ಮಾಡಲು ಸಾಧ್ಯವಿಲ್ಲ.

'ಅಂದರೆ ಶಾಲೆಗಳು ಹೀಗೆಯೇ ನಡೆಯಬೇಕೆ ? ಬಹಳಷ್ಟು ಶಾಲೆಗಳು ಖದೀಮರನ್ನೇ ಪ್ರತಿವರ್ಷವೂ ಉತ್ಪಾದಿಸುತ್ತ ಹೋಗಿ, ದೇಶ ಮೌಲ್ಯಾಧಾರಿತ ರಾಷ್ಟ್ರವಾಗಬೇಕು, ಒಗ್ಗಟ್ಟಿರಬೇಕು, ದೇಶ ಅಖಂಡವಾಗಿರಬೇಕು ಎಂದು ನಾವು ಬಡಬಡಿಸಿದರೆ, ಅದು ಆದೀತೆ ? ಹಾಗಾದರೆ ಈಗಿರುವ ಸ್ಥಿತಿಯನ್ನು ಬದಲಿಸಲೂ ಸಾಧ್ಯವಿಲ್ಲ. ಸುಧಾರಿಸಲೂ ಆಗುವುದಿಲ್ಲವೆಂದು ಅರ್ಥವೇ? ನಾನು ಎಡಿಸನ್ನನ ತಾಯಿಯಂತೆ ಅರುಣನನ್ನು ಶಾಲೆಬಿಡಿಸಿ, ಮನೆಗೆ ಕರೆದುಕೊಂಡು ಬರಬೇಕು ಅಷ್ಟೇ. ಅಲ್ಲಿ ಹೋಗಿ ಅವನು ಕಲಿಯೊದಾದ್ರೂ ಏನು ? ಕಲಿತ್ರೂಸಹ ಬರೀ ಪ್ರಶ್ನೋತ್ತರಗಳನ್ನು ಬಾಯ್ಪಾಠಮಾಡ್ಕೊಂಡ್ಬರೋದಷ್ಟೆ. ಅದೂ ಇಲ್ಲಾಂದ್ರೆ ಇಂದು ಗ್ಯಾಂಗ್‌ಕಟ್ಕೊಂಡು ಮುಂದೆ ದುಷ್ಟಕೂಟ ರಚಿಸ್ಕೊಂಡು ಬದ್ಕೋಕೆ ತರ್ಬೇತಿ ಪಡೀಬೇಕು ಅಷ್ಟೆತಾನೆ?

'ಈಗಿನ ಪರಿಸ್ಥಿತಿ ನೋಡಿ, ನಿನಗಿಷ್ಟು ನಿರಾಸೆಯಾಗೋದು ಸಹಜ. ಸುಧಾ ನಿನ್ನ ಹಾಗೇ ಎಷ್ಟೋ ತಂದೆ – ತಾಯಿಗಳು ಮಕ್ಕಳ ಬಗ್ಗೆ ಏನೇನೋ ಕನಸ್ಕಟ್ಕೊಂಡಿರ್ತಾರೆ. ಅವೆಲ್ಲಾ ನುಚ್ಚುನೂರಾಗೋ ಹಾಗೆ ಮಕ್ಕಳು ಬೆಳೀತಾರೇಂದ್ರೆ ಯಾರ್ಗೆ ನಿರಾಸೆಯಾಗೊಲ್ಲ; ಈಗಿರೋ ಪರಿಸ್ಥಿತೀನ ಹೀಗೇ ಬಿಡೋದು ಸರಿಯಲ್ಲ. ಅದಕ್ಕೇನಾದ್ರೂ ಪರಿಹಾರೋಪಾಯ ಮಾಡೋದು ಅತ್ಯವಶ್ಯ. ಶಾಲೆಗಳು ತಮ್ಮ ಶಾಲೆಗಳಲ್ಲಿ ರಚನಾತ್ಮಕ ಬದಲಾವಣೆಗಳನ್ನು ಮಾಡಿಕೊಳ್ಳಬೇಕು, ಹಾಗಾದಾಗ ಮಾತ್ರ ಶಾಲೆಗಳಲ್ಲಿ ಸಂಖ್ಯೆ ಹೆಚ್ಚಿದ್ರೂ ಶಿಸ್ತನ್ನುಂಟು ಮಾಡಬಹುದು. ಮಕ್ಕಳಲ್ಲಿ

ಮೌಲ್ಯಗಳ ಬಗ್ಗೆ ಶ್ರದ್ಧೆ ಬರುವಂತೆ ಮಾಡಿ ನೀತಿವಂತರನ್ನಾಗಿ, ದಕ್ಷರನ್ನಾಗಿ, ದೇಶಪ್ರೇಮಿಗಳಾಗಿ ಬಾಳುವಂತೆ ಮಾಡಬಹುದು.

'ಅದ್ಹೇಗೆ ಹೇಳು ಮೊದಲು, ನಾನು ಶಾಲೆಗೆ ಹೋಗಿ ನಮ್ಮ ಅರುಣನ ಟೀಚರ್ಗೂ ಪ್ರಿನ್ಸಿಪಾಲರಿಗೂ ಹೇಳಿ ಬರ್ತೀನಿ'

'ನೋಡು ಮಕ್ಕಳಲ್ಲಿ ಒಳ್ಳೆಯ ಗುಣಗಳು ಬೆಳೆಯುವಂತಹ ಆರೋಗ್ಯವಂತ ಸ್ಪರ್ಧೆಗಳಿಗೆ ಪ್ರೋತ್ಸಾಹಿಸಬೇಕು, ಈಗ ಹುಡುಗರು ಒಬ್ಬರಿಗೊಬ್ಬರು ಹೊಡೆದಾಡುತ್ತಾರೆ. ಒಬ್ಬರ ಸಾಮಾನುಗಳನ್ನೊಬ್ಬರು ಕದಿಯುತ್ತಾರೆ. ಮತ್ತ್ಯಾವುದೇ ರೀತಿಯ ಅಶಿಸ್ತಿನ ನಡವಳಿಕೆ ತೋರಿಸುತ್ತಾರೆ. ಅಂತಾ ತಾನೆ ? ಅದನ್ನು ಹೋಗಲಾಡಿಸಲು ಶಾಲೆಯಲ್ಲಿ ಪ್ರಾರಂಭದಿಂದ ಕೆಲವೊಂದು ಕಾರ್ಯಕ್ರಮ ಯೋಜಿಸಿಕೊಳ್ಳಬೇಕು, ಅಂದರೆ ಪ್ರತಿದಿನ ಶಾಲೆಯಲ್ಲಿ ಪ್ರಾರ್ಥನೆಯಾದ ನಂತರ ಶಾಲೆಯಲ್ಲಾದ ಒಳಿತು, ಕೆಡುಕುಗಳ ಬಗ್ಗೆ ಒಂದೈದು ನಿಮಿಷ ಮಾತಾಡುವಂತಹ ಪದ್ಧತಿ ಇಡಬೇಕು. ಆಗ ಯಾವುದೇ ತರಗತಿಯ ವಿದ್ಯಾರ್ಥಿ ಕಳ್ಳತನ ಮಾಡಿದ್ದರೆ, ಹೊಡೆದಾಡಿದ್ದರೆ, ಯಾರಿಗಾದರೂ ತೊಂದರೆ ಕೊಟ್ಟಿದ್ದರೆ ಅದನ್ನು ವೈಯಕ್ತಿಕವಾಗಿ ಹೇಳುವುದಕ್ಕಿಂತ ಇಂತಹ ತರಗತಿಯಿಂದ ವಿದ್ಯಾರ್ಥಿ ಅಥವಾ ವಿದ್ಯಾರ್ಥಿಗಳೂ ಈ ರೀತಿ ಮಾಡಿದ್ದಾರೆಂದು ಘೋಷಿಸಿ ಖಂಡಿಸಬೇಕು. ಒಳ್ಳೆಯದು ಮಾಡಿದ್ದರೆ ಘೋಷಿಸಿ ಪ್ರಶಂಸಿಸಬೇಕಲ್ಲದೆ, ವಿದ್ಯಾರ್ಥಿಗಳೆಲ್ಲರೂ ಮೆಚ್ಚುಗೆಯನ್ನು ಚಪ್ಪಾಳೆ ತಟ್ಟುವುದರ ಮೂಲಕ ಪ್ರೋತ್ಸಾಹಿಸಬೇಕು. ಅಲ್ಲದೆ ತಿಂಗಳಿಗೊಮ್ಮೆ ಎ.ಬಿ.ಸಿ.ಡಿ.ಇ. ಅಥವಾ ಇನ್ನಾವುದೇ ರೀತಿಯಲ್ಲಿ ತರಗತಿಗೆ ಗ್ರೇಡ್ ಅಥವಾ ಬಿರುದು ಕೊಡುವ ಪದ್ಧತಿಯನ್ನು ಜಾರಿಗೊಳಿಸಬೇಕು. ಅಶಿಸ್ತಿನಿಂದ ವರ್ತಿಸಿದ ತರಗತಿಗೆ ದೇಶ ದ್ರೋಹಿಗಳ ಸಮಾಜಘಾತುಕರ ಹೆಸರನ್ನು ಕೊಡಬಹುದು. ಮುಂದೆ ಅವರು ಒಳ್ಳೆಯ ವರ್ತನೆ ತೋರಿಸಿದಾಗ ಉತ್ತಮ ಬಿರುದನ್ನು ಪಡೆಯಬಹುದು. ಇದರಿಂದ ತರಗತಿಯ ಶಿಕ್ಷಕಿ ಹಾಗೂ ಮಕ್ಕಳು ತಮ್ಮ ತರಗತಿಗೆ ಉತ್ತಮ ಗ್ರೇಡ್ ದೊರೆಯಬೇಕೆಂದೂ, ಕೆಟ್ಟ ಹೆಸರು ಬರಬಾರದೆಂದು ತಮ್ಮಷ್ಟಕ್ಕೆ ತಾವೇ, ಒಬ್ಬರನ್ನೊಬ್ಬರು ನಿಯಂತ್ರಿಸಿಕೊಳ್ಳುತ್ತಾರೆ. ಓದಿನಲ್ಲೂ ಮುಂದುವರಿಯಲು ಕೆಲವು ರೀತಿಯ ಸ್ಪರ್ಧೆಗಳನ್ನಿಡಲು ಸಾಧ್ಯ. ಈ ರೀತಿಯಾಗಿ ಮಕ್ಕಳಲ್ಲಿ ಶಿಸ್ತನ್ನು ತುಂಬಾ ಸಂಖ್ಯೆ ಇರುವ ಶಾಲೆಯಲ್ಲೂ ತರಲು ಸಾಧ್ಯ. ಅಲ್ಲದೆ ನೈತಿಕ ಶಿಕ್ಷಣಕ್ಕೆ ಅನುಕೂಲವಾಗುವ ಕೆಲವು ಸಾಂಸ್ಕೃತಿಕ ಚಟುವಟಿಕೆಗಳನ್ನು ಮಾಡಿಸುವುದರ ಮೂಲಕ ಶಿಸ್ತನ್ನು ಬೆಳೆಸುವುದಲ್ಲದೆ, ಮಕ್ಕಳಿಗೆ ಕೆಟ್ಟ ಚಟುವಟಿಕೆಗಳಿಗೆ ಸಮಯವಿಲ್ಲದಂತೆ ಮಾಡಬಹುದು. ನೀತಿಯುತವಾದ, ಜವಾಬ್ದಾರಿಯಿಂದ ಕೂಡಿದ, ದಕ್ಷ ರೀತಿಯ ನಡೆ – ನುಡಿಗಳನ್ನು ಮೂಡಿಸಲು ಸಾಧ್ಯವಾಗಬಹುದು.

'ನಿಜವಾಗಿಯೂ ನಿನ್ನ ಸಲಹೆ ಪ್ರಯೋಜನಕಾರಿ ಆಗೋದ್ರಲ್ಲಿ ಸಂದೇಹವಿಲ್ಲ. ಆದರೆ, ಈ ಊಟದ ಟೈಮ್‌ನಲ್ಲಿ ಮಕ್ಕಳಿಗಾಗೋ ತೊಂದ್ರೆ ಹೇಗೆ ನಿವಾರಿಸ್ಲಿಕ್ಕೆ ಸಾಧ್ಯ ಹೇಳ್ತೀಯಾ?

'ನೋಡು ಶಾಲೆ ಸ್ವಲ್ಪ ಆಕಡೆ ಗಮನಕೊಟ್ರೆ' ಅದೇನು ಕಷ್ಟ ಆಗೋಲ್ಲ, ಶಾಲೇಲಿರೋ ಪ್ರೇಯರ್ ಹಾಲ್‌ನಲ್ಲೋ, ಕಾರಿಡಾರ್‌ನಲ್ಲೋ ಮಕ್ಕಳು ಸಲೀಸಾಗಿ ಕುಳಿತು ಊಟ ಮಾಡೋ ಹಾಗೆ ವ್ಯವಸ್ಥೆ ಮಾಡ್ಬೇಕು. ದಿನವೂ ಒಬ್ಬೊಬ್ಬ ಟೀಚರ್' ಪಾಳಿ ಪ್ರಕಾರ ಮೇಲ್ವಿಚಾರಣೆ ಮಾಡಿದ್ರೆ, ಆ ತೊಂದ್ರೆ ಸುಧಾರ್ಸೋದೇನೂ ಕಷ್ಟ ಅಲ್ಲ, ಇದು ಸಣ್ಣ ವಿಷ್ಯ. ಆದ್ರೂ ಮಕ್ಕಳ ದೃಷ್ಟಿಯಿಂದ ಲಕ್ಷ್ಯ ಕೊಡಲೇ ಬೇಕಾದ ಅಂಶ.

'ಹೇಗೂ ಹೇಳ್ತಾ ಇದ್ದಿ, ನನ್ನ ಇನ್ನೊಂದು ಸಮಸ್ಯೆನೂ ಈಗ್ಲೇ ಹೇಳ್ಬಿಡ್ತೀನಿ, ಅದಕ್ಕೂ ಏನಾದ್ರೂ ಸಲಹೆ ಕೊಡ್ತಿಯೋ ನೋಡು'

ಮತ್ತೊಂದ್ಯಾವ ಸಮಸ್ಯೇ ? ನಿಮ್ಮ ನಿಮ್ಮ ಸಂಸಾರದ್ದಲ್ಲ ತಾನೆ ?

'ಇಲ್ಲಪ್ಪಾ ಇಲ್ಲಾ' ಶಾಲೇದೆ, ನೀನು ಮಕ್ಕಳ್ನ ಆಟಕ್ಕೆ ಕಳಿಸ್ಬೇಕು, ಅದ್ರಿಂದ ಅನೇಕ ಒಳ್ಳೇಗುಣ ಕಲೀತಾರೆ, 'ಆಟದ ಬಯಲು ಅನಾಚ್ಛಾದಿತ ಶಾಲೆ' ಅಂತ ಏನೇನೋ ಹೇಳ್ತಿದ್ಯಲ್ಲಾ, ಅದ್ಕೆ ನಾನು ಅರುಣನಿಗೆ ಆಟಕ್ಕೆ ಪ್ರೋತ್ಸಾಹ ಕೊಟ್ಟೆ, ಈಗ್ನೋಡು ಅವ್ನು ಆಟಗೂಳಿಯಾಗಿಬಿಟ್ಟಿದ್ದಾನೆ. ಓದೋಕೆ ಲಕ್ಷ್ಯನೇ ಕೊಡೋಲ್ಲ. ಅಲ್ದೆ, ದಿನಾ ಆಟದಲ್ಲಿ ಜಗಳಾ ಆಡ್ಕೊಂಡ್ಬರ್‍ತಾನೆ. ಯಾರ್‍ಗಾದ್ರೂ ಹೊಡ್ದಾದ್ರೂ ಬಂದಿರ್‍ತಾನೆ, ಇಲ್ಲಾ ಹೊಡಿಸ್ಕೊಂಡಾದ್ರೂ ಬಂದಿರ್‍ತಾನೆ. ಇಷ್ಟೇ ಅಲ್ಲ, ತುಂಬಾ ಭಂಡಾಟ ಆಡೋದು ಕಲ್ತುಬಿಟ್ಟಿದ್ದಾನೆ. ಆಟದ ನಿಯಮಗಳನ್ನೇ ಪಾಲ್ಸೋಲ್ಲ. ಎಲ್ಲಾದ್ರಲ್ಲೂ ಮೋಸ – ಹೀಗಾದ್ರೆ, ಏನು ಒಳ್ಳೇಗುಣ ಕಲ್ಯೋಕೆ ಸಾಧ್ಯ ?

ಅಂದ್ರೆ ಆಟಕ್ಕೆ ಪ್ರೋತ್ಸಾಹಿಸಿದ್ದಕ್ಕೆ ಮಗ ಹಾದಿತಪ್ಪಿದ ಎಂದು ನಿನ್ನ ತೀರ್ಮಾನವೇನು ? ಹುಚ್ಚೆ, ಆಟದಿಂದ ಬಹಳಷ್ಟು ಲಾಭಗಳಿವೆ, ಆದರೆ ಅದನ್ನು ಸರಿಯಾದ ರೀತಿಯಲ್ಲಿ ನಿಯೋಜಿಸದಿದ್ದರೆ, ಮಾರ್ಗದರ್ಶನ ಮಾಡದಿದ್ದರೆ, ಶಾಲಾ ಅವಧಿಯಲ್ಲಿ ಒಬ್ಬ ಯೋಗ್ಯ ಶಿಕ್ಷಕನ ನೇತೃತ್ವದಲ್ಲಿ ಆಟಗಳನ್ನು ನಡೆಸದಿದ್ದರೆ, ಆಟದಿಂದ ಎಷ್ಟು ಲಾಭಗಳುಂಟಾಗಬಹುದೋ ಅದಕ್ಕಿಂತಲೂ ಹೆಚ್ಚು ಕೆಡುಕುಗಳಾಗಲು ಸಾಧ್ಯ. ಈಗ ಬಹಳಷ್ಟು ಶಾಲೆಗಳಲ್ಲಿ ಆಟದ ಅವಧಿಯಲ್ಲಿ ಮಕ್ಕಳಿಗೇ ಆಡಲು ಬಿಟ್ಟು ಬಿಡುತ್ತಾರೆ. ಶಿಕ್ಷಕರ ಮೇಲ್ವಿಚಾರಣೆಯೇ ಇರುವುದಿಲ್ಲ. ಮಕ್ಕಳು ತಮ್ಮ ಮನಸ್ಸಿಗೆ ಬಂದಂತೆ ಆಡುತ್ತಾರೆ. ಆಡುವವರು ಆಡಿದರು, ಬಿಡುವವರು ಬಿಟ್ಟರು. ಆಡುವಾಗಲೂ ಮೃದು ಸ್ವಭಾವದ ಹುಡುಗನಿಗೆ ಅನ್ಯಾಯ. ಅವಕಾಶ ಕಡಿಮೆ. ಜೋರು ಮಾಡಿ ಮುಂದೆ ಹೋಗುವವನಿಗೆ ಎಲ್ಲಾ ಅವಕಾಶಗಳು,

ಅಲ್ಲದೇ ಅವನಿಗೇ ಮಹತ್ವ ' ಇಂತಹ ಪರಿಸ್ಥಿತಿಯಲ್ಲಿ ರೂಪುಗೊಂಡು ಮಕ್ಕಳ ದೊಡ್ಡ ತರಗತಿಗೆ ಹೋದಂತೆ, ಹೆಚ್ಚು ಹೆಚ್ಚು ಅನ್ಯಾಯದಿಂದ ಮುಂದೆ ಬರುವ ಪ್ರವೃತ್ತಿ ಬೆಳೆಸಿಕೊಳ್ಳುತ್ತಾರೆ. ಈ ಮಕ್ಕಳು ಬೆಳೆದು ದೊಡ್ಡವರಾಗಿ ವಯಸ್ಕ ಸಮಾಜದಲ್ಲಿ ಬದುಕುವಾಗಲೂ ತಮಗೆ ಅವಕಾಶವಿದ್ದೆಡೆಯಲ್ಲಿ ಅನ್ಯಾಯ ಮಾಡುತ್ತಲೇ ಮುಂದೆ ಮುಂದೆ ಹೋಗುತ್ತಾರೆ. ಆದುದರಿಂದ ಶಾಲಾಮಟ್ಟದಲ್ಲಿ 'ಆಟ ಆಡ್ಕೊತ್ತಾರೆ, ನಾವು ಹೋಗ್ದಿದ್ರೆ ಏನ್ಮಹಾ' ಎಂದು ಶಿಕ್ಷಕರು ಅಲಕ್ಷಿಸಬಾರದು. ಹಾಗೆ ಮಾಡಿದ್ದೇ ಆದರೆ ಅದು ದೇಶಕ್ಕೆ ಅನ್ಯಾಯ ಮಾಡಿದಂತಾಗುತ್ತದೆ. ಅನ್ಯಾಯಕ್ಕೆ ಬಲಿಯಾದ ಮಗು ಮುಂದೆ ಅಸಹಾಯಕತೆಯಿಂದ ಬದುಕುತ್ತದೆ.

ಅನ್ಯಾಯದಿಂದ ಮುಂದೆ ಬಂದಮಗು ಮುಂದೆ ತಾನಿದ್ದಲ್ಲೆಲ್ಲಾ ಅನ್ಯಾಯದ ವಾತಾವರಣವನ್ನೇ ನಿರ್ಮಿಸುತ್ತಾನೆ. ಆದುದರಿಂದ ಆಟದ ಬಗ್ಗೆ ಶಾಲೆ ಕಾಳಜಿ ವಹಿಸುವುದಗತ್ಯ. ಮಕ್ಕಳು ನ್ಯಾಯವಾದ ರೀತಿಯಲ್ಲಿ ನಿಯಮಗಳನ್ನು ಉಲ್ಲಂಘಿಸದೆ, ಇತರರ ಅವಕಾಶಗಳನ್ನು ಕಸಿದುಕೊಳ್ಳದೆ, ಸೋಲು ಗೆಲುವನ್ನು ಸಮಾನ ರೀತಿಯಲ್ಲಿ ಸ್ವೀಕರಿಸುವಂತೆ ಆಡುವ ಹಾಗೆ ಶಿಕ್ಷಕರು ಆಡಿಸಬೇಕು. ಇದು ಸಂಬಂಧಿಸಿದ ಶಿಕ್ಷಕನ ಹೊಣೆಗಾರಿಕೆ. ನಿನ್ನ ಮಗ ದುಷ್ಟಗುಣಗಳನ್ನು ಬೆಳೆಸಿಕೊಂಡಿದ್ದಾನೆ ಎಂದರೆ ಅವರ ಶಾಲೆಯಲ್ಲಿ ಆಟವನ್ನು ಸರಿಯಾದ ಮೇಲ್ವಿಚಾರಣೆಯಲ್ಲಿ ಆಡಿಸುತ್ತಿಲ್ಲ ಎಂದರ್ಥ. ಅದಕ್ಕಾಗಿ ಆಟಕ್ಕೆ ಪ್ರೋತ್ಸಾಹಿಸುವಾಗ ಅವರ ಅಭ್ಯಾಸವೂ ಕುಂಠಿತವಾದಂತಹ ರೀತಿಯಲ್ಲಿ ಆಟಗಳನ್ನು ನಿಯೋಜಿಸಬೇಕಾಗುತ್ತದೆ. ಇಲ್ಲದಿದ್ದರೆ ಮಕ್ಕಳು ತಮ್ಮ ಅಭ್ಯಾಸದ ಕಡೆ ನಿಗಾವಹಿಸದಂತಿರುವುದೂ ಸಾಧ್ಯ.

'ಹೌದಮ್ಮ ಅರುಣ ಕೇಂದ್ರ ಪಂದ್ಯಾಟಗಳಿಗೆ ಸೇರಿದ್ದಾರೆ. ಇಡೀ ದಿನ ಅದರಲ್ಲೇ ಅವನ ಸಮಯವೆಲ್ಲಾ ಹೋಗಿಬಿಡುತ್ತದೆ. ಅವರ ಶಿಕ್ಷಕರನ್ನು ಕಂಡು ಇದೆಲ್ಲದರ ಬಗ್ಗೆ ಮಾತಾಡಬೇಕು?

'ಹೌದು ಪೋಷಕರಾದವರು ತಮ್ಮ ಮಕ್ಕಳ ಬಗೆಗೆ ಶಿಕ್ಷಕರೊಂದಿಗೆ ವಿಚಾರ ವಿನಿಯಮ ಮಾಡಿಕೊಳ್ಳುತ್ತಿರಬೇಕು. ಶಾಲಾಅವಧಿ, ಮಕ್ಕಳ ಜೀವನದಲ್ಲಿ ಮಹತ್ತರ ಪಾತ್ರ ವಹಿಸುತ್ತದೆ. ಶಿಕ್ಷಕರು ಪಾಲಕರೂ ಕೂಡಿಯೇ ಮಕ್ಕಳ ಹಿತದೃಷ್ಟಿಯಿಂದ ಅದರ ಅನುಕೂಲ ಅನಾನುಕೂಲಗಳನ್ನು ಅರ್ಥ ಮಾಡಿಕೊಂಡು ಕೆಲಸ ಮಾಡಬೇಕಾಗುತ್ತದೆ. ಪಾಲಕರು ಮಕ್ಕಳನ್ನು ಶಾಲೆಗೆ ಕಳಿಸಿಬಿಟ್ಟರೆ ಅವರ ಜವಾಬ್ದಾರಿ ಮುಗಿಯಲಿಲ್ಲ. ಶಿಕ್ಷಕರು ಗಂಟೆ ಹೊಡೆಯುವರೆಗೆ ಶಾಲೆಯಲ್ಲಿದ್ದರೆ ಅವರ ಕರ್ತವ್ಯ ಪೂರೈಸಲಿಲ್ಲ.

'ನೀನು ಹೇಳೋದು ಸರಿ ವಿನುತ, ನಾನು ನಾಳೆಯೇ ಶಾಲೆಗೆ ಹೋಗಿ ಅಲ್ಲಿಯ ಶಿಕ್ಷಕರೊಂದಿಗೆ ಎಲ್ಲಾ ವಿಷಯ ಮಾತಾಡಿ ಬರುತ್ತೇನೆ. ಉಳಿದ

ಪಾಲಕರೊಡನೆಯೂ ಈ ವಿಚಾರಗಳನ್ನೆಲ್ಲಾ ಚರ್ಚಿಸುತ್ತೇನೆ, ಹೇಗಾದರೂ ಅರುಣ ಚೆನ್ನಾಗಿ ಓದಿ, ಒಳ್ಳೇಗುಣ ಕಲಿತು, 'ಯೋಗ್ಯ ಮಗ, ಸತ್ಪ್ರಜೆ ಆದರೆ ಸಾಕು, ಬರ್ತೀನಮ್ಮಾ ನಮಸ್ಕಾರ'

'ನಮಸ್ಕಾರ ಹೋಗಿ ಬಾ'

■

## ೧೭. ಮಕ್ಕಳಿಗೆ ಪಾಕೆಟ್‌ಮನಿ ಕೊಡಬೇಕೆ ?

ಸಧ್ಯದ ಪರಿಸ್ಥಿತಿಯಲ್ಲಿ ಹೆಚ್ಚು ಮಕ್ಕಳನ್ನು ಪಡೆಯುವುದು ರಾಷ್ಟ್ರಕ್ಕೆ ಸಮಸ್ಯೆಯಾದಂತೆ, ಪಡೆದ ಕೆಲವೇ ಮಕ್ಕಳನ್ನು ಯೋಗ್ಯರನ್ನಾಗಿ ಬೆಳೆಸುವುದು ತಂದೆ – ತಾಯಿಗಳಿಗೆ ಅಷ್ಟೇ ಮಹತ್ವದ ಸಮಸ್ಯೆಯಾಗಿದೆ. ಹಿಂದೆ ತಂದೆ – ತಾಯಿಯರು ಮಕ್ಕಳನ್ನು ಹೇಗೆ ಬೆಳೆಸಬೇಕು, ಏನು ಎಚ್ಚರಿಕೆ ವಹಿಸಬೇಕು ಎಂಬ ಬಗ್ಗೆ ವಿಚಾರ ಮಾಡುವುದಕ್ಕೇ ಹೋಗುತ್ತಿರಲಿಲ್ಲ. ಆಗಿದ್ದ ಸಾಮಾಜಿಕ ಮತ್ತು ಕೌಟುಂಬಿಕ ವಾತಾವರಣದಲ್ಲಿ ಮಕ್ಕಳು ಅಸಮಾಜಿಕವಾದ, ಅನಪೇಕ್ಷಿತವಾದ ನಡವಳಿಕೆಯನ್ನು ಕಲಿಯಲು ಹೆಚ್ಚು ಆಸ್ಪದವಿರಲಿಲ್ಲವಾಗಿ ಪಾಲಕರು ಆ ದಿಶೆಯಲ್ಲಿ, ವಿಚಾರ ಮಾಡಬೇಕಾದ ಅವಶ್ಯಕತೆಯೂ ಅಷ್ಟಾಗಿ ಇರುತ್ತಿರಲಿಲ್ಲ. ಎಂಟು – ಹತ್ತು ಮಕ್ಕಳಿದ್ದ ತಂದೆ ತಾಯಿಯರು ಸಹ ಮಕ್ಕಳಿಗೆ ಹೀಗೆ ಹೇಳಿದರೆ ಹೇಗೋ, ಹಾಗೆ ಹೇಳಿದರೆ ಹೇಗೋ, ಹಣ ಕೊಟ್ಟರೆ ಏನಾಗುತ್ತೋ ಕೊಡದಿದ್ದರೆ ಏನಾಗುತ್ತೋ, ತಪ್ಪು ಮಾಡಿದಾಗ ಬೈದರೆ ಸರಿಯೋ, ಬೈಯ್ಯದಿದ್ದರೆ ಸರಿಯೋ ಎಂದು ವಿಚಾರಿಸಿ, ವಿಚಾರಿಸಿ, ನಿರ್ಧಾರ ತೆಗೆದುಕೊಳ್ಳಬೇಕಾಗುತ್ತಿರಲಿಲ್ಲ. ಆದರೆ ಈಗ ಹಾಗಲ್ಲ, ಸಮಾಜದ ರೀತಿಯೇ ಬದಲಾಗಿದೆ, ಪಾಲಕರು ಮಕ್ಕಳ ಬೆಳವಣಿಗೆಯ ಯಾವ ನಿಟ್ಟಿನಲ್ಲೂ, ಯಾವ ವಿಷಯದಲ್ಲೂ ಸಾಧ್ಯಾಸಾಧ್ಯತೆಯ ಬಗ್ಗೆ ವಿಮರ್ಶಿಸದೆ ನಿರ್ಣಯ ತೆಗೆದುಕೊಳ್ಳುವಂತಿಲ್ಲ, ಏಕೆಂದರೆ ಈಗ ಬೆಳೆಯುವ ಮಗುವಿಗೆ ಸುತ್ತೂ ನಾಲ್ಕು ಕಡೆಗಳಿಂದ, ನೂರಾಎಂಟು ಆಮಿಷಗಳು, ಲೆಕ್ಕವಿಲ್ಲದಷ್ಟು ಆಕರ್ಷಣೆಗಳು, ಎಲ್ಲರಲ್ಲಿಯೂ ಸ್ವೇಚ್ಛೆಯಿಂದ ವರ್ತಿಸುವ ಮನೋಭಾವ, ಈ ಹಿನ್ನೆಲೆಯಲ್ಲಿ ಪಾಲಕರಾದವರ ವಿವೇಚಾನಾಯುತವಾದ, ನಿರ್ಣಯ, ಸರಿಯಾದ ಮಾರ್ಗದರ್ಶನ ಅವಶ್ಯಕ.

ಅನೇಕ ವಿಚಾರಗಳ ಬಗ್ಗೆ ಅವರು ಯೋಚಿಸಬೇಕಾದಂತೆ ಮಕ್ಕಳಿಗೆ ಪಾಕೆಟ್‌ಮನಿ ಕೊಡಬೇಕೇ ಬೇಡವೇ ಎಂಬ ಬಗೆಗೂ ವಿಚಾರಿಸಬೇಕಾಗಿದೆ, ಏಕೆಂದರೆ ನನ್ನೊಬ್ಬ ಗೆಳತಿ ಕಾಲೇಜಿನಲ್ಲಿ ಓದುವ ತನ್ನ ಮಗನಿಗೆ ಪ್ರತಿ ತಿಂಗಳೂ ಪಾಕೆಟ್‌ಮನಿ ಕೊಡುತ್ತಿದ್ದಳು, ಆ ಹುಡುಗ ತುಂಬಾ ಸಭ್ಯ. ಪುಂಡ ಹುಡುಗರೆಲ್ಲ ಅವನನ್ನು ಸುತ್ತುಗಟ್ಟಿ ಅವನನ್ನು ಪ್ರೀತಿಯಿಂದ ಕಂಡು ತಮಗೆ ಬೇಕು ಬೇಕಾದಂತೆ

ಹಣ ಖರ್ಚು ಮಾಡಿಸುತ್ತಿದ್ದರಂತೆ, ಹೀಗಾಗಿ ದುಷ್ಟ ಸಹವಾಸಕ್ಕೆ ಸಿಕ್ಕಿ, ಸಿಗರೇಟ್ ಸೇದುವುದು, ಮೇಲಿಂದ ಮೇಲೆ ಹೋಟೆಲ್‌ಗೆ ಹೋಗುವುದು, ಓದದೆ ಬೇಜವಾಬ್ದಾರಿಯಿಂದ ಕಾಲಕಳೆಯುವುದು, ಮೊದಲಾದ ದುಷ್ಟ ಪ್ರವೃತ್ತಿಗೆ ಒಳಗಾದನೆಂದು ಪಾಕೆಟ್‌ಮನಿ ಕೊಡುತ್ತಿದ್ದುದಕ್ಕಾಗಿ ಪಶ್ಚಾತ್ತಾಪಟ್ಟರೆ, ಮತ್ತೊಬ್ಬಗೆಳತಿ ತನ್ನ ಮಗ ತಿಂಗಳ ಮೊದಲನೇ ವಾರದಲ್ಲೇ ಹಣ ಮುಗಿಸಿ ಆಮೇಲೆ ದುಡ್ಡಿಲ್ಲದೆ ಒದ್ದಾಡುತ್ತಿದ್ದನೆಂದಳು, ಹಣಕೊಟ್ಟರೆ ದುಂದು ವೆಚ್ಚ ಕಲಿತಾನೆಂದು ಇವಳು ಮತ್ತೆ ಹಣಕೊಡದಿದ್ದಕ್ಕೆ, ಬಸ್ಸಿಗೆ ಕಾಸಿಲ್ಲದೆ ಬಿಸಿಲಲ್ಲಿ ಮುಖ ಒಣಗಿಸಿಕೊಂಡು ಬರುವುದನ್ನು, ಬೆಳಗಿನಿಂದ ಸಂಜೆಯವರೆಗೆ ಕ್ಲಾಸಿದ್ದಾಗಲೂ ಒಂದು ದೋಸೆ ತಿನ್ನಲೂ ಹಣವಿಲ್ಲದೆ ಒಮ್ಮೆ ಪ್ರಾಕ್ಟಿಕಲ್ ಮಾಡುತ್ತಿದ್ದಾಗ, ಹಸಿವಿನಿಂದ ಬವಳಿಬಂದು ಬಿದ್ದುದನ್ನೂ ವ್ಯಥೆಯಿಂದ ತೋಡಿಕೊಂಡಳು, ಆಗಿನಿಂದ ಪಾಕೆಟ್‌ಮನಿ ಕೊಡುವುದನ್ನು ನಿಲ್ಲಿಸಿ, ಅಂದಂದಿಗೆ ಬೇಕಾದ ಹಣವನ್ನು ಅಂದಂದೇ ಕೊಡತೊಡಗಿದಳಂತೆ.

ಈ ಇಬ್ಬರ ಅನುಭವವನ್ನು ಕೇಳಿಸಿಕೊಂಡ ನನ್ನ ನೆರೆಮನೆಯಾಕೆ ತನ್ನ ಮಗನ ವಿಚಾರ ಮುಂದಿಟ್ಟಳು, ತನ್ನ ಮಗನಿಗೆ ಪಾಕೆಟ್ ಮನಿ ಮೊದಲ ತಿಂಗಳು ಕೊಟ್ಟಾಗ ಕೆಲವೇ ದಿನಗಳಲ್ಲಿ ಮುಗಿಸಿ ಆ ಮೇಲೆ ಕಣ್ ಕಣ್ ಬಿಟ್ಟನಂತೆ, ಆಗ ಈಕೆ ನಿನ್ನ ಅವಶ್ಯಕತೆಗಳಿಗೆ ಸರಿಹೊಂದುವಂತೆ ವಿಚಾರವಾಡಿ ಖರ್ಚುಮಾಡಿಕೊಳ್ಳುವ ಜವಾಬ್ದಾರಿ ನಿನ್ನದು. ನಿನ್ನ ತಪ್ಪಿನಿಂದಾದ ತೊಂದರೆ ನೀನೇ ಅನುಭವಿಸಬೇಕಾಗುತ್ತದೆ ಎಂದಳಂತೆ. ಮರು ತಿಂಗಳು ದುಡ್ಡು ಕೊಟ್ಟಾಗ ತಿಂಗಳಲ್ಲಿ ಯಾವ್ಯಾವಾಗ ಎಷ್ಟೆಷ್ಟು ಹಣ ಬೇಕಾಗುವುದೆಂಬುದನ್ನು ಯೋಚಿಸಿಕೊಂಡು ತೊಂದರೆ ಇಲ್ಲದಂತೆ ವ್ಯವಸ್ಥೆ ಮಾಡಿಕೊಂಡನಂತೆ, ಆದರೆ ಆ ತಿಂಗಳು ಶಾಲೆಯಲ್ಲಿ ಎಲ್ಲಾ ಕೂಡಿ ಪಿಕ್‌ನಿಕ್ ಹೋಗಬೇಕೆಂದು ತೀರ್ಮಾನ ಮಾಡಿದುದರಿಂದ ಐದು ರೂ. ಹೆಚ್ಚು ಬೇಕಾಯಿತು. ಆಗ ಮತ್ತೆ ತಾಯಿಯನ್ನು ಕೇಳಿದ, ಆದರೆ ಈಕೆ, ಇಂತಹ ಖರ್ಚುಗಳಿಗಾಗಿಯೇ ಪಾಕೆಟ್‌ಮನಿ ಕೊಡುವುದು ಕೆಲವು ಸಾರಿ ಆಕಸ್ಮಿಕ ಖರ್ಚುಗಳೂ ಬರಬಹುದೆಂಬುದನ್ನು ಮುನ್ನಾಗಿ ನಿರೀಕ್ಷಿಸಿ ಅದಕ್ಕೆ ಸಿದ್ಧತೆ ಮಾಡಿಕೊಂಡರಬೇಕು ಎಂದಳು.

ಆದುದರಿಂದ ಅವನು ನಂತರದ ತಿಂಗಳಿನಿಂದ ತಾನು ಸಿನಿಮಾಕ್ಕೆ ಹೋಗುವುದನ್ನೂ ಕಡಿಮೆ ಮಾಡಿದನಂತೆ, ಸ್ನೇಹಿತರ ಒತ್ತಾಯಕ್ಕೆ ಹೋಟೆಲ್‌ಗೆ ಹೋಗುವುದನ್ನು ನಿಲ್ಲಿಸಿದನಂತೆ, ಹೀಗಾಗಿ ತಿಂಗಳು ಕೊನೆಗೆ ಉಳಿಯುತ್ತಿದ್ದ ಹಣವನ್ನು ಅನಿರೀಕ್ಷಿತ ಬರುವ ಖರ್ಚುಗಳಿಗಾಗಿ ಕೂಡಿಸಲು ಪ್ರಾರಂಭಿಸಿದ, ಅನಂತರ ಹಣದ ಸಮಸ್ಯೆಯನ್ನೇ ಅವನು ಅನುಭವಿಸಲಿಲ್ಲವೆಂದು ಹೇಳಿದಳು. ಇಷ್ಟೇ ಅಲ್ಲದೆ ಈಗ ಜೀವನದಲ್ಲೂ ಅವನು ಬಹು ಎಚ್ಚರಿಕೆಯಿಂದಿದ್ದಾನೆ. ಅವನಿಗೆ

ಬರುವ ಸಂಬಳದಲ್ಲಿ ಒಪ್ಪ ಓರಣದಿಂದ ಯಾವುದಕ್ಕೂ ಕೊರತೆ ಬರದಂತೆ, ಸಮಸ್ಯೆಗಳೇಳದಂತೆ ಜೀವನ ಮಾಡುತ್ತಾನೆಂದೂ ತಿಳಿಸಿದಳು, ಮಕ್ಕಳಿಗೆ ಪಾಕೆಟ್‌ಮನಿ ಕೊಟ್ಟರೆ ಮಕ್ಕಳು ಅತ್ಯಂತ ಅವಶ್ಯಕವಾದವುಗಳಿಗೆ ಮಾತ್ರ ಖರ್ಚುಮಾಡಬೇಕಾಗುವುದರಿಂದ ವ್ಯರ್ಥ ಖರ್ಚುಮಾಡುವ ಚಟ ಬೆಳೆಯುವುದಿಲ್ಲ; ಮತ್ತೂ ಅನಿವಾರ್ಯವಾದ ಕಾರಣಗಳಿಗಾಗಿ ಹಣ ಕೂಡಿಸಲು ಸಣ್ಣ ಸಣ್ಣ ಅನವಶ್ಯಕ ರೂಢಿಗಳನ್ನೂ, ಚಟಗಳನೂ ಕಡಿಮೆ ಮಾಡಿಕೊಳ್ಳಬೇಕಾಗುತ್ತದೆ. ಹೀಗಾಗಿ ಉತ್ತಮವಾದುದಕ್ಕಾಗಿ ಸಾಧಾರಣವಾದವುಗಳನ್ನು ಅತ್ಯಂತ ಅಗತ್ಯ ಎನ್ನಿಸದವುಗಳನ್ನು ಬಿಡುವ (ರೂಢಿಮಾಡಿಕೊಳ್ಳುವ) ಮನೋಭಾವ ಬೆಳೆಯುತ್ತದೆ. ಎಂದು ತನ್ನ ಪಾಕೆಟ್‌ಮನಿ ಕೊಡುವುದೊಳ್ಳೆಯದು ಎಂಬ ವಾದಕ್ಕೆ ಪುಷ್ಟಿಕೊಟ್ಟಳು.

ಈ ಅನುಭವಗಳ ಹಿನ್ನೆಲೆಯಲ್ಲಿ ನಾವು ವಿಷಯವನ್ನು ವಿವೇಚಿಸಬಹುದು, ಮಕ್ಕಳಿಗೆ ವೈಯಕ್ತಿಕವಾದ ಖರ್ಚುಗಳಿರುವುದು ನಿಜ. ಅದಕ್ಕಾಗಿ ಕೆಲವರು ಮಕ್ಕಳಿಗೆ ಯಾವಾಗ ಹಣದ ಅವಶ್ಯಕತೆ ಬೀಳುತ್ತೋ ಆಗೆಲ್ಲಾ ಹಣ ಕೊಡುತ್ತಾರೆ. ಹೀಗಾದಾಗ ಅವರಿಗೆ ತಮ್ಮ ತಂದೆ – ತಾಯಿಗಳು ತಮಗಾಗಿ ಎಷ್ಟು ಖರ್ಚು ಮಾಡುತ್ತಾರೆಂಬ ಲೆಕ್ಕವೇ ಇರುವುದಿಲ್ಲ. ತಮಗೆ ಬೇಕಾದುದಕ್ಕೆಲ್ಲಾ ತಂದೆ ತಾಯಿಯರು ಹಣಕೊಡಬೇಕಾದುದು ಅವರ ಕರ್ತವ್ಯ ಎಂದು ಬೇಕಾಬಿಟ್ಟಿ ಖರ್ಚು ಮಾಡತೊಡಗುತ್ತಾರೆ. ಈ ರೀತಿಯ ಮನೋಭಾವದಿಂದ ತಮಗೆ ಬೇಕಾದುದೆಲ್ಲವೂ ಅವರಿಗೆ ಅವಶ್ಯಕತೆಗಳಾಗಿಯೇ ಕಾಣುತ್ತವೆ. ಹಣ ಸುಲಭವಾಗಿ ಸಿಕ್ಕಾಗ ಸಿಗರೇಟು ಸೇದುವುದು, ಮೇಲಿಂದ ಮೇಲೆ ಸಿನಿಮಾ ನೋಡುವುದು, ಗಳಿಗೆಗೊಮ್ಮೆ ಗೆಳೆಯರೊಡನೆ ಚಹಾಕುಡಿಯುವುದು ಮುಂತಾದ ದುಶ್ಚಟಗಳನ್ನೂ ಬೆಳೆಸಿಕೊಂಡು, 'ಮಗ ಓದಿದರೆ ಸಾಕು' ಎಂಬ ಆಸೆಯುಳ್ಳ ತಂದೆ – ತಾಯಿಯರಿಗೆ ಅವರು ನಂಬಬಹುದಾದಂತಹ ಸುಳ್ಳು ಬೇಡಿಕೆಗಳನ್ನೂ ಮುಂದಿಟ್ಟು ಹಣವಸೂಲ್ಮಾಡಿಕೊಂಡು ಮಜಾಮಾಡುವ ಸಾಧ್ಯತೆಯೂ ಉಂಟು, ಹೀಗಾಗಿ ಸುಳ್ಳುಹೇಳುವ, ತಂದೆ ತಾಯಿಯರ ತೊಂದರೆಯ ಬಗ್ಗೆ ವಿಚಾರಮಾಡದೇ ಇರುವ, ಬೇಜವಾಬ್ದಾರಿಯಿಂದ ಖರ್ಚು ಮಾಡುವ ಸ್ವಭಾವವು ಬೆಳೆಯಬಹುದು. ಆದ್ದರಿಂದ ಪಾಕೆಟ್‌ಮನಿ ಕೊಡುವ ಪದ್ಧತಿ ಒಳ್ಳೆಯದು ಎನ್ನಬಹುದು. ಆದರೆ ಈ ಪಾಕೆಟ್ ಮನಿ ಕೊಡುವ ಪದ್ಧತಿಯನ್ನು ಮಕ್ಕಳು ಹತ್ತು ಹನ್ನೆರಡು ವರ್ಷದವರಿದ್ದಾಗಲೇ ಪ್ರಾರಂಭಿಸುವುದೊಳ್ಳೆಯದು, ಆ ವಯಸ್ಸಿನಲ್ಲಿ ಮಕ್ಕಳನ್ನು ಏತಕ್ಕಾಗಿ ಖರ್ಚು ಮಾಡಿದಿರಿ ಎಂದು ಕೇಳಲು, ಖರ್ಚಿನ ವಿವರವನ್ನು ಬರೆದಿಡಿ ಎಂದು ಹೇಳಲು ಸಾಧ್ಯವಾಗುತ್ತದೆ. ಹಾಗಿಲ್ಲದೆ ಕಾಲೇಜಿಗೆ ಹೋಗುವ ವಯಸ್ಸು ಬಂದಮೇಲೆ ಪ್ರಾರಂಭಿಸಿದರೆ ಎಲ್ಲ ವಿವರ ಕೇಳಿದಾಗ ಅವರು ತಮ್ಮ ಸ್ವಾಭಿಮಾನಕ್ಕೆ ಧಕ್ಕೆಯಾಯಿತೆಂದೂ, ತಮ್ಮಲ್ಲಿ ತಮ್ಮ ತಾಯ್ತಂದೆಯರಿಗೆ ವಿಶ್ವಾಸವಿಲ್ಲವಲ್ಲ ಎಂದೂ ಸಿಟ್ಟು ಬರಬಹುದು. ಮೊದಲಿಂದಲೇ

ಒಂದು ಹಿಡಿತದಲ್ಲಿ ಮಾಡಿದರೆ ತಮ್ಮ ಮಿತಿಇಲ್ಲದ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಮನೆಯಲ್ಲೇ ಸಣ್ಣ, ಪುಟ್ಟ ಕಳ್ಳತನಗಳನ್ನು ಮಾಡಬಹುದು, ಸುಳ್ಳು ಹೇಳಬಹುದು, ತಮ್ಮ ಮೈಮೇಲಿರುವ ಉಂಗುರ, ವಾಚು, ಚೈನು ಮುಂತಾದವುಗಳನ್ನು ಮಾರಿಕೊಂಡವರ ಉದಾಹರಣೆಗಳಿಗೂ ಕೊರತೆ ಇಲ್ಲ. ಅದಕ್ಕಾಗಿ ಪಾಲಕರಾದವರು ಮಕ್ಕಳ ಅವಶ್ಯಕತೆಗಳೇನು ಎಂಬುದನ್ನು ಯೋಚಿಸಿ, ಅಷ್ಟು ಹಣವನ್ನು ಹೇಗೆ ಹೇಗೆ ಖರ್ಚು ಮಾಡಬೇಕೆಂಬುದರ ಬಗ್ಗೆಯೂ ಸಲಹೆಕೊಡುವುದು ಅವಶ್ಯ. ಹಾಗೆಯೇ ಪ್ರತಿನಿತ್ಯವೂ ತಮ್ಮ ಖರ್ಚಿನ ವಿವರ ಬರೆಯುವಂತೆ ಮಾಡಿ, ತಿಂಗಳ ಕೊನೆಯಲ್ಲಿ ಅದನ್ನು ತಮಗೆ ತೋರಿಸಬೇಕೆಂದು ಹೇಳಬೇಕು. ಮಕ್ಕಳು ಬರುಬರುತ್ತಾ ಕೊಡುವ ಹಣಕ್ಕಿಂತ ಖರ್ಚನ್ನೂ ಹೆಚ್ಚಿಸಿಕೊಳ್ಳುತ್ತಾ, ಹೆಚ್ಚು – ಹೆಚ್ಚು ಹಣ ಕೇಳುತ್ತಾ ಹೋಗುತ್ತಾರೆ. ಆದುದರಿಂದ ಮಕ್ಕಳಿಗೆ ಹಣದ ಕೊರತೆಯಾದಾಗ ಪಾಲಕರಾದವರು ತಿಂಗಳ ಲೆಕ್ಕವನ್ನು ನೋಡಿ ಯಾವ, ಯಾವ ಖರ್ಚು ಕಡಿಮೆ ಮಾಡಿ ಹಣದ ಕೊರತೆಬಾರದಂತೆ ನೋಡಿಕೊಳ್ಳಬಹುದಿತ್ತು ಎಂಬುದರ ಕಡೆಗೆ ಮಕ್ಕಳ ಗಮನವನ್ನು ಸೆಳೆಯುವುದು ಯೋಗ್ಯ! ಮುಂಬರಬಹುದಾದ ಅವಶ್ಯಕತೆಗಳ ಬಗ್ಗೆ ಮುಂದಾಗಿ ಆಲೋಚಿಸಿ, ಅದಕ್ಕಾಗಿ ಹಣವನ್ನು ಪ್ರತಿ ತಿಂಗಳು ಸ್ವಲ್ಪ ಸ್ವಲ್ಪ ಕೂಡಿಟ್ಟು ಅಂತಹ ಪ್ರಸಂಗ ಬಂದಾಗ ತೊಂದರೆ ಇಲ್ಲದಂತೆ ಅವಶ್ಯಕತೆಯನ್ನು ಪೂರೈಸಿಕೊಳ್ಳುವ ಸಾಧ್ಯತೆಯನ್ನು ಅವರ ಅನುಭವಕ್ಕೇ ಬರುವಂತೆ ಮಾರ್ಗದರ್ಶನ ನೀಡಬೇಕು. ಅವರಿಗೆ ನಿಗದಿಮಾಡಿಕೊಡುವ ಹಣವು ಎಂದಿಗೂ ಧಾರಾಳವಾಗಿ ಖರ್ಚು ಮಾಡುವಷ್ಟಿರಬಾರದು, ಹೆಚ್ಚು ಕೊರತೆಯೂ ಆಗದೆ, ದುಂದುವೆಚ್ಚಮಾಡಲು ಅವಕಾಶವೂ ಇಲ್ಲದಷ್ಟು ಹಣವನ್ನು ಕೊಡಬೇಕು. ಹೀಗೆ ಚಿಕ್ಕವಯಸ್ಸಿನಿಂದಲೇ ಪಾಕೆಟ್ ಮನಿ ಕೊಡುವ ಪದ್ಧತಿ ಪ್ರಾರಂಭಿಸಿ, ಅವರ ಖರ್ಚು –ವೆಚ್ಚಗಳ ತಪಾಸಣೆ ಮಾಡುತ್ತಾ, ತಪ್ಪಿದಾಗ ಮಾರ್ಗದರ್ಶನ ಮಾಡುವುದೊಳಿತು, ಒಮ್ಮೊಮ್ಮೆ ತಪ್ಪು ಮಾಡಿದಾಗ ಅದರ ದುಷ್ಪರಿಣಾಮವನ್ನು ಅನುಭವಿಸಲು ಆಸ್ಪದಕೊಟ್ಟರೆ ಮತ್ತೊಮ್ಮೆ ಎಚ್ಚರಿಕೆಯಿಂದಿರಲು ಅವರೇ ಕಲಿಯುತ್ತಾರೆ. ಹೀಗಾದರೆ ಮುಂದೆ ಆ ಮಕ್ಕಳು ಹಾಸಿಗೆ ಇದ್ದಷ್ಟು ಕಾಲುಚಾಚುವುದನ್ನು ಎಂದರೆ ತಮ್ಮ ಆದಾಯ ಕಡಿಮೆ ಇದ್ದರೂ ಸಮಸ್ಯೆಗಳಿಗೆ ಒಳಗಾಗದಂತೆ ಎಚ್ಚರಿಕೆಯಿಂದ ಜೀವನ ಮಾಡುವುದನ್ನು ಕಲಿಯುತ್ತಾರೆ. ಅಂತಹವರಿಗೆ ದುಶ್ಚಟಗಳು ಬೆಳೆಯುವ ಅಥವಾ ದುಷ್ಟಸಹವಾಸಗಳಿಗೆ ಒಳಗಾಗುವ ಸಂದರ್ಭಗಳು ಇಲ್ಲವಾಗುತ್ತವೆ. ಅವರು ಹಣಹೆಚ್ಚಿದ್ದರೂ ಸಹ ಅವಶ್ಯಕತೆಗಳಿಗೆ ಮಾತ್ರ ಖರ್ಚುಮಾಡಿ, ಉಳಿದ ಹಣವನ್ನು ಮತ್ತೂ ಹೆಚ್ಚಿನ ಉತ್ತಮ ಕೆಲಸಗಳಿಗಾಗಿ ಮಾತ್ರ ವಿನಿಯೋಗಿಸುತ್ತಾರೆ.

ಎಂದರೆ, ಪಾಕೆಟ್ ಮನಿ ಕೊಟ್ಟರೆ ಮಾತ್ರ ಸರಿಯಾದ ರೀತಿಯಿಂದ ಜೀವನ ಮಾಡಲು ಕಲಿಯಲು ಸಾಧ್ಯ, ಇಲ್ಲದಿದ್ದರೆ ಇಲ್ಲ ಎಂದು ಅರ್ಥವಲ್ಲ, ಮನೆಯಲ್ಲಿ

ತಂದೆ – ತಾಯಿಯರು ಜೀವನ ಮಾಡುವ ರೀತಿಯು ಅವರ ಮನಸ್ಸಿನ ಮೇಲೆ ಬಹಳ ಪರಿಣಾಮವನ್ನುಂಟುಮಾಡುತ್ತದೆ. ಪಾಲಕರು ಖರ್ಚಿನ ಲೆಕ್ಕವನ್ನಿಡುವ ರೂಢಿ ಇಟ್ಟುಕೊಂಡಿದ್ದರೆ, ಹಣ ಖರ್ಚು ಮಾಡುವಾಗ ಎಚ್ಚರಿಕೆಯಿಂದ ಖರ್ಚು ಮಾಡುತ್ತಿದ್ದರೆ, ಹಣದ ಬೆಲೆ ತಿಳಿಯುವಂತಹ ಅನುಭವಗಳು ಮಕ್ಕಳಿಗೆ ಬರುವಂತೆ ಮಾಡಿದರೆ, ದುಷ್ಟ ಸಹವಾಸಗಳು ಅವರಿಗೆ ದೊರೆಯದಂತೆ ಎಚ್ಚರಿಕೆ ವಹಿಸಿದರೆ ಮಕ್ಕಳೂ ಒಳ್ಳೆಯ ರೀತಿ ಜೀವನ ಮಾಡುವುದನ್ನು ಕಲಿಯುತ್ತಾರೆ. ಅಲ್ಲದೆ ಅನವಶ್ಯಕವಾದವುಗಳಿಗಾಗಿ ಪಾಲಕರನ್ನು ಹಣ ಕೇಳಲು ಹೋಗುವುದೇ ಇಲ್ಲ. ಅದಿಲ್ಲದೆ ಪಾಲಕರಾದವರು ತಾವು ಅಂಧಾ –ಧುಂದಿ ಜೀವನ ಮಾಡುತ್ತಾ ಮಕ್ಕಳಿಗೆ ಎಷ್ಟೇ ಬೋಧನೆಮಾಡಿದರೂ, ಪಾಕೆಟ್ ಮನಿಕೊಟ್ಟು ಎಚ್ಚರಿಕೆಗಳನ್ನೆಲ್ಲಾ ವಹಿಸಿದರೂ ಹೊಳೆಯಲ್ಲಿ ಹುಣಿಸೆಹಣ್ಣು ಹಿಂಡಿದಂತಾಗುತ್ತದೆ. ಆದ್ದರಿಂದ ಅವರ ಮಾರ್ಗದರ್ಶನ ಹಾಗೂ ಜೀವನವೇ ಮಕ್ಕಳಿಗೆ ದಾರಿದೀವಿಗೆ ಎಂದು ಹೇಳಬಹುದು.

■

## ೧೮. ಇಂದಿನ ಶಿಕ್ಷಣದಲ್ಲಿ ಆಂಗ್ಲ ಭಾಷೆಯ ಸ್ಥಾನ ?

ಇಂದಿನ ಭಾರತೀಯರನ್ನು ಬಹುವಾಗಿ ಕಾಡಿಸುತ್ತಿರುವ ಅನೇಕ ಮುಖ್ಯ ವಿಚಾರಗಳಲ್ಲಿ ಸ್ವ ಮತ್ತು ಪರ ಭಾಷೆಯ ಅಧ್ಯಯನ ವಿಚಾರವೂ ಒಂದು. ಮೊದಲನೆಯದಾಗಿ ಪರಭಾಷೆಯನ್ನು ಪ್ರತಿಯೊಬ್ಬರೂ ಕಲಿಯಲು ಸಾಧ್ಯವಿಲ್ಲ. ಪರಭಾಷೆಯನ್ನು ಕಲಿಯಲು ಬಹಳ ಪ್ರಯತ್ನ, ವ್ಯವಸ್ಥೆ ಮತ್ತು ಸಮಯಬೇಕು, ಇಷ್ಟೆಲ್ಲಾ ವ್ಯವಸ್ಥೆ ಮಾಡಿಕೊಂಡರೂ ಸಾಮಾನ್ಯ ಬುದ್ಧಿಯ ಮಗು ತನ್ನ ಸಮಯ, ಬುದ್ಧಿಶಕ್ತಿ ಎಲ್ಲವನ್ನೂ ಬರಿಯ ಭಾಷೆ ಕಲಿಯಲು ಮಾತ್ರ ಉಪಯೋಗಿಸಬೇಕಾಗುತ್ತದೆ. ಹೆಚ್ಚಿನ ಕೆಲಸ ಮಾಡಲು ಮನಸ್ಸಿಗೆ ಬಿಡುವು ಹಾಗೂ ಶಕ್ತಿ ಸಾಲದು. ನಮ್ಮ ದೇಶ ಸ್ವಾತಂತ್ರ್ಯ ಪಡೆದ ಮೇಲಂತೂ ಎಲ್ಲಾ ಮಕ್ಕಳಿಗೆ ಸಮಾನ ಶಿಕ್ಷಣಾವಕಾಶವಿರುವುದರಿಂದ ಇಂದು ಶಿಕ್ಷಣ ಪಡೆಯುತ್ತಿರುವ ಮಕ್ಕಳು ಅನೇಕ ರೀತಿಯ ಪರಿಸರಗಳಿಂದ ಬರುತ್ತಾರೆ. ಅತೀ ದಡ್ಡರು, ಅತೀ ಬುದ್ಧಿವಂತರು, ಸಾಮಾನ್ಯರು, ಎಲ್ಲರಿಗೂ ಒಂದೇ ಮಾದರಿಯ ಶಾಲೆ, ಒಂದೇ ರೀತಿಯ ಶಿಕ್ಷಣ, ಎಲ್ಲರಿಗೂ ಸಮಾನ ಅವಕಾಶಗಳಿರುವುದರಿಂದ ಎಲ್ಲರೂ ತಮ್ಮ ಮಕ್ಕಳು ಉನ್ನತ ಶಿಕ್ಷಣ ಪಡೆಯಬೇಕು, ದೊಡ್ಡ ಹುದ್ದೆ ಹೊಂದಬೇಕು, ಜಾಣರಾಗಬೇಕು ಎಂದು ಆಶಿಸುವುದು, ಪ್ರಯತ್ನಿಸುವುದು ಸಹಜವೇ ಆಗಿದೆ. ದೇಶಾದ್ಯಂತ ಶಿಕ್ಷಣದ ಕಡೆಗೆ ಲಕ್ಷ್ಯ ಹರಿದಿರುವುದು ಒಳಿತಾದರೂ ನೌಕರಿಯೇ ಗುರಿಯಾಗಿ ನಡೆಯುತ್ತಿರುವ ಶಿಕ್ಷಣ ಅನೇಕ ಸಮಸ್ಯೆಗಳನ್ನು ಸಾರ್ವಜನಿಕರಿಗೂ, ಸರ್ಕಾರಕ್ಕೂ ತಂದೊಡ್ಡಿದೆ. ನೌಕರಿಯ ಆಸೆಯಿಂದ ಶಿಕ್ಷಣ ಕೊಡಿಸುವ ತಂದೆ ತಾಯಿಯರು ತಮ್ಮಲ್ಲಿ ಇದ್ದುಬದ್ದುದನ್ನೆಲ್ಲಾ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ವೆಚ್ಚ ಮಾಡುತ್ತಾರೆ. ಅವರು ಇಂಗ್ಲಿಷ್ ಮೂಲಕ ಪಡೆವ ಶಿಕ್ಷಣದಲ್ಲಿ ಮುಂದೆಯೂ ಹೋಗಲಾರರು: ಪ್ರಯತ್ನ ಮಾಡದೆಯೂ ಇರಲಾರರು. ಪ್ರಯತ್ನಕ್ಕೆ ತಕ್ಕ ಪ್ರತಿಫಲ ದೊರೆಯುವುದು ಅಸಾಧ್ಯವಾದಾಗ ವಿದ್ಯಾರ್ಥಿಯೂ ಉತ್ಸಾಹಹೀನನಾಗುತ್ತಾ ನಿರಾಸೆಯಿಂದ ದಿಕ್ಕುಕಾಣದವನಾಗಿ ಅಂತ್ಯದಲ್ಲಿ ತನ್ನ ಪ್ರಗತಿಯನ್ನೇ ನಂಬಿರುವ ತಂದೆ ತಾಯಿಗಳನ್ನು ನಿರಾಶೆಗೊಳಸುತ್ತಾನೆ. ಇದು, ಅವರಿಬ್ಬರಿಗೆ ನಷ್ಟವಲ್ಲದೆ ದೇಶದ ಪ್ರಗತಿಗೆ ನೆರವಾಗಬೇಕಾದ ಅವನು ಹೊರೆಯಾಗುತ್ತಾನೆ. ನಂತರ ದೈಹಿಕ ಕೆಲಸ ಮಾಡಲು ಅಭ್ಯಾಸವಿಲ್ಲದೆ ಅದನ್ನು ಮಾಡಲಾರ: ಬೌದ್ಧಿಕ ಬೆಳವಣಿಗೆಗೆ ಅವಕಾಶವಿಲ್ಲದೆ

ಇದನ್ನೂ ಮಾಡಲಾರ, ಅವನ ಜೀವನ ದುರ್ಭರವಾಗುತ್ತದೆ. ಇವನು ಮುಂದೆ ತಮ್ಮ ಸಂಸಾರಕ್ಕೆ ನೆರವಾಗುತ್ತಾನೆಂದು ನಂಬಿ ಇದ್ದುದೆಲ್ಲವನ್ನೂ ಖರ್ಚುಮಾಡಿದುದರ ಪರಿಣಾಮವಾಗಿ ತಂದೆಯು ಉಳಿದ ಮಕ್ಕಳ ಅಭಿವೃದ್ಧಿಗೆ ಏರ್ಪಾಡು ಮಾಡಲು ಅಶಕ್ತನಾಗುತ್ತಾನೆ. ಹೀಗಾಗಿ ಆ ಮನೆತನವೇ ದು:ಖ, ನೋವು ಬಡತನಗಳಿಗೆ ಗುರಿಯಾಗಬಹುದು. ಇಂತಹ ಅನೇಕ ಮನೆತನಗಳ ಸ್ಥಿತಿ, ದೇಶದ ಬಡತನಕ್ಕೆ, ಅವ್ಯವಸ್ಥೆಗೆ ಇನ್ನೂ ಅನೇಕ ರೀತಿಯ ಸಮಸ್ಯೆಗಳಿಗೆ ಕಾರಣವಾಗಿದೆ. ಈ ರೀತಿಯಾಗಿ ಪರಭಾಷೆ ಕಲಿಯಬೇಕಾದ ವ್ಯಾಮೋಹದಲ್ಲಿ ಮುಂದೆ ಹೋಗಲಾಗದ ಅಸಹಾಯಕತೆಗೆ ಒಳಗಾಗುವ ಮಕ್ಕಳ ಸಂಖ್ಯೆ ಶೇಕಡ ಎಂಭತ್ತೆಂದರೂ ಅತಿಶಯೋಕ್ತಿಯಾಗಲಾರದು.

**ಇಂಗ್ಲೀಷ್ ವ್ಯಾಮೋಹ:**

ತಾಂತ್ರಿಕ ಶಿಕ್ಷಣ ಹೊಂದಲು, ಕಾಲೇಜು ಶಿಕ್ಷಣ ಪಡೆಯಲು, ನೌಕರಿಗೆ ಸೇರಲು ಇನ್ನೂ ಮುಂತಾದ ಕಾರಣಗಳಿಂದ ಇಂಗ್ಲಿಷ್ ಭಾಷಾಜ್ಞಾನ ಅತ್ಯವಶ್ಯಕವಾಗಿದೆ.ಯಾರಿಗೆ ಇಂಗ್ಲಿಷ್ ಭಾಷೆಯಲ್ಲಿ ಪರಿಣತಿ ಇದೆಯೋ ಅವರಿಗೆ ಹೆಚ್ಚಿನ ಅವಕಾಶಗಳು ಇರುವುದರಿಂದ ಈ ಭಾಷೆಯ ಬಗ್ಗೆ ವ್ಯಾಮೋಹವೇ ಬೆಳೆದಿದೆ. ತಮ್ಮ ಮಕ್ಕಳಿಗೆ ಇಂಗ್ಲಿಷ್ ಕಲಿಸಲು ಕೂಲಿಕಾರರು ಮೊದಲುಗೊಂಡು ಎಲ್ಲರೂ ಆತುರರಾಗಿದ್ದಾರೆ, ಹೀಗಾಗಿ ಮಕ್ಕಳ ಸಮಯ, ಪ್ರಯತ್ನ, ಬುದ್ಧಿಶಕ್ತಿ, ಎಲ್ಲವೂ ಒಂದು ಭಾಷೆಯನ್ನು, ಅದರದಲ್ಲದ ಪರಿಸರದಲ್ಲಿ ಕಲಿಯುವುದಕ್ಕೆ ವ್ಯರ್ಥವಾಗುತ್ತದೆಯೇ ಹೊರತು ಜ್ಞಾನ ಬೆಳೆಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಜೊತೆಗೆ ಪರಭಾಷೆಯಲ್ಲಿ ವಿಶಾಲವಾಗಿ ವಿವೇಚಿಸಲಾರರು, ಕೆಲವರು ಮನಸ್ಸಿನಲ್ಲಿ ವಿವೇಚಿಸಿದರೂ ಬಾಯಿಬಿಟ್ಟು ಹೇಳಲು ಭಾಷೆಯ ಪ್ರಭುತ್ವ ಸರಿಯಾಗಿದೆಯೇ ಇಲ್ಲವೋ ಎಂದು ಅಂಜಿ ಹಿಂದೆ ಉಳಿಯುವುದು, ಹೀಗೆ ಹಿಂದೆ ಉಳಿಯುತ್ತಾ ಹೋದಾಗ, ಮಕ್ಕಳ ವಿವೇಚನಾ ಶಕ್ತಿಯೇ ಕುಂದಿ ಹೋಗುತ್ತದೆ. ಬರುಬರುತ್ತಾ ಡಾಕಾದಮಸ್ಲಿನ್ ಬಟ್ಟೆಯ ಕೈಗಾರಿಕೆಯು ನಮ್ಮ ದೇಶದಿಂದ ಸಂಪೂರ್ಣವಾಗಿ ನಾಶವಾದಂತೆ, ನಮ್ಮ ದೇಶದ ಬಹುಪಾಲು ಜನರ ವಿಚಾರ ಶಕ್ತಿಯೂ ನಶಿಸಿ, ನಶಿಸಿ, ಇಲ್ಲದಂತಾಗಬಹುದು.

**ಇಂಗ್ಲಿಷ್ ಭಾಷೆಯಲ್ಲಾದರೆ . . . . .**

ಯಾವುದೇ ಭಾರತೀಯ ಭಾಷೆಯನ್ನು ಇಂಗ್ಲಿಷ್ ಭಾಷೆ ಕಲಿಯುವುದಕ್ಕಿಂತ ಸುಲಭವಾಗಿ ಕಲಿಯಬಹುದು. ಆ ಭಾಷೆ ತನ್ನದೇ ಆದ ವೈಶಿಷ್ಟ್ಯಗಳನ್ನು ಹೊಂದಿದೆ, ಇಲ್ಲಿ ಸ್ಪೆಲಿಂಗಿಗೂ, ಉಚ್ಚಾರಕ್ಕೂ ಸಂಬಂಧವಲ್ಲ. ಕೆಲವು ಕಡೆ ಒಂದೇ ಅಕ್ಷರವು ಅನೇಕ ಶಬ್ದಗಳನ್ನು ಪ್ರತಿನಿಧಿಸುತ್ತವೆ, ಅನೇಕ ಅಕ್ಷರಗಳು ಒಂದೇ ಶಬ್ದವನ್ನೂ

ಪ್ರತಿನಿಧಿಸುವುವು, ಪ್ರಿಪೋಜಿಷನ್ ಮತ್ತು ಆರ್ಟಿಕಲ್‌ಗಳನ್ನು ಬಳಸಲು ಮಹಾನ್ ಪಂಡಿತರುಗಳಿಗೂ ಸ್ಪಷ್ಟವಾಗಿ ಗೊತ್ತಾಗಲಾರದು: ಒಂದು ಪ್ರಿಪೋಜಿಷನ್ ಬೇರೆ ಬೇರೆ ಸಂದರ್ಭದ ಉಪಯೋಗದಿಂದ ವಿವಿಧ ಅರ್ಥಕೊಡಬಲ್ಲದು, ಇವನ್ನೆಲ್ಲ ಸ್ವಾಭಾವಿಕ ವಾತಾವರಣದಲ್ಲಿ ಕಲಿಯುವುದು ತ್ರಾಸದಾಯಕವಲ್ಲ. ಆದರೆ ಎಲ್ಲವನ್ನೂ ಪುಸ್ತಕದ ಆಧಾರದಿಂದಲೇ ಕಲಿಯಬೇಕಾದಾಗ, ಇಡೀ ಜೀವನವನ್ನೇ ತೇದರೂ ನಿರೀಕ್ಷಿಸಿದ ಲಾಭ ದೊರೆಯುವುದು ಕಠಿಣ.

ಭಾಷೆಯ ಅಭ್ಯಾಸ ಒಂದು ಕೌಶಲ್ಯ, ಪರಭಾಷೆ ಕಲಿಯಲು ಕೆಲವರಿಗೆ ಮಾತ್ರ ಆಸಕ್ತಿ, ಶಕ್ತಿ ಇರುತ್ತದೆ. ಅಂಥವರು ಮಾತ್ರ ಸುಲಭವಾಗಿ ಯಾವುದೇ ಭಾಷೆಯನ್ನಾದರೂ ಕಲಿಯಬಲ್ಲರು, ಸಾಮಾನ್ಯವಾಗಿ ಐಶ್ವರ್ಯವಂತ ಅಥವಾ ವಿದ್ಯಾವಂತ ಕುಟುಂಬದಲ್ಲಿದ್ದು ಆ ಭಾಷೆಯನ್ನು ಉಪಯೋಗಿಸುವ ಪರಿಸರದಲ್ಲಿ ಬೆಳೆದವರಿಗೆ ಇದು ಸುಲಭ ಸಾಧ್ಯವಾಗುವುದು. ತಮಗೆ ತಿಳಿದುದನ್ನು ಬೇರೆಯವರಿಗೆ, ಸ್ಪಷ್ಟವಾಗಿ ಮಾತಿನಿಂದಾಗಲೀ, ಬರಹದ ಮೂಲಕವಾಗಲೀ ಸುಮಾರು ನೂರಕ್ಕೆ ತೊಂಭತ್ತು ಜನರು ಇತರರಿಗೆ ತಿಳಿಸಲಾರರು, ಹೀಗಾಗಿ ತಾವು ಬಾಯಿಬಿಟ್ಟು ಮಾತನಾಡುವ ಸಂದರ್ಭ ಬಂದರೂ, ಹೇಳಬೇಕಾದ ತಮ್ಮದೇ ಆದ ಅಭಿಪ್ರಾಯಗಳಿದ್ದರೂ, ಎಲ್ಲಿ ತಪ್ಪುಗಳಾಗುತ್ತದೆಯೋ ಎಂದು ಅಂಜಿ ಮೂಕರಂತೆ ಕುಳಿತುಕೊಳ್ಳುತ್ತಾರೆ, ಮಾರ್ಗದರ್ಶಕ ಅಭಿಪ್ರಾಯಗಳು ಹೊಳೆದರೂ, ಮುಂದುವರಿಯುವ ಪ್ರತಿಭೆ ಅಲ್ಲಿ ಹುದುಗಿದ್ದರೂ, ಇಂಗ್ಲಿಷ್‌ನಲ್ಲಿ ಮನಮುಟ್ಟುವಂತೆ ಹೇಳಲು ಅಥವಾ ಬರೆಯಲು ಬಾರದೆ ಹಿಂದುಳಿಯುತ್ತಾರೆ.

**ಮಾತೃ ಭಾಷೆಯಲ್ಲಾದರೆ ....**

ವಿಷಯ ಎಷ್ಟೇ ಗಹನವಾಗಿರಲಿ, ಅದನ್ನು ತನ್ನ ಮಾತೃಭಾಷೆಯ ಮೂಲಕವಾದರೆ, ವಿದ್ಯಾರ್ಥಿಗಳು ಕಡಿಮೆ ಅವಧಿಯಲ್ಲಿ ಹೆಚ್ಚು ಸ್ಪಷ್ಟವಾಗಿ ಅರ್ಥಮಾಡಿಕೊಳ್ಳಬಲ್ಲರು, ಅಷ್ಟೇ ಅಲ್ಲದೆ ಬೇರೆಯವರಿಗೂ ತಮ್ಮ ವಿಚಾರಗಳನ್ನು ಹೇಳಿ, ಬರೆದು ತಿಳಿಸಲು ಸಮರ್ಥರಾಗುತ್ತಾರೆ. ಹೀಗಾದಾಗ ವಿದ್ಯಾರ್ಥಿಗಳಿಗೆ ತಮ್ಮ ಬಗ್ಗೆ ತಮ್ಮ ಓದಿನ ಬಗ್ಗೆ ಆತ್ಮವಿಶ್ವಾಸ ಮೂಡುತ್ತದೆ. ಆಗ ಅವರು ಇನ್ನೂ ಹೆಚ್ಚು ಶ್ರದ್ಧೆಯಿಂದ ಓದುತ್ತಾರೆ. ಇಮ್ಮಡಿ ಉತ್ಸಾಹದಿಂದ ಮುಂದುವರಿಯುತ್ತಾರೆ. ಹೀಗಾದಾಗ ಅವರಿಗೆ ಹೊಸ ಹೊಸ ಅಭಿಪ್ರಾಯಗಳು ಹೊಳೆಯಬಹುದು. ದೇಶದ ಪ್ರಗತಿಯನ್ನುಂಟು ಮಾಡುವ ವಿಚಾರಗಳು ಮೂಡಬಹುದು. ನಮ್ಮ ಭಾರತೀಯ ಮಕ್ಕಳು, ಜಾಣತನದಲ್ಲಿ ಮುಂದುವರಿದ ಅನೇಕ ರಾಷ್ಟ್ರಗಳ ಮಕ್ಕಳಿಗಿಂತ ಮುಂದಿದ್ದಾರೆಂಬುದನ್ನು ಸಾಬೀತು ಗೊಳಿಸಬಹುದು. ಆದರೆ ಅವರ ಸಮಯವೆಲ್ಲ ಪರಭಾಷೆಯಲ್ಲಿರುವ ವಿಷಯಗಳನ್ನು ತಿಳಿದುಕೊಳ್ಳುವುದಕ್ಕಿಂತ ಹೆಚ್ಚಾಗಿ ಅವುಗಳನ್ನು

ಕಂಠಪಾಠ ಮಾಡಿ ಪರೀಕ್ಷೆಗಳನ್ನು ಪಾಸು ಮಾಡುವುದರಲ್ಲೇ ವ್ಯರ್ಥವಾಗುತ್ತದೆ. ಎಷ್ಟೋ ಮಕ್ಕಳು ತಮ್ಮ ಮಾತೃಭಾಷೆಯಲ್ಲಿ ಕಲಿಯುವಾಗ ಶೇಕಡಾ ತೊಂಬತ್ತು ಅಂಕಗಳನ್ನು ಪಡೆಯುತ್ತಿದ್ದು ಎಲ್ಲಾ ಚಟುವಟಿಕೆಗಳಲ್ಲೂ ಭಾಗವಹಿಸಿ ಮುಂದೆ ಬರುತ್ತಿದ್ದವರು, ಕಾಲೇಜಿಗೆ ಹೋದ ಮೇಲೆ ಈ ಪರಭಾಷಾ ಮಾಧ್ಯಮದಿಂದಾಗಿ ಹೇಳಿದಷ್ಟನ್ನು ತಿಳಿದುಕೊಳ್ಳಲಾರದೆ, ತಿಳಿದುಕೊಂಡಷ್ಟನ್ನು ಅಭಿವ್ಯಕ್ತಿಗೊಳಿಸಲಾರದೆ ಹಿಂದೆ ಹಿಂದಕ್ಕೆ ಉಳಿದಿರುವ ಉದಾಹರಣೆಗಳಿಗೇನೂ ಕೊರತೆ ಇಲ್ಲ, ಕುಂಟನನ್ನು ಓಡುವ ಸ್ಪರ್ಧೆಗೆ ಕಳಿಸಿದಂತಾಗಿದೆ, ಈ ಇಂಗ್ಲಿಷ್ ಕಲಿಯುವ ಪ್ರಯತ್ನ : ಹೀಗೆ ತನಗಿದು ಅಸಾಧ್ಯ ಎಂಬ ಭಾವನೆಯಿಂದ ವಿದ್ಯಾರ್ಥಿ ಏನೂ ಸಾಧಿಸಲಾರ : ಧೈರ್ಯದಿಂದ ಮುನ್ನುಗ್ಗಲಾರ ಅಂತಹವನು ಬರ ಬರುತ್ತಾ ಸಂಕೋಚದಿಂದ ಕೆಲಸಕ್ಕೇ ಬಾರದವನಾಗುತ್ತಾನೆ. ಹೀಗೆ ನಾಯಕ ನಾಗಬೇಕಾದವನು ಸೇವಕನಾಗುವ ಮಟ್ಟಕ್ಕೆ ಇಳಿಯಬಹುದು.

**ವಿಶ್ವಭಾಷೆ:**

ಹಾಗಾದರೆ ಇಂಗ್ಲಿಷ್ ಭಾಷೆ ನಮಗೆ ಸುತಾರಾಂ ಬೇಡವೇ ? ಅದನ್ನು ನಮ್ಮ ದೇಶದಿಂದ ಹೊಡೆದೋಡಿಸಬೇಕೆ ? ಅದು ಸಾಧುವಲ್ಲ; ಇಂಗ್ಲಿಷ್ ಒಂದು ದೇಶದ ಭಾಷೆಯಲ್ಲ, ಪ್ರಪಂಚದ ಭಾಷೆ, ಪ್ರಮುಖ ರಾಷ್ಟ್ರಗಳಾದ ಯು.ಎಸ್.ಎ., ಕೆನಡಾ, ಆಸ್ಟ್ರೇಲಿಯಾ, ಇಂಗ್ಲೆಡ್, ದಕ್ಷಿಣ ಆಫ್ರಿಕ ಮತ್ತು ಇಂಗ್ಲೆಂಡಿನ ಅನೇಕ ವಸಾಹತು ರಾಜ್ಯಗಳಲ್ಲಿಯ ಜನರು ಈ ಭಾಷೆಯನ್ನೂ ಆಡುತ್ತಾರೆ. ಆಧುನಿಕ ಪ್ರಪಂಚದಲ್ಲಿ ಪ್ರತಿಯೊಂದು ದೇಶವೂಇತರ ದೇಶಗಳೊಡನೆ ಒಂದಲ್ಲಾ ಒಂದು ಕಾರಣಕ್ಕಾಗಿ ಸಂಬಂಧವಿಟ್ಟುಕೊಳ್ಳಬೇಕಾಗಿದೆ. ಆದ್ದರಿಂದ ಇಂಗ್ಲಿಷ್ ಭಾಷಾಜ್ಞಾನದಿಂದ ಅನೇಕ ದೇಶಗಳೊಡನೆ ಸಂಬಂಧವಿಟ್ಟುಕೊಳ್ಳುವುದು ಸುಲಭವಾಗುತ್ತದೆ. ನಮ್ಮ ಸೌಹಾರ್ದಯುತ ವಿದೇಶ ವ್ಯವಹಾರಕ್ಕೆ, ಆರ್ಥಿಕ ಅಭಿವೃದ್ಧಿಗೆ, ವೈಜ್ಞಾನಿಕ ಹಾಗೂ ಔದ್ಯೋಗಿಕ ಪ್ರಗತಿಗೆ ಇಂಗ್ಲಿಷ್ ಭಾಷೆಯ ನೆರವು ಎಷ್ಟು ಬೇಕು ಎಂಬುದನ್ನು ವರ್ಣಿಸಲು ಅಸಾಧ್ಯ. ಮೇಲಾಗಿ ಸದ್ಯದಲ್ಲಿ ನಮ್ಮ ಭಾರತದ ಯಾವ ಭಾಷೆಯೂ ಇನ್ನೂ ನಮಗೆ ಬೇಕಾದ ಎಲ್ಲಾ ನೆರವು ನೀಡುವ ಮಟ್ಟದಲ್ಲಿ ಬೆಳದಿಲ್ಲವೆಂಬುದನ್ನು ಒಪ್ಪಿಕೊಳ್ಳದೆ ನಿರ್ವಾಹವಿಲ್ಲ. ( ಅದಕ್ಕೆ ಕಾರಣಗಳು ಬೇಕಾದಷ್ಟು ಇವೆ, ಅದು ಬೇರೆ ಮಾತು,) ನಮ್ಮ ಸಾಮಾಜಿಕ ಮತ್ತು ರಾಜಕೀಯ ಜೀವನದ ಮಾರ್ಪಾಡಿಗೆ, ವಿದ್ಯೆಯ ಹೆಚ್ಚಳಕ್ಕೆ, ಜನ ಜಾಗ್ರೃತಿಗೆ ಪ್ರತ್ಯಕ್ಷವಾಗಿಯಲ್ಲದಿದ್ದರೂ ಪರೋಕ್ಷವಾಗಿಯಾದರೂ ಇಂಗ್ಲಿಷ್ ಮತ್ತು ಇಂಗ್ಲಿಷರು ಕಾರಣರೆಂದು ಹೇಳಿದರೆ ತಪ್ಪೇನಲ್ಲ. ನಮ್ಮ ಭಾಷಾ ಸಾಹಿತ್ಯಗಳ ಇತ್ತೀಚಿನ ವೈವಿಧ್ಯಪೂರ್ಣ ಬೆಳವಣಿಗೆಗೆ ಇಂಗ್ಲಿಷರೊಡನಾಟ, ನಿಕಟ ಸಂಪರ್ಕವೇ ಕಾರಣವೆನ್ನಬಹುದು, ನಮ್ಮ ಅನೇಕ

ಬರಹಗಾರರು, ಸಾಹಿತಿಗಳು ಆಂಗ್ಲ ಭಾಷಾ ಕವಿಗಳಿಂದ ಆಂಗ್ಲ ಸಾಹಿತ್ಯದಿಂದ ಪ್ರಚೋದನೆ ಪಡೆದುಕೊಂಡರೆಂದು ಅವರುಗಳೇ ಹೇಳಿಕೊಂಡುದನ್ನು ಕೇಳಿದ್ದೇವೆ, ಓದಿದ್ದೇವೆ, ಬ್ರಿಟಿಷರ ಆಳ್ವಿಕೆಯಿಂದ ಒಂದು ರೀತಿಯಲ್ಲಿ ಅನೇಕ ನಷ್ಟಗಳಾದರೂ, ಇನ್ನೊಂದು ರೀತಿಯಲ್ಲಿ ನಮಗೆ ಅನೇಕ ಲಾಭಗಳೂ ಆಗಿವೆ, ಅನೇಕ ಭಾಷೆಗಳಿರುವ ನಮ್ಮ ದೇಶದಲ್ಲಿ, ಸದ್ಯಕ್ಕೆ ಸಂಪರ್ಕ ಭಾಷೆಯಾಗಿಯೂ ಇದರ ಉಪಯೋಗ ಅಷ್ಟಿಷ್ಟಲ್ಲ.

ಇಂತಹ ಲಾಭದಾಯಕವಾದ ಭಾಷೆಯನ್ನು ಕಡೆಗಣಿಸಲು ಸಾಧ್ಯವಿಲ್ಲ, ಆದರೆ ಅದು ಎಷ್ಟು ಬೇಕು, ಯಾರಿಗೆ ಬೇಕು, ಏಕೆ ಬೇಕು ಎಂಬುದನ್ನು ಮೊದಲು ವಿಮರ್ಶಿಸಬೇಕು, ಎಲ್ಲರ ಮೇಲೂ ಕಡ್ಡಾಯವಾಗಿ ಹೇರುವುದು ವಿಹಿತವೆ ? ಆ ಭಾಷೆಯ ಉಪಯೋಗವೇನು ? ಅದಕ್ಕಾಗಿ ಎಷ್ಟು ಮಂದಿ, ಎಂಥವರು ಅದನ್ನು ಕಲಿಯಬೇಕು, ಉಳಿದವರಿಗೆ ಅದರ ಅಲ್ಪ ಪರಿಚಯ ಇರಬೇಕೆ ಬೇಡವೇ? ಬೇಕಾದರೆ ಯಾವ ಮಟ್ಟದಲ್ಲಿ ಎಷ್ಟೆಷ್ಟು ಬೇಕು ? ಇದನ್ನೆಲ್ಲ ಕೂಲಂಕುಶವಾಗಿ ಪರಿಶೀಲಿಸಿ ಅದರ ಸ್ಥಾನವನ್ನು ನಮ್ಮ ವಿದ್ಯಾಭ್ಯಾಸ ಕ್ರಮದಲ್ಲಿ ನಿಯೋಜಿಸಬೇಕು.

**ಕೆಲವರಿಗೆ ಮಾತ್ರ ಇಂಗ್ಲಿಷ್ :**

ವೈಜ್ಞಾನಿಕ, ತಂತ್ರಜ್ಞಾನವನ್ನು ಪಡೆಯಲು ಸದ್ಯದ ಪರಿಸ್ಥಿತಿಯಲ್ಲಿ ಇಂಗ್ಲಿಷ್ ಭಾಷಾಜ್ಞಾನ ಅವಶ್ಯಕ. ಆ ಕ್ಷೇತ್ರದ ಪ್ರಮಾಣ ಗ್ರಂಥಗಳು, ಸಹಾಯಕ ಸಾಮಾಗ್ರಿ ಮೊದಲಾದುವುಗಳೆಲ್ಲ ಇಂಗ್ಲಿಷಿನಲ್ಲಿ ದೊರೆಯುತ್ತವೆ. ಈ ಎಲ್ಲಾ ಗ್ರಂಥ ಲೇಖನ ಸಮುದಾಯವನ್ನು ಪ್ರಾದೇಶಿಕ ಭಾಷೆಗಳಿಗೆ ಸಂಪತ್ತಿನ ಕೊರತೆಯು ಇರುವಾಗ ಒಂದೇ ಬಾರಿಗೆ ಎಲ್ಲವನ್ನೂ ಭಾಷಾಂತರಿಸುವುದು ಸಾಧ್ಯವಿಲ್ಲ. ಮೇಲಾಗಿ ಅವುಗಳನ್ನು ಅಷ್ಟೇ ಉಚ್ಚಮಟ್ಟದಲ್ಲಿ ಭಾಷಾಂತರಿಸುವ ಪರಿಣತರೂ ಸಾಕಷ್ಟು ಸಂಖ್ಯೆಯಲ್ಲಿ ದೊರೆಯುವುದು ದುರ್ಲಭ. ಈ ತಾಂತ್ರಿಕ ಜ್ಞಾನ ಕೊಡುವ ಪದ್ಧತಿಯ ತಜ್ಞರ ಸಲಹೆಗಳನ್ನು ಅರ್ಥ ಮಾಡಿಕೊಳ್ಳುವವರಿಗಾದರೂ ಇಂಗ್ಲಿಷ್ ಭಾಷಾ ಜ್ಞಾನಬೇಕು. ಪರದೇಶಗಳೊಡನೆ ವ್ಯವಹಾರಿಕ, ರಾಜಕೀಯ, ತಾಂತ್ರಿಕ, ಸಾಂಸ್ಕೃತಿಕ ಮೊದಲಾದ ಸಂಬಂಧಗಳನ್ನಿಟ್ಟು ಕೊಳ್ಳಲೂ ಇಂಗ್ಲಿಷ್‌ನಲ್ಲಿ ಪರಿಣತರಾದ ವ್ಯಕ್ತಿಗಳು ನಮ್ಮ ದೇಶಕ್ಕೆ ಅತ್ಯವಶ್ಯಕ. ಇದನ್ನೆಲ್ಲಾ ಪ್ರಾಂತೀಯ ಭಾಷೆಗಳಲ್ಲಿ ರಚಿಸಲು ಪ್ರಯತ್ನಗಳು ಈಗ ನಡೆಯುತ್ತಿದ್ದರೂ ಕೊರತೆಯನ್ನು ನೀಗುವಷ್ಟು ಆಗಿಲ್ಲ. ಅನೇಕ ಭಾಷೆಗಳನ್ನೊಳಗೊಂಡ ಭಾರತದಲ್ಲಿ ಎಲ್ಲರಿಗೂ ಹೊಂದಿಕೆಯಾಗುವ ಒಂದು ರಾಷ್ಟ್ರ ಭಾಷೆ ಬೇಕು. ಅಂತಹ ಭಾಷೆ ಹಿಂದಿಯಲ್ಲದೆ ಸದ್ಯಕ್ಕೆ ಬೇರೊಂದಿಲ್ಲ. ಆದರೆ ಹಿಂದಿಯನ್ನು ರಾಷ್ಟ್ರಭಾಷೆಯನ್ನಾಗಿ ಎಲ್ಲರೂ ಏಕ ಮನಸ್ಸಿನಿಂದ, ವಿಶಾಲ ಭಾವನೆಯಿಂದ ಗಣಿಸುತ್ತಿಲ್ಲವಾಗಿ ಅನೇಕ ಸಮಸ್ಯೆಗಳಿಗೆ ಎಡೆಯುಂಟಾಗಿದೆ. ಹಾಗಾಗಿ

ಇಂಗ್ಲಿಷ್ ತನ್ನ ಮಹತ್ವದ ಸ್ಥಾನವನ್ನು ಇನ್ನೂ ಉಳಿಸಿಕೊಳ್ಳುವ ಸನ್ನಿವೇಶ ಇದೆ. ಆದರೆ ಈ ಕಾರಣಕ್ಕಾಗಿಯಾದರೂ ಇಂಗ್ಲಿಷ್ ಎಷ್ಟು ಜನಕ್ಕೆ ಬೇಕು ? ನಮ್ಮ ದೇಶದಲ್ಲಿ ಅತ್ಯುಚ್ಚ ಮಟ್ಟದಲ್ಲಿ ಎಲ್ಲಾ ಕೆಲಸಗಳನ್ನೂ ಇಂಗ್ಲಿಷ್‌ನಲ್ಲೇ ನಿರ್ವಹಿಸಬೇಕಾದವರ ಸಂಖ್ಯೆ ಶೇಕಡಾ ಐದರಷ್ಟೂ ಆಗಲಾರದು. ಉಳಿದವರಿಗೂ ಸಹ ತಾಂತ್ರಿಕ ಜ್ಞಾನ, ವೈಜ್ಞಾನಿಕ ಜ್ಞಾನ ಸಾಹಿತ್ಯಜ್ಞಾನ ಮೊದಲಾದ ವಿಷಯಗಳಲ್ಲಿ ಪರಿಣತಿ ಪಡೆಯಲು ವಿದ್ಯೆ ಕಲಿಯುವಾಗ ಎಲ್ಲರಿಗೂ ಆಂಗ್ಲ ಭಾಷೆಯ ಪರಿಚಯವಿರಬೇಕು. ಅಂತಹವರಿಗೆ ಕೊಠಾರಿ ಕಮೀಷನ್ ಸೂಚಿಸಿರುವಂತೆ ಇಂಗ್ಲಿಷನ್ನು ಲೈಬ್ರರಿ ಭಾಷೆಯನ್ನಾಗಿ ಉಳಿಸಿಕೊಳ್ಳುವುದು ಖಂಡಿತವಾಗಿಯೂ ಲಾಭದಾಯಕ. ಹೀಗಾದರೆ ಆಂಗ್ಲಭಾಷಾ ಪುಸ್ತಕಗಳ ಸಹಾಯದಿಂದ ಪ್ರಾವೀಣ್ಯತೆ ಹೆಚ್ಚಿಸಿಕೊಳ್ಳಲು, ಓದಿ ಅರ್ಥಮಾಡಿಕೊಳ್ಳುವಷ್ಟು ಆಂಗ್ಲಭಾಷಾ ಪರಿಚಯವನ್ನು ಎಲ್ಲರಿಗೂ ಮಾಡಿಕೊಡುವುದು ಸೂಕ್ತವಾಗಿ ಕಾಣುತ್ತದೆ. ಉಳಿದೆಲ್ಲ ಶಿಕ್ಷಣವನ್ನು ವಿದ್ಯಾರ್ಥಿಯ ಮಾತೃ ಭಾಷೆಯಲ್ಲಿ ಕೊಟ್ಟರೆ ವಿಷಯದ ಅರಿವು ಸಮರ್ಪಕವಾಗುತ್ತದೆ, ಅವನು ಪರಿಣತನಾಗುತ್ತಾನೆ. ಸ್ವತಂತ್ರ ವಿಚಾರಿಯಾಗುತ್ತಾನೆ. ನಿತ್ಯ ನೂತನವಾದುದನ್ನು ಸಂಶೋಧಿಸಬಲ್ಲ ಧೀಶಕ್ತಿಯುಳ್ಳವನಾಗುತ್ತಾನೆ.

**ಈ ಮಾರ್ಪಾಟು ಸರಿಯಲ್ಲವೇ?**

ಪ್ರತಿಯೊಬ್ಬರಿಗೂ ಆಂಗ್ಲಭಾಷಾ ಪರಿಚಯವನ್ನು ಕೊಡುವ ಸಲುವಾಗಿ ಶಾಲಾಮಟ್ಟದಲ್ಲಿ ಇಂಗ್ಲಿಷ್‌ನ್ನು ಕಡ್ಡಾಯ ಭಾಷೆ ಮಾಡುವುದು ಸರಿಯಾಗಿದೆ. ಆರು ವರ್ಷಗಳ ಅವಧಿಯವರೆಗೆ ಈ ವಿಷಯವನ್ನು ಭಾಷಾ ಪ್ರತಿಪಾದನೆಯ ರೀತಿ, ವೈಶಿಷ್ಟ್ಯಗಳನ್ನರಿತಿರುವ ದಕ್ಷ ಶಿಕ್ಷಕರು ಕಲಿಸಬೇಕು. ಅಂದರೆ ಮಾತ್ರ ಕಾಲೇಜಿಗೆ ಹೋದ ಮೇಲೆ ಶಿಕ್ಷಣ ಮಾಧ್ಯಮವು ಮಾತೃ ಭಾಷೆಯಾದರೂ, (ಅಲ್ಲಿಯೂ ಇಂಗ್ಲಿಷ್ ಒಂದು ಕಡ್ಡಾಯ ಭಾಷೆಯಾಗಿ ಕಲಿಯಬೇಕು) ಅವಶ್ಯಕ ಮಾಹಿತಿಗಳನ್ನು ಇಂಗ್ಲಿಷ್ ಪುಸ್ತಕಗಳಿಂದ ಓದಿ ಸಂಗ್ರಹಿಸಲು ಸಮರ್ಥರಾಗುತ್ತಾರೆ,. ಆದರೆ ಇವರುಗಳು ಅತ್ಯುಚ್ಚ ಮಟ್ಟದಲ್ಲಿ ಇಂಗ್ಲಿಷ್‌ನಲ್ಲೇ ಕೆಲಸ ನಿರ್ವಹಿಸಲು ಸಾಧ್ಯವಾಗುವುದಿಲ್ಲ. ಅದಕ್ಕೆ ಆಂಗ್ಲ ಭಾಷೆಯಲ್ಲಿ ಪ್ರವೀಣರು, ವಿವಿಧ ಕ್ಷೇತ್ರಗಳಲ್ಲಿ ಅತ್ಯಂತ ಮುತ್ಸದ್ದಿಗಳಾದವರೂ ಬೇಕಾಗುತ್ತಾರೆ, ಅವರುಗಳನ್ನು ಇಡೀ ದೇಶದ ಎಲ್ಲಾ ಶಾಲೆಗಳಿಂದ ಆರಿಸಿ ತೆಗೆದುಕೊಳ್ಳಬೇಕು. ಅವರವರ ಅಭಿಲಾಷೆಗೆ ತಕ್ಕಂತೆ ವಿವಿಧ ಶಿಕ್ಷಣ ಕ್ಷೇತ್ರಕ್ಕೆ ಕಳುಹಿಸಿ ಅವರಿಗೆ ದೇಶದ ಅವಶ್ಯಕತೆಗಳಿಗೆ ಅನುಗುಣವಾಗಿ ಶಿಕ್ಷಣ ನೀಡಬೇಕು. ಇವರುಗಳಿಗೆ ಶಿಕ್ಷಣ ನೀಡುವ ಜವಾಬ್ದಾರಿ ಕೇಂದ್ರ ಸರ್ಕಾರದ್ದಾಗಿರಬೇಕು. ಈ ಮಟ್ಟಕ್ಕೆ ವಿದ್ಯಾರ್ಥಿಗಳನ್ನು ಆರಿಸುವಾಗ ಪ್ರದೇಶ, ಜಾತಿ, ಸಿರಿತನ ಬಡತನ, ಸ್ತ್ರೀ – ಪುರುಷ ಎಂಬ ಎಣಿಕೆ ಮಾಡಕೂಡದು,

ಎಂದರೆ ಆ ವಿದ್ಯಾರ್ಥಿಗಳು ಯಾವುದೋ ಪ್ರಾಂತದ, ಯಾವುದೋ ಊರಿನ, ಯಾವುದೋ ಶಾಲೆಯಲ್ಲಿರಬಹುದು, ಅವರುಗಳನ್ನು ಗುರುತಿಸಿ, ಪ್ರಾಂತ್ಯಕ್ಕೊಂದರಂತೆ ಸೆಕೆಂಡರಿ ಶಾಲೆಗಳನ್ನು ಅತ್ಯಂತ ಉತ್ತಮ ಮಟ್ಟದಲ್ಲಿ ನಡೆಸಬೇಕು. ಆ ಶಾಲೆಗಳಿಂದ ದೇಶದ ಅತ್ಯುಚ್ಚ ಕಾರ್ಯ ನಿರ್ವಹಿಸಲು, ವಿದೇಶ ವ್ಯವಹಾರಕ್ಕೆ ಸಂಬಂಧಿಸಿದ ವಿಷಯಗಳಲ್ಲಿ ಕೆಲಸ ಮಾಡಲು ವ್ಯಕ್ತಿಗಳನ್ನು ಆರಿಸಿ ಅವರವರ ಆಸಕ್ತಿಗೆ ಅನುಗುಣವಾದ ಶಿಕ್ಷಣ ಕೊಡುವ ವ್ಯವಸ್ಥೆಯಾಗಬೇಕು. ದೇಶಾದ್ಯಂತ ಪ್ರತಿಯೊಂದು ಪ್ರಾಂತ್ಯದಲ್ಲಿಯೂ ರಾಷ್ಟ್ರಕ್ಕೆ ಬೇಕಾಗುವ ಶಿಕ್ಷಣವನ್ನು ನೀಡುವ ಒಂದು ಶಿಕ್ಷಣ ಸಂಸ್ಥೆ ಇರಬೇಕು. ಎಂದರೆ ಕರ್ನಾಟಕ ರಾಜ್ಯಗಳಲ್ಲಿ ದೇಶದ ಆಡಳಿತಗಾರರಿಗೆ ಬೇಕಾಗುವ ಶಿಕ್ಷಣದ ಏರ್ಪಾಟಾದರೆ ಮಧ್ಯಪ್ರದೇಶದಲ್ಲಿ ರಾಷ್ಟ್ರದ ಶಿಕ್ಷಣ ತಜ್ಞರನ್ನು ತರಬೇತಿ ಗೊಳಿಸುವ ಸಂಸ್ಥೆ ಇರಬೇಕು, ಮದ್ರಾಸಿನಲ್ಲಿ ರಾಯಭಾರಿಗಳಾಗಲಿಕ್ಕೆ ಬೇಕಾಗುವ ಶಿಕ್ಷಣ ದೊರೆಯಲು ಸಾಧ್ಯವಾದರೆ, ಬಿಹಾರದಲ್ಲಿ ತಾಂತ್ರಿಕ ತಜ್ಞರನ್ನು ನಿರ್ಮಿಸುವ ವಿದ್ಯಾ ಸಂಸ್ಥೆ ಇರಬೇಕು, ಹೀಗೆ ದೇಶದ ಎಲ್ಲ ಅವಶ್ಯಕತೆಗಳಿಗೆ ಅನುಗುಣವಾಗಿ ಶೀಕ್ಷಣ ಸಂಸ್ಥೆಗಳು ದೇಶಾದ್ಯಂತ ಇರಬೇಕು. ಆಯಾ ವೃತ್ತಿ ಹುದ್ದೆಗಳನ್ನು ವಹಿಸಿಕೊಳ್ಳುವ ಸಾಮರ್ಥ್ಯ ಪಡೆಯಲು ಯೋಗ್ಯರಾವರನ್ನು ಪ್ರತಿಯೊಂದು ರಾಜ್ಯದಲ್ಲಿರುವ ಮಾಡೆಲ್ ಶಾಲೆಗಳಿಂದ ಆರಿಸಿಕೊಂಡು ತರಬೇತಿ ನೀಡಿ ರಾಷ್ಟ್ರದ ಅವಶ್ಯಕತೆಗಳನ್ನು ಪೂರೈಸಿಕೊಳ್ಳಬಹುದು. ಈ ಶಿಕ್ಷಣ ಸಂಸ್ಥೆಗಳಲ್ಲಿ ಇಂಗ್ಲಿಷ್ ಶಿಕ್ಷಣ ಮಾಧ್ಯಮವಾದರೂ, ಆಧುನಿಕ ಜಗತ್ತಿನಲ್ಲಿ ಅತ್ಯಂತ ಉಪಯೋಗಕರ ಭಾಷೆಗಳಾದ ಜರ್ಮನಿ, ಫ್ರೆಂಚ್ ರಷ್ಯನ್ ಭಾಷೆಗಳನ್ನು ಕಲಿಯುವ ಶಿಕ್ಷಣ ಸಂಸ್ಥೆಗಳಿಂದ ವಿದ್ಯಾರ್ಥಿಗಳ ಯೋಗ್ಯತೆಯನ್ನು ಅವಲಂಬಿಸಿ ಅಂತರ್‌ರಾಷ್ಟ್ರಮಟ್ಟದ ರಾಜ್ಯ ಮಟ್ಟದ ತಾಲ್ಲೂಕು ಮಟ್ಟದ ಜವಾಬ್ದಾರಿಯನ್ನು ವಹಿಸುವ ಅಧಿಕಾರಿಗಳನ್ನು ತಂತ್ರಜ್ಞರನ್ನು ಆರಿಸಿಕೊಳ್ಳಬೇಕು, ಇಂಥವರಿಗೆ ರಾಜ್ಯ ಭಾಷೆಯ ಸಂಪೂರ್ಣ ಪರಿಚಯವಿರಬೇಕು.

ಹೀಗೆ, ನಮ್ಮ ಶಿಕ್ಷಣದ ವ್ಯವಸ್ಥೆಯನ್ನು ನಮ್ಮ ದೇಶದ ಅವಶ್ಯಕತೆಗನುಗುಣವಾಗಿ ರೂಪಿಸಿ ಭಾಷೆಗಳ ಸ್ಥಾನಮಾನಗಳನ್ನು ನಿರ್ದಿಷ್ಟಗೊಳಿಸಿದರೆ ನಮ್ಮ ದೇಶದ ಭಾಷಾ ಸಮಸ್ಯೆ ಬಹು ದೊಡ್ಡ ಗೊಂದಲ ಕಡಿಮೆಯಾಗುವುದರಲ್ಲಿ ಸಂಶಯವಿಲ್ಲ.

■

## ೧೯. ಶ್ರೀ ಮತ್ತು ಶ್ರೀಮತಿ (ಶಿಕ್ಷಣ ಸಲ್ಲಾಪ)

ಪಾಪೂ, ರಾಣಿಮರೀ ಈ ಷೂ ಹಾಕ್ಕೊ . . . .ಆ್ಞ.... ಆ ಕಾಲು . . . . ಇಲ್ಲಿಡು . . . . ಬಿದ್ದೀಯ ! ಈ ಕುರ್ಚಿಮ್ಯಾಲೆ ಕೂತು ಷೂ . . . . ಹಾಕಿಕೊ . . . ಹೀಂಗೆ . . . . ಹೀಂಗೆ . . . . ಹ್ಞೂ. . . . ಲೇಸ್ ಕಟ್ಟು ಮರೀ . . . . . ಹ್ಞಾ, ಜಾಣ . . . ಎಷ್ಟು ಚಲೋ ಹಾಕಿಕೊಂಡ್ತಪ್ಪ ಮರೀ . . . . ಆ . . . . ಆ ಲೇಸ್ ಹೀಂಗೆ ಎಳಕೊ . . . . ಹಿಂಗೆ ಗಂಟು . . . . ಹಾಕಿಕೊ . . .

ಶ್ರೀಮತಿ : ಓಹೋ . . . . ಏನ್ರೀ ಅದೂ . . . . ರಾಣಿಗೆ ಪಾಠಾನೇ ಸುರು ಮಾಡಿ ಬಿಟ್ರೆಲ್ಲಾ . . . . ನೀವೇ ಹಾಕಿಬಿಡಬಾರ್ದೇ

ಶ್ರೀ : ಹಾಕಬಾರ್ದ್ದು, ಅದೇ. . . ಮಕ್ಕಳು ತಮ್ಮ ಕೆಲಸ ತಾವೇ ಮಾಡಿಕೊಳ್ಳೋದು ಕಲೀಬೇಕು. . . ನಾವೇ

ಮಾಡ್ತಾ ಹೋದ್ರೇ. . .

ಶ್ರೀಮತಿ: ದೊಡ್ಡವರೆ ಮಾಡ್ಲೀ ಅಂತಲೇ ಕೂಡ್ತವೆ . . . ಒಳ್ಳೆಯ ರೂಢಿಗಳು . . . . ಚಿಕ್ಕಂದಿನಿಂದಲೇ ಬೆಳೀ ಬೇಕು . . . . ನಿಮ್ಮ ಹಾಗಾಗಬಾರ್ದು, ಬಟ್ಟೆ ರೆಡಿಮಾಡಬೇಕು . . . ಒಂದು ಕರ್ಚೀಫ್ ಬೇಕಾದರೂ ನಾನೇ ಬರಬೇಕು, ಹೀಗೆ ಅವ್ರೂ ಆಗ್ಬಾರ್ದೂ ಅಂತಾನೋ ಈ ಪಾಠ ?

ಶ್ರೀ : ನನ್ನ ವಿಷಯ ಬೇರೆ ಕಣೆ . . . ಪ್ರಾಧ್ಯಾಪಕನ ಕೆಲಸ ಅಂದ್ರೆ ಸುಮ್ಮನೇನೇ . . . . ಅದಕ್ಕೆಲ್ಲ Time waste . . . .

ಶ್ರೀಮತಿ: ನನ್ನ Time waste ಆಗಲ್ವೇನೋ . . . . . ನಾನು, ಅದೂ ಇದೂ ಅಂತ ಎಷ್ಟು ಕೆಲಸ ಮಾಡ್ಲೀ . . . . . ಹುಡುಗರು ಬರ್ತಾರೆ, ನನ್ನ ಪೆನ್ಸಿಲ್ ಕಳದೋಯ್ತು, ನನ್ನ Note book ಎಲ್ಲೋ ಹೋಗಿದೆ . . . . ಬಸ್ಸಿಗೆ ದುಡ್ಡು ಕೊಡಿ . . . . ಹೀಗೆ ಅನೇಕ ಸಣ್ಣ ಪುಟ್ಟ ಕೆಲಸವನ್ನೂ ನಾನೇ ನೋಡ್ಬೇಕು.

ಶ್ರೀ : ಅದಕ್ಕೆ ಕಣೇ . . . . . ಈ good habits ನಮಗಂತೂ ಬರ್ಲಿಲ್ಲ, ಮಕ್ಕಳಿಗಾದರೂ ಬರ್ಲಿ . . . . ನಿನ್ನದೊಂದು habit ನಿನಗೋ . . . . .

ಶ್ರೀಮತಿ: ನನ್ನ habit ಏನ್ರೀ ಅದು ?

ಶ್ರೀ : ಗೊತ್ತಿಲ್ವೇನೇ . . . . . walking ಹೊರಟರೂ, ಭರಭರ ನಡೆದು ಹೋಗೋದು, ಕಾಲೇಜು ಬಿಟ್ಟುಬಿಡ್ತು ಅನ್ನೋದ್ರೊಳಗೇ ಮನೆ ಕಡೆ ಓಡೋದು, ಟಾಂಗಾ ಕುದುರೆ ಇದ್ದಾಂಗೆ . . . . ನೇರ . . . . ನೀನಗ್ಯಾಕಿಂತ ಹ್ಯಾಬಿಟ್ ಬಂತೂ ?

ಶ್ರೀಮತಿ : ನೋಡ್ರಿ ನನ್ನ ಹ್ಯಾಬಿಟ್‌ಗೂ ಒಂದು ಇತಿಹಾಸವೇ ಇದೆ, ನಾನು ಕಲಿಯೋಕಾಲ್ದಾಗೆ ಹುಡುಗಿಯರು ಮನೆಯಿಂದ ಹೊರಗೆ ಹೋಗೋದು ಕಷ್ಟ, ಶಾಲೆ ಕಾಲೇಜಿಗೆ ಹೋಗೋದು ಮಹಾಪಾಪ, ಹೋದ್ರೂನೂ ನಿವಂದಂತೆ ಟಾಂಗಾ ಕುದ್ರೆ ಹಾಗೆ ಇರಬೇಕಿತ್ತು ! ನಾನು, ನೋಡಿ – ತಲೆ ತಗ್ಗಿಸಿ ಹೊರಟವಳು, ಅತ್ತ ಇತ್ತ ನೋಡೋ ಹಂಗಿಲ್ಲ, ಕಾಲೇಜು . . . . .ಮನೆ, ಮನೆ – ಕಾಲೇಜು.

ಶ್ರೀ : ಜಾನಗಿಲ್ಪಿನ್ Story ಆದ ಹಾಗಾಯ್ತು. . . .

ಶ್ರೀಮತಿ : ನಮ್ಮ ಕಾಲೇಜಿನ ದಾರೀಲಿ, ಒಂದು ಆಸ್ಪತ್ರೆ, ಕಟ್ಟಿದ್ರು, ಆ ದಾರೀಲೆ ಓಡಾಡ್ತಿದ್ರೂ ಅದರ ಉದ್ಘಾಟನೆ ಸಮಾರಂಭ ನಡೆದಾಗಲೇ ನನಗೆ ಅದನ್ನು ಕಟ್ಟಿದ ವಿಷಯ ಗೊತ್ತಾದದ್ದು, ಹೀಗಾಗಿ ನನಗೆ ಹೊರಗಿನ ಪ್ರಪಂಚ ಅಷ್ಟಕ್ಕಷ್ಟೆ.

ಶ್ರೀ : ಮದುವೆ ಆದ ಮ್ಯಾಲೆ . . . . . ಪರವಾಗಿಲ್ಲ ಅಲ್ವೇ . . ..

ಶ್ರೀಮತಿ : ಈಗಿನ್ನೊಂದು ರೀತಿ, ಮೊದಲೇ ಹ್ಯಾಬಿಟ್ ಬೆಳೆದಿದ್ದು, ಈಗ ಮನೆಯ ಜವಾಬ್ದಾರಿ, ಮನೆಗೆ ಓಡಿಬರುವ ಆತುರದಲ್ಲಿ ಮೊದಲಿನ ಕೆಟ್ಟ ರೂಢಿ ಮರೆಯುವಂತಿಲ್ಲ. ನೋಡ್ರೀ, ನನ್ನ ಕೈಲಿ ಕಲಿತ ಹುಡುಗಿಯರಿಗೆಲ್ಲ ನಾನಿಷ್ಟೆ ಹೇಳೋದು ಚೆನ್ನಾಗಿ ಕಲೀರಿ, ಒಳ್ಳೆಕಡೆ ಮದುವೆ ಮಾಡಿಕೊಟ್ರೆ ಕೆಲಸಕ್ಕೆ ಮಾತ್ರ ಹೋಗಬ್ಯಾಡ್ರೀ ಅಂತ.

ಶ್ರೀ: ಇದೇ ನಿನ್ನ ಆಶೀರ್ವಾದ ಅನ್ನು ಅವರಿಗೆ, ನಿನಗೆ ಕೆಲಸ ಅಷ್ಟು ಬೇಜಾರಾಗಿದೆಯೇ?

ಶ್ರೀಮತಿ: ಹಿರಿಯರಿಲ್ಲದ ಮನೆಯಲ್ಲಿ ಗೃಹಿಣಿಯಾಗಿ, ಉದ್ಯೋಗವನ್ನೂ ಮಾಡಿಕೊಂಡು ಹೋಗುವುದು ಅಸಾಧ್ಯ. ತಪ್ಪು ಅಂತಲೂ ನನ್ನ ಅಭಿಪ್ರಾಯ, ಒಂದು – ಗೃಹಕೃತ್ಯದ ಬಗೆಗೆ ನೆಮ್ಮದಿ ಇರೋಲ್ಲ, ಮಕ್ಕಳ ಪೋಷಣೆ, ಮಾರ್ಗದರ್ಶನ ಸರಿಯಾಗಿ ಆಗೋಲ್ಲ . . . . ಮನೆಯಲ್ಲಿಯ ನಮ್ಮ ಕರ್ತವ್ಯನೇ ಮರಿಬೇಕಾಗುತ್ತೆ, ಕೆಲವು ಸಾರಿ.

ಶ್ರೀ : ಒಪ್ಪಿದೆ ಬಿಡು . . . . . ಮದುವೇನೇ ಆಗ್ದ ಮಹಿಳೆಯರು . . ..

ಶ್ರೀಮತಿ : ಅಂಥವರು ಉದ್ಯೋಗದಲ್ಲಿದ್ದರೂ ನಡೆಯುತ್ತದೆ . . . . ಈಗ ಎಷ್ಟೊಂದು ಜನ ಇದ್ದಾರಲ್ಲ,

ಶ್ರೀ : ನೋಡೇ ನಿನ್ನ ಕಾಲಕ್ಕೂ ಈಗ್ಲೂ ಎಷ್ಟೊಂದು ವ್ಯತ್ಯಾಸ.

ಶ್ರೀಮತಿ : ವ್ಯತ್ಯಾಸ ಆಗಿದೆ, ಆದರೆ not for better ಇದಕ್ಕೆಲ್ಲ ಅವರಿಗೆ ಒಳ್ಳೆಯ ಶಿಕ್ಷಣ ಇಲ್ಲದೇ ಇರೋದೇ ಕಾರಣ.

ಶ್ರೀ : ಈಗಿನ ಹುಡುಗರಿಗಿನ್ನೇನಂತೀಯ ?

ಶ್ರೀಮತಿ : ಆ ಮಾತು ಹೇಳೋ ಹಾಗೇ ಇಲ್ಲ. ಯಾವ ಮಹಾರಾಯ ಬಂದು ಈ ಓಬೀರಾಯನ ಕಾಲದ ಶಿಕ್ಷಣ ಸಂಪೂರ್ಣ ಬದಲಾಯಿಸ್ತಾನೋ ದೇವರಿಗೇ ಗೊತ್ತು . . . . .

ಶ್ರೀ : ನನ್ನದೂ ಅದೇ ಹಾಡು, ಬೆಕ್ಕಿಗೆ ಗಂಟೆ ಕಟ್ಟೋರು ಯಾರು ? ಅದೇ ಪ್ರಶ್ನೆ

ಶ್ರೀಮತಿ : ಹಾಗೇ ಹೇಳಿ ಸುಮ್ನಿದ್ರೆ ಹ್ಯಾಂಗೆ, ನಮ್ಮ ಮನೆ ಬೆಕ್ಕಿಗಾದರೂ ನಾವು ಗಂಟೆ.....

ಶ್ರೀ: ನಮ್ಮ ಬೆಕ್ಕು . . . . . ಓಹೊಹೊ ನಿನ್ನ ಆ ಮಗ ತುಂಟಬೆಕ್ಕು . . . . ಕನ್ನಡ ಮೇಷ್ಟ್ರ ಇಂಗ್ಲಿಷ್ ಮೀಡಿಯಂಗೆ ಮಗನನ್ನು ಕಳಿಸ್ತಾರೆ ಅಂತ ನನ್ನ ಮಿತ್ರರು ಟೀಕೆ ಮಾಡ್ತಾರೆ . . . ಟೀಕೆ . . . .ಈಗಿನ ಕಾಲದಲ್ಲಿ ಅದೇ ಧಾರಾಳವಾಗಿ ನಮ್ಮ ಸಮಾಜದಲ್ಲಿ ದೊರೆಯೋದು . . . . ಅನ್ನೋರಿಗೆ ನಮ್ಮ ಬೆನ್ನು ತಮಗೆ ಕಾಣಿಸೋಲ್ಲ . . . . ಈ ಶಿಕ್ಷಣ ಮಾಧ್ಯಮದ ಬಗ್ಗೆ . . . . ತಲೆಗೆಲ್ಲ ಒಂದೇ ಮಂತ್ರ . . . . 'ಮಾಧ್ಯಮ' ಅಂದರೆ . . . . ಮಗುವಿನ ಪರಿಸರದ ಭಾಷೆ, ಬೇಕಾದ ಹಾಗೆ ಉಪಯೋಗಿಸೋ ಭಾಷೆ, ತನ್ನ ವಿಚಾರ ಭಾವನೆಗಳನ್ನೆಲ್ಲ, ಧಾರಾಳವಾಗಿ ಹೇಳಿಕೊಳ್ಳಲಿಕ್ಕೆ ಬರೋ ಭಾಷೆ . ಹಾಗಿದ್ರೇನೆ ಮಗುವಿನ

ಕಲಿಕೆ ಅದೇ ಭಾಷೆಯಲ್ಲಿ ಕಲೀತಿದ್ರೆ ಚೆನ್ನಾಗಿ ಮನದಟ್ಟಾಗುತ್ತದೆ. . . . . ಇಂಥ ಪರಿಸರವಿರುವ ಮಗುವಿಗೆ ಇಂಗ್ಲೀಷ್ ಮಾಧ್ಯಮವಿದ್ದರೇನು . . . . ಕನ್ನಡ ಮಾಧ್ಯಮವಿದ್ದರೇನು . . . . ? 'ಪರಿಸರ' ಮುಖ್ಯ . . . . . ಮಕ್ಕಳಿಗೆ ಬೇರೆ ಭಾಷೆ ಕಲಿಯುವ ಶಕ್ತಿ ಇದ್ದರೆ, ಅದಕ್ಕೆ ಅನುಕೂಲವಾಗುವ ಪರಿಸರ ಒದಗಿಸಲು ತಂದೆ ತಾಯಿಯರಿಗೆ ಸಾಧ್ಯವಿದ್ದು ಆ ಮಕ್ಕಳು ಸುಲಭವಾಗಿ ಮುಂದುವರಿಯುವ ಯಾವ ಮಾಧ್ಯಮವನ್ನು ಬೇಕಾದರೂ ಆರಿಸಿಕೊಳ್ಳುವುದರಲ್ಲಿ ತಪ್ಪೇನು ? ಇಂಗ್ಲಿಷ್‌ರನ್ನು ಕಳಿಸಿದೀವಿ ಆಗಲೇ ಈ ಭಾಷೆನೂ ಕಳಿಸಿ ಬಿಟ್ಟಿದ್ದರೆ, ಈ . . . . . ಹಗರಣವೇ ಇರುತ್ತಿರಲಿಲ್ಲ ಎನ್ನುತ್ತಾರೆ ಕೆಲವರು.

ಶ್ರೀಮತಿ : ಅಂತಾರೆ ಬಿಡ್ರೀ . . . . . ಆದರೆ ನಮ್ಮ ಭಾಷೆಗಳು ನಮ್ಮ ದೇಶದ ಎಲ್ಲಾ ಅವಶ್ಯಕತೆಗಳನ್ನು ಪೂರೈಸುವಷ್ಟು ಸುಮರ್ಥವಾಗಿ ಬೆಳೆಯಬೇಕಲ್ಲಾ !

ಶ್ರೀ : ಅದು ಹ್ಯಾಂಗಿದೇಂದ್ರೆ, ಮದುವೆ ಆಗೋವರೆಗೂ ಹುಚ್ಚು ಬಿಡೋಲ್ಲ . . . . ಹುಚ್ಚು ಬಿಡೋವರ್ಗೂ ಮದುವೆ ಆಗೋಲ್ಲ.

ಶ್ರೀಮತಿ : ಹಾಗೇನಿಲ್ಲ. ಪ್ರಯತ್ನ ಪಟ್ರೆ ನಮ್ಮ ದೇಶೀಯ ಭಾಷೆಗಳನ್ನು ಆಂಗ್ಲ ಭಾಷೆಯ ಎತ್ತರಕ್ಕೇ ಎತ್ತರಿಸಬಹುದು. ಆ ಭಾಷೆಯೂ ಮೊದಲಿನಿಂದಲೂ ಈ ಮಟ್ಟದಲ್ಲಿ ಇರಲಿಲ್ಲ. ಬರುಬರುತ್ತ ಬೆಳೆಯಿತು. ನಮ್ಮ ಭಾಷೆಯ ಪ್ರಯೋಗ ಅವಶ್ಯಕವಾಗುವ ಪರಿಸ್ಥಿತಿ ಇಲ್ಲಿ ಉಂಟು ಮಾಡಿದರೆ, ಆ ಭಾಷಾ ಬೆಳವಣಿಗೆ ಆಗೇ ಆಗುತ್ತೆ.

ಶ್ರೀ : ಅದೂ ನಿಜ ನೋಡು. ಈಗ ರಾಜ್ಯಗಳ ಕಛೇರಿಗಳಲ್ಲಿ, ನ್ಯಾಯಾಲಯಗಳಲ್ಲಿ ಪ್ರಾಂತೀಯ ಭಾಷೆಗಳನ್ನೇ ಉಪಯೋಗಿಸುವ ಆಜ್ಞೆಗಳನ್ನು ಹೊರಡಿಸಿರುವುದರಿಂದ ಈಗ ಪ್ರಾಂತೀಯ ಭಾಷಾ ಪಂಡಿತರುಗಳಿಗೆ ಪ್ರೋತ್ಸಾಹ ದೊರೆತಿರುವುದೇ ಅಲ್ಲದೆ ಪ್ರಾಂತೀಯ ಭಾಷೆಗಳ ಬೆಳವಣಿಗೆಯೂ ಆಗುತ್ತಿದೆ. ಹೀಗಾಗಿ ಪ್ರಾಂತೀಯ ಭಾಷೆಯಲ್ಲೇ ಕಲಿತರೂ ಒಳ್ಳೆಯ ಉದ್ಯೋಗಾವಕಾಶ ದೊರೆಯಬಹುದೆಂಬ ಭರವಸೆ ಜನರಲ್ಲಿ ಮೂಡತೊಡಗಿದೆ. ಹಾಗಾಗಿ ಬುದ್ಧಿವಂತರಾದ ಅನೇಕರು ಪ್ರಾಂತೀಯ ಭಾಷೆಯಲ್ಲೇ ಕಲಿಯಲು ಮುಂದಾಗುತ್ತಿದ್ದಾರೆ. ಇರ್ಲಿ, ನಿನ್ನ ಮಗನ ಸಮಾಚಾರವೇನು? ಓದಿದ್ನೋ ಇಲ್ವೋ ನೋಡಿದ್ಯೇನು?

ಶ್ರೀಮತಿ : ಏನ್ಮೋಡೋದು ಬಿಡ್ರಿ, ನನ್ಗೆ ಸಾಕಾಗಿದೆ. ಊಟಮಾಡಿ ನೆಲ ಕಂಡ್ರೆ ಸಾಕೂಂತಿದೀನಿ.

ಶ್ರೀ : ಇರ್ಲಿ, ನಿನ್ಕೆಲ್ಸ ನೀನ್ನೋಡ್ಕೊ. ನಾನೇ ಅವನ್ನ ವಿಚಾರಿಸ್ತೀನಿ, ಮಕ್ಕಳ ಬೆಳವಣಿಗೆಯ ಜವಾಬ್ದಾರೀನ ಪೂರ್ಣ ಶಾಲೆಗೆ ಬಿಟ್ರೆ ಗತಿಯೇನು? 'ಮಕ್ಕಳ ಶಾಲೆ ಮನೇಲಲ್ವೆ' ಅಂತ ಪ್ರಶ್ನಿಸಿದ್ರು ಕೈಲಾಸಂ.

ಶ್ರೀಮತಿ : ಅದ್ಸರೀನ್ನಿ. ಮಕ್ಕಳ ನಡೆ–ನುಡಿ, ರೀತಿ–ನೀತಿ ರೂಪಿತವಾಗೋದು ಮನೇಲೆ.... ಇಲ್ಲಿಯೇ ಕೀಲು ತಪ್ತು ಅಂದ್ರೆ ....

ಶ್ರೀ : ಹುಡುಗ್ರೆಲ್ಲಾ ಬೀದೀಲಿ ಕೀಲುಕುದ್ರೆ ಆಗಿ ಕುಣೀತಾವೇ ಅಂತೀಯೇನು? ಅದು ನಿಜಾ ಅನ್ನು. ಆದ್ರೆ ನಮ್ಮಂತಹವರಿಗೆಲ್ಲಿ ಸಾಧ್ಯ? ಮಕ್ಕಳು ವ್ಯಕ್ತಿತ್ವವನ್ನೇ ರೂಪಿಸಲು ಲಕ್ಷಕೊಡುವಷ್ಟು ಸಮಯವಾದರೂ ನಮಗೆಲ್ಲಿ? ನಿನಗೆ ನಿನ್ನ ಉದ್ಯೋಗ, ಮನೆಯ ಕೆಲಸವೇ ಸಾಕಾಗಿ ಬಿಡುತ್ತೆ. ನನಗಂತೂ ಮೈ ತುಂಬ ಕೆಲಸ. ದಿನದ ಇಪ್ಪತ್ನಾಲ್ಕು ಗಂಟೆಯೂ ಸಾಲದಾಗಿದೆ. ಹೀಗಿರೋವಾಗ ಮಗನಿಗೆ ರೀತಿ–ನೀತಿ ಯಾವಾಗ ಕಲ್ಪಿಸಬೇಕು?

ಶ್ರೀಮತಿ : ಕಲಿತ ತಂದೆ–ತಾಯಿಯರು ಹೀಗೆ? ಕಲೀದಿದ್ದ ತಂದೆತಾಯಿಯರಿಗಂತೂ ತಮ್ಮ ಜವಾಬ್ದಾರಿಯ ಅರಿವೇ ಇರುವುದಿಲ್ಲ ! ಹಾಗಾಗಿ ನಮ್ಮ ಮಕ್ಕಳಿಗೆ ದೇವ್ರೇಗತಿ ಎನ್ನುವಂತಾಗಿದೆ.

ಶ್ರೀ : ಹಾಗೆ ಹಾದಿ ತಪ್ಪಿದಾಗ, ಒಂದೆರಡು ಏಟುಹಾಕಿ ಹಾದಿಗೆ ತೋರೋದು. ಆದ್ರೆ ನೀನದನ್ನು ಒಪ್ಪೋಲ್ಲಾಂತ ಕಾಣುತ್ತೆ ಅಲ್ವೆ? spare the rod-spoil the child ಅನ್ನೋದು ಸರೀಂತ ನನ್ನ ಭಾವನೆ. ಭಯ ಇಲ್ದಿದ್ರೆ ಅವ್ರೇನು ಕಲೀತಾರೆ?

ನೋಡು ನಾನು ವಿದ್ಯಾರ್ಥಿ ಇದ್ದಾಗ ಒಂದು ದಿನ ಡ್ರಿಲ್‌ಗೆ ಲೇಟಾಗಿ ಹೋಗಿದ್ದೆ. ಆಗ ಡ್ರಿಲ್ ಮೇಷ್ಟ್ರು ವಿಷಲ್‌ನಲ್ಲೇ ಹಣೇಲಿ ರಕ್ತ ಬರೋಹಂಗೆ ಕುಟ್ಟಿ ಬಿಟ್ಟಿದ್ರು. ಈಗ್ಲೂ Late ಆದ ತಕ್ಷಣ ಆ ಘಟನೆ ನೆನ್ಪಿಗೆ ಬರುತ್ತೆ.

ಶ್ರೀಮತಿ: ಛೀ, ಛೀ, ಹಾಗೆ ಹೊಡ್ಯೋದನ್ನು ನಾನು ಒಪ್ಪೋಲ್ಲ. ಹೌದು, ನಾನೂ ಮಕ್ಕಳಿಗೆ ಬೈಲೇಬಾರದು, ಹೊಡೀಲೇಬಾರದು. ಯಾವಾಗ್ಲೂ ಅವರ್ಗೆ ಮನದಟ್ಟಾಗುವಂತೆ ಅವರ ತಪ್ಪುಗಳ್ನ ಅವರಿಗೇ ತಿಳಿಹೇಳ್ಬೇಕು.

ಒಳ್ಳೇದಕ್ಕೆ ಶಾಭಾಸಗಿರಿ ಕೊಡ್ಬೇಕು ಇದನ್ನೆಲ್ಲಾ ಸಂಪೂರ್ಣವಾಗಿ ಒಪ್ಪೋಲ್ಲ. ಏಕೇಂದ್ರೆ ಅದೆಲ್ಲಾ theory ಲಿ ಓದೋಕೇ ಸರಿ ಅಥವಾ ಯಾವಾಗ್ಲಾದ್ರೊಮ್ಮೆ ಶಾಲೇಲಿ ಉಪಾಧ್ಯಾಯರು ಹೇಳೋಕೆ ಸರಿ, ಮನೇಲೂ ಅದೇ ರೀತಿ, ಅವರಿಗೆ ಸರಿಯಾದ ತಿಳಿವಳಿಕೆ ಇಲ್ದ ವಯಸ್ನಲ್ಲಿ ಮೇಲಿಂದ ಮೇಲೆ ಹೇಳ್ತಾ ಇದ್ರೆ ಏನೂ ಉಪಯೋಗವಾಗೋಲ್ಲ. ರಾಜೂನ್ನೇ ನೋಡ್ರಿ, ನಾನೇನಾದರೂ convincing ಆಗಿ ಹೇಳೋಕೆ ಹೋದ್ರೆ ಸಾಕು. 'ಇನ್ನು ಶುರೂನಪ್ಪ ಅಮ್ಮ ಒಂದ್ಸೂರು ಸಿಕ್ಕಿದ್ರೆ ಸಾಕು. ಭಾಷಣ ಬಿಗ್ಯೋಕೆ ಶುರುಮಾಡಿ ಬಿಡ್ತಾರೇಂತ' ಬೇಜಾರಾಗಿ ಬಿಡ್ತಾನೆ, ಹೇಳಿದ್ದನ್ನಂತೂ ಮನಸ್ಸಿಗೆ ಹಾಕ್ಕೊಳ್ಳೋದೇ ಇಲ್ಲ.

ಶ್ರೀ : ಅಂದ್ರೆ ಹೀಗೆ ಪ್ರೀತಿಯಿಂದ ಹೇಳೋದ್ಬಿಟ್ಟು, ಒಂದು ದೊಣ್ಣೆ ತಗೊಂಡು ಎರಡು ಬಾರ್ಸಿದ್ರೆ ತಾನೇ ದಾರಿಗ್ಬರ್ತಾರೆ. ಭಯ ಇರಬೇಕು ಕಣೆ ಯಾವಾಗ್ಲೂ.

ಶ್ರೀಮತಿ : ಸರಿ ನಾನು ಒಪ್ತೀನಿ 'ಭಯ' ಇರಬೇಕು ಅನ್ನೋದ್ನ. ಆದ್ರೆ ದನಾನ ಹೊಡ್ದ ಹಾಂಗೆ ಹೊಡಿಬೇಕೂನ್ನೋದನ್ನಾತ್ರ ನಾನು ಒಪ್ಪೋಲ್ಲ. ಆದ್ರಿಂದ ಮಕ್ಕಳ್ಗೆ ಒಂದು ರೀತಿಯ ದ್ವೇಷ. ಸಿಟ್ಟು ಬಂದು, ಭಯಕ್ಕಾಗಿ ನೀವು ಹೇಳಿದಂತೆ ಮಾಡ್ತಾರ್‍ಯೇ ಹೊರ್ತು ಮನಃಪೂರ್ವಕವಾಗಿಯಲ್ಲ. ಆದ್ದರಿಂದ ತಪ್ಪು ಮಾಡಿದರೆ, ಸರಿಯಾದ ರೀತೀಲಿ ನಡೀದಿದ್ರೆ ನಮ್ಮ ತಂದೆ ತಾಯಿಯರಿಗೆ ಸಿಟ್ಟು ಬರುತ್ತೆ. ಹಾಗ್ಮಾಡೋಕೆ ಅವರ್ಬಿಡೋಲ್ಲ ಎಂಬ ಭಾವನೆ ಮೂಡುವಷ್ಟೇ ಭಯ ಇಟ್ಟರೆ ಸಾಕು. ರಕ್ತ ಬರೋ ಹಂಗೆ ಚಚ್ಚಿ ಭಯ ಪಡ್ಸೋದಲ್ಲ. ಮನಸ್ಸು ಮುದುಡೋ ಹಾಗೆ ಶಿಕ್ಷಿಸೋದು ಸರಿಯಲ್ಲ; ಅಸಹಾಯಕರಾಗೋ ಹಾಗೆ ಜೋರು ಮಾಡೋದಂತೂ ತುಂಬಾ ತಪ್ಪು.

ಶ್ರೀ : ಅದಿರ್ಲಿ. ರಾಜೂ hand writing ಉಚ್ಚಾರಣೆ, ಬರಹ ಅಷ್ಟು ಸಮರ್ಪಕವಾಗಿಲ್ಲ ಅನ್ಸುತ್ತೆ. ಏಕಿರಬಹುದು ಅಂತೀಯಾ?

ಶ್ರೀಮತಿ : ನೋಡ್ರಿ ಈಗ typrewriters ಇದಾವೇಂತ ಶಿಕ್ಷಕರು ಕೈ ಬರಹಕ್ಕೆ ಮಹತ್ವವನ್ನೇ ಕೊಡೋದು ಬಿಟ್ಟಿದ್ದಾರೆ. ಹೀಗಾಗಿ ಮಕ್ಕಳ ಬರಹ– ದೇವ್ರೇಗತಿ ; ಮುಂದೆ ಅವರು ಕೈಲಿ ಬರ್‍ಯೋದು ಅವಶ್ಯಕ ಇರ್ಲಿ, ಇಲ್ದಿರ್ಲಿ, ಅವರು ಬರೆದಿದ್ನ ಶಿಕ್ಷಕರಾದರೂ ಓದ್ಬೇಕೋ ಬೇಡ್ವೋ,

ಅಕ್ಷರ ಚೆನ್ನಾಗಿಲ್ದಿದ್ರೆ ಸಮರ್ಪಕ ಉತ್ತರ ಬರದ್ರೂ ಶಿಕ್ಷಕರಿಗೆ ಆ ಬರಹ ಓದಲು ಸಾಧ್ಯವಾಗ್ದೆ ಕಡಿಮೆ ಅಂಕ ಬಂದರೂ ಬರುತ್ತೆ! ಅಥವಾ ಏನು ಬರ್ದಿದಾನೋ ಏನೋಂತ ಏನೂ ಬರೀದ ಹುಡುಗನಿಗೆ ಹೆಚ್ಚು ಅಂಕ ಬಿದ್ದು ಜಾಣ ಹುಡ್ಗನಿಗೆ ಅನ್ಯಾಯ್ವಾದ್ರೂ ಆಯ್ತು. ಒಟ್ಟಿನಲ್ಲಿ ನೋಡ್ರಿ–ಮಕ್ಕಳ ಕೈಬರಹಕ್ಕೆ ಪ್ರಾರಂಭದಲ್ಲಿ ಲಕ್ಷ್ಯ ಕೋಡೋದು ಅಗತ್ಯ. ಉಚ್ಚಾರವಂತೂ ದೇವ್ರೇಗತಿ, 'ಹ ಅನ್ನಲು ಆ ಹೇಳ್ತಾರೆ' ಶಕ್ಕೆ 'ಸ' ಹೇಳ್ತಾರೆ.

ಶ್ರೀ : ಯಾಕೆ ಹಾಗೆ? ಅಂತೀ

ಶ್ರೀಮತಿ : ಯಾಕೇಂದ್ರೆ ಭಾಷೆಯನ್ನು ಅನುಕರಣೆಯಿಂದ ಕಲೀತಾರೆ. ಪ್ರಾಥಮಿಕ ಶಾಲೆಗಳಲ್ಲಿ ಈ ಸಾರ್ವಜನಿಕ ಕಡ್ಡಾಯ ಶಿಕ್ಷಣದ ಕಾರಣ ತಮ್ಮ ಮನೆಯಲ್ಲಿ ಆಡುವ ಹ, ಶಕಾರಗಳೇ ಉಪಭಾಷೆಯಲ್ಲಿ ಇಲ್ಲದಂತಹ ಪರಿಸರದವರೂ ಶಿಕ್ಷಕರಾಗಿದ್ದಾರೆ. ಆಗ ಅವರ ಉಚ್ಚಾರ ಅವರಿಂದ ಕಲಿತ ಎಲ್ಲ ಎಳೆಯರ ಮೇಲೂ ಪರಿಣಾಮ ಬೀರುತ್ತದೆ.

ಶ್ರೀ : ಸರಿ ಉಚ್ಚಾರ ಆಯ್ತು. ಬರಹವಾದರೂ ಶುದ್ಧವಿರಬೇಕಲ್ಲ. ಅದು ಕೆಡಲಿಕ್ಕೆ ಕಾರಣ?

ಶ್ರೀಮತಿ: ಅದಕ್ಕೂ ಅದೇ ಕಾರಣ. ಶುದ್ಧವಾಗಿ ಮಾತಾಡೋದ್ಬಂದ್ರೆ, ಶುದ್ಧವಾಗಿ ಬರ್ಯೋಕ್ಬರುತ್ತೆ. ಅದೇ ಇಲ್ಲದ್ಮೇಲೆ ಇದ್ದೇಗಿರುತ್ತೇಂತೀನಿ.

ಶ್ರೀ : ಸರಿ, ಸರಿ, ನೀನ್ಹೇಳೋದು ಕರೆಕ್ಟ್. ಮತ್ತೆ ಇಷ್ಟೊಂದು ಶಾಲೆಗಳಿರ್ಬೇಕಾದ್ರೆ ಉಚ್ಚಾರ, ಗಿಚ್ಚಾರ ಎಲ್ಲಾ ಸರ್ಯಾಗಿರೋ ಶಿಕ್ಷರನ್ನೆ ಆರ್ರೋಕಾಗುತ್ತ್ಯೆ ಹೇಳು, ಅಂತೂ ಇವೆಲ್ಲಾ ಪರಿಹಾರ ಇಲ್ಲದ ಸಮಸ್ಯೆಗಳೂನ್ನು.

ಶ್ರೀಮತಿ : ಸರ್ಯಾಯ್ತು, ಪರಿಹಾರ ಏಕಿಲ್ಲ? ಮೊದಲು ತಳಹದೀನೆ ಚೆನ್ನಾಗಿಲ್ದೆ ಬಿಲ್ಡಿಂಗ್ ಏನ್ಕಟ್ತೀರಿ? ಜ್ಞಾನ ಸಂಪಾದನೆಗೆ ಓದು. ಬರಹ, ಮಾತು ಬುನಾದಿ ಇದ್ದಾಂಗೆ – ಈಗ ಅವನ್ನ ಅಲಕ್ಷ್ಯ ಮಾಡಿ, ಆಮೇಲೆ ಶಿಕ್ಷಣದ ಮಟ್ಟ ಕಡಿಮೆ ಆಯ್ತು. ಅದ್ಕಾರ್ಣ, ಇದ್ಕಾರ್ಣಾಂತ ಲಕ್ಷಾಂತರಗಟ್ಲೆ ಕಾರ್ಣ ಕಂಡುಹಿಡ್ಯೋಕೆ ಖರ್ಚು ಮಾಡೋದು. ಕೋಟ್ಯಾಂತರ್ಗಟ್ಲೆ, ಮಟ್ಟ ಏರ್ಸೋಕೆ ಖರ್ಚು ಮಾಡೋದು ಏನುಪ್ಯೋಗ? ಯಂತ್ರ ಎಲ್ಲೋ ಕೆಟ್ಟಿದ್ರೆ, ಮತ್ತೆಲ್ಲೋ ರಿಪೇರಿ ಮಾಡಿದ್ರೆ ಸರಿ ಹೋಗುತ್ಯೇ? ಕಟ್ಟಕಡೇನೆ ರಿಪೇರಿಯಾಗಬೇಕು.

ಶ್ರೀ : ಆದ್ರಿಂದ ಎಲ್ಲಿ ರಿಪೇರಿ ಮಾಡ್ಬೇಕೂಂತೀಯೆ?

ಶ್ರೀಮತಿ : ಪ್ರೈಮರಿ ಹಂತದಲ್ಲೂ ಶಿಕ್ಷಕರನ್ನು ಆರಿಸ್ಬಾಗ ಎಚ್ಚರಿಕೆ ಬೇಕು, ಕೊನೇಪಕ್ಷ ಅವರ ಉಚ್ಚಾರ, ಅವರ ಬರಹ ಚೆನ್ನಾಗಿರಬೇಕು. ಅವರ ನೀತಿ-ನಡತೆ, ಶಿಕ್ಷಕರಾದವರಿಗೆ ಉತ್ತಮವಿರಬೇಕೆಂಬುದನ್ನಂತೂ ಬೇಕಿಲ್ವಲ್ಲ.

ಶ್ರೀ : ನಾವು ಬಯ್ಸಿದ್ದೆಲ್ಲಾ ಆಗೋಹಂಗಿದ್ರೆ ನಮ್ಮನ್ನ ಹಿಡ್ಯೋರ್ಯಾರಿದ್ರು? ನಡಿ, ಈಗ ಊಟಕ್ಕೆ ರೆಡಿಮಾಡು, ಅಷ್ಟ್ರಲ್ಲಿ ರಾಜು ಅಭ್ಯಾಸ ಮಾಡುವುದನ್ನು ಸ್ವಲ್ಪ ನೋಡ್ತೀನಿ.

ಶ್ರೀಮತಿ : ಹೌದು. ನನಗೂ ತುಂಬಾ ಕೆಲಸ ಇದೆ, ಬರ್ತೀನಿ.

■

## ೨೦. ಆಟದ ಬಯಲು – ಅನಾಚ್ಛಾದಿತ ಶಾಲೆ

ಆಟದ ಬಯಲನ್ನು 'ಅನಾಚ್ಛಾದಿತ ಶಾಲೆ' ಎಂದು ಕರೆಯುತ್ತಾರೆ. ಏಕೆಂದರೆ ನಾಲ್ಕು ಗೋಡೆಗಳ ಮಧ್ಯದಲ್ಲಿ ಕಲಿಯಲಾಗದ ಅನೇಕ ಮುಖ್ಯ ವಿಚಾರಗಳನ್ನು ಇಲ್ಲಿ ಕಲಿಯಬಹುದಾಗಿದೆ. ಬರೀ ವಿಷಯ ಸಂಗ್ರಹಣೆ ವ್ಯಕ್ತಿಗೆ ಜೀವನದ ನಾನಾ ಪರಿಸ್ಥಿತಿಗಳನ್ನು ಸಮರ್ಥವಾಗಿ ಎದುರಿಸುವ ಶಕ್ತಿಯನ್ನು ಕೊಡುವುದಿಲ್ಲ. ಪ್ರತಿಯೊಬ್ಬರ ಜೀವನಕ್ಕೂ ಸುಖದ ಸುಪ್ಪತ್ತಿಗೆಯಲ್ಲ. ಅದು ಮುಳ್ಳಿನ ಹಾಸಿಗೆಯೂ ಅಹುದು. ಒಬ್ಬ ವ್ಯಕ್ತಿಯ ವ್ಯಕ್ತಿತ್ವವನ್ನು, ಅವನನ್ನು ಪರೀಕ್ಷಿಸಬಹುದಾದಂತಹ ಪ್ರಸಂಗದಲ್ಲಿ ಗುರುತಿಸಬಹುದು, ಬಾಳಿನ ಕಠಿಣತರ ಪ್ರಸಂಗದಲ್ಲಿ ಧೈರ್ಯಗುಂದದೆ, ಹೌಹಾರದೆ ಕಷ್ಟವನ್ನು ಎದುರಿಸಿ ಕಹಿಯನ್ನು ವಿಚಲಿತನಾಗದೆ ಸ್ವೀಕರಿಸುವ ಮನುಷ್ಯನೇ ಶ್ರೇಷ್ಠ ವ್ಯಕ್ತಿತ್ವ ಪಡೆದವನು ಎನ್ನಿಸಿಕೊಳ್ಳುತ್ತಾನೆ. ಇಷ್ಟೇ ಅಲ್ಲದೆ ಅವನಿಗೆ ಜೀವನದಲ್ಲಿ ತಾನು ನಿರೀಕ್ಷಿಸಸಿದುದಕ್ಕಿಂತ ಹೆಚ್ಚಿನ ಸ್ಥಾನಮಾನಗಳೂ ದೊರೆಯಬಹುದು. ಆಗಲೂ ಮನುಷ್ಯನ ವ್ಯಕ್ತಿತ್ವ ಗುರುತಿಸಲು ಸಾಧ್ಯ. ಅಂತಹ ಪ್ರಸಂಗದಲ್ಲೂ ವಿವೇಕದಿಂದ, ಸಮತೂಕ ಕಳೆದುಕೊಳ್ಳದೆ ಘನವಂತಿಕೆಯಿಂದ ನಡೆದುಕೊಂಡಾತ ಉತ್ತಮ ವ್ಯಕ್ತಿತ್ವ ಪಡೆದವನೆನ್ನಿಸಿಕೊಳ್ಳುತ್ತಾನೆ. ಇಂತಹ ಉತ್ತಮ ವ್ಯಕ್ತತ್ವವನ್ನೂ ದೃಢಕಾಯವನ್ನೂ, ರಾಷ್ಟ್ರಪ್ರೇಮ, ಧೈರ್ಯ, ಸ್ಥೈರ್ಯ, ಆತ್ಮ ವಿಶ್ವಾಸ, ಕರ್ತವ್ಯ ನಿಷ್ಠೆ ಮುಂತಾದ ಮಹೋನ್ನತ ಗುಣಗಳನ್ನು ಆಟದ ಬಯಲಿನಲ್ಲಿ ಕಲಿಯಲು ಸಾಧ್ಯ. ಆದುದರಿಂದಲೇ Duke of Wellingdon won 'the battle of Waterloo on the play ground of Eaten' ಎಂದು ಹೇಳಿರುವ ಮಾತು ಅನುಭವ ಸಿದ್ಧವಾದ ಹೇಳಿಕೆಯಾಗಿದೆ.

ಚಿಕ್ಕ ವಯಸ್ಸಿನಿಂದಲೇ ಮಕ್ಕಳು ಸಣ್ಣಪುಟ್ಟದ್ದಕ್ಕೆಲ್ಲಾ ತುಂಬಾ ಚಿಂತಿಸದಂತೆ ನಿರಾಧಾರವಾದ ಕಲ್ಪಿತ ಭಯಗಳಿಂದ ಕಂಗೆಡದಂತೆ, ಜೀವನದ ನೈಜತೆಯನ್ನು ಸಹಜವಾಗಿ ಸ್ವೀಕರಿಸುವಂತೆ ಮತ್ತು ತನ್ನ ಮಿತಿಯನ್ನು ನಿಸ್ಸಂಕೋಚವಾಗಿ, ಮುಚ್ಚು ಮರೆಯಿಲ್ಲದೆ, ಒಪ್ಪಿಕೊಳ್ಳುವಂತಹ ಮನೋಭಾವ ಬೆಳೆಸಿಕೊಳ್ಳಬೇಕು. ಅವರು ಬೇರೆಯವರನ್ನು ನೋಡಿ ಅಸಹನೆ ಪಡದೆ, ತನ್ನ ಸುತ್ತ–ಮುತ್ತಲಿನವರೊಡನೆ ಕೂಡಿ, ಹೊಂದಿಕೊಂಡು ಬಾಳುವುದನ್ನು ಕಲಿಯಬೇಕು. ಯಾವುದೇ ಕೆಲಸವನ್ನು

ದಕ್ಷತೆಯಿಂದ ತನ್ನ ಶಕ್ತಿ ಮೀರಿ ಮಾಡುವಂತಿಬೇಕು. ಪ್ರಸಂಗ ಬಂದಾಗ ತನ್ನ ಕುಟುಂಬ, ಶಾಲೆ, ಸಮಾಜ, ತನ್ನ ದೇಶದ ಒಳಿತಿಗಾಗಿ, ತನ್ನ ವೈಯಕ್ತಿಕ ಹಿತವನ್ನು ಕಡೆಗಣಿಸಲೂ ಸಿದ್ಧನಿರಬೇಕು. ಹಾಗೆಯೇ ಯುಕ್ತಾಯುಕ್ತ ವಿವೇಚಿಸುವ ಶಕ್ತಿಯೂ, ಅವಶ್ಯಕ ಸನ್ನಿವೇಶಗಳಲ್ಲಿ ಯೋಗ್ಯ ನಿರ್ಧಾರ ಕೈಗೊಳ್ಳುವ ಜಾಣ್ಮೆಯೂ ಇರಬೇಕಾದುದು ಅವಶ್ಯಕ. ಇಂತಹ ಗುಣಗಳನ್ನೆಲ್ಲಾ ಪ್ರತ್ಯೇಕವಾಗಿ ಬೋಧಿಸದಿದ್ದರೂ ಆಟದ ಬಯಲಿನಲ್ಲಿ ಮಕ್ಕಳು ಅಡ್ಡಾಡುತ್ತಲೇ ಕಲಿಯಬಹುದು. ಅಂತಹ ಗುಣಗಳನ್ನು ಬೆಳೆಸಿಕೊಳ್ಳುವ ಅವಕಾಶಗಳು ಆಟದ ಬಯಲಿನಲ್ಲಿ ಹೇರಳವಾಗಿ ಸಿಗುತ್ತವೆ. ಸಿಕ್ಕ ಅವಕಾಶವನ್ನು ಮಕ್ಕಳು ಸದುಪಯೋಗಪಡಿಸಿಕೊಂಡು ಉತ್ತಮ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವಂತಹ ಶಿಕ್ಷಕರು ಸಹಾಯಕರಾಗಬೇಕು. ಅಂತಹ ಪರಿಪೂರ್ಣ ವ್ಯಕ್ತಿತ್ವವನ್ನು ಪಡೆದ ಮಕ್ಕಳು ಯೋಗ್ಯ ಕೆಲಸಗಳನ್ನು ಸಾಧಿಸಿಯೇ ತೀರುವ ದೃಢ ಸಂಕಲ್ಪವನ್ನು ಹೊಂದಿದವರಾಗಿರುತ್ತಾರೆ. ಅವರು ತಮ್ಮದೇ ಆದ ಶ್ರೇಷ್ಠ ಜೀವನ-ತತ್ವವನ್ನು ಪಡೆದು ಅದರಂತೆ ಬಾಳುವವರಾಗಿರುತ್ತಾರೆ. ಅವರ ನಡೆ-ನುಡಿಯಲ್ಲಿ ಯಾವ ನ್ಯೂನತೆಯೂ ಇಲ್ಲದೆ ಎಲ್ಲಾ ಪ್ರಸಂಗಗಳಲ್ಲಿಯೂ ವಿಹಿತ ರೀತಿಯಲ್ಲಿ ನಡೆಯುವವರಾಗುತ್ತಾರೆ. ತಮ್ಮ ಭಾವಾವೇಶ, ದುರಾಸೆ, ಸ್ವಾರ್ಥ, ಕ್ಷುಲ್ಲಕತನ, ಅಹಂಕಾರ ಮುಂತಾದ ನಿರಪೇಕ್ಷಣೀಯ ಗುಣಗಳನ್ನು ತಮ್ಮ ಅಧೀನದಲ್ಲಿಟ್ಟುಕೊಂಡು, ಗಾಂಭೀರ್ಯ ರೀತಿಯಿಂದಲೂ ಗೌರವಾನ್ವಿತವಾಗಿಯೂ ನಡೆದುಕೊಳ್ಳುತ್ತಾರೆ.

ಸಮಾಜದಲ್ಲಿ ಇಂತಹ ಉತ್ತಮೋತ್ತಮ ಗುಣಗಳನ್ನು ಬೆಳೆಸಿಕೊಂಡ ಜನರು ಬಹುಸಂಖ್ಯೆಯಲ್ಲಿ ಇದ್ದರೆ ದೇಶದ ಅನೇಕ ಸಮಸ್ಯೆಗಳು ಇಲ್ಲವಾಗುತ್ತವೆ. ಅನೇಕರು ಕಣ್ಣೀರನ್ನು ಅನ್ಯಾಯವಾಗಿ ಸುರಿಸುವುದು ತಪ್ಪುತ್ತದೆ. ಲೆಕ್ಕವಿಲ್ಲದಷ್ಟು ಮಂದಿ ದುಃಖದಿಂದ ಕೊರಗಿ, ಸೊರಗಿ ಸಾಯುವುದು, ತಪ್ಪುತ್ತದೆ. ಇಷ್ಟೇ ಅಲ್ಲ, ಅನಾಗರಿಕ ವ್ಯಕ್ತಿತ್ವದಿಂದ ಉಂಟಾಗುವ ಸಾಮಾಜಿಕ ಸಮಸ್ಯೆಗಳನ್ನು ಪರಿಹರಿಸಲು ಖರ್ಚುಮಾಡಬೇಕಾದ ಕೋಟ್ಯಂತರ ಹಣವನ್ನು ರಾಷ್ಟ್ರ ಸಮೃದ್ಧಿಗೆ, ಮಾನವ ಜನಾಂಗದ ಅಭಿವೃದ್ಧಿಗೆ, ಸುಖ ಸಂತೋಷಕ್ಕೆ ಉಪಯೋಗಿಸಲು ಸಾಧ್ಯವಾಗುತ್ತದೆ.

ಆದುದರಿಂದ ಎಲ್ಲರ ಅಳಿವಿಗೂ ಸಾಧ್ಯವಾದ, ಎಲ್ಲ ಮಕ್ಕಳಿಗೂ ದೊರೆಯಬಹುದಾದ ಆಟದ ಬಯಲಿನ ಸದುಪಯೋಗವಾಗಬೇಕು. ಅಲ್ಲಿ ಅವರಿಗೆ ಉತ್ತಮೋತ್ತಮ ವ್ಯಕ್ತಿತ್ವ ರೂಪುಗೊಳ್ಳುವ ಗುಣಗಳನ್ನು ಪಡೆಯಲು ಅವಕಾಶಗಳೂ ಮಾರ್ಗದರ್ಶನವೂ ದೊರೆಯುವಂತಾಗಬೇಕು. ಆಗ 'ಆಟದ ಬಯಲು' ಅನಾಚ್ಛಾದಿತ ಶಾಲೆ' ಎನ್ನುವ ಹೇಳಿಗೆ ಸಾರ್ಥಕತೆ ಉಂಟಾಗುತ್ತದೆ.

■

## ಶಿಕ್ಷಣತಜ್ಞ, ನಿವೃತ್ತ ಕುಲಪತಿ ಡಾ ॥ ಆರ್.ಸಿ. ಹಿರೇಮಠ ಅವರ

# ಚೆನ್ನುಡಿ

ಪ್ರೊ॥ ಶ್ರೀಮತಿ ಲಲಿತಾಂಬ ವೃಷಭೇಂದ್ರಸ್ವಾಮಿ ಅವರು ಅಧ್ಯಯನ ಅಧ್ಯಾಪನ ಕ್ಷೇತ್ರಗಳಲ್ಲಿ ಸಾಧಿಸಿದ ಪ್ರಗತಿಯನ್ನು ಮೂರು ದಶಕಗಳಿಂದಲೂ ನಾನು ನಿರೀಕ್ಷಿಸುತ್ತ ಬಂದಿದ್ದೇನೆ. ಇದೀಗ ಅವರ ಸಾಹಿತ್ಯಿಕ ಹಾಗೂ ವೈಚಾರಿಕ ಕ್ಷೇತ್ರಗಳ ಅಭಿವೃದ್ಧಿಯನ್ನು ಕಂಡು ಅತ್ಯಂತ ಸಂತಸ ಪಟ್ಟಿದ್ದೇನೆ. ಅದಕ್ಕೆ ಕಾರಣ ಈಗ ಪ್ರಕಟವಾಗುತ್ತಿರುವ ಮಕ್ಕಳ ಶಿಕ್ಷಣ ಚಿಂತನೆಗಳು ಎಂಬ ಹೊತ್ತಿಗೆ.

ಪ್ರಸ್ತುತ ಗ್ರಂಥ ಇಪ್ಪತ್ತು ವೈಚಾರಿಕ ಪ್ರಬಂಧಗಳನ್ನೊಳಗೊಂಡಿದೆ. ಶಿಕ್ಷಣ ಕ್ಷೇತ್ರಕ್ಕೆ, ಅದರಲ್ಲೂ ಮುಖ್ಯವಾಗಿ ಮಕ್ಕಳ ಶಿಕ್ಷಣಕ್ಕೆ ಸಂಬಂಧಪಟ್ಟ ಸಮಸ್ಯೆಗಳನ್ನೆತ್ತಿಕೊಂಡು, ಅವುಗಳ ಬಗೆಗೆ ಸಮದೃಷ್ಟಿಯಿಂದ, ಸಮ್ಯಕ್ ದೃಷ್ಟಿಯಿಂದ ಸಮಾಲೋಚನೆ ಮಾಡಿ, ಈ ಪ್ರಬಂಧಗಳನ್ನು ಬರೆದಿರುವರು. ಬೇರೆ–ಬೇರೆ ಕಾಲಕ್ಕೆ ಬರೆದ ಪ್ರಬಂಧಗಳನ್ನೆಲ್ಲಾ ಶೇಖರಿಸಿ ಇದೀಗ ಪುಸ್ತಕ ರೂಪದಲ್ಲಿ ಪ್ರಕಟಿಸುತ್ತಿದ್ದಾರೆ. ಕನ್ನಡದ ಮಹಿಳಾ ಸಾಹಿತಿಗಳ ಸಾಹಿತ್ಯಕ ಸೇವೆ ಬಹುಕಾಲದ ವರೆಗೆ ಸೃಜನಸಾಹಿತ್ಯಕ್ಕೇ ಮೀಸಲಾಗಿತ್ತು. ಅಂತಹ ಕಾಲದಲ್ಲಿ ಶ್ರೀಮತಿ ಲಲಿತಾಂಬ ಅವರು ವೈಚಾರಿಕ ಲೇಖನಗಳನ್ನೂ ಬರೆಯುತ್ತಿದ್ದುದು ಒಂದು ವೈಶಿಷ್ಟ್ಯ. ಈಚೆಗೆ ಮಹಿಳೆಯರೂ ಸಾಹಿತ್ಯದ ಇತರ ಕ್ಷೇತ್ರಗಳಲ್ಲಿಯೂ ತೊಡಗಿರುವುದು ಒಂದು ಉತ್ತಮ ಬೆಳವಣಿಗೆ. ಶ್ರೀಮತಿ ಲಲಿತಾಂಬ ಅವರ ವೈಚಾರಿಕ ವಿಚಾರಗಳ ಆಳ, ಅಗಲ, ಔನ್ನತ್ಯಗಳು ಗಂಭೀರ, ವಿಶಾಲ, ಪ್ರೋನ್ನತವಾಗಿರುವುದು ಇನ್ನೂ ಒಂದು ವೈಶಿಷ್ಟ್ಯ. ಈ ಬಿಡಿ ಬಿಡಿ ಲೇಖನಗಳು ಇಂದು ಗ್ರಂಥರೂಪದಲ್ಲಿ ಪ್ರಕಟವಾಗುವುದು ಅಭಿನಂದನಾರ್ಹ ಕಾರ್ಯ.

ಶ್ರೀಮತಿಯವರು ಎತ್ತಿಕೊಂಡ ಸಮಸ್ಯೆಗಳಲ್ಲಿ ಕೆಲವು ಭಾಷೆಗೆ ಸಂಬಂಧಿಸಿವೆ; ಕೆಲವು ಬೋಧನೆ ಕ್ರಮಕ್ಕೆ; ಕೆಲವು ಮಕ್ಕಳ ಮನೋಭಾವ, ಬುದ್ಧಿಮತ್ತೆ, ಶಿಸ್ತು, ಮೌಲ್ಯಗಳು, ತಂದೆ–ತಾಯಿಗಳ ಹಾಗೂ ಶಿಕ್ಷಕರ ಕರ್ತವ್ಯ ಮುಂತಾದ ಮಕ್ಕಳ ಶಿಕ್ಷಣಕ್ಕೆ ಸಂಬಂಧಿಸಿವೆ. ವಿಷಯ ನಿರೂಪಣೆಗೆ ಹಲವಾರು ತಂತ್ರಗಳನ್ನು ಬಳಸಿ, ಓದುಗರ ಚಿತ್ತವನ್ನೂ ತಮ್ಮತ್ತ ಸೆಳೆದುಕೊಳ್ಳುವ ಶಕ್ತಿ ಇಲ್ಲಿಯ ಲೇಖನಗಳಿಗಿದೆ.

ಸಂಭಾಷಣೆಯ ರೂಪದಲ್ಲಿ–ನೇರ ನಿರೂಪಣೆಯ ರೀತಿಯಲ್ಲಿ ಘಟನೆಗಳ ಆಧಾರ ನೀಡುವಲ್ಲಿ, ಇಲ್ಲಿನ ಬರಹಗಳು ವೈಶಿಷ್ಟ್ಯ ಮೆರೆದಿವೆ. ಸೃಜನ ಸಾಹಿತ್ಯದ ಲಾಲಿತ್ಯ, ವಿಚಾರ ಸಾಹಿತ್ಯದ ವಿವೇಚನೆ, ಎರಡೂ ಸೇರಿಕೊಂಡು ಈ ಕೃತಿಯಲ್ಲಿ ಹೊಸದೊಂದು ಮೆರಗು ಮೈದೋರಿದೆ. ಶ್ರೀಮತಿ ಲಲಿತಾಂಬಾ ಅವರ ಈ ಗ್ರಂಥದಲ್ಲಿ ಇಂದಿನ ಕೆಲವು ಜಟಿಲವೂ, ವ್ಯಾಪಕವೂ ಆದ ಸಮಸ್ಯೆಗಳ ಬಗೆಗೆ ವಿವೇಚನೆ ಇದೆ. 'ಚಾರಿತ್ರ್ಯ ನಿರ್ಮಾಣಕ್ಕಾಗಿ ಮಕ್ಕಳಿಗೆ ಕಥೆಗಳು' ಎಂಬುದು ಶ್ರೇಷ್ಠವಾದ ಸೃಜನಶೀಲ ಲೇಖನವಾಗಿದೆ. ಕತೆಗಳನ್ನು ಹೇಳುತ್ತಾ ಮಕ್ಕಳ ಕುತೂಹಲವನ್ನು ಕೆರಳಿಸುತ್ತ, ಹಿರಿಯರಿಗೆ ಮಕ್ಕಳ ವ್ಯಕ್ತಿತ್ವವನ್ನು ಅರಳಿಸುವ ಕಲೆಯನ್ನು ಇಲ್ಲಿ ನಿರೂಪಿಸಿರುವರು. ಇದೊಂದು ಅತ್ಯಂತ ಸಫಲವಾದ ಸುಂದರವಾದ ಲೇಖನ; ಪ್ರತಿ ನಿಮಿಷಕ್ಕೂ ಕುತೂಹಲವನ್ನು ಅರಳಿಸುತ್ತಾ, ಕೆರಳಿಸುತ್ತಾ ಲೇಖನ ಬೆಳೆಯುತ್ತಾ ಕೊನೆಗೆ ಅರ್ಥಪೂರ್ಣವಾಗಿ ಮುಕ್ತಾಯ ಹೊಂದುತ್ತದೆ. ಅದೇ ರೀತಿ 'ಮನೆಯೇ ಮಗುವಿನ ರೂವಾರಿ' ಎಂಬ ಲೇಖನದಲ್ಲಿ 'ಮನೆಯ ಶಿಸ್ತು, ಮಕ್ಕಳ ಶಿಸ್ತನ್ನು ಬೆಳೆಸುತ್ತದೆ' 'ಕುಟುಂಬ, ವ್ಯಕ್ತಿತ್ವದ ಕುಮ್ಮಟ' ವಿರಸ ದಾಂಪತ್ಯ, ವಿಪರೀತ ಮಕ್ಕಳು ಅಂಥ ಮಕ್ಕಳಿಂದಾಗುವ ದುಷ್ಪರಿಣಾಮ ಇತ್ಯಾದಿ ಸಂಗತಿಗಳನ್ನು ಪರಿಣಾಮಕಾರಿಯಾಗುವಂತೆ ವಿವರಿಸಿರುವರು.

ಲಾಲನೆ, ಪಾಲನೆ, ಪೋಷಣೆಯ ಪರಿಕ್ರಮವೆಂದರೆ, ಮಕ್ಕಳಲ್ಲಿ ಮೌಲ್ಯಗಳ ಬೀಜಗಳನ್ನು ಬಿತ್ತಿ, ಅವು ಬೆಳೆದು ಹೂತು, ಕಾತು, ಹಣ್ಣಾಗುವಂತೆ ನೋಡಿಕೊಳ್ಳುವುದು ಎಂಬುದನ್ನು 'ಮಕ್ಕಳ ಮೌಲ್ಯಗಳ ಬೆಳವಣಿಗೆ' ಎಂಬ ಲೇಖನ ಮನಂಬುಗುವಂತೆ ಬಿತ್ತರಿಸುತ್ತದೆ. ಅಂತೆಯೇ ಮಕ್ಕಳಿಗೆ ಆಟಿಕೆಗಳು ಎಂಬ ಲೇಖನ ಬಹಳ ಮಾರ್ಗದರ್ಶಿಯಾಗಿದೆ. ಹೀಗೆ ಈ ಗ್ರಂಥದ ಲೇಖನಗಳು ಶಿಕ್ಷಕರಿಗೂ, ಪಾಲಕರಿಗೂ ತುಂಬ ಉಪಯುಕ್ತವಾಗಿವೆ.

ಒಟ್ಟಿನಲ್ಲಿ, ಈ ಕೃತಿ ಉಪಯುಕ್ತ ಲೇಖನಗಳ ಸಂಗ್ರಹವೆಂದು ಓದುಗರಿಗೆ ವ್ಯಕ್ತವಾಗುತ್ತದೆ. ಇದು ಉತ್ತಮ ವಿಚಾರಗಳನ್ನು ಒಳ್ಳೆಯ ಶೈಲಿಯಲ್ಲಿ ಬರೆದ, ಸಾಹಿತ್ಯಿಕ ಗುಣಗಳಿಂದ ಕೂಡಿದ ವೈಚಾರಿಕ ಗ್ರಂಥ.

೧೬–೧–೧೯೯೭ ಡಾ ॥ ಆರ್.ಸಿ. ಹಿರೇಮಠ

ಧಾರವಾಡ, ನಿವೃತ್ತ ಕುಲಪತಿಗಳು

ಕರ್ನಾಟಕ ವಿಶ್ವವಿದ್ಯಾಲಯ,

ಧಾರವಾಡ.

■

### ಶಿಕ್ಷಣ ತಜ್ಞ ಡಾ ॥ ರಾಮಚಂದ್ರಾಚಾರ್ ಅವರ ಅಭಿಪ್ರಾಯ :

## ಶೈಕ್ಷಣಿಕ ಸಮಸ್ಯೆಗಳ ವಿಶ್ಲೇಷಣೆ :
## ಸರಳ ಮಾರ್ಗದರ್ಶನ

ನಮ್ಮ ಈ ಜಗತ್ತು ಇಂದು ವೈಜ್ಞಾನಿಕ ಪ್ರಗತಿಯ ಅಮಲಿನಲ್ಲಿದೆ ; ಅದಕ್ಕೆ ಸ್ವಾರ್ಥದ ಸಾರಥ್ಯವೂ ಸೇರಿದೆ. ಮೌಲ್ಯಗಳು ಲಂಗು-ಲಗಾಮಿಲ್ಲದ ದುರ್ಬಳಕೆಯಾಗುತ್ತಿವೆ. ವಿಜ್ಞಾನದಿಂದ ನಾವು ಬಯಸಿದ್ದು ಕುದುರೆ ! ಆದರೆ, ಈಗ ಅದರ ಸವಾರನಿಂದಲೇ ಆತ್ಮವಂಚನೆ ! ವಿನಾಶದತ್ತ ವೇಗಯಾನ ! ಹೀಗೇಕೆ ? ಶಿಕ್ಷಣವೇತ್ತ, ದಾರ್ಶನಿಕ ಡಾ ॥ ರಾಧಾಕೃಷ್ಣನ್ ಅವರ ನುಡಿಯಂತೆ, ಇದು ನಡೆದಿರುವುದು "ಕುಡಿದ ಕೋಡಗದ ಸೈಕಲ್‌ದೌಡು", ಸತ್ ಮೌಲ್ಯಗಳ ಅಪಗಮನ ; ಪ್ರಗತಿಯ ದುರ್ಗತಿ. ಇದಕ್ಕೆ ಪರಿಹಾರವೇನು?

ಸರ್ವಕ್ಕೂ ಮೂಲ ಶಿಕ್ಷಣ; ಜ್ಞಾನ-ನೀತಿಗಳ ಮೇಳನ; ಕೃತಿ-ವಿಕೃತಿಗಳ ವಿಶ್ಲೇಷಣೆ; ದಿಶೆ-ಧ್ಯೇಯಗಳ ನೀಡಿಕೆ; ಬೆಳೆವ ಪರಿಸರ ನಿರ್ಮಾಣ-ನಿರ್ವಹಣೆ; "ನಾಸ್ತಿ ವಿದ್ಯಾಂ ಸಮಂ ಚಕ್ಷುಃ". ಶಿಕ್ಷಣ ಕಣ್ಣು; ರಾಷ್ಟ್ರದ ಭಾವೀ ಭವ್ಯತೆಗೆ ನಾಂದಿ.

ನಿಜ, ಎಲ್ಲವೂ ಇಲ್ಲಿ ಈಗ ಸರಿಯಾಗಬೇಕು; ಶಿಕ್ಷಣದಲ್ಲಿ, ಪರಿಸರದಲ್ಲಿ, ಮೂಲದಲ್ಲಿ! ಕಿರಿಯರನ್ನು ಹಿರಿದಾಗಿಸುವ ಕಾರ್ಯದಲ್ಲಿ! ಇದು ಪ್ರಜ್ಞೆ, ಪೂಜ್ಯ. ಶ್ರೀಮತಿ ಲಲಿತಾಂಬರ ಒಳಗಣ್ಣ ಕಂಡ ವಿಧಾನ. ಅವರ ಶಿಕ್ಷಣ-ಪ್ರಶಿಕ್ಷಣ ಅನುಭವ-ಸಾಧನೆ-ಚಿಂತನೆಗಳ ಸಾಮೂಹಿಕ ಫಲ ಈ ಕೃತಿಯಲ್ಲಿ ಪ್ರತಿಫಲಿಸಿದೆ. ಅನೇಕ ಕಿರುಲೇಖನಗಳು ಸಂಕಲನವಾಗಿ ಹೊರಬಿದ್ದಿರುವ ಈ ಕಿರುಹೊತ್ತಿಗೆ ಶಿಕ್ಷಕರು, ಪ್ರಶಿಕ್ಷಕರು, ಮಾತಾಪಿತೃಗಳು, ಪಾಲಕರು, ಹಿರಿಯರು, ಸಮಾಜ ಮಕ್ಕಳಿಗಾಗಿ ನಿರ್ಮಿಸಬೇಕಾದ ಪರಿಸರ, ಧರ್ಮದ ಸುಂದರ ಅಳವಡಿಕೆ, ಜೀವನದಲ್ಲಿ ಜ್ಞಾನನೌಕೆ ನಡೆಸಲು ಸನ್ಮೌಲ್ಯಗಳ ಚುಕ್ಕಾಣಿ-ಇವುಗಳ ವಿವರಣೆ ಇಲ್ಲಿದೆ.

ಮಾತಿನ ಸರಳತೆ ಸಾಮಾನ್ಯವಾಗಿ, ಬರಹದಲ್ಲಿ ವಿರಳ. ಈ ಸರಳತೆಯಲ್ಲಿ ಗಹನತೆ ಇನ್ನೂ ಶ್ರೇಷ್ಠ; ಆದರೆ ಇದು ಅತಿ ವಿರಳ. ಪ್ರೊ. ಲಲಿತಾಂಬರವರ ಈ

ಲೇಖನಗಳಲ್ಲಿ ಇವೆಲ್ಲವೂ ಮೇಳೈಸಿವೆ ಎಂಬುದು ಗಮನಾರ್ಹ, ಕಥೆ-ಕಥಾನಕ, ನವಿರಾದ ಜೀವನ ಸನ್ನಿವೇಶಗಳ ಹೆಣೆಯುವಿಕೆ, ನೀತಿ ಬೋಧೆಯ ಹೇಳಿಕೆ ಕೇಳಿಕೆಯಲ್ಲಿ ವಿಹರಿಸುವಾಗ, ಈ ಲೇಖನಗಳು ತಾನೇತಾನಾಗಿ ಅರಳಿದ ಹೂಗಳೋ ಎಂಬಂತೆ ಮನಸ್ಸನ್ನು ಆಕರ್ಷಿಸುತ್ತವೆ. ಓದಲು ಪ್ರಾರಂಭಿಸಿದಾಗ ಬಿಡಲು ಮನಸ್ಸು ಬಾರದು; ಹೇಳಿದ ನೀತಿಯನ್ನು ತನ್ನದನ್ನಾಗಿಸಿಕೊಳ್ಳುವ ಅಭಿಲಾಷೆ ಮೂಡುತ್ತದೆ. ಮಕ್ಕಳಿಗೆ ಹೇಳುವ ಕಥೆಗಳು ಮರ್ಮ ಸಾರ್ವಕಾಲಿಕ; ಒಗ್ಗಟ್ಟಿನ ಬಲ, ಒಡೆದಾಗ ಇಲ್ಲ, ಸತ್ಸಂಗದಿಂದ ಸದ್ಗುಣ ಗ್ರಹಣ; ಆಟಿಕೆಗಳೇ ಮಕ್ಕಳ ಪಠ್ಯ; ಕಟುಕನ ಗಿಳಿ ಕಡಿ-ಬಡಿ ಎಂದಿತು; ಕುತೂಹಲ ಜ್ಞಾನದ ಹೆಬ್ಬಾಗಿಲು, ಪರಿಸರದಲ್ಲಿ ಪ್ರೀತಿ ಇರಲಿ; ವಿರಸದಾಂಪತ್ಯ-ವಿಪರೀತ ಮಕ್ಕಳು; ಕುಟುಂಬವೇ ವ್ಯಕ್ತಿತ್ವದ ಕಮ್ಮಟ; ಆತ್ಮ ವಿಶ್ವಾಸ ಕುದುರಿಸಬೇಕು; ಒತ್ತಡ ಶಿಸ್ತಲ್ಲ; ಜನಪದ ಬೌದ್ಧಿಕತೆಯ ಹಾಲು-ಕೆನೆ. ನೆಮ್ಮದಿಗೆ ಸಚ್ಚಾರಿತ್ರ್ಯ ತಾರಕ. ಹಿರಿಯರ ನಡೆ-ನುಡಿ ಕಿರಿಯರಿಗೆ ಮಾದರಿ, ಸ್ವಾವಲಂಬನೆ, ಕಾರ್ಯಶೀಲತೆಗಳನ್ನು ತಿದ್ದಿ ಬೆಳೆಸಬೇಕು. ಪ್ರತಿಭೆಯನ್ನು ಕಡೆಗಣಿಸುವುದೇ ದೇಶದ ದುರಂತ. 'ದೂರದರ್ಶನ' ಇಂದು ಗೃಹಾಂತರ್ಯಾಮಿ; ಪ್ರಭಾವ ಹೆಚ್ಚು; ಸಾಂಸ್ಕೃತಿಕ ಮೌಲ್ಯಗಳಿಗೆ ಹೊಂದಾಣಿಕೆ ಇರದೆ, ಹಿಂಸಾತ್ಮಕ ಚಿತ್ರಣ. ದೂರದರ್ಶನದಲ್ಲಿ ಸಲ್ಲದು. ಇಂದು ರಾಷ್ಟ್ರೀಯ ಶಿಕ್ಷಣ ನೀತಿ, ಬಿತ್ತದ್ದನ್ನೇ ಬೆಳೆದೇವು. ಬೇವಿನಿಂದ ಮಾವು ಹೊರಟೀತೇ? ಶ್ರೇಷ್ಠ ಶಿಕ್ಷಣ; ಉತ್ತಮ ನಡೆ ನುಡಿ ಇಲ್ಲದ ಅಪಾತ್ರರು ಶಿಕ್ಷಕರಾಗದಂತೆ ನೋಡಿಕೊಳ್ಳಬೇಕು; ಶಿಕ್ಷಕರು ಆದರಣೀಯರಾಗಬೇಕು. ನಮ್ಮ ಮಕ್ಕಳು ನಮ್ಮಂತೆ, ಆದುದರಿಂದ ಹಿರಿಯರು ತಮ್ಮನ್ನು ತಿದ್ದಿಕೊಂಡು ಒಳ್ಳೆಯ ಮೇಲ್ಪಂಕ್ತಿಯುಳ್ಳ ಪರಿಸರ ನಿರ್ಮಾಣ ಮಾಡಬೇಕು. ಹೀಗೆ ಅನೇಕ ಮುಖ್ಯ ವಿಚಾರಗಳ ಸರಳ ಮಂಡನೆ ಈ ಕಿರು ಹೊತ್ತಗೆ. ಇದು ಶಿಕ್ಷಕರು, ಮಾತಾಪಿತೃಗಳು, ಹಿರಿಯರು ಹಾಗೂ ಮಕ್ಕಳ ನಿಕಟವರ್ತಿಗಳು ಓದಲೇಬೇಕಾದ ಹೊತ್ತಿಗೆ, ಅನುಸರಿಸಬೇಕಾದ ಸಲಹೆಗಳ ಸರಳ ಸಂಪುಟ.

ಧಾರವಾಡ — ಡಾ ॥ ಕೆ. ರಾಮಚಂದ್ರಾಚಾರ್ಯ

೧೩-೧-೯೭ — ಮುಖ್ಯಸ್ಥರು, ಶಿಕ್ಷಣ ವಿಭಾಗ,

ಕರ್ನಾಟಕ ವಿಶ್ವವಿದ್ಯಾಲಯ

■

## ಓರ್ವ ವಿದ್ಯಾವಂತ ತಾಯಿಯ ಅನಿಸಿಕೆಗಳು :
## ಶಿಕ್ಷಣ ಸಾಹಿತ್ಯಕ್ಕೆ ವಿಶೇಷ ಕೊಡುಗೆ . . .

ಅಶಿಸ್ತು, ಅತ್ಯಾಚಾರ, ಅನಾಚಾರ, ಅಸಂಸ್ಕೃತಿ, ಹೊಣೆಗೇಡಿತನ, ಅಪರಾಧ ಮನೋವೃತ್ತಿ, ದುಶ್ಚಟ, ಕೀಟಲೆ ಮಾಡುವ ಸ್ವಭಾವ, ಕೊಲೆ, ಸುಲಿಗೆ, ದರೋಡೆ ಮುಂತಾದ ಅಮಾನವೀಯ ಪ್ರವೃತ್ತಿಗಳು ಇಂದಿನ ಯುವ ಪೀಳಿಗೆಯಲ್ಲಿ ಕಾಣಬರುತ್ತಿರುವ ಅವಲಕ್ಷಣಗಳು! ಈ ಪ್ರವೃತ್ತಿ ಆಯಾ ವ್ಯಕ್ತಿಗೆ ಕೆಡುಕನ್ನುಂಟು ಮಾಡುವುದಲ್ಲದೆ, ಸಾಮಾಜಿಕವಾಗಿಯೂ, ರಾಷ್ಟ್ರೀಯವಾಗಿಯೂ ಬಹಳ ಹಾನಿಯನ್ನುಂಟುಮಾಡುವಂತಹುದಾಗಿದೆ. ಈ ದಿಶೆಯಲ್ಲಿ ಶ್ರೀಮತಿ. ಪ್ರೊ. ಲಲಿತಾಂಬ ಅವರ ಈ ಪುಸ್ತಕ ಬಹಳ ಉಪಯುಕ್ತವಾಗಿದೆ ಎಂದು ನನ್ನ ಅನಿಸಿಕೆ.

ಶಿಕ್ಷಣ ಕ್ಷೇತ್ರದಲ್ಲಿ ಮೂರು ನಾಲ್ಕು ದಶಕಗಳು. ವಿವಿಧ ಹಂತದ ಶಿಕ್ಷಣ ಸಂಸ್ಥೆಗಳಲ್ಲಿ ಕೆಲಸ ಮಾಡಿದ ಅನುಭವ ಪಡೆದವರು ಪ್ರೊ. ಲಲಿತಾಂಬ. ಇಂದಿನ ಮಕ್ಕಳಲ್ಲಿ ಸಮಸ್ಯಾತ್ಮಕ ವ್ಯಕ್ತಿತ್ವ ರೂಪಿತವಾಗಲು ಮುಖ್ಯವಾಗಿ ಬೆಳೆಯುವ ವಯಸ್ಸಿನಲ್ಲಿ ಅಸಮರ್ಪಕ ಶಿಕ್ಷಣ, ಅನರ್ಥಕ ಮಾರ್ಗದರ್ಶನ, ಹಾಗೂ ಅಪ್ರಶಸ್ತ ಪರಿಸರ ಮುಂತಾದವುಗಳು ಹೇಗೆ ಕಾರಣವಾಗುತ್ತವೆ ಎಂಬುದನ್ನು, ತಮ್ಮ ಅನುಭವ ಮತ್ತು ಜ್ಞಾನದ ಸಹಾಯದಿಂದ ಎಳೆ-ಎಳೆಯಾಗಿ ಬಿಡಿಸಿ, ಕೂಲಂಕಷವಾಗಿ ವಿಶ್ಲೇಷಿಸಿದ್ದಾರೆ. ಅಷ್ಟಲ್ಲದೆ, ಹಂತ ಹಂತವಾಗಿ ಮಗುವಿನ ವ್ಯಕ್ತಿತ್ವವನ್ನು ಉತ್ತಮ ರೀತಿಯಲ್ಲಿ ರೂಪಿಸಲು ಹೇಗೆ ಸಾಧ್ಯವೆಂಬುದನ್ನು ಉದಾಹರಣೆಗಳ ಮೂಲಕ, ತುಂಬಾ ಸರಳ ರೀತಿಯಲ್ಲಿ, ಸಾಮಾನ್ಯರಿಗೂ ಅರ್ಥವಾಗುವ ಹಾಗೆ ಬರೆದಿರುವರು. ಕಾರಣ ಎಲ್ಲ ಪಾಲಕ ಪೋಷಕರು ಪ್ರಾಥಮಿಕ ಶಿಕ್ಷಣದಿಂದ ಹಿಡಿದು ಕಾಲೇಜು ಶಿಕ್ಷಣದವರೆಗಿನ ಎಲ್ಲ ಹಂತದ ಶಿಕ್ಷಕರೂ ಈ ಪುಸ್ತಕದ ಪ್ರಯೋಜನ ಪಡೆಯಬಹುದಾಗಿದೆ.

ಕುಟುಂಬ, ಮಗುವಿನ ಮೊದಲ ಶಾಲೆ, ಇಲ್ಲಿ ಕುಟುಂಬದ ಎಲ್ಲರ, ಅದರಲ್ಲಿಯೂ ತಾಯಿಯ ಪ್ರಭಾವ ಮಗುವಿನ ಮೇಲೆ ಬಹಳವಾಗಿ ಆಗುತ್ತದೆ. ಮಗುವಿನ ವ್ಯಕ್ತಿತ್ವವನ್ನು ರೂಪಿಸುವಲ್ಲಿ ತಾಯಿಯೇ ಮೊದಲ ಶಿಲ್ಪಿ. ಆದುದರಿಂದ ತಾಯಿ ತನ್ನೆಲ್ಲಾ ಚಟುವಟಿಕೆಗಳಲ್ಲಿ, ಮಗುವಿನ ಒಡನಾಟದಲ್ಲಿ ಬಹು ಎಚ್ಚರಿಕೆಯಿಂದ

ಇರುವುದು ಅತ್ಯಗತ್ಯ. ಕಥೆಗಳು ಆಟಗಳೂ ಅವಳು ಮಗುವಿನ ದೈಹಿಕ, ಬೌದ್ಧಿಕ, ಮಾನಸಿಕ ಬೆಳವಣಿಗೆಗೆ ಸಹಾಯಕವಾಗುವುದರತ್ತ ಲಕ್ಷ್ಯ ವಹಿಸಬೇಕು, ಕಥೆಗಳ ಮೂಲಕ ಉತ್ತಮ ಮೌಲ್ಯಗಳನ್ನು ಮಗುವು ಅಳವಡಿಸಿಕೊಳ್ಳುವಂತೆ ಮಾಡಬಹುದಲ್ಲದೆ, ದಕ್ಷತೆ, ಆತ್ಮವಿಶ್ವಾಸಗಳು ಮೊಳೆಯುವಂತೆ ಮಾಡಬಹುದು. ಹೀಗೆ ತಾಯಿ ಮಗುವಿನಲ್ಲಿನ ಉತ್ತಮ ನಡೆ-ನುಡಿಗಳನ್ನು ರೂಪಿಸಲು ತಾಯಿಗೆ ಹೇಗೆ ಸಾಧ್ಯ ಎಂಬುದನ್ನು ಪ್ರೊ. ಲಲಿತಾಂಬ ಅವರು ವಿವರಿಸಿ-ತಾಯಂದಿರಿಗೆ ಸೂಕ್ತ ಮಾರ್ಗದರ್ಶನ ಮಾಡಿದ್ದಾರೆ; ಸ್ವಾನುಭವ ಸಿದ್ಧಾಂತಗಳನ್ನು ನಿರೂಪಿಸಿರುವರು.

ತಾಯಿ ಹಾಕಿದ ಬುನಾದಿಯಮೇಲೆ, ಶಿಕ್ಷಕರು ಹಾಗೂ ಶಿಕ್ಷಣ ಸಂಸ್ಥೆಗಳು ಮಕ್ಕಳ ವ್ಯಕ್ತಿತ್ವವೆಂಬ ಭದ್ರಕಟ್ಟಡವನ್ನು ಕಟ್ಟಬೇಕು. ಮಗುವಿಗೆ ಕೇವಲ ಜ್ಞಾನ ನೀಡುವುದೇ ಅಲ್ಲದೆ, ಮಗುವಿನಲ್ಲಿ ಹುದುಗಿರುವ ಪ್ರತಿಭೆ ಅರಳುವಂತೆ ಶಿಕ್ಷಕರು ಜಾಗ್ರತೆ ವಹಿಸಬೇಕು. ಶಿಕ್ಷಕರ ಶ್ರದ್ಧೆ, ನಿಷ್ಠೆ, ತಾಳ್ಮೆ, ಮಾರ್ಗದರ್ಶನಗಳು ಮಗುವಿಗೆ ಪ್ರೇರಕ ಶಕ್ತಿಯಾಗಿ ಸಫಲ ವ್ಯಕ್ತಿತ್ವ ರೂಪಿಸಿಕೊಳ್ಳಲು ನೆರವಾಗಬೇಕು, ಅವರು ಉತ್ತಮ ಮೌಲ್ಯಗಳನ್ನು ಅಳವಡಿಸಿಕೊಳ್ಳುವಲ್ಲಿ ಸಹಾಯಕವಾಗಬೇಕು. ಮಕ್ಕಳಲ್ಲಿ ಭೇದಭಾವ ಮಾಡದೆ, ಅವರಿಗೆ ಮಾನಸಿಕ ತೊಳಲಾಟಕ್ಕೆ ಅವಕಾಶವಾಗದಂತೆ, ಸಮಾನ ದೃಷ್ಟಿಯಿಂದ ನೋಡಬೇಕು. ಸಮರ್ಪಕವಾಗಿ ತಮ್ಮ ಕೆಲಸ ನಿರ್ವಹಿಸಿ, ಉತ್ತಮ ಫಲಿತಾಂಶವನ್ನು ಪಡೆಯಲು ಮಕ್ಕಳ ಪಾಲಕರೊಡನೆ ಶಿಕ್ಷಕರು ನಿಕಟವಾದ ಸಂಬಂಧವಿಟ್ಟುಕೊಂಡು ಮಕ್ಕಳ ಪರಿಸ್ಥಿತಿಯನ್ನು ಸರಿಯಾಗಿ ಅರ್ಥಮಾಡಿಕೊಂಡು ಉತ್ತಮ ರೀತಿಯ ಮಾರ್ಗದರ್ಶನ ಮಾಡಬೇಕೆಂಬ ಕಿವಿಮಾತುಗಳನ್ನು ಶಿಕ್ಷಕರಿಗೆ ಹೇಳಿದ್ದಾರೆ, ಪ್ರೊ. ಲಲಿತಾಂಬ. ಶಿಕ್ಷಣ ಕ್ಷೇತ್ರದ ಸಮಸ್ಯೆಗಳ ಹಲವಾರು ಅಂಶಗಳನ್ನು ಎಳೆ-ಎಳೆಯಾಗಿ ಬಿಡಿಸಿ, ಅದಕ್ಕೆ ಪರಿಹಾರೋಪಾಯಗಳನ್ನು ಸೂಚಿಸಿರುವುದು ಈ ಪುಸ್ತಕದ ವೈಶಿಷ್ಟ್ಯ.

ಒಟ್ಟಿನಲ್ಲಿ, ಪ್ರೊ. ಲಲಿತಾಂಬ ವೃಷಭೇಂದ್ರಸ್ವಾಮಿಯವರು, ಮಕ್ಕಳ ವ್ಯಕ್ತಿತ್ವ ವಿಕಸನಕ್ಕೆ ಸಹಾಯಕವಾದ ಅನೇಕ ವಿಷಯಗಳ ಆಳವಾದ, ಕೂಲಂಕುಷವಾದ ನಿರೂಪಣೆಯನ್ನು ಸರಳ ಶೈಲಿಯಲ್ಲಿ, ದಿನನಿತ್ಯದ ಉದಾಹರಣೆಗಳ ಮೂಲಕ ಎಲ್ಲರಿಗೂ ಮನದಟ್ಟಾಗುವಂತೆ, ಮನಮುಟ್ಟುವಂತೆ ಮಾಡಿದ್ದಾರೆ. ಇಂತಹ ಉತ್ತಮ ಕೃತಿಯ ಮೂಲಕ ಸಮಾಜಕ್ಕೆ, ತಂದೆ-ತಾಯಿಗಳಿಗೆ, ಶಿಕ್ಷಕರಿಗೆ, ಶಿಕ್ಷಣ ಸಾಹಿತ್ಯ ಲೋಕಕ್ಕೆ ವಿಶೇಷ ಕೊಡುಗೆ ನೀಡಿರುವ ಶ್ರೀಮತಿ ಲಲಿತಾಂಬ ಅವರಿಗೆ ನನ್ನ ಮೆಚ್ಚುಗೆಯ ಅಭಿನಂದನೆಗಳು ಹಾಗೂ ಶುಭಾಶಯಗಳು.

೫-೨-೯೭

ಶ್ರೀಮತಿ ಸ.ರಾ. ಜಂಗಮ, ಎಂ.ಎ.,
ನಿವೃತ್ತ ಪ್ರಾಧ್ಯಾಪಕರು
ಮೂರುಸಾವಿರ ಮಠದ ಮಹಿಳಾ ಕಾಲೇಜು, ಹುಬ್ಬಳ್ಳಿ

## ಕೃತಜ್ಞತೆ

ಪ್ರಖ್ಯಾತಸಾಹಿಗಳೂ, ಸುಪ್ರಸಿದ್ಧ ವಿದ್ವಾಂಸರೂ, ಶಿಕ್ಷಣ ತಜ್ಞರೂ ಮಾಜಿ ಕುಲಪತಿಗಳೂ ಆದ ಡಾ. ಆರ್.ಸಿ. ಹಿರೇಮಠರು ಈ ಕೃತಿಗೆ ವಿಮರ್ಶಾತ್ಮಕವಾದ ಮತ್ತು ಪ್ರೋತ್ಸಾಹಕರವಾದ ಚೆನ್ನುಡಿಯನ್ನು ಬರೆದು ಕೃತಿಯ ಮೌಲ್ಯವನ್ನು ಹೆಚ್ಚಿಸಿದ್ದಾರೆ.

ಕರ್ನಾಟಕ ವಿಶ್ವವಿದ್ಯಾಲಯದ ಶಿಕ್ಷಣ ವಿಭಾಗದ ಮುಖ್ಯಸ್ಥರೂ, ಶಿಕ್ಷಣ ತಜ್ಞರೂ ಆದ ಡಾ. ಕೆ. ರಾಮಚಂದ್ರಾಚಾರ್ಯ ಇವರು, ಶಿಕ್ಷಣತಜ್ಞರ ದೃಷ್ಟಿಯಿಂದ ಕೃತಿಯನ್ನು ತೂಗಿ ನೋಡಿ ತಮ್ಮ ಮೌಲಿಕವಾದ ಅಭಿಪ್ರಾಯವನ್ನು ಇತ್ತಿದ್ದಾರೆ.

ನಿವೃತ್ತ ಪ್ರಾಧ್ಯಾಪಕಿಯೂ, ವಿದ್ಯಾವಂತ ಹಾಗೂ ಸುಸಂಸ್ಕೃತ ಮಹಿಳೆಯೂ ಆದ ಶ್ರೀಮತಿ. ಪ್ರೊ. ಸ.ರಾ. ಜಂಗಮ ಅವರು ತಾಯಿ ದೃಷ್ಟಿಯ ತಮ್ಮ ಅನಿಸಿಕೆಗಳನ್ನು ಮನಂಬುಗುವಂತೆ ಚಿತ್ರಿಸಿದ್ದಾರೆ.

ಇವರೆಲ್ಲರಿಗೂ ನನ್ನ ಆದರಪೂರ್ವಕ ಕೃತಜ್ಞತೆಗಳು

ಲಲಿತಾಂಬ ವೃಷಭೇಂದ್ರಸ್ವಾಮಿ

■

# ಪುಟ್ಟನಿಗೆ ಹಿತೈಷಿಯ ಪತ್ರಗಳು

## (ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡುವ ಪತ್ರಸಾಹಿತ್ಯ)


ಪ್ರೊ. ಲಲಿತಾಂಬಾ ವೃಷಭೇಂದ್ರ ಸ್ವಾಮಿ

ನಿವೃತ್ತ ಪ್ರವಾಚಕರು

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ



ಪ್ರಕಾಶನ

ಪ್ರಸಾದ ಪ್ರಕಾಶನ

'ಶಿವಪ್ರಸಾದ' ೮ನೇ ಕ್ರಾಸ್, ಕಲ್ಯಾಣನಗರ,

ಧಾರವಾಡ – ೫೮೦ ೦೦೭

ಫೋ : ೨೪೪ ೮೫೭೦

PUTTANIGE HITAISHIYA PATRAGALU
*(Letters to Students by a Well-wisher)*
by Prof. (Smt.) Lalithamba Vrushabhendra Swamy M.Ed., DTE, Reader, University College of Education (Rtd.) Karnataka University, Dharwad (Karnatak)

Published by Prasada Prakashana, 'Shivaprasad', Kalyan Nagar 8th Cross, Dharwad- 580 007 Ph: 348570

Page :

First Edition- 1998
Author
Price : Rs. 50/-

ಪ್ರಥಮ ಆವೃತ್ತಿ- ೧೯೯೮



ಡಿ.ಟಿ.ಪಿ. ಟೈಪ್‌ಸೆಟ್ಟಿಂಗ್:
ವೆಂಕಟೇಶ ಭೀ. ಇನಾಮತಿ
ಶ್ರೀಗ್ರಾಫಿಕ್ಸ್
ಯು.ಬಿ.ಹಿಲ್ಸ್, ಧಾರವಾಡ-೫೮೦ ೦೦೭
ಫೋನ್ : ೪೫೨೫೫

ಮುದ್ರಣ :
ಸೋಮಶೇಖರ ಆಕಳವಾಡಿ
ಮನೋಹರ ಮುದ್ರಣಾಲಯ
ಮಾರ್ಕೆಟ್, ಧಾರವಾಡ – ೫೮೦ ೦೦೧

## ಮುನ್ನುಡಿ

ಇಂಗ್ಲಿಷ್ ಭಾಷೆಯಲ್ಲಿ ಒಂದು ನಾಣ್ನುಡಿಯಿದೆ:
'If wealth is lost, nothing is lost;
If health is lost, something is lost;
If Character is lost, everything is lost'

ಇದರ ಅರ್ಥ ಸಂಪತ್ತು ಕಳೆದರೆ ಏನೂ ಕಳೆದಂತಲ್ಲ, ಆರೋಗ್ಯ ಕೆಟ್ಟರೆ ಕಿಂಚಿತ್ ಕಳೆದಂತೆ, ಆದರೆ ಚಾರಿತ್ರ್ಯವನ್ನು ಕಳೆದುಕೊಂಡರೆ ಸರ್ವಸ್ವವೂ ಹೋದಂತೆ. ಸ್ವಾತಂತ್ರ್ಯ ಪಡೆದ ನಂತರ ದೇಶದಲ್ಲೆಲ್ಲ ಅನ್ಯಾಯ, ಅನಾಚಾರ, ಅತ್ಯಾಚಾರ, ಹಿಂಸೆ, ಅಪ್ರಾಮಾಣಿಕತೆ, ಲಂಚಗುಳಿತನ, ದ್ರೋಹಭಾವ ಬೆಳೆದು ಈಗ ಸರ್ವನಾಶದ ದಿಸೆಯಲ್ಲಿ ಸಾಗಿದ್ದೇವೆ. ಇದಕ್ಕೆ ಮೂಲ ಕಾರಣವೆಂದರೆ ನಾವುಗಳು 'ಚಾರಿತ್ರ್ಯ', 'ಮೌಲ್ಯ'ಗಳನ್ನು ಬೆಳೆಸುವ, ಕಾಪಾಡುವ, ದಿಸೆಯಲ್ಲಿ ಸಂಪೂರ್ಣ ನಿರ್ಲಕ್ಷ್ಯವನ್ನು ತೋರಿ, ಸ್ವಾರ್ಥ, ಅನೈತಿಕತೆ ಬೆಳೆಯಲು ಅವಕಾಶ ಮಾಡಿಕೊಟ್ಟಿದ್ದೇವೆ. ಇದೇ ದಿಸೆಯಲ್ಲಿ ಮುಂದುವರಿದಲ್ಲಿ, ದೇಶ ಅಧೋಗತಿಗಿಳಿದು, ಸರ್ವನಾಶವಾಗುವುದರಲ್ಲಿ ಸಂದೇಹವಿಲ್ಲ. ಈ ದುಸ್ಥಿತಿಯನ್ನು ಬದಲಿಸಲು ಸೂಕ್ತ ಕ್ರಮಗಳನ್ನು ಶೀಘ್ರವಾಗಿ ತೆಗೆದುಕೊಳ್ಳದೇ ಇದ್ದರೆ ನಮಗೂ ನಮ್ಮ ಮುಂದಿನ ಪೀಳಿಗೆಗೂ ಉಳಿವಿಲ್ಲ. ಅಕ್ಕ ಲಲಿತಾಂಬ ಅವರು ಈ ವಿಷಯದ ಬಗ್ಗೆ ಚಿಂತನೆ ಮಾಡಿ, ಇದಕ್ಕೆ ಪರಿಹಾರದ ದಾರಿಯನ್ನು ತೋರಿದ್ದಾರೆ. ಅವರು ತೋರಿದ ದಾರಿಯೆಂದರೆ, ನಮ್ಮ ಮಕ್ಕಳಿಗೆ ಬಾಲ್ಯದಿಂದಲೇ ಸದ್ಗುಣಿಗಳಾಗುವಂತೆ, ಸತತವಾದ ತರಬೇತಿಯನ್ನು ಕೊಡುವುದು; ಕಥೆಗಳ ಮೂಲಕವೋ, ಕವನಗಳ ಮೂಲಕವೋ ಅವರ ಚಾರಿತ್ರ್ಯದ ಬೆಳವಣಿಗೆಗೆ ಸತತವಾದ ಪ್ರಯತ್ನ ಮಾಡುವುದು.

ಅಕ್ಕ ಲಲಿತಾಂಬಾ ಅವರ, 'ಪುಟ್ಟನಿಗೆ ಹಿತೈಷಿಯ ಪತ್ರಗಳು' ಎಂಬ ಪುಸ್ತಕವನ್ನು ಓದಿದಾಗ, ಶ್ರೀ ಜವಾಹರಲಾಲ ನೆಹರೂ ಅವರು ತಮ್ಮ ಚಿಕ್ಕ ಮಗಳು ಇಂದಿರಾಗೆ ಬರೆದ ಪತ್ರಗಳ ಗುಚ್ಛದ ನೆನಪಾಗುತ್ತದೆ. ಆ ಪತ್ರಗಳಲ್ಲಿ ಜವಾಹರಲಾಲ ನೆಹರು ಅವರು, ಇಂದಿರಾಗೆ ಭಾರತದ ಇತಿಹಾಸ, ಸಂಸ್ಕೃತಿಯ ಪರಿಚಯವನ್ನು ಮಾಡಿಕೊಡುವ ಮತ್ತು ದೇಶಪ್ರೇಮವನ್ನು ಮೂಡಿಸುವ ಪ್ರಯತ್ನವನ್ನು ಸರಳ ಸುಂದರವಾದ ಶೈಲಿಯಲ್ಲಿ ಮಾಡಿದ್ದಾರೆ. 'ಪುಟ್ಟನಿಗೆ ಹಿತೈಷಿಯ ಪತ್ರಗಳು' ಅದೇ ತರಹದ ಪ್ರಯತ್ನ, ಇವುಗಳಲ್ಲಿ ಜೀವನದ ಮೌಲ್ಯಗಳ ಬಗ್ಗೆ, ಸದ್ಗುಣಗಳ ಬಗ್ಗೆ,

ಸದಾಚಾರಗಳ ಬಗ್ಗೆ, ಎಳೆಯ ವಯಸ್ಸಿನ ಮಕ್ಕಳಿಗೆ ತಿಳಿಯುವ ಶೈಲಿಯಲ್ಲಿ ಉದಾಹರಣೆಗಳೊಂದಿಗೆ ಸುಂದರವಾಗಿಯೂ, ಸರಳವಾಗಿಯೂ ತಿಳಿಸಿದ್ದಾರೆ. ಆತ್ಮೀಯತೆ ಮತ್ತು ಅಂತಃಕರಣದಿಂದ ತುಂಬಿದ ಈ ಪತ್ರಗಳು ಪುಟ್ಟುವಿನ ಮುಗ್ಧ ಮನಸ್ಸಿನ ಮೇಲೆ ಪ್ರಭಾವವನ್ನು ಬೀರುವುದರಲ್ಲಿ ಸಂದೇಹವಿಲ್ಲ. ಪ್ರತಿಯೊಂದು ಪತ್ರವೂ ಒಂದೊಂದು ಮೌಲಿಕವಾದ ಮಾಣಿಕ್ಯದಂತಿದೆ. ಅವುಗಳಲ್ಲಿ ತಾಳ್ಮೆ, ಸರಳ ಜೀವನ, ಮಿತವ್ಯಯ, ಕರ್ತವ್ಯಪ್ರಜ್ಞೆ, ಪ್ರಾಮಾಣಿಕತೆ, ಸಮಯ ಪ್ರಜ್ಞೆಗಳ ಬಗ್ಗೆ ಬರೆದ ಪತ್ರಗಳು ಅಮೂಲ್ಯವಾಗಿವೆ.

ಸಚ್ಚಾರಿತ್ರ್ಯವನ್ನು ಬೆಳೆಸುವ ಮತ್ತು ಸಂರಕ್ಷಿಸುವ ಕಾರ್ಯ ಸುಲಭವಾದುದಲ್ಲ. ಅದರ ಜವಾಬ್ದಾರಿ ಸಮಾಜದ ಎಲ್ಲ ಅಂಗಗಳ ಮೇಲೆಯೂ ಇದೆ. ಆದಾಗ್ಯೂ ತಂದೆ-ತಾಯಿಗಳ ಹೊಣೆ ವಿಶೇಷವಾದದ್ದು. ತದನಂತರ ಬರುವ ಜವಾಬ್ದಾರಿ ಶಿಕ್ಷಕರದು. ಎಲ್ಲ ತಂದೆ-ತಾಯಿಗಳೂ ಈ ಪತ್ರಗಳನ್ನು ಓದಿ, ತಮ್ಮ ಮಕ್ಕಳಿಗೆ ಸರಿಯಾದ ಮಾರ್ಗದರ್ಶನ ಮಾಡಬೇಕು ಹಾಗೂ ಅವರ ಗುಣಮಟ್ಟವನ್ನು ಸಂವರ್ಧಿಸುವಲ್ಲಿ ಸಹಾಯಕರಾಗಬೇಕು. ಪ್ರತಿಯೊಬ್ಬ ಶಿಕ್ಷಕರೂ ಈ ಪತ್ರಗಳನ್ನು ಓದಿ, ಮನನ ಮಾಡಿಕೊಂಡು, ಅದರಲ್ಲಿಯ ಕಥೆಗಳನ್ನು ಜಾಣ್ಮೆಯಿಂದ ಪ್ರಸಂಗಾನುಸಾರವಾಗಿ ಬಳಸಿಕೊಂಡು, ಮಕ್ಕಳ ಮೌಲ್ಯಗಳ ಬೆಳವಣಿಗೆಯಲ್ಲಿ ಸಹಾಯ ಮಾಡಬೇಕು. ಈ ಪತ್ರಗಳನ್ನು ಎಲ್ಲ ನಾಗರಿಕರು ಓದಿ ತಿಳಿದುಕೊಂಡು ಜನತೆಯ ಸಚ್ಚಾರಿತ್ರ್ಯವನ್ನು ಕಾಪಾಡಲು ಸಹಾಯಕರಾಗಬೇಕಾದುದು ಅತ್ಯವಶ್ಯ.

ಈ ಪತ್ರಗಳ ಉಪಯುಕ್ತತೆ ಕನ್ನಡ ಬಲ್ಲವರಿಗೆ ಮಾತ್ರ ಸೀಮಿತವಾಗಬಾರದು. ಆದ್ದರಿಂದ ಅವುಗಳನ್ನು ಇಂಗ್ಲಿಷ್ ಮತ್ತು ಹಿಂದಿ ಭಾಷೆಗಳಿಗೆ ಅನುವಾದಿಸಿ, ಭಾರತದ ಎಲ್ಲ ಜನತೆಗೂ ಅದರ ಲಾಭ ಸಿಗುವಂತೆ ಮಾಡುವುದು ಒಳ್ಳೆಯದೆಂದು ನನ್ನ ಅನಿಸಿಕೆ ಮತ್ತು ಸೋದರಿ ಲಲಿತಾಂಬ ಅವರಿಗೆ ನನ್ನ ಒತ್ತಾಯದ ಬಿನ್ನಹ. ನಮ್ಮ ಪ್ರಾಂತದ ಶಿಕ್ಷಣಾಧಿಕಾರಿಗಳೂ, ಶಿಕ್ಷಣ ತಜ್ಞರೂ ಈ ಪುಸ್ತಕವನ್ನು ಅಧ್ಯಯನದ ಪಠ್ಯಪುಸ್ತಕವಾಗಿಯೋ, ಇಲ್ಲವೇ ಹೆಚ್ಚಿನ ಜ್ಞಾನಾರ್ಜನೆಗಾಗಿ ಓದುವ (Optional Reading) ಪುಸ್ತಕವಾಗಿಯೋ ಶಾಲೆಗಳಲ್ಲಿ ಶಿಫಾರಸು ಮಾಡುವರೆಂದು ನಂಬಿರುವೆ, ಆಶಿಸುವೆ.

ಅಕ್ಕ ಲಲಿತಾಂಬ ಅವರನ್ನು, ಉದಾತ್ತ ಧ್ಯೇಯಕ್ಕಾಗಿ ರಚಿಸಿದ ಈ ಉತ್ತಮ ಕೃತಿಗಾಗಿ ಅಭಿನಂದಿಸುತ್ತೇನೆ. ಅವರ ಹಿರಿದಾಸೆ ಸಫಲಿಸಲಿ ಎಂದು ಹಾರೈಸುತ್ತೇನೆ.

ನವದೆಹಲಿ
೬-೨-೧೯೯೮

ವಿಜಯಕುಮಾರ ಸಿ. ಮಳಿಮಠ

# ಪುಟ ತೆರೆಯುವ ಮೊದಲು

ಜಗತ್ತು ನಾಗಾಲೋಟದಿಂದ ಓಡುತ್ತಿದೆ. ಅನೇಕ ರೀತಿಯ ಆವಿಷ್ಕಾರಗಳಿಂದ ವೈಜ್ಞಾನಿಕ ಹಾಗೂ ತಾಂತ್ರಿಕ ಕ್ಷೇತ್ರಗಳಲ್ಲಿ ಮಿತಿ ಇಲ್ಲದಷ್ಟು ಪ್ರಗತಿ ಸಾಧಿಸಲ್ಪಟ್ಟಿದೆ. ಆದರೆ ಜನರ ನೆಮ್ಮದಿ ದಿನ-ದಿನಕ್ಕೆ ಕ್ಷೀಣಿಸುತ್ತಿದೆ; ಭ್ರಷ್ಟಾಚಾರ, ದುರಾಚಾರಗಳು ಹೆಚ್ಚುತ್ತಿವೆ. ಹಿಂಸೆ-ಕ್ರೌರ್ಯಗಳಿಗೆ ಮಿತಿಯೇ ಇಲ್ಲವಾಗಿದೆ. ಅಮಾಯಕ ಜನ ತತ್ತರಿಸಿ ಹೋಗಿದೆ. ಇದಕ್ಕೆಲ್ಲ ಮುಖ್ಯ ಕಾರಣ, ಜನರಲ್ಲಿ ಸಾತ್ವಿಕತೆ, ಪ್ರಾಮಾಣಿಕ ಮನೋವೃತ್ತಿ, ಅನ್ಯೋನ್ಯತೆ, ಸಹಕಾರ ಮುಂತಾದ ಮೌಲ್ಯಗಳು ಮಾಯವಾಗಿ, ಅಪ್ರಮಾಣಿಕತೆ, ಹೊಟ್ಟೆಕಿಚ್ಚು, ಅಸಹನೆ, ಅವಿವೇಕತೆಗಳು ಹೆಚ್ಚಾಗಿ ಒಬ್ಬರನ್ನೊಬ್ಬರು ದ್ವೇಷಿಸುವ ಗುಣಗಳು ಹೆಚ್ಚಿ, ಒಂದುಗೂಡಿ ಬಾಳುವ ಮೌಲ್ಯಗಳ ಕೊರತೆಯೇ ಕಾರಣವೆಂದು ಹೇಳಬಹುದು. ಕೌಟುಂಬಿಕ ಸೌಹಾರ್ದತೆ ಮೊದಲ್ಗೊಂಡು ರಾಷ್ಟ್ರೀಯ ಭಾವೈಕ್ಯತೆಗೆ ಅವಶ್ಯಕವಾದ ಗುಣಗಳನ್ನು ಬಾಲ್ಯದಿಂದಲೇ ಮಕ್ಕಳಲ್ಲಿ ಉತ್ತು ಬಿತ್ತಬೇಕು. ಅಂದರೆ ಮಾತ್ರ ಮುಂದೆ ಸತ್ಫಲ ತಾನೇ ತಾನಾಗಿ ದೊರೆಯುವುದು.

ಮೇಲೆ ಹೇಳಿರುವಂತೆ, ಕೌಟುಂಬಿಕ ಸೌಹಾರ್ದತೆಗೆ, ಸಾಮಾಜಿಕ ಸ್ವಾಸ್ಥ್ಯಕ್ಕೆ, ರಾಷ್ಟ್ರದ ಏಳ್ಗೆಗೆ ಸಹಾಯಕವಾಗುವ ಗುಣಗಳು ಪ್ರತಿಯೊಬ್ಬ ವ್ಯಕ್ತಿಯಲ್ಲಿಯೂ ಇರಬೇಕು. ಹೀಗೆ ಇರಬೇಕಾದರೆ, ವ್ಯಕ್ತಿತ್ವವು ರೂಪುಗೊಳ್ಳುವ ಕಾಲದಲ್ಲಿಯೇ ಎಂದರೆ ಬಾಲ್ಯಾವಸ್ಥೆಯಲ್ಲಿಯೇ (ಹದಿ ವಯಸ್ಸು ಮುಗಿಯುವದರೊಳಗೆ)ಅಂತಹ ಗುಣಗಳ ಮಹತ್ವವನ್ನು ಮಕ್ಕಳು ತಿಳಿದುಕೊಳ್ಳುವಂತೆ, ಅವುಗಳನ್ನು ಮೈಗೂಡಿಸಿಕೊಳ್ಳುವಂತೆ ಹಿರಿಯರು ಲಕ್ಷ್ಯ ಕೊಡಬೇಕು. ಮನೆಯಲ್ಲಿ ಪಾಲಕರು, ಶಾಲೆಯಲ್ಲಿ ಶಿಕ್ಷಕರು ಈ ದಿಸೆಯಲ್ಲಿ ಗಮನ ಹರಿಸಿದರೆ ಇದು ಸಾಧ್ಯ; ಅವಶ್ಯಕ.

ಈಗಿನ ಶಿಕ್ಷಣ ವ್ಯವಸ್ಥೆಯನ್ನು ಗಮನಿಸಿದರೆ, ಮಕ್ಕಳು ಮೌಲ್ಯಗಳನ್ನು ತಮ್ಮಲ್ಲಿ ಅಳವಡಿಸಿಕೊಳ್ಳಲು ಸಹಾಯಕವಾಗುವ ಪರಿಸ್ಥಿತಿಯೇ ಇಲ್ಲವಾಗಿದೆ. ಶಾಲೆಯಲ್ಲಿ ಹೊರಲಾರದಷ್ಟು ವಿಷಯಗಳು, ಅತ್ಯಾಸೆಯ ಪಠ್ಯಕ್ರಮ, ಮಕ್ಕಳು ವಿಷಯಸಂಗ್ರಹಣೆಯ ಕಡೆ ಮಾತ್ರ ಲಕ್ಷ್ಯವಹಿಸುವಂತೆ ಮಾಡಿವೆ. ಬೇರೆಡೆ ವಿಚಾರ ಮಾಡಲೂ ಸಹ ಅವರಿಗೆ ಸಾಧ್ಯವಿಲ್ಲದ ಪರಿಸ್ಥಿತಿ ಉಂಟಾಗಿದೆ. ಅವರು ಮುಂದೆ ಆರಿಸಿಕೊಳ್ಳಬೇಕಾದ ಕೋರ್ಸು, ಪಡೆಯುವ ಉದ್ಯೋಗವು ಅವರು ಪಡೆಯುವ

ಅಂಕಗಳನ್ನು ಆಧರಿಸಿರುವುದರಿಂದ, ತಮ್ಮ ಆಕಾಂಕ್ಷೆಗಳು ಈಡೇರಲು ನೂರಕ್ಕೆ ನೂರು ಅಂಕ ಗಳಿಸುವ ಪ್ರಯತ್ನಕ್ಕೆ ಅವರ ಶ್ರಮ, ಬುದ್ಧಿ, ಸಮಯವೆಲ್ಲ ವೆಚ್ಚವಾಗುತ್ತಿದೆ. ಶಾಲೆಯಲ್ಲಿ ಶಿಕ್ಷಕರೂ, ಮನೆಯಲ್ಲಿ ಪಾಲಕರೂ, ಹೆಚ್ಚೆಚ್ಚು ಅಂಕ ಗಳಿಸಿ, ಪರೀಕ್ಷೆ ಪಾಸು ಮಾಡುವ ಸಲುವಾಗಿ ಮಕ್ಕಳ ಮೇಲೆ ಒತ್ತಡ ಹೇರುತ್ತಾರೆ. ಇದರಿಂದ ವಿಷಯ ಸಂಗ್ರಹಣೆಗೆ ಪ್ರಾಮುಖ್ಯತೆ ದೊರೆತು, ಗಮನವೆಲ್ಲ ಅಂಕ ಗಳಿಸುವ ಕಡೆಗೇ ಕೇಂದ್ರೀಕೃತವಾಗುತ್ತಿದೆ. ಯೋಗ್ಯ ವ್ಯಕ್ತಿತ್ವ ರೂಪಿಸುವ ಕಡೆಗೆ ಯಾರ ಲಕ್ಷ್ಯವೂ ಇಲ್ಲವಾಗುತ್ತಿರುವುದು ಇಂದಿನ ದುಃಸ್ಥಿತಿಗೆ ಮೂಲ ಕಾರಣ. ಟಿ.ವಿ. ಮುಂತಾದ ಮಾಧ್ಯಮಗಳು ಮಕ್ಕಳು ಮಜಾ ಮಾಡುವ ಮನೋಭಾವ ಹೊಂದಲು ಪ್ರೇರಕಗಳಾಗಿ ಮಕ್ಕಳಲ್ಲಿ ಮೌಲ್ಯಗಳು ಕುಸಿಯುವಂತೆ ಎಸಗಿವೆ.

ಆದುದರಿಂದ ದುಷ್ಪರಿಣಾಮಗಳು ವಿಕೋಪಕ್ಕೆ ಹೋಗುವ ಮೊದಲೇ, ಮಕ್ಕಳಲ್ಲಿ ಉದಾತ್ತ ಗುಣಗಳು ಮೈಗೂಡಿಕೊಳ್ಳಲು ಶಾಲಾ ಅವಧಿಯಲ್ಲಿ ಪ್ರಯತ್ನಗಳು ಪ್ರಾರಂಭವಾಗಬೇಕು. ಮೌಲ್ಯಗಳ ಮಹತ್ತು ಅರಿವಾಗುವಂತಹ, ಅವುಗಳನ್ನು ಅಳವಡಿಸಿಕೊಳ್ಳಲು ಸಹಾಯಕವಾಗುವಂತಹ ನಾನಾ ಕಾರ್ಯಕ್ರಮಗಳನ್ನು ಶಾಲೆಯಲ್ಲಿ ಹಮ್ಮಿಕೊಳ್ಳಬೇಕು. ಈ ದಿಶೆಯಲ್ಲಿ, ಸಹಪಠ್ಯ ಚಟುವಟಿಕೆಗಳು ಬಹಳ ಪ್ರಯೋಜನಕಾರಿಗಳಾಗಿವೆ. ಈಗಿರುವ ಶಿಕ್ಷಣ ವ್ಯವಸ್ಥೆಯಲ್ಲಿಯೇ ಮೌಲ್ಯಗಳನ್ನು ಬಿತ್ತುವ ಕೆಲಸಗಳನ್ನು ಶಾಲೆಯಲ್ಲಿ ಕೈಗೊಳ್ಳುವುದು ಅವಶ್ಯಕ. ಇಲ್ಲದಿದ್ದಲ್ಲಿ ಬೇರೆಯಾದ ಪ್ರಯತ್ನಕ್ಕೆ ಮಾರ್ಗ ಬಹಳ ಕಡಿಮೆ.

ಶಾಲೆಯಲ್ಲಿ ಕೈಗೊಳ್ಳಬಹುದಾದ ಚಟುವಟಿಕೆಗಳಲ್ಲಿ ಉತ್ತಮ ಸಾಹಿತ್ಯದ ಮೂಲಕ ಮಕ್ಕಳಿಗೆ ಮಾರ್ಗದರ್ಶನ ಮಾಡುವುದು ಒಂದಾಗಿದೆ. ಕಥೆಗಳು ಮಕ್ಕಳಿಗೆ ಬಹಳ ಇಷ್ಟ. ಕಥಾ ಸಾಹಿತ್ಯ, ಮೌಲ್ಯವರ್ಧನೆಗೆ ಸಹಾಯಕ ಅಲ್ಲದೆ ಉದಾತ್ತ ಲೇಖನಗಳನ್ನೊಳಗೊಂಡ ಪುಸ್ತಕವನ್ನು ಓದಲೇಬೇಕಾಗುವಂತೆ ಮಾಡುವುದೂ ಮೌಲ್ಯಾಧಾರಿತ ವಿಷಯಗಳ ಮೇಲೆ ಲೇಖನ ಹಾಗೂ ಭಾಷಣ ಸ್ಪರ್ಧೆಗಳನ್ನೂ ಏರ್ಪಡಿಸುವುದೂ ಮತ್ತೊಂದು. ನಾಟಕವಾಡಿಸಿ, ಅದರಲ್ಲಿ ಮೌಲ್ಯಕ್ಕೆ ಜಯ ದೊರೆತು, ಅಪಮೌಲ್ಯ ಸೋತು ಹೋಗುವಂತೆ ಕಾಣಿಸುವುದೂ ಮಗದೊಂದು. ಪತ್ರಗಳ ರೂಪದಲ್ಲೂ ವಿಷಯಗಳು ಮನಂಬುಗುವಂತೆ ಮಾಡಬಹುದು. ಈ ಸಾಹಿತ್ಯವೆಲ್ಲ ಆಯಾ ವಯಸ್ಸಿನ ಮಕ್ಕಳಿಗೆ ಸೂಕ್ತವಾದ ಮಟ್ಟದಲ್ಲಿ ಬರೆದುದಾಗಿರಬೇಕು. ಈ ದೃಷ್ಟಿಯನ್ನು ಮನದಲ್ಲಿಟ್ಟುಕೊಂಡು ನಾನು ಪತ್ರ ರೂಪದಲ್ಲಿ ಮಕ್ಕಳು ಅಗತ್ಯವಾಗಿ ತಿಳಿಯಬೇಕಾದ ಜೀವನ ಮೌಲ್ಯಗಳನ್ನು ಬಿಂಬಿಸಲು, ಅವರಿಗೆ ಹಿಡಿಸಬಹುದಾದ ವಿಷಯಗಳನ್ನು ಆರಿಸಿ, ಸಾಧ್ಯವಾದಷ್ಟು ಮಟ್ಟಿಗೆ ಸರಳವಾದ ಭಾಷೆಯನ್ನು ಬಳಸಿ, ಈ ಪತ್ರ ಸಾಹಿತ್ಯ ರಚಿಸಿದ್ದೇನೆ. ಉದಾತ್ತ ವ್ಯಕ್ತಿಗಳ ಜೀವನದ ಉದಾತ್ತ ವಿಚಾರಗಳನ್ನು ಉದ್ಧರಿಸುವ ಮೂಲಕ, ಒಳ್ಳೆಯ

ವಿಚಾರಗಳನ್ನು ವಿಶದೀಕರಿಸಿ ಹೇಳುವ ಮೂಲಕ, ಪುಸ್ತಕದ ಆಧಾರದ ಮೂಲಕ ಸಣ್ಣ ಉತ್ತಮ ಮೌಲ್ಯಗಳ ಕಡೆ ಮಕ್ಕಳ ಗಮನ ಹರಿಯುವಂತೆ ಈ ಪತ್ರಗಳ ಮುಖೇನ ಮಾಡಲು ಪ್ರಯತ್ನಿಸಿರುವೆ. ಇಲ್ಲಿ ಹಿರಿಯ ಪ್ರಾಥಮಿಕದಿಂದ ಹಿಡಿದು ಹತ್ತು, ಹನ್ನೆರಡನೆಯ ತರಗತಿಯ ಮಕ್ಕಳನ್ನು ಗಮನದಲ್ಲಿ ಇಟ್ಟುಕೊಳ್ಳಲಾಗಿದೆ.

ಪತ್ರ ಬರೆಯುವಾಗ ಹೆಣ್ಣು-ಗಂಡು ಮಕ್ಕಳನ್ನು ಕೂಡಿಸಿ, ಸಂಬೋಧಿಸಬಹುದಾದ ಒಂದು ಸೂಕ್ತ ಶಬ್ದಕ್ಕೆ ಪ್ರಯತ್ನಿಸಿ, ಕೊನೆಗೆ ಹಿರಿಯರಿಗೆ ಕಿರಿಯರು ಎಷ್ಟೇ ದೊಡ್ಡವರಾದರೂ 'ಮಕ್ಕಳೇ' ಎಂಬ ಕಾರಣವನ್ನು ಮುಂದೆ ಮಾಡಿಕೊಂಡು 'ಪುಟ್ಟೂ' ಎಂದು ಪತ್ರ ಪ್ರಾರಂಭದಲ್ಲಿ ಸಂಬೋಧಿಸಿದ್ದೇನೆ. ಹುಡುಗ-ಹುಡುಗಿಯರಿಬ್ಬರಿಗೂ ಅನ್ವಯವಾಗುವ ಸೂಕ್ತವಾದ ಇನ್ನೊಂದು ಶಬ್ದ ದೊರೆಯದ ಕಾರಣ ಹೀಗೆ ಮಾಡಬೇಕಾಯ್ತು. ಒಂಬತ್ತು, ಹತ್ತರಿಂದ ಹನ್ನೆರಡನೆಯ ವರ್ಗದ ವಿದ್ಯಾರ್ಥಿಗಳಿಗೆ 'ಪುಟ್ಟೂ' ಎಂದು ಕರೆಯುವುದು ಸೂಕ್ತವೇ ಎಂಬ ಆಲೋಚನೆ ಕೆಲವರಿಗೆ ಬಂದರೂ ಬರಬಹುದೆಂದು ಈ ವಿವರಣೆ ಕೊಟ್ಟಿರುವೆ.

ಪುಟ್ಟನಿಗೆ ಹಿತೈಷಿಯ ಪತ್ರಗಳು ಎಂಬ ಈ ಪುಸ್ತಕದಲ್ಲಿ ನಲವತ್ತು ಪತ್ರಗಳಿವೆ. ಅವುಗಳಲ್ಲಿ ಮಕ್ಕಳಿಗೆ ಉಪಯುಕ್ತವಾಗುವ, ಮಕ್ಕಳಿಗೆ ಮೌಲ್ಯಗಳನ್ನು ತಿಳಿಸುವ, ಆ ಬಗ್ಗೆ ಆಸಕ್ತಿ ಮೂಡಿಸುವ ವಿಷಯಗಳಿವೆ. ಹೇಳುವ ರೀತಿ, ಬಳಸಿರುವ ಭಾಷೆಯಲ್ಲಿ ಹದಿವಯಸ್ಸಿನ ಮಕ್ಕಳನ್ನು ಲಕ್ಷ್ಯಕ್ಕೆ ತೆಗೆದುಕೊಳ್ಳಲಾಗಿದೆ.

ಈ ಪತ್ರ ಪುಸ್ತಕವನ್ನು ಶಾಲೆಯಲ್ಲಿ ಉಪಯುಕ್ತವಾಗುವಂತೆ ಅವರಿಗೆ ಸೂಕ್ತ ಕಂಡ ರೀತಿಯಲ್ಲಿ ತಮಗೆ ಹೇಗೆ ಬೇಕೋ ಹಾಗೆ ಉಪಯೋಗಿಸಿಕೊಳ್ಳಬಹುದಾಗಿದೆ.

೧. ತರಗತಿಯ ಲೈಬ್ರರಿಯ ಪುಸ್ತಕವನ್ನಾಗಿಟ್ಟು ಮಕ್ಕಳು ಓದುವಂತೆ ಮಾಡಬಹುದು.

೨. ರೀಡಿಂಗ್ ರೂಮ್‌ನಲ್ಲಿ ಮಕ್ಕಳ ಗಮನವನ್ನು ಸೆಳೆಯುವಂತಹ ಜಾಗದಲ್ಲಿಟ್ಟು ಅವರೇ ಓದಲು ಪ್ರಯತ್ನಿಸುವಂತೆಯೂ ಮಾಡಬಹುದು.

೩. 'ನೀತಿ ಶಿಕ್ಷಣ'ದ ಅವಧಿಯಲ್ಲಿ ಅಥವಾ ಲೈಬ್ರರಿ ಪಿರಿಯಡ್‌ನಲ್ಲಿ ಪತ್ರಗಳನ್ನು ಓದಿ ಅಥವಾ ಓದಿಸಿ, ವಿವರಿಸಿ, ಪತ್ರದ ಮುಖ್ಯ ವಿಷಯಗಳೂ ಮಕ್ಕಳಿಗೆ ಮನದಟ್ಟಾಗುವಂತೆ ಮಾಡಬಹದು.

೪. ಬೆಳಗಿನ ಅಥವಾ ಸಂಜೆಯ ಶಾಲಾ ಅಸೆಂಬ್ಲಿಯಲ್ಲಿ ವಾರಕ್ಕೊಂದು ಪತ್ರ ಓದಿ, ವಿವರಣೆ ತಿಳಿಸಿ, ವರ್ಷದ ಕೊನೆಯಲ್ಲಿ ಆ ಬಗ್ಗೆ ಟೆಸ್ಟ್ ಇಡಬಹುದು. (ಆ ಬಗ್ಗೆ ವರ್ಷದ ಪ್ರಾರಂಭದಲ್ಲೇ ಸೂಚನೆ ಕೊಟ್ಟಿರಬೇಕು)

ಒಟ್ಟಿನಲ್ಲಿ ಮಕ್ಕಳಲ್ಲಿ ಇದನ್ನು ಓದಬೇಕೆಂಬ ಕುತೂಹಲ ಮೂಡಿಸಿ ಅವರು ಓದಿ ಪ್ರಯೋಜನ ಪಡೆದುಕೊಳ್ಳುವಂತೆ ಮಾಡುವುದು ಮುಖ್ಯ.

ಶಾಲೆಯಲ್ಲಿಲ್ಲದೆ ಮನೆಗಳಲ್ಲೂ ಪಾಲಕರು ಮಕ್ಕಳನ್ನು ಕೂರಿಸಿಕೊಂಡು ಬಿಡುವಿನ ವೇಳೆಯಲ್ಲಿ ಒಂದೊಂದೇ ಪತ್ರವನ್ನು ಓದಿ, ಅದರ ಮಹತ್ವ ಮನದಟ್ಟಾಗುವಂತೆ ವಿವರಿಸಿ ತಿಳಿಸಬಹುದು. ಚರ್ಚೆ ಮಾಡುವುದು ಸೂಕ್ತ.

ಋಷಿಕೇಶದ ಶ್ರೀ ಸ್ವಾಮಿ ಶಿವಾನಂದರ, ಜೀವನ ಮೌಲ್ಯ ಪ್ರೇರಕವಾದ ನುಡಿಮುತ್ತುಗಳನ್ನು ಅವರ ಶತಮಾನೋತ್ಸವ ಸಂದರ್ಭದಲ್ಲಿ Universal Companion ಎಂಬ ಸಣ್ಣ ಪುಸ್ತಕದಲ್ಲಿ ಕ್ರೋಢೀಕರಿಸಿದ್ದಾರೆ. ಅದನ್ನು ಓದಿದಾಗ ಅದರಲ್ಲಿರುವ ಅಮೂಲ್ಯವಾದ, ಮಾಣಿಕ್ಯದಂತಹ ಮಾತುಗಳು ಮಕ್ಕಳಲ್ಲಿ ರಾಷ್ಟ್ರೀಯ ಭಾವೈಕ್ಯತೆಯ ಭಾವವನ್ನು ಗಟ್ಟಿಗೊಳಿಸುವಲ್ಲಿ ಸಹಾಯಕವಾಗುತ್ತದೆಯಲ್ಲದೆ ಅನೇಕ ರೀತಿಯಿಂದ ತುಂಬ ಮಹತ್ತರವಾದುದೆಂದು ಮನಗಂಡು ನಮ್ಮ 'ಪುಟ್ಟ'ನಿಗೂ ಸ್ವಾಮಿ ಶಿವಾನಂದರ ಮಾರ್ಗದರ್ಶನ ದೊರೆಯಲಿ ಎಂಬಾಸೆಯಿಂದ ಇಂಗ್ಲಿಷಿನಲ್ಲಿದ್ದ ಆ ನುಡಿಮುತ್ತುಗಳನ್ನು ಕನ್ನಡಕ್ಕೆ ಸರಳಾನುವಾದ ಮಾಡಿ, ಈ ಪುಸ್ತಕದ ಕೊನೆಯಲ್ಲಿ ಸೇರಿಸಿದ್ದೇನೆ. ಆ ಮಹಾತ್ಮರ ವಾಣಿಯು ಈ ಪುಸ್ತಕದ ಉದ್ದೇಶಕ್ಕೆ ನೆರವಾಗುವುದಲ್ಲದೆ, ಪುಟ್ಟನ ಮನವನ್ನು ಅರಳಿಸುವುದರಲ್ಲಿ, ವ್ಯಕ್ತಿತ್ವವನ್ನು ಉನ್ನತಗೊಳಿಸುವಲ್ಲಿ ಸಂದೇಹವಿಲ್ಲ. Swamy Shivananda Centenary Celabration ಸಂದರ್ಭದಲ್ಲಿ ಉಚಿತವಾಗಿ ಕುಂಭಮೇಳದಲ್ಲಿ ಜನರಿಗೆ ಹಂಚಲು ಯಾರೋ ಗುಪ್ತದಾನಿಗಳು ಈ ಪುಸ್ತಿಕೆ ಅಚ್ಚು ಹಾಕಿಸಿದ್ದಾರೆ. ಆದುದರಿಂದ ನಾನು ಈ ಪುಸ್ತಕದಲ್ಲಿ ಈ ಬರಹಗಳನ್ನು ಸೇರಿಸಿದರೆ ಗುಪ್ತದಾನಿಗಳ ಇಚ್ಛೆಯೂ ಈಡೇರುವುದೆಂದು ಭಾವಿಸಿ, ಅವು ಮಕ್ಕಳಿಗೆ ದೊರೆಯಲೆಂಬ ಸದಾಶಯದಿಂದ ಇಲ್ಲಿ ಸೇರಿಸಿದ್ದೇನೆ. ಆ ಸದುದ್ದೇಶದ ಭಕ್ತರಿಗೆ ನನ್ನ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ಕರ್ನಾಟಕ ಮತ್ತು ಕೇರಳ ರಾಜ್ಯಗಳ ಉಚ್ಚ ನ್ಯಾಯಾಲಯಗಳ ಮುಖ್ಯ ನ್ಯಾಯಾಧೀಶರಾಗಿ ನಿವೃತ್ತರಾಗಿ, ಈಗ ಭಾರತದ ಮಾನವ ಹಕ್ಕುಗಳ ಆಯೋಗದ ಸದಸ್ಯರಾಗಿದ್ದು ಈಚೆಗೆ 'ರಾಷ್ಟ್ರೀಯ ನಾಗರಿಕ' ಪ್ರಶಸ್ತಿ ಪಡೆದು ಆದರ್ಶ ಜೀವನ ಮೌಲ್ಯಗಳ ಪ್ರತಿರೂಪದಂತಿರುವ ಮಾನ್ಯ ಜಸ್ಟೀಸ್ ಡಾ. ವಿ.ಎಸ್.ಮಳೀಮಠರನ್ನು ಈ ಪುಟ್ಟ ಪುಸ್ತಕಕ್ಕೆ ಮುನ್ನುಡಿ ಬರೆಯಬೇಕೆಂದು ಕೇಳಿಕೊಂಡಾಗ ಸಂತೋಷದಿಂದ ಒಪ್ಪಿಗೆ ನೀಡಿ, ತಮ್ಮ ಬಿಡುವಿಲ್ಲದ, ಜವಾಬ್ದಾರಿಯುತ ಕೆಲಸಗಳ ನಡುವೆಯೂ, ಬಿಡುವು ಮಾಡಿಕೊಂಡು ಅತೀ ಕಡಿಮೆ ಸಮಯದಲ್ಲಿ ಅತ್ಯಂತ ಮೌಲಿಕವಾದ, ತುಂಬು ಹೃದಯದ ಮೆಚ್ಚುಗೆಯ ಮಾತುಗಳನ್ನು ಬಹಳ ಸುಂದರ ಹಾಗೂ ಸರಳವಾದ ಶಬ್ದಗಳಲ್ಲಿ ಬರೆದು ಕೊಟ್ಟಿದ್ದಾರೆ. ಅವರಿಗೆ ನಾನು ಅತ್ಯಂತ

ಗೌರವಪೂರ್ವಕವಾದ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ. ಇಂಗ್ಲಿಷಿನಲ್ಲಿ ಡಾ. ಮಳಿಮಠರು ಬರೆದ ಮುನ್ನುಡಿಯನ್ನು ತುಂಬಾ ಸಹಜ ರೀತಿಯಲ್ಲಿ ಕನ್ನಡೀಕರಿಸಿ ಕೊಟ್ಟಿರುವ ಶ್ರೀಮತಿ ಪ್ರೇಮಾದೇವಿ ಮಳಿಮಠರಿಗೆ ತುಂಬು ಹೃದಯದ ಅಭಿವಂದನೆಗಳು.

ನಾನು ಬರೆದ ಪತ್ರಗಳನ್ನು ಆಗಿಂದಾಗ ಓದಿದಾಗ ಶಾಂತವಾಗಿ ಆಲಿಸಿ ಪ್ರೋತ್ಸಾಹಿಸಿದ, ಇದು ಅಚ್ಚಿನ ಮನೆಗೆ ಹೋಗಲು, ಪ್ರೂಫ್ ತಿದ್ದಲು, ಅಲ್ಲಲ್ಲಿ ಅಗತ್ಯ ಸೂಚನೆ ಕೊಟ್ಟು ಸಹಕರಿಸಿದ ಡಾ.ಎಸ್.ಎಂ.ವೃಷಭೇಂದ್ರ ಸ್ವಾಮಿಯವರಿಗೆ ನನ್ನ ಕೃತಜ್ಞತೆಗಳು ಸಲ್ಲಲೇ ಬೇಕು. ಮನೋಹರ ಮುದ್ರಣಾಲಯದವರು ತಾವು ಹೇಳಿದಂತೆ ಅತ್ಯಂತ ಕಡಿಮೆ ಅವಧಿಯಲ್ಲಿ ಪುಸ್ತಕವನ್ನು ಬಹು ಅಚ್ಚುಕಟ್ಟಾಗಿ, ಆಕರ್ಷಕವಾಗಿ ಮುದ್ರಿಸಿದ್ದಾರೆ. ಅವರಿಗೆ ಧನ್ಯವಾದಗಳು.

'ಶಿವಪ್ರಸಾದ' ಶ್ರೀಮತಿ ಲಲಿತಾಂಬ ವೃಷಭೇಂದ್ರಸ್ವಾಮಿ
ಕಲ್ಯಾಣನಗರ, ಧಾರವಾಡ

■

# ಪತ್ರಗಳ ಪರಿವಿಡಿ

■

## ೧. ಅಭ್ಯಾಸಕ್ಕೊಂದು ಸ್ವಯಂ ಯೋಜನೆ

ಪ್ರೀತಿಯ ಪುಟ್ಟಾ,

ಬೇಸಿಗೆಯ ರಜೆ ಮುಗಿದು ಶಾಲೆ ಪ್ರಾರಂಭವಾಯಿತಲ್ಲವೆ? ಈಗ ಮುಂದಿನ ತರಗತಿಗೆ ಬಂದಿರುವೆ. ದೊಡ್ಡ ಕ್ಲಾಸಿಗೆ ಹೋದಂತೆ ಜವಾಬ್ದಾರಿಯೂ ಹೆಚ್ಚುತ್ತದೆ. ಮಗೂ, ನಿನ್ನ ಗುರಿ ಸಾಧನೆಗೆ ಸತತ ಪ್ರಯತ್ನ ಅಗತ್ಯ. ಯಾವುದೇ ಕೆಲಸವನ್ನು ಯಶಸ್ವಿಯಾಗಿ ಮುಗಿಸಲು ಸಮಯ ಪ್ರಜ್ಞೆ ಅಗತ್ಯ.

ನೀನೀಗ ವಿದ್ಯಾರ್ಥಿದೆಸೆಯಲ್ಲಿರುವೆ. ಈ ಅವಧಿ ನಿನ್ನ ಭವಿಷ್ಯ ರೂಪಿಸುವುದರಲ್ಲಿ ಅತ್ಯಂತ ಮಹತ್ವದ ಪಾತ್ರವನ್ನು ವಹಿಸುತ್ತದೆ. ಈ ಕಾಲದ ಪ್ರತಿಯೊಂದು ಘಳಿಗೆಯನ್ನು ನೀನು ಸದುಪಯೋಗ ಮಾಡಿಕೊಳ್ಳಬೇಕು. ಕಳೆದುಹೋದ ಸಮಯ ಪುನಃ ಸಿಗುವುದಿಲ್ಲ. ಹಣ ಕಳೆದುಕೊಂಡರೆ ಪುನಃ ಗಳಿಸಿಕೊಳ್ಳಬಹುದು. ಆದರೆ ಸಮಯವನ್ನು ಮಾತ್ರ ಪುನಃ ಪಡೆಯಲು ಯಾರಿಂದಲೂ ಸಾಧ್ಯವಿಲ್ಲ.

ನೀನು ಕೆಲಸಗಳನ್ನು ವೇಳೆಗೆ ಸರಿಯಾಗಿ ಮಾಡುವುದನ್ನು ಮೊದಲು ಕಲಿಯಬೇಕು. ನಿನ್ನ ಕೆಲಸಗಳನ್ನು ಸಮರ್ಪಕವಾಗಿ ಮಾಡುವ, ಅಂದಂದಿನ ಕೆಲಸಗಳನ್ನು ಅಂದೇ ಮುಗಿಸುವ, ಮುಂದಕ್ಕೆ ಹಾಕದಂತಹ ರೂಢಿಯನ್ನು ಮೈಗೂಡಿಸಿಕೊಳ್ಳಬೇಕು. ಈ ಕಾಲದಲ್ಲಿ ಜ್ಞಾನಾರ್ಜನೆ ಮಹತ್ವದ್ದು. ನಿನ್ನ ಬಹಳಷ್ಟು ವೇಳೆ ಶಾಲೆಯಲ್ಲೇ ಕಳೆದು ಹೋಗುತ್ತದೆ. ನಿದ್ದೆಯನ್ನು ಹೊರತು ಪಡಿಸಿ, ನಿನಗೆ ಸಿಗುವ ವೇಳೆಯನ್ನು ಹೇಗೆ ಉಪಯೋಗಿಸಿಕೊಳ್ಳಬೇಕೆಂಬುದನ್ನು ಚೆನ್ನಾಗಿ ವಿಚಾರ ಮಾಡಿ ಯೋಜಿಸಿಕೊ. ಶಾಲೆಯಲ್ಲಿ ಕೊಟ್ಟ ಮನೆಗೆಲಸಕ್ಕೂ ಸಮಯವನ್ನು ಹಂಚಿಕೊ. ತಂದೆ–ತಾಯಿಗಳ ಕೆಲಸದಲ್ಲಿ ನೆರವು ನೀಡುವುದೂ ನಿನ್ನ ಕರ್ತವ್ಯ. ಅದಕ್ಕೂ ಕೊಂಚ ಸಮಯವನ್ನು ಉಳಿಸಿಕೋ. ಶಾಲೆಯ ವಿಷಯಗಳಲ್ಲದೆ ಜನರಲ್ ನಾಲೆಡ್ಜ್ ಕೂಡ ಬೇಕು. ಆದ್ದರಿಂದ ರಜೆಯ ದಿನಗಳಲಿ ಬೇರೆ ವಿಷಯಗಳನ್ನು ತಿಳಿದುಕೊಳ್ಳಲು ಉತ್ತಮ ಪುಸ್ತಕಗಳನ್ನು, ನಿಯತಕಾಲಿಕೆಗಳನ್ನು ಆರಿಸಿಟ್ಟುಕೋ. ದಿನವೂ ದಿನಪತ್ರಿಕೆ ಓದುವುದಕ್ಕಾಗಿ ಹದಿನೈದು ನಿಮಿಷಗಳನ್ನಾದರೂ ಉಪಯೋಗಿಸು. ಪತ್ರಿಕೆ ಓದುವ ಹವ್ಯಾಸ ಅಗತ್ಯ. ಆದರೆ ಅದಕ್ಕೆಂದೇ ಗಂಟೆಗಟ್ಟಲೆ ಕಳೆಯಬಾರದು. ಇಷ್ಟೆಲ್ಲಾ ಜವಾಬ್ದಾರಿಗಳನ್ನು ನಿರ್ವಹಿಸಬೇಕಾದರೆ. ನೀನು ನಿನ್ನದೇ

ಆದ ಒಂದು ವೇಳಾ ಪತ್ರಿಕೆಯನ್ನು ಮಾಡಿಕೊಂಡರೆ, ಮಾಡಬೇಕಾದುದನ್ನೆಲ್ಲಾ ಸಮರ್ಪಕವಾಗಿ ಮಾಡಲು ಸಾಧ್ಯವಾಗುತ್ತದೆ. ಇಲ್ಲದಿದ್ದಲ್ಲಿ ಒಂದು ವಿಷಯಕ್ಕೆ ಹೆಚ್ಚು ಮಹತ್ವ ಕೊಟ್ಟು ಇನ್ನೊಂದನ್ನು ಕಡೆಗಣಿಸಬೇಕಾಗುತ್ತದೆ. ಇದರಿಂದ ಕೆಲಸವನ್ನು ಅಸ್ತವ್ಯಸ್ತವಾಗಿ ಮಾಡುವ ಸ್ವಭಾವ ಬೆಳೆಯುತ್ತದೆ. ಆದುದರಿಂದ ಎಚ್ಚರವಾಗಿರು ಮಗೂ.

ಅಭ್ಯಾಸವನ್ನು ಮಾತ್ರ ಮುಂದಕ್ಕೆ ಹಾಕಬೇಡ. ಅನೇಕ ವಿಷಯಗಳನ್ನು, ಪ್ರತೀ ವಿಷಯದಲ್ಲೂ ಬಹಳಷ್ಟು ಅಂಶಗಳನ್ನು, ನೀನು ಪರೀಕ್ಷಾ ದೃಷ್ಟಿಯಿಂದ ತಿಳಿದುಕೊಳ್ಳಲೇಬೇಕು. ಈಗ ಓದದೇ ಮುಂದೂಡುತ್ತಾ ಹೋದರೆ, ಪರೀಕ್ಷೆಯ ಹೊತ್ತಿಗೆ, ಅಭ್ಯಾಸದ ಹೊರೆಯೇ ನಿನ್ನ ಮುಂದೆ ನಿಲ್ಲುತ್ತದೆ. ಆಗ ನಿನಗೆ ದಿಕ್ಕು ತೋಚದಂತಾಗಬಹುದು, ಗಾಬರಿಯಿಂದ ಹಗಲಿರುಳೂ ನಿದ್ದೆಗೆಟ್ಟು ಓದತೊಡಗುತ್ತಿ, ಸರಿಯಾಗಿ ನಿದ್ದೆ ಇಲ್ಲದೆ ಹಸಿವೆ ಸರಿಯಾಗಿ ಆಗುವುದಿಲ್ಲ. ಓದಲು ಆಗದಿದ್ದಾಗ ಮನಸ್ಸು ಆತಂಕಕ್ಕೆ ಒಳಗಾಗುತ್ತದೆ. ಆಗ ಓದಿದರೂ ಅರ್ಥವಾಗುವುದಿಲ್ಲ; ರಾತ್ರಿ ನಿದ್ದೆ ಹತ್ತುವುದಿಲ್ಲ. ಹೀಗಾಗಿ ಹೇಳಲಾರದಷು ಸಮಸ್ಯೆಗಳುಂಟಾಗಿ ಪರೀಕ್ಷೆಯಲ್ಲಿ ನೀನು ಚೆನ್ನಾಗಿ ಬರೆಯಲು ಸಾಧ್ಯವಾಗದಿರಬಹುದು. ಆಗ ನೀನಗೂ ದುಃಖ–ನಿರಾಸೆ. ನಿನ್ನ ತಂದೆ ತಾಯಿಗಳಿಗೂ ನೋವು, ನಿರಾಸೆಗಳುಂಟಾಗುತ್ತವೆ, ಅಲ್ಲವೆ?

ಆದುದರಿಂದ ಪುಟ್ಟೂ ಅಂದಂದಿನ ಅಭ್ಯಾಸವನ್ನು ಅಂದಂದೇ ಮಾಡು. ರಜೆಯ ದಿನಗಳಲ್ಲಿ ಓದಿದುದನ್ನು ಪುನರಾವರ್ತನೆ ಮಾಡುತ್ತಿರು. ಇಲ್ಲದಿದ್ದರೆ ಓದಿದ್ದು ಮರೆತು ಹೋಗಬಹುದು. ಪರೀಕ್ಷೆ ಇನ್ನೊಂದು ತಿಂಗಳಿದೆ ಎನ್ನುವವರೆಗೂ ಓದುತ್ತಾ, ಓದಿದುದನ್ನು ಪುನರಾವರ್ತನೆ ಮಾಡುತ್ತಾ ಇರಬೇಕು. ಓದುವುದು ಎಂದರೆ ಯಾಂತ್ರಿಕವಾಗಿ ಓದುವುದಲ್ಲ. ಸ್ವಲ್ಪವೇ ಓದಿದರೂ ಅದನ್ನು ಸರಿಯಾಗಿ ಅರ್ಥಮಾಡಿಕೊಂಡು ಓದಬೇಕು. ಆಯಾ ಅಧ್ಯಾಯ ಮುಗಿದ ಮೇಲೆ, ಆ ಅಧ್ಯಾಯದಲ್ಲಿ ಬರುವ ಮುಖ್ಯ ವಿಷಯಗಳನ್ನು ಮನನ ಮಾಡಿಕೊ. ಆ ಅಧ್ಯಾಯದಲ್ಲಿ ಬರಬಹುದಾದ ಪ್ರಶ್ನೆಗಳನ್ನು ಯೋಚಿಸಿಕೊಂಡು ಅವಕ್ಕೆ ಉತ್ತರ ಕಂಡು ಹಿಡಿದುಕೊ. ನಂತರವೇ ಮುಂದಿನ ಅಧ್ಯಾಯಕ್ಕೆ ಹೋಗಬೇಕು.

ಪರೀಕ್ಷೆ ಒಂದು ತಿಂಗಳಿದೆ ಎನ್ನುವಾಗ ಬೇರೊಂದು ರೀತಿಯ ವೇಳಾಪಟ್ಟಿ ಮಾಡಿಕೊಳ್ಳಬೇಕು. ಎಲ್ಲ ವಿಷಯಗಳಲ್ಲೂ ಹಿಂದಿನ ವರ್ಷಗಳ ಐದೈದು ಪ್ರಶ್ನೆ ಪತ್ರಿಕೆಗಳನ್ನು ಮಾಡಿಟ್ಟುಕೊಂಡು, ಅವಕ್ಕೆ ಉತ್ತರ ಬರೆಯುತ್ತಾ ಹೋಗಬೇಕು. ಯಾವುದಾದರೂ ವಿಷಯದಲ್ಲಿ ನಿನಗೆ ಉತ್ತರ ಸರಿಯಾಗಿ ಬರೆಯಲು ಆಗದಿದ್ದಲ್ಲಿ ಆ ಅಧ್ಯಾಯವನ್ನು ಪುನಃ ಓದಿ ಪರ್‌ಫೆಕ್ಟ್ ಆಗಿ ಅರ್ಥ ಮಾಡಿಕೋ.

ಈ ರೀತಿ ಅಭ್ಯಾಸ ಮಾಡುವ ರೂಢಿ ಬೆಳೆಸಿಕೊಂಡರೆ, ಪರೀಕ್ಷೆ ಹತ್ತಿರ

ಬಂದಾಗಲೂ ಆತಂಕವಾಗುವುದಿಲ್ಲ. ಒಮ್ಮೆ ನಾ ಹೇಳಿದಂತೆ ಮಾಡಿ ನೋಡು. ಆಗ ಅದರ ಬೆಲೆ ನಿನಗೇ ತಿಳಿಯುತ್ತದೆ. ಈ ಪತ್ರವನ್ನು ಆಗಾಗ ಓದುತ್ತಿರು. ಪರೀಕ್ಷೆ ಹತ್ತಿರ ಬಂದಾಗ ಈ ಪತ್ರದ ಸಂಗತಿಗಳು ನಿನಗೆ ಒಳ್ಳೆಯ ಮಾರ್ಗದರ್ಶನ ನೀಡುತ್ತವೆ. ಮರೆಯಬೇಡ.

ಇಂತು ನಿನ್ನ,
ಹಿತೈಷಿ,

■

## ೨. ತಾಳ್ಮೆ ಅವಶ್ಯಕ

ಪ್ರೀತಿಯ ಪುಟ್ಟಾ,

ಹಿಂದಿನ ಪತ್ರದಲ್ಲಿ ನಿನ್ನ ವಿದ್ಯಾಭ್ಯಾಸವನ್ನು ವ್ಯವಸ್ಥಿತವಾಗಿ ಹೇಗೆ ಮಾಡಿಕೊಳ್ಳಬೇಕು, ಸಮಯವನ್ನು ಹೇಗೆ ಸದುಪಯೋಗ ಪಡಿಸಿಕೊಳ್ಳಬೇಕೆಂದು ತಿಳಿಸಿದ್ದೆನಲ್ಲವೆ? ವಿದ್ಯಾವಂತರಾಗುವುದರ ಜೊತೆಗೆ ಪ್ರತಿಯೊಬ್ಬರೂ ಉತ್ತಮ ನಾಗರಿಕರಾಗಿ ಕುಟುಂಬಕ್ಕೆ, ಸಮಾಜಕ್ಕೆ, ದೇಶಕ್ಕೆ ಹಿತವುಂಟಾಗುವಂತೆ ಬದುಕಬೇಕು. ಹಾಗೆ ಬದುಕಿದಾಗ ಹುಟ್ಟಿದುದಕ್ಕೆ ಸಾರ್ಥಕವಾಗುತ್ತದೆ. ಚಿಕ್ಕ ವಯಸ್ಸಿನಿಂದಲೇ ಒಳ್ಳೆಯ ಸ್ವಭಾವಗಳನ್ನು ರೂಢಿ ಮಾಡಿಕೊಂಡು ನಮ್ಮಲ್ಲಿ ಅಳವಡಿಸಿಕೊಳ್ಳಬೇಕು. ಇತರರಿಗೆ ಒಳಿತನ್ನು ಮಾಡುವುದನ್ನು ಕಲಿಯಬೇಕು. ಕಡೆಯ ಪಕ್ಷ ಕೆಡುಕನ್ನಾದರೂ ಮಾಡದಂತೆ ಬದುಕಬೇಕು. ಹೀಗೆ ಒಳ್ಳೆಯವರಾಗಿ ಬಾಳಲು ಕೆಲವು ಒಳ್ಳೆಯ ಗುಣಗಳನ್ನು ನಮ್ಮಲ್ಲಿ ರೂಢಿಸಿಕೊಳ್ಳಬೇಕೆಂದು ಹೇಳಿದೆನಲ್ಲವೆ? ನಾವು ರೂಢಿಸಿಕೊಳ್ಳಬೇಕಾದ ಒಳ್ಳೆಯ ಗುಣಗಳಲ್ಲಿ 'ತಾಳ್ಮೆ'ಯೂ ಒಂದು. ತಾಳ್ಮೆ ಒಳ್ಳೆಯದು ನಿಜ. ಆದರೆ ಅದನ್ನು ಎಂತಹ ಸಂದರ್ಭದಲ್ಲಿ ತೋರಿಸಬೇಕು; ಎಲ್ಲಿ ತೋರಿಸ ಬಾರದು ಎಂಬ ವಿವೇಚನೆಯೂ ತಿಳಿದಿರಬೇಕು; ಏಕೆಂದರೆ ಎಷ್ಟೇ ಒಳ್ಳೆಯ ವಸ್ತುವಾದರೂ ಅದನ್ನು ಸರಿಯಾಗಿ ಬಳಸದಿದ್ದರೆ ಒಳಿತಾಗುವುದಿರಲಿ ಕೆಡುಕೇ ಆಗಬಹುದು. ಆದುದರಿಂದ ಎಚ್ಚರ ಅಗತ್ಯ.

ಕೆಲವು ಸಂದರ್ಭಗಳಲ್ಲಿ ತಾಳ್ಮೆ ಅತ್ಯವಶ್ಯಕ. ಅಂತಹ ಸಂದರ್ಭಗಳಲ್ಲಿ ತಾಳ್ಮೆವಹಿಸದಿದ್ದರೆ ತುಂಬಾ ಅನಾಹುತಗಳಾಗುವುದುಂಟು. ಎಂತಹ ಅನಾಹುತ ಆಗಬಹುದೆಂಬುದನ್ನು ತಿಳಿಸಲು ನಾನು ಚಿಕ್ಕವಳಿದ್ದಾಗ ನಮ್ಮ ತಾಯಿ ಒಂದು ಉತ್ತಮ ನೀತಿ ಕಥೆ ಹೇಳುತ್ತಿದ್ದರು. ಅದನ್ನೇ ನಾನೀಗ ನಿನಗೂ ಹೇಳುತ್ತೇನೆ ಕೇಳು:

ಒಂದೂರಿನಲ್ಲಿ ಒಬ್ಬ ರೈತ ಇದ್ದ. ಅವನಿಗೊಬ್ಬ ಹೆಂಡತಿ ಇದ್ದಳು. ಅವರು ಒಂದು ಬೆಕ್ಕು ಸಾಕಿದ್ದರು. ಅದನ್ನು ಬಹಳ ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದರು. ಅವರಿಗೊಂದು ಮಗುವಾಯ್ತು. ಒಂದು ಸಂಜೆ ರೈತನ ಹೆಂಡತಿ ಭಾವಿಗೆ ನೀರು ತರಲು ಹೋಗಬೇಕಾಯ್ತು. ಮಗುವಿಗೆ ನಿದ್ರೆ ಬಂದಿತ್ತು. ಮಗು ಒಂದನ್ನೇ ಮನೆಯಲ್ಲಿ ಬಿಟ್ಟು ಹೋಗಲು ಆಕೆಗೆ ಇಷ್ಟವಿರಲಿಲ್ಲ. ಮಲಗಿದ್ದಾಗ ತಾನಿಲ್ಲದಿದ್ದರೆ, ಬೆಕ್ಕು ಮಗುವನ್ನೆಲ್ಲದರೂ ಪರಚಿ ಗಾಯಗೊಳಿಸಿದರೆ ಎಂಬ ಭಯ. ಆದರೇನು ನೀರು ತರಲೇ ಬೇಕಿತ್ತು. ಸಾಕಿದ ಬೆಕ್ಕು ಮಗುವಿಗೇನೂ ಮಾಡಲಾರದು ಎಂಬ ಭರವಸೆ ಹೊತ್ತು ನೀರಿಗೆ ಹೋದಳು. ಅತ್ತ ಅವಳು ಹೋದಳು. ಇತ್ತ ಒಂದು ಹಾವು ಮೂಟೆಗಳ ಸಂದಿಯಿಂದ ಹರಿದು ಬಂದು ಮಗುವಿನ ಕಡೆಗೆ ಹೋಗುತ್ತಿತ್ತು. ಇದನ್ನು ನೋಡಿದ ಬೆಕ್ಕು ಓಡಿ ಹೋಗಿ ಹಾವನ್ನು ತಡೆಯಿತು. ಹಾವಿಗೂ ಬೆಕ್ಕಿಗೂ ಸೆಣಸಾಟ ಪ್ರಾರಂಭವಾಯ್ತು, ಬೆಕ್ಕು ತನ್ನ ಪ್ರಾಣದ ಹಂಗು ತೊರೆದು ಹಾವಿನೊಡನೆ ಹೋರಾಡಿ ಹಾವನ್ನು ತುಂಡು ತುಂಡು ಮಾಡಿ ಮಗುವನ್ನು ರಕ್ಷಿಸಿತು. ಈ ವಿಷಯವನ್ನು ತಾಯಿಗೆ ತಿಳಿಸುವ ಆಸೆ ಆ ಮೂಕಪ್ರಾಣಿಗೆ ಆಗಿರಬೇಕು. ಆದರೆ ಹೇಗೆ ತಾನೆ ತಿಳಿಸಲು ಸಾಧ್ಯ? ಬೆಕ್ಕಿನ ಬಾಯಿ ಕಾಲು ಎಲ್ಲ ರಕ್ತಸಿಕ್ತವಾಗಿತ್ತು. ಅದೇ ರೀತಿಯಲ್ಲಿ ಮುಂಬಾಗಿಲಿಗೆ ಬಂದು ಕುಳಿತುಕೊಂಡಿತು. ಮಗುವಿನ ತಾಯಿ ಬೆಕ್ಕಿಲ್ಲಾದರೂ ಮಗುವಿಗೆ ಏನಾದರೂ ಮಾಡಿದ್ದರೆ ಎಂಬ ಆತಂಕದಿಂದಲೆ ಬೇಗ ಬೇಗ ಕೊಡ ಹೊತ್ತುಕೊಂಡು ಬರುತ್ತಿದ್ದಳು. ಅವಳನ್ನು ನೋಡಿದ್ದೇ ಬೆಕ್ಕು ಮಿಯಾವ್, ಮಿಯಾವ್, ಎನ್ನುತ್ತಾ ತನ್ನ ಕಾಲುಗಳನ್ನು ಮುಂದೆಚಾಚಿತು. ಬೆಕ್ಕನ್ನು ನೋಡಿದಾಗ ಅದರ ಮೈ, ಕೈ ಬಾಯಿಯೆಲ್ಲಾ ರಕ್ತಮಯವಾಗಿತ್ತು. ಓಹೋ, ನಾನೂಹಿಸಿದಂತೆ ಈ ದುಷ್ಟ ಪ್ರಾಣಿ ನನ್ನ ಮಗುವಿಗೆ ಏನೋ ಹಾನಿಮಾಡಿದೆ ಎಂಬ ತೀರ್ಮಾನಕ್ಕೆ ಬಂದಳು. ಹಾಲು ಹಾಕಿ ಸಾಕಿದ್ದಕ್ಕೆ ನನ್ನ ಮಗುವನ್ನೇ ಕೊಂದಿತಲ್ಲಾ ಎಂದು ಸಿಟ್ಟಿನಿಂದ ತುಂಬಿದ ಕೊಡವನ್ನು ಬೆಕ್ಕಿನ ತಲೆಯ ಮೇಲೆ ಎಸೆದಳು. ಬೆಕ್ಕು ಕೂಡಲೇ ಸತ್ತು ಬಿದ್ದಿತು. ಕೊಡ ಎಸೆದವಳೇ ಮಗುವಿನ ಕಡೆ ಓಡಿದಳು. ಮಗು ಹಾಯಾಗಿ ನಿದ್ರಿಸುತ್ತಿತ್ತು. ಸಮೀಪದಲ್ಲೇ ಹಾವೊಂದು ಸತ್ತು ಬಿದ್ದಿತ್ತು. ರಕ್ತ ಚೆಲ್ಲಾಡಿತ್ತು. ಈ ದೃಶ್ಯ ನೋಡುತ್ತಲೇ ರೈತನ ಹೆಂಡತಿಗೆ ನಡೆದಿರಬಹುದಾದ ಸಂಗತಿ ಅರ್ಥವಾಯ್ತು. 'ನನ್ನ ಮಗುವಿನ ಪ್ರಾಣವನ್ನು ರಕ್ಷಿಸಿದ ಬೆಕ್ಕನ್ನು ಕೊಂದೆನಲ್ಲಾ ಎಂದು ಹಣೆ-ಹಣೆ ಗಟ್ಟಿಸಿಕೊಂಡಳು; ಗೋಳಾಡಿದಳು'. ಆದರೇನು ಸತ್ತ ಬೆಕ್ಕು ಬದುಕಿ ಬರುವಂತಿರಲಿಲ್ಲ.

ನೋಡು ಮರೀ, ಆಕೆಗೆ ತಾಳ್ಮೆ ಇಲ್ಲದುದರಿಂದ ಎಂತಹ ಅನಾಹುತವಾಯ್ತು? ಕೊಡ ಎಸೆಯುವ ಮೊದಲು ನಾಲ್ಕು ಹೆಜ್ಜೆ ಒಳಗೆ ಹೋಗಿದ್ದರೆ ಇಂತಹ ಅನ್ಯಾಯಕ್ಕೆ ಆಸ್ಪದವಾಗುತ್ತಿರಲಿಲ್ಲ. ಕಾಲ ಮಿಂಚಿ ಹೋದ ಮೇಲೆ, ಎಷ್ಟು

ಪಶ್ಚಾತ್ತಾಪಪಟ್ಟರೂ ಮಾಡಿದ ತಪ್ಪನ್ನು ಸರಿಪಡಿಸಲು ಸಾಧ್ಯವಿಲ್ಲ. ಆದುದರಿಂದ ದುಡುಕು ಸರಿಯಲ್ಲ ಎಲ್ಲವನ್ನೂ ತಾಳ್ಮೆಯಿಂದ ಪರೀಕ್ಷಿಸಿ ನಂತರ ನಿರ್ಣಯಕ್ಕೆ ಬರಬೇಕೆಂಬ ಪಾಠವನ್ನು ಈ ಕಥೆಯಿಂದ ನಾವು ಕಲಿತುಕೊಳ್ಳಬೇಕು. ಅದಕ್ಕೇ ಹಿರಿಯರು, 'ತಾಳಿದವ ಬಾಳಿಯಾನು' ಎನ್ನುತ್ತಾರೆ. ತಾಳ್ಮೆ ಇಲ್ಲದಿದ್ದರೆ, ದೊಡ್ಡ ದೊಡ್ಡ ಅನಾಹುತಗಳುಂಟಾಗಬಹುದು. ತಾಳ್ಮೆಯಿಂದ ವರ್ತಿಸಿದಾಗ, ಅನೇಕ ಪ್ರಯೋಜನಗಳೂ ಉಂಟಾಗುತ್ತದೆ. ಆದುದರಿಂದ 'ತಾಳ್ಮೆ'ಯನ್ನು ಪ್ರಯತ್ನಪಟ್ಟು ನಮ್ಮಲ್ಲಿ ಬೆಳೆಸಿಕೊಳ್ಳಬೇಕು ಎಂದು ನಿನಗೀಗ ತಿಳಿಯಿತಲ್ಲವೇ ಮಗು? ಇಷ್ಟಕ್ಕೆ ಈ ಪತ್ರ ಮುಗಿಸುತ್ತೇನೆ. ಮತ್ತೆ ಬರೆಯುವೆ.

ಇಂತು ನಿನ್ನ,
ಹಿತೈಷಿ.

■

## ೩. ಸತ್‌ಸಂಗ

ಪ್ರೀತಿಯ ಪುಟ್ಟಾ,

ಹಿಂದಿನ ಪತ್ರದಲ್ಲಿ, ನಿನಗೆ ತಾಳ್ಮೆಯ ಬಗೆಗೆ ತಿಳಿಸಿದ್ದೆನಲ್ಲವೆ? ಇನ್ನೂ ಅನೇಕ ಉತ್ತಮಗುಣಗಳನ್ನು ನಮ್ಮಲ್ಲಿ ಅಳವಡಿಸಿಕೊಂಡು ನಮ್ಮ ವ್ಯಕ್ತಿತ್ವವನ್ನು ಉತ್ತಮಿಸಿಕೊಳ್ಳಬೇಕು ಮಗೂ. ಒಳ್ಳೆಯ ಗುಣಗಳನ್ನು ಪಡೆಯಬೇಕಾದರೆ ಒಳ್ಳೆಯದನ್ನೇ ನೋಡಬೇಕು; ಒಳ್ಳೆಯದನ್ನೇ ಹೇಳಬೇಕು; ಅದಕ್ಕಾಗಿ ಒಳ್ಳೆಯವರೊಡನಾಟಬೇಕು. ಸತ್ಸಂಗ ಸದಾಕಾಲಕ್ಕೂ ಅಗತ್ಯ. ಅದರಲ್ಲೂ ವ್ಯಕ್ತಿತ್ವ ರೂಪುಗೊಳ್ಳುವ ಚಿಕ್ಕವಯಸ್ಸಿನಲ್ಲಂತೂ ಅದರ ಮಹತ್ತು ಇನ್ನೂ ಹೆಚ್ಚು. ನಾವು ಕೆಟ್ಟವರ ಸಂಗ ಮಾಡಿದರೆ ಕೆಟ್ಟ ಆಲೋಚನೆಗಳು ಬರುತ್ತವೆ. ಕೆಟ್ಟ ಆಲೋಚನೆಗಳಿಂದ ಕೆಟ್ಟ ಕೆಲಸ ಮಾಡುವಂತಾಗುತ್ತದೆ. ಅದೇ ರೀತಿ ಒಳ್ಳೆಯವರ ಸಂಗ ಮಾಡಿದರೆ ಒಳ್ಳೆಯ ಆಲೋಚನೆಗಳುಂಟಾಗುತ್ತವೆ. ಅಂತಹ ವ್ಯಕ್ತಿ ಒಳ್ಳೆಯ ಕೆಲಸಗಳನ್ನೇ ಮಾಡುತ್ತಾನೆ. ಒಳ್ಳೆಯವರ ಸ್ನೇಹದಿಂದ ಜ್ಞಾನಾಭಿವೃದ್ಧಿಯಾಗುತ್ತದೆ; ಸಂತೋಷ ಸಿಗುತ್ತದೆ. ಅದಕ್ಕಾಗಿಯೇ 'ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ' ಎಂದು ಹೇಳಿದ್ದಾರೆ. 'ಸಗಣಿಯವರೊಡನೆಯ ಸರಸಕ್ಕಿಂತ, ಗಂಧದವರೊಡನೆ ಗುದ್ದಾಟ ಲೇಸು.' ಆದ್ದರಿಂದ ನೀನು ಯಾವಾಗಲೂ ಸ್ನೇಹಿತರನ್ನು ಮಾಡಿಕೊಳ್ಳುವಾಗ ಎಚ್ಚರಿಕೆ ವಹಿಸು. ಎಂತಹವರಾದರೇನು ಆಟಕ್ಕೆ ಸಿಕ್ಕಿದರೆ ಸಾಕು ಎಂದು ಹೋಗಬೇಡ. ಆಟವಿಲ್ಲದಿದ್ದರೂ ಚಿಂತಿಲ್ಲ. ದುಷ್ಟ ಹುಡುಗರೊಡನೆ ಸೇರಬೇಡ.

ಕೆಟ್ಟ ಸಹವಾಸ ಮಾಡಿದರೆ ಏನಾಗುತ್ತದೆಂಬುದನ್ನು ಕೇಳು. ಒಮ್ಮೆ ನಮ್ಮ ಬಂಧುಗಳ ಒಬ್ಬ ಹುಡುಗನಿದ್ದ. ಅವನು ತುಂಬಾ ಒಳ್ಳೆಯವನು. ಸುಳ್ಳು-ಕಳ್ಳತನ, ಹೊಟ್ಟೆಯ ಕಿಚ್ಚು ಎಂಬುದೇ ಅವನಿಗೆ ಗೊತ್ತಿರಲಿಲ್ಲ. ಒಮ್ಮೆ ಅವರ ಪಕ್ಕದ ಮನೆಗೆ ಯಾರೋ ಬಾಡಿಗೆಗೆ ಬಂದರು. ಅವರಿಗೆ ಇವನ ವಯಸ್ಸಿನ ಒಬ್ಬ ಮಗನಿದ್ದ. ಇಬ್ಬರೂ ಜೊತೆಯಾಗಿ ಆಡುತ್ತಿದ್ದರು; ಶಾಲೆಗೆ ಹೋಗುತ್ತಿದ್ದರು. ಕೆಲವು ತಿಂಗಳಾದ ಮೇಲೆ ಆ ಹುಡುಗ ತನ್ನಮನೆಯಲ್ಲಿ ಅಪ್ಪನ ಜೇಬಿನಿಂದ ದುಡ್ಡು ಹಾರಿಸುವುದನ್ನು, ಪಕ್ಕದ ಮನೆಯವರ ತೋಟದಿಂದ ಪಪ್ಪಾಯಿ ಹಣ್ಣು ಕದಿಯುವುದನ್ನು, ಕದ್ದು ಚುಟ್ಟಾ ಸೇದುವುದನ್ನೂ ಕಲಿತ. ಇವನ ತಾಯಿ ಬಹಳ ಜಾಣಳಿದ್ದಳು. ಮಗನಲ್ಲಾದ ಬದಲಾವಣೆಯನ್ನು ಗಮನಿಸಿದಳು. ಅನೇಕ ಸಾರಿ ಮಗ ಸುಳ್ಳು ಹೇಳುವುದು ಇವಳ ಲಕ್ಷ್ಯಕ್ಕೆ ಬಂತು. ಆಗ ಅವನಿಗೆ ಗೊತ್ತಿಲ್ಲದಂತೆ ಅವನ ಚಲನ-ವಲನಗಳನ್ನು ಗಮನಿಸಿದಳು. ಮಗನ ದುಷ್ಟ ಬದಲಾವಣೆಗೆ ಹೊಸದಾಗಿ ಬಂದಿರುವ ಹುಡುಗನ ಸಹವಾಸವೇ ಕಾರಣವೆಂದು ಕಂಡುಕೊಂಡಳು. ಕೂಡಲೆ ಗಂಡನಿಗೆ ಹೇಳಿ, ಮನೆಯನ್ನೇ ಬದಲಾಯಿಸಿಬಿಟ್ಟಳು. ಮಗನಿಗೆ ಒಳ್ಳೆಯ ಸಹವಾಸ ದೊರೆಯುವಂತೆ ಮಾಡಿದಳು. ಸಕಾಲದಲ್ಲಿ ಸರಿಯಾದ ಬುದ್ಧಿವಾದ ಹೇಳಿ, ತಪ್ಪುಗಳನ್ನು ನಿವಾರಿಸಿದಳು. ನಂತರ ಮಗ ಸರಿದಾರಿಗೆ ಬಂದ. ಪುಣ್ಯಕ್ಕೆ ಅವರ ತಾಯಿ ಎಚ್ಚರಿಕೆ ವಹಿಸಿದುದರಿಂದ ಸರಿಹೋಯ್ತು. ಹಾಗಿಲ್ಲದಿದ್ದರೆ ಅವನು ದುಶ್ಚಟಕ್ಕೆ ಬಲಿಯಾಗಿ, ದುಷ್ಟನಾಗಿ ತನ್ನ ಭವಿಷ್ಯವನ್ನು ಕೆಡಿಸಿಕೊಳ್ಳುವುದಲ್ಲದೇ, ತಂದೆ-ತಾಯಿಗಳ ದುಃಖಕ್ಕೂ ಕಾರಣನಾಗುತ್ತಿದ್ದ. ಇತರರಿಗೂ ತೊಂದರೆ ಕೊಡುತ್ತಿದ್ದ. ದುಷ್ಟ ಜನರು ಸಮಾಜದಲ್ಲಿ ಹೆಚ್ಚಾದರೆ ಯಾರಿಗೂ ನೆಮ್ಮದಿ ಇರುವುದಿಲ್ಲ. ಅವರು ಇದ್ದಲ್ಲಿ ಗೊಂದಲ, ಜಗಳ, ದೊಂಬಿ ಇದ್ದೇ ಇರುತ್ತವೆ. ಆದ್ದರಿಂದ ಒಳ್ಳೆಯ ಪುಸ್ತಕಗಳನ್ನು ಓದುವ, ಒಳ್ಳೆಯ ಸಹವಾಸ ಮಾಡುವ, ಒಳ್ಳೆಯ ವಿಚಾರಗಳನ್ನು ಕೇಳುವ ಹವ್ಯಾಸ ಬೆಳೆಸಿಕೋ. ಒಳ್ಳೆಯದನ್ನೇ ಕೇಳು, ಒಳ್ಳೆಯದನ್ನೇ ನೋಡು, ಒಳ್ಳೆಯದನ್ನೇ ಆಡು ಎಂಬ ಗಾಂಧೀಜಿಯ ಸಿದ್ಧಾಂತವನ್ನು ಇಲ್ಲಿಗೆ ಈ ಪತ್ರ ಮುಗಿಸುತ್ತೇನೆ.

ಇಂತು ನಿನ್ನ,
ಹಿತೈಷಿ.

■

## ೪. ಸರಳ ಜೀವನ–ಮಿತವ್ಯಯ

ಪ್ರೀತಿಯ ಪುಟ್ಟೂ,

ಆಗಸ್ಟ್ ತಿಂಗಳಲ್ಲಿ ನಾವು ಸ್ವಾತಂತ್ರ್ಯ ದಿನೋತ್ಸವವನ್ನು ಆಚರಿಸಿದೆವು. ಈ ತಿಂಗಳಿಗೆ ನಮ್ಮ ಇತಿಹಾಸದಲ್ಲಿ ಬಹಳ ಮಹತ್ವವಿದೆ. ಪರಕೀಯರ ಆಡಳಿತ ಮುಗಿದು ಭಾರತೀಯರು ಸ್ವಾತಂತ್ರ್ಯ ಪಡೆದ ದಿನ ಈ ತಿಂಗಳಲ್ಲಿಯೆ ಬರುತ್ತದೆ ಅಲ್ಲವೆ ಮಗೂ? ಆಗಸ್ಟ್ ೧೫ ಎಂದರೆ, ಮೈ ರೋಮಾಂಚನಗೊಳ್ಳುತ್ತದೆ. ಮಹಾತ್ಮ ಗಾಂಧೀಜಿ 'ಅಹಿಂಸೆ' ಎಂಬ ಅಸ್ತ್ರ ಹಿಡಿದು, ಭಾರತೀಯರನ್ನು ಬಡಿದೆಬ್ಬಿಸಿ, ಸತ್ಯಾಗ್ರಹದ ಮೂಲಕ, ದೇಶಕ್ಕೆ ಸ್ವಾತಂತ್ರ್ಯವನ್ನು ೧೯೪೭ ಆಗಸ್ಟ್ ೧೫ ರಂದು ತಂದುಕೊಟ್ಟರು.

ಈಗ ನಮ್ಮ ದೇಶಕ್ಕೆ ನಾವೇ ಒಡೆಯರು. ಪ್ರಜಾಪ್ರಭುತ್ವ ಪದ್ಧತಿಯಲ್ಲಿ ಆಡಳಿತ ನಡೆಯುತ್ತಿದೆ. ದೇಶ ಪ್ರಗತಿ ಹೊಂದುತ್ತಿದೆ. ಆದರೇನು? ಇಂದಿಗೂ ಲೆಕ್ಕವಿಲ್ಲದಷ್ಟು ಬಡಜನರಿದ್ದಾರೆ. ಬಡವರಿಗೆ ಉಣ್ಣಲಿದ್ದರೆ ಉಡಲಿಲ್ಲ, ಉಡಲಿದ್ದರೆ ಉಣ್ಣಲಿಲ್ಲ. ಎರಡೂ ಇಲ್ಲದವರೂ ಬೇಕಾದಷ್ಟು ಮಂದಿ. ಹೊಟ್ಟೆ–ಬಟ್ಟೆಗಿಲ್ಲದ ಬಡವರನ್ನು ನೋಡಿದರೂ ನಮ್ಮಂತಹವರಿಗೆ ಏನೂ ಅನ್ನಿಸುವುದೇ ಇಲ್ಲ. ಆದರೆ ನಮ್ಮೆಲ್ಲರ 'ಬಾಪೂ' ಎನ್ನಿಸಿದ್ದ ಮಹಾತ್ಮ ಗಾಂಧೀಜಿಯವರಿಗೆ, 'ನಮ್ಮ ದೇಶದ ಅನೇಕರು ಉಪವಾಸ ಸಾಯುತ್ತಿರುವಾಗ, ಮೈ ಮುಚ್ಚಲೂ ಸಾಕಷ್ಟು ಬಟ್ಟೆ ಇಲ್ಲದೆ ಒದ್ದಾಡುತ್ತಿರುವಾಗ ನಾವು ಉಂಡುಟ್ಟು ಸುಖವಾಗಿ ಮೆರೆಯುವುದು ಅಪರಾಧ' ಎನ್ನಿಸಿತು. 'ನಮ್ಮಂತೆಯೇ ಈ ಬಡದೇಶದಲ್ಲಿ ಹುಟ್ಟಿದ ಅನೇಕರು ಬಡತನದ ಬೇಗೆಯಲ್ಲಿ ಬೇಯುತ್ತಿರುವಾಗ ನಾನು ಮಾತ್ರ ಎಲ್ಲವನ್ನೂ ಅನುಭವಿಸಲೇ? ಎಂದು ಅವರು ತಮ್ಮ ಊಟಕ್ಕೆ ಕೇವಲ ಸೇಂಗಾ ಹಾಗೂ ಆಡಿನ ಹಾಲನ್ನು ಉಪಯೋಗಿಸುತ್ತಿದ್ದರು. ಉಡಲು ಎರಡು ತುಂಡು ಬಟ್ಟೆ (ಒಂದು ಸೊಂಟಕ್ಕೆ ಕಟ್ಟಿಕೊಳ್ಳಲು ಮತ್ತೊಂದನ್ನು ಮೈಮೇಲೆ ಹೊದ್ದುಕೊಳ್ಳಲು) ಮಾತ್ರ ಹಾಕಿಕೊಳ್ಳುತ್ತಿದ್ದರು. ಆಗ ನಮ್ಮಲ್ಲಿ ಬಟ್ಟೆಯ ಮಿಲ್ಲುಗಳಿರಲಿಲ್ಲ. ಮಿಲ್ಲು ಬಟ್ಟೆಯನ್ನು ಪರದೇಶದಿಂದ ಕೊಳ್ಳಬೇಕಾಗುತ್ತಿತ್ತು. ಹಾಗೆ ಕೊಂಡರೆ, ನಾವು ಕೊಟ್ಟ ಹಣ ಪರದೇಶಿಯರ ಕೈ ಸೇರಿ, ನಮ್ಮ ದೇಶೀಯರ ಕೈ ಬರಿದಾಗುತ್ತಿತ್ತು. ಆದುದರಿಂದ ದೇಶೀಯರ ಕೈಮಗ್ಗದಲ್ಲಿ ತಯಾರಾದ ಖಾದಿ ಬಟ್ಟೆಯನ್ನಷ್ಟೇ ಅವರು ಧರಿಸುತ್ತಿದ್ದರು. ನೋಡು, ಅವರ ಕಟ್ಟಾ ಅನುಯಾಯಿಗಳಲ್ಲಿ ಲಾಲ್‌ಬಹಾದ್ದೂರ್ ಶಾಸ್ತ್ರಿಯವರು ಪ್ರಮುಖರು. ಅವರೂ ಸಹ ಗಾಂಧೀಜಿಯವರಂತೆ ಬಹಳಷ್ಟು ಸರಳ ಜೀವಿಗಳಾಗಿದ್ದರು. ಗಾಂಧೀಜಿಯವರೊಡನೆ ದೇಶದ ಸ್ವಾತಂತ್ರ್ಯಕ್ಕಾಗಿ ಬಹಳ

ದುಡಿದವರು. ಭಾರತ ಸ್ವತಂತ್ರವಾದ ಮೇಲೆ ಮಂತ್ರಿಗಳಾದರು; ಪ್ರಧಾನ ಮಂತ್ರಿಯೂ ಆದರು. ಆಗಲೂ ಅವರು ತಮ್ಮ ಸರಳತನ ಬಿಡಲಿಲ್ಲ. ಬಡವರನ್ನು ಮರೆಯಲಿಲ್ಲ. ಬಡತನದ ಕಷ್ಟಗಳೇನು ಎಂದು ಸ್ವತಃ ಅನುಭವಿಸಿ ಅರಿತಿದ್ದ ಅವರು ತಮ್ಮ ಆಡಳಿತ ಕಾಲದಲ್ಲಿ ಬಡವರ ಕಷ್ಟ ನಿವಾರಣೆಗಾಗಿ ಸದಾ ಆಲೋಚಿಸುತ್ತಿದ್ದರು. ಅವರ ಸ್ಥಿತಿಗತಿಗಳನ್ನು ಸುಧಾರಿಸಲು ಅನೇಕ ಯೋಜನೆಗಳನ್ನು ಕೈಕೊಂಡರು. ಅವರು ವಾರದಲ್ಲಿ ಒಂದು ಹೊತ್ತು ಊಟ ಮಾಡುತ್ತಿರಲಿಲ್ಲ. ಇದರಿಂದ ಜನತೆಗೆ ಅಂತಹ ಪ್ರಯೋಜನವಾಗುವುದಿಲ್ಲವೆನ್ನಿಸಿ, ಇಡೀ ದೇಶಬಾಂಧವರಿಗೆ, ವಾರದಲ್ಲಿ ಒಂದು ಹೊತ್ತು ಉಪವಾಸವಿದ್ದು ದೇಶದ ಬಡಜನತೆಗೆ ಒಂದು ತುತ್ತು ಅನ್ನ ಪಡೆಯಲು ಸಹಾಯವಾಗಿರಿ ಎಂದು ದೇಶಕ್ಕೆ ಕರೆ ಇತ್ತರು. ಸತ್ಯನಿಷ್ಠರೂ, ನುಡಿದಂತೆ ನಡೆಯುವವರೂ ಆಗಿದ್ದ ಶ್ರೀ ಲಾಲ್‌ಬಹದ್ದೂರ ಶಾಸ್ತ್ರಿಯವರ ಕರೆಗೆ ಇಡೀ ದೇಶವೇ ಮನ್ನಣೆ ನೀಡಿತೆಂದು ಹೇಳಬೇಕು. ಬಹಳಷ್ಟು ಜನರು ಪ್ರತಿ ಸೋಮವಾರ ಒಂದು ಹೊತ್ತು ಉಪವಾಸವಿರುವ ವ್ರತ ತೊಟ್ಟರು. ಅವರ ಮಾತಿಗೆ ಗೌರವವಿತ್ತರು. ಏಕೆಂದರೆ ಅವರು, ಇತರರಿಗೆ ಏನು ಮಾಡಿ ಎಂದು ಹೇಳುತ್ತಿದ್ದರೋ ಅದನ್ನು ತಾವೇ ಮೊದಲು ಮಾಡಿ ತೋರಿಸುತ್ತಿದ್ದರು. ಬೇರೆಯವರಿಗಷ್ಟೇ ಉಪದೇಶ ಮಾಡುತ್ತಿರಲಿಲ್ಲ.

ಮಗೂ, ಈ ವಿಷಯವನ್ನು ನಿನಗೆ ಏಕೆ ಬರೆಯುತ್ತಿದ್ದೇನೆ ಗೊತ್ತೆ? ನಾವು ಸ್ವಾತಂತ್ರ್ಯ ಪಡೆದು ಅರ್ಧಶತಮಾನ ಕಳೆದಿದೆ. ಆದರೂ ನಮಗೆ ಬಡತನವನ್ನು ಹೋಗಲಾಡಿಸಿಕೊಳ್ಳಲಾಗಿಲ್ಲ. ದಿನದಿಂದ ದಿನಕ್ಕೆ ದೇಶ ಸಾಲದಲ್ಲಿ ಮುಳುಗುತ್ತಿದೆ. ಬಡವ ಅತೀ ಬಡವನಾಗುತ್ತಿದ್ದಾನೆ. ಜೀವನಾವಶ್ಯಕ ವಸ್ತುಗಳು ಬೆಲೆ ಗಗನಕ್ಕೆ ಏರುತ್ತಿದೆ. ಸಾಲದ ಹೊರೆ ಬಡ ಭಾರತೀಯನ ಬೆನ್ನು ಬಾಗುವಂತೆ ಮಾಡುತ್ತಿದೆ. ಇದೆಲ್ಲಾ ಏಕೆ? ಏಕೆ? ಇದಕ್ಕೆಲ್ಲ ಹಣವಿದ್ದವರ ದುಂದುಗಾರಿಕೆ, ವಿಲಾಸೀ ಮನೋಭಾವ ಕಾರಣ. ಹಾಸಿಗೆ ಇದ್ದಷ್ಟು ಕಾಲು ಚಾಚದೆ ಹಾಸಿಗೆಯ ಹೊರಕ್ಕೂ ಕಾಲು ಚಾಚುತ್ತಿರುವುದರಿಂದ, ನಾವು ನಮ್ಮ ಪ್ರಾಮಾಣಿಕ ದುಡಿಮೆಗೆ ತಕ್ಕಂತೆ ಬದುಕಬೇಕು. ಆದಾಯಕ್ಕಿಂತ ಹೆಚ್ಚು ಖರ್ಚು ಮಾಡಿದವರು ಸಾಲಗಾರರಾಗುತ್ತಾರೆ. ಅಥವಾ ಅನ್ಯಾಯದ ದುಡಿಮೆಯ ಮಾರ್ಗ ಹುಡುಕಿ ಕೊಳ್ಳುತ್ತಾರೆ. ಈ ವಿಷಯವನ್ನು ಮನಗಂಡು ಚಿಕ್ಕವಯಸ್ಸಿನಿಂದಲೇ ಹಿತ–ಮಿತವಾಗಿ ಬದುಕುವುದನ್ನು ಕಲಿತರೆ ದುಂದುಗಾರಿಕೆ ಮುಂದೆ ಬೆಳೆಯುವುದಿಲ್ಲ.

ಪ್ರತಿಯೊಬ್ಬರು ತಮ್ಮ ಆದಾಯ ಎಷ್ಟೇ ಇರಲಿ ಅದರ ಸ್ವಲ್ಪ ಭಾಗವನ್ನು ನಾಳೆಗಿರಲಿ ಎಂದು ತೆಗೆದಿಡಬೇಕು. ಹೀಗೆ ತೆಗೆದಿಟ್ಟ ಹಣ ಆಪತ್ಕಾಲದಲ್ಲಿ ಉಪಯೋಗಕ್ಕೆ ಬರುತ್ತದೆ. ಆಗ ಯಾರ ಮುಂದೂ ಕೈಯ್ಯೊಡ್ಡುವ ಸ್ಥಿತಿ ಬರುವುದಿಲ್ಲ.

ಅಸಹಾಯಕತೆಯಿಂದ ತೊಳಲಾಡಬೇಕಾಗುವುದೂ ಇಲ್ಲ. ನಮ್ಮ ಆದಾಯ ಸಾಕಷ್ಟು ಇದ್ದರೂ ದುಂದುಗಾರಿಕೆಯ ಸ್ವಭಾವ ಇದ್ದರೆ, ಸದಾ ಹಣದ ಕೊರತೆಯನ್ನನುಭವಿಸಬೇಕಾಗುತ್ತದೆ. ಸಾಲದಿಂದ ಮನೆ ಮಂದಿಯೆಲ್ಲಾ ದುಃಖಕ್ಕೆ ಗುರಿಯಾಗ ಬೇಕಗುತ್ತದೆ.

ದೇಶದ ಜನರೆಲ್ಲ ಸುಖ-ಸಂಪತ್ತಿನಿಂದ ಕೂಡಿದ್ದರೆ, ಅಂತಹ ರಾಷ್ಟ್ರ ಸಂಪದ್ಭರಿತ ರಾಷ್ಟ್ರ ಎನ್ನಿಸಿಕೊಳ್ಳುತ್ತದೆ. ಆ ರಾಷ್ಟ್ರ ಬೇರೆ ರಾಷ್ಟ್ರಗಳಿಂದ ಸಾಲಪಡೆಯ ಬೇಕಾವುದಿಲ್ಲ. ಆಗ ರಾಷ್ಟ್ರಕ್ಕೆ ಜಗತ್ತಿನಲ್ಲಿ ಗೌರವದ ಸ್ಥಾನ ದೊರೆಯುತ್ತದೆ. ಅಂತಹ ರಾಷ್ಟ್ರದ ಪ್ರಜೆಗಳಾಗಿರಲಿ ನಮಗೂ ಹೆಮ್ಮೆ ಅಲ್ಲವೆ ಪುಟ್ಟಾ? ಆದ್ದರಿಂದ ಸುಖೀ ಸಾಮ್ರಾಜ್ಯ ಕಟ್ಟಲು, ಸಂಪದ್ಭರಿತ ರಾಷ್ಟ್ರ ನಿರ್ಮಿಸಲು ಪ್ರತಿಯೊಬ್ಬ ಪ್ರಜೆಯೂ ಟೊಂಕಕಟ್ಟಿ ದುಡಿಯಬೇಕು. ಕಾರಣ ನಾವು ಪ್ರಾರಂಭದಿಂದಲೂ ರಾಷ್ಟ್ರೀಯ ಮನೋಭಾವ ಬೆಳೆಸಿಕೊಂಡು ಬದುಕಬೇಕು, ತಿಳಿಯಿತೆ?

ಪತ್ರ ದೊಡ್ಡದಾಯಿತು. ಆದರಾಗಲಿ, ಈ ವಿಚಾರಗಳೆಲ್ಲ ನೀನು ತಿಳಿದಿರುವುದು ಅವಶ್ಯಕ. ರಾಷ್ಟ್ರಪ್ರೇಮ ಬಹು ಮಹತ್ತರವಾದ ಅಂಶ. ರಾಷ್ಟ್ರವನ್ನು ತಾಯಿಯಂತೆ ಪ್ರೀತಿಸಬೇಕು. ಪುಟ್ಟಾ, ಮತ್ತೆ ಬರೆಯುತ್ತೇನೆ.

ಇಂತು ನಿನ್ನ
ಹಿತೈಷಿ.

■

## ೫. ಆದರ್ಶ ವ್ಯಕ್ತಿತ್ವ

ಪ್ರೀತಿಯ ಪುಟ್ಟೂ,

ನೀನು ಲಿಯೋ ಟಾಲ್‌ಸ್ಟಾಯ್ ಹೆಸರು ಕೇಳಿರಬೇಕಲ್ಲವೇ? ಅವನೊಬ್ಬ ಮಹಾತತ್ವಜ್ಞಾನಿ. ಅವನ ತತ್ವಬೋಧನೆಗಳು ಯಾವ ಧರ್ಮದವರು ಬೇಕಾದರೂ ಅನುಸರಿಸುವಂತಿವೆ. ಆತ ಮೇಧಾವಿಯಾದ ಜಿಜ್ಞಾಸು. ಅವನಿಗೆ ಜಗತ್ತಿನಲ್ಲಿರುವ ಅನೇಕ ಧರ್ಮಗಳನ್ನು ನೋಡಿ, ಇವುಗಳಲ್ಲಿ ಯಾವ ಧರ್ಮ ಸರಿಯಾದುದು ಎಂದು ತಿಳಿದುಕೊಳ್ಳಬೇಕೆಂಬ ಜಿಜ್ಞಾಸೆಯುಂಟಾಯಿತು. ಅದಕ್ಕಾಗಿ ಎಲ್ಲ ಧರ್ಮಗಳ ಬಗ್ಗೆ ಕೇಳಿದ; ಓದಿದ; ತಿಳಿದುಕೊಂಡ. ಆಗ ಅವನಿಗೆ ಎಲ್ಲ ಧರ್ಮಗಳಲ್ಲೂ ವಿರೋಧಾಭಾಸಗಳೂ, ಪವಾಡಗಳೂ, ಅಸಂಬದ್ಧತೆಗಳೂ, ಆಯಾ ಧರ್ಮವೇ ಹೆಚ್ಚು ಎಂಬ ಭಾವನೆಯೂ ಕಂಡವು. ಹಾಗಾಗಿ ಅವನು ಧರ್ಮಗಳ ಬಗ್ಗೆ

ಚಿಂತಿಸುವುದನ್ನು ಬಿಟ್ಟು, 'ಜೀವನದ ಅರ್ಥ ಏನು' ಎಂಬುದನ್ನು ತಿಳಿದುಕೊಳ್ಳಲು ಪ್ರಯತ್ನ ಮಾಡಿದ. ಈ ಪ್ರಯತ್ನವನ್ನು ಕೀರ್ತಿ ಪಡೆಯಲಾಗಲೀ, ಲಾಭ ಹೊಂದುವಾಸೆಯಿಂದಾಗಲೀ ಮಾಡಲಿಲ್ಲ. ಹೀಗೆಯೇ ಭಗವಾನ್ ಬುದ್ಧನೂ ಸಹ ಮನುಷ್ಯನನ್ನು ದುಃಖದಿಂದ ಪಾರುಮಾಡಬೇಕೆಂದು ಯೋಚಿಸಿದ. ಅದಕ್ಕಾಗಿ ರಾಜ್ಯ, ಕೋಶ, ಮಡದಿ, ಮಗ ಎಲ್ಲರನ್ನೂ ಬಿಟ್ಟು ದೂರಹೋಗಿ ಒಂಟಿ ಯಾಗಿ ಕುಳಿತು ತಪಸ್ಸು ಮಾಡಿದ. ಸತತವಾದ ತಪಸ್ಸು ಮತ್ತು ಚಿಂತನೆಯಿಂದ 'ಆಸೆಯೇ ದುಃಖಕ್ಕೆ ಮೂಲ' ಎಂಬ ಸತ್ಯವನ್ನು ಕಂಡುಹಿಡಿದ. ಇದನ್ನು ತಾನು ಮಾತ್ರ ತಿಳಿದುಕೊಂಡರೆ ಪ್ರಯೋಜನವಿಲ್ಲ; ಜನರೂ ಇದನ್ನು ತಿಳಿದುಕೊಂಡು ತಮ್ಮ ಜೀವನವನ್ನು ಸುಖಮಯವನ್ನಾಗಿ ಮಾಡಿಕೊಳ್ಳುವಂತೆ ಮಾಡಬೇಕೆಂದು ಬಯಸಿದ. ಅವರು ದುಃಖದಿಂದ ಪರಿತಪಿಸದಂತೆ ಸಹಾಯ ಮಾಡಬೇಕೆಂದು ಊರಿಂದೂರಿಗೆ ಸಂಚರಿಸಿ ತನ್ನ ಸಿದ್ಧಾಂತವನ್ನು ಜನರಿಗೆ ಬೋಧೆ ಮಾಡಿದ. ಇವನ ಉದ್ದೇಶದಲ್ಲೂ ಸಹ ಯಾವ ಸ್ವಾರ್ಥವಾಗಲೀ, ಲಾಭದ ಬಯಕೆಯಾಗಲೀ ಇರಲಿಲ್ಲ.

ಮಹಾನ್ ವ್ಯಕ್ತಿಗಳು ಸ್ವಂತಕ್ಕಾಗಿ ಚಿಂತಿಸುವುದಿಲ್ಲ. ಇಡೀ ಮಾನವ ಜನಾಂಗಕ್ಕೆ ಒಳಿತನ್ನು ಉಂಟುಮಾಡುವುದು ಅವರ ಗುರಿ. ಅದರ ಸಾಧನೆಗಾಗಿ ಏನೆಲ್ಲ ಕಷ್ಟ ಅನುಭವಿಸುತ್ತಾರೆ. ಸ್ವಂತ ಸುಖಗಳನ್ನು ತ್ಯಾಗ ಮಾಡುತ್ತಾರೆ. ಅಂತಹ ಗುಣಗಳಿಗಾಗಿಯೇ ಜನರು ಅವರನ್ನು ಮಹಾತ್ಮರೆನ್ನುತ್ತಾರೆ. ಮಹಾತ್ಮ ಬಸವೇಶ್ವರರು ಸಹ ಸಮಾಜದಲ್ಲಿ ಹಾಗೂ ಜನರ ಧರ್ಮಾಚರಣೆಗಳಲ್ಲಿ ಇದ್ದ ಲೋಪದೋಷಗಳನ್ನು ಹೋಗಲಾಡಿಸಬೇಕೆಂಬ ಸದುದ್ದೇಶದಿಂದ ತಮ್ಮ ಜೀವನದುದ್ದಕ್ಕೂ ಹೋರಾಡಿದರು. ಅನೇಕ ರೀತಿಯ ಪ್ರತಿಭಟನೆಗಳನ್ನು ಎದುರಿಸಿದರು. ನಾನಾ ರೀತಿಯ ಕಷ್ಟಗಳನ್ನು ಅನುಭವಿಸಬೇಕಾಯಿತು. ಆದರೂ ತಮ್ಮ ತತ್ವಗಳನ್ನು ಕೊನೆತನಕ ಬಿಡಲಿಲ್ಲ. ತಮ್ಮ ನಂಬಿಕೆಗಳಿಂದ ಕದಲಲಿಲ್ಲ. ಹಾಗಾಗಿ ಎಂಟು ನೂರು ವರ್ಷಗಳ ಹಿಂದೆಯೇ, ಇಂದಿನ ಪ್ರಗತಿಪರ ಕಾಲದಲ್ಲಿಯೂ ಸಾಧಿಸಲು ಕಷ್ಟವೆನ್ನಿಸಿರುವ ಸ್ತ್ರೀ ಸಮಾನತೆ, ಕಾಯಕದ ಮಹತ್ವ, ಬಡವ-ಬಲ್ಲಿದರಲ್ಲಿ ಸಮಾನತೆಯನ್ನು ಜಾರಿಯಲ್ಲಿ ತಂದರು; ಬಾಳಿ ತೋರಿಸಿದರು. ಅದಕ್ಕಾಗಿ ಅವರು ಬಹು ಕಷ್ಟ-ನಷ್ಟಗಳನ್ನು ಅನುಭವಿಸಬೇಕಾಯ್ತು. ಆದರೂ ಸುಧಾರಣೆಯ ಬೀಜವನ್ನು ಅಂದು ಬಿತ್ತಿದರು. ಇಂದು ಅದರ ಫಲ ದೊರೆಯುತ್ತಾ ಇದೆ. ಅಂತಹ ನಿಸ್ವಾರ್ಥಿಗಳ ದುಡಿತದ ಫಲವಾಗಿಯೇ ನಾವಿಂದು ಅನೇಕ ಸುಖ-ಸೌಲಭ್ಯಗಳನ್ನು ಅನುಭವಿಸುತ್ತಿದ್ದೇವೆ. ವಿಜ್ಞಾನಿಗಳು ಸಂಶೋಧನೆ ಮಾಡಿ, ಅನೇಕ ಹೊಸ ವಿಷಯಗಳನ್ನು ಆವಿಷ್ಕಾರ ಮಾಡಿದ್ದಾರೆ. ರೈಲು, ವಿಮಾನ, ವಿದ್ಯುತ್, ಟೆಲಿಫೋನ್, ಟಿ.ವಿ., ರೇಡಿಯೋ, ಕಂಪ್ಯೂಟರ ಮುಂತಾದವುಗಳು, ಅನೇಕ ವಿಜ್ಞಾನಿಗಳು ಪಟ್ಟ ಪರಿಶ್ರಮದ ಫಲಗಳು. ಆ ಫಲಗಳನ್ನು ನಾವು ಎಷ್ಟು ಮಜವಾಗಿ ಅನುಭವಿಸುತ್ತಿದ್ದೇವೆ, ಅಲ್ಲವೇ ಪುಟ್ಟಾ?

ಮನುಷ್ಯ ಕೇವಲ ವೈಜ್ಞಾನಿಕ ವ್ಯವಸ್ಥೆಗೆ ಹೊಂದಿಕೊಂಡರೆ ಸಾಲದು. ಅದರಿಂದ ದೊರೆತ ಅನುಕೂಲಗಳಿಂದ ಅವನು ಸುಖಲೋಲುಪತೆಯನ್ನು ಬೆಳೆಸಿಕೊಳ್ಳಬಾರದು. ಭೋಗದ ಜೀವನ ಮನುಷ್ಯನನ್ನು ಪ್ರಾಣಿಯ ಮಟ್ಟಕ್ಕೆ ಒಯ್ಯುತ್ತದೆ. ಭೋಗದ ಜೊತೆಗೆ ತ್ಯಾಗವೂ ಬೇಕು. ತ್ಯಾಗಮಯ ಭಾವನೆಗಳು ಉಂಟಾಗಲು ಉತ್ತಮ ಸಾಹಿತ್ಯಜಪಠನ, ಸತ್ಸಂಗ, ಗುರು ಹಿರಿಯರಲ್ಲಿ ನಮ್ರತೆ, ಕೃತಜ್ಞತಾ ಮನೋಭಾವಗಳನ್ನು ಮೇಳವಿಸಿಕೊಳ್ಳಬೇಕು. ಮಾನವೀಯತೆಯನ್ನು ಮೈಗೂಡಿಸಿಕೊಳ್ಳಬೇಕು. ಯಾರ ಕಾರಣದಿಂದ ನಮ್ಮ ಹಾಗೂ ನಮ್ಮ ಸಮಾಜದ ಇಂದಿನ ಜೀವನ ಸುಖಮಯವಾಗಿದೆಯೋ ಅವರನ್ನು ಕೃತಜ್ಞತೆಯಿಂದ ನೆನೆಯಬೇಕು. ನಾವೂ ಸಹ ಒಂದಲ್ಲ ಒಂದು ರೀತಿಯಿಂದ ಇತರರ ಹಿತಕ್ಕೆ ಅನುಕೂಲವಾಗುವಂತೆ ಬದುಕುವುದೇ ಮಹಾತ್ಮರಿಗೆ ನಾವು ತೋರಿಸಬಹುದಾದ ಕೃತಜ್ಞತೆ. ಒಳ್ಳೆಯವರಾಗಿ ಬದುಕುವುದೇ ನಮಗೆ ಉಪಕಾರ ಮಾಡಿದವರಿಗೆ ಕೃತಜ್ಞತೆ ಸಲ್ಲಿಸಿದಂತೆ. ಆದುದರಿಂದ ಒಳ್ಳೆಯ ವ್ಯಕ್ತಿಯಾಗಿ ಬಾಳಿ ಜೀವನ ಸಾರ್ಥಕ ಮಾಡಿಕೊಳ್ಳುವ ಗುರಿ ನಿನ್ನದಾಗಲಿ.

ಇಂತು ನಿನ್ನ
ಹಿತೈಷಿ.

■

## ೬. ರಾಷ್ಟ್ರಪ್ರೇಮ

ಪ್ರೀತಿಯ ಪುಟ್ಟೂ,

ರಾಷ್ಟ್ರದ ಪ್ರತಿಯೊಬ್ಬ ಪ್ರಜೆಯೂ ರಾಷ್ಟ್ರಕ್ಕೆ ನಿಷ್ಠನಾಗಿರಬೇಕೆಂಬ ವಿಷಯ ನಿನಗೂ ತಿಳಿದಿರಬೇಕು. ರಾಷ್ಟ್ರವಿದ್ದರೆ ಪ್ರಜೆಗಳು ಅಲ್ಲವೆ? ನಮ್ಮನ್ನೆಲ್ಲಾ ರಕ್ಷಿಸುವ ರಾಷ್ಟ್ರವನ್ನು ನಾವು ತಾಯಿಯನ್ನು ಪ್ರೀತಿಸುವಂತೆ ಪ್ರೀತಿಸಬೇಕು; ತಾಯಿಯನ್ನು ರಕ್ಷಿಸುವಂತೆ ರಕ್ಷಿಸಬೇಕು. ರಾಷ್ಟ್ರರಕ್ಷಣೆ ಪ್ರತಿಯೊಬ್ಬ ಪ್ರಜೆಯ ಕರ್ತವ್ಯ. ರಾಷ್ಟ್ರಕ್ಕಾಗಿ ಪ್ರಾಣಕೊಡಲೂ ಸಿದ್ಧರಾಗಿರಬೇಕು. ರಾಷ್ಟ್ರಕ್ಕೆ ಗಂಡಾಂತರ ಬಂದಾಗ, ಸರ್ಕಾರ ದೇಶದ ಪ್ರತಿಯೊಬ್ಬ ಯುವಕನೂ ಸೈನ್ಯಕ್ಕೆ ಸೇರಬೇಕೆಂದು ಕರೆ ಇತ್ತರೆ, ಹೋಗಲೇ ಬೇಕು. ಬೇಡ ಎಂದು ಹೇಳಲು ಈಗ ಸ್ವತಂತ್ರ ಇರುವಂತೆ ಆ ಸಂದರ್ಭದಲ್ಲಿ ಇರುವುದಿಲ್ಲ. ತಾಯಿ ಮತ್ತು ತಾಯ್ನಾಡು ಸ್ವರ್ಗಕ್ಕಿಂತ ಮಿಗಿಲು. ಈ ಅಂಶವನ್ನು ನೀನು ಹೃದಯದಲ್ಲಿ ಕೊರೆದಿಟ್ಟುಕೊ. ಯಾವ ಪುತ್ರನೂ ಮಾತೃದ್ರೋಹ ಬಗೆಯಬಾರದು; ಯಾವ ಪ್ರಜೆಯೂ ರಾಷ್ಟ್ರಕ್ಕೆ ದ್ರೋಹ ಮಾಡಬಾರದು.

ಪ್ರತಿಯೊಂದು ರಾಷ್ಟ್ರಕ್ಕೂ ಆದ ರಾಷ್ಟ್ರಗೀತೆ, ರಾಷ್ಟ್ರಭಾಷೆ, ರಾಷ್ಟ್ರಧ್ವಜ ಇರುತ್ತವೆ. ನಮ್ಮ ದೇಶಕ್ಕೆ 'ಜನಗಣಮನ' ಎಂಬ ರಾಷ್ಟ್ರಗೀತೆ ಇದೆ. ಆ ಗೀತೆಯನ್ನು ಪ್ರತಿಯೊಬ್ಬ ಪ್ರಜೆಯೂ ಹಾಡಲು ಕಲಿತಿರಬೇಕು. ಅದನ್ನು ಯಾರೇ ಹಾಡುತ್ತಿರಲಿ ಅದು ನಮಗೆ ಕೇಳಿಸುತ್ತಿದ್ದರೆ, ಎದ್ದು ನಿಂತು ಅದಕ್ಕೆ ಗೌರವ ಸಲ್ಲಿಸಬೇಕು. 'ಜನಗಣಮನ' ನಮ್ಮ ರಾಷ್ಟ್ರಗೀತೆಯಾಗಿದೆ. ಹಿಂದಿ ನಮ್ಮ ರಾಷ್ಟ್ರಭಾಷೆ. ಆದರೆ ಕೆಲವರು ಅದಕ್ಕೆ ಒಪ್ಪುತ್ತಿಲ್ಲ. ಇದು ಸರಿಯಲ್ಲ. ನಮ್ಮ ದೇಶದಲ್ಲಿ ಅನೇಕ ಭಾಷೆಗಳಿವೆ. ಆದರೆ ಆಳವಾಗಿ ವಿಚಾರ ಮಾಡಿ, ಯಾವ ಭಾಷೆಗಳಿಗಿಂತ ಹಿಂದಿಯು ರಾಷ್ಟ್ರಭಾಷೆಯಾಗಲು ಸಾಧ್ಯ ಎಂಬುದು ಎಂತಹವರಿಗಾದರೂ ಗೊತ್ತಾಗುತ್ತದೆ. ನಮ್ಮ ಮಾತೃಭಾಷೆ ನಮಗೆ ಪ್ರಿಯವಾದುದು. ನಿಜ, ಆದರೆ ರಾಷ್ಟ್ರದ ದೃಷ್ಟಿಯಿಂದ ಯೋಚಿಸಿದಾಗ ಎಲ್ಲರೂ ಹಿಂದಿಯನ್ನು ರಾಷ್ಟ್ರಭಾಷೆಯಾಗಿ ಒಪ್ಪಿಕೊಂಡು ಅದನ್ನು ಕಲಿಯುವುದು ಒಳ್ಳೆಯದು, ಅಂತರರಾಜ್ಯ ವಿಷಯಗಳಲ್ಲಿ, ರಾಷ್ಟ್ರೀಯ ಮಟ್ಟದ ವಿಷಯಗಳಲ್ಲಿ ಅದು ನಮ್ಮ ನೆರವಿಗೆ ಬರುತ್ತದೆ. ದೇಶಕ್ಕೊಂದು ರಾಷ್ಟ್ರಭಾಷೆ ಇಲ್ಲದಿದ್ದರೆ ತುಂಬಾ ನಾಚಿಕೆಗೇಡು. ನಮ್ಮ ದೇಶ ಸ್ವಾತಂತ್ರ್ಯ ಪಡೆದು ಅರ್ಧ ಶತಮಾನ ಗತಿಸಿದರೂ ನಾವಿನ್ನೂ ರಾಷ್ಟ್ರಭಾಷೆಯ ಬಗ್ಗೆ ಒಂದು ನಿರ್ಧಾರಕ್ಕೆ ಬಂದಿಲ್ಲದಿರುವುದು ನಿಜವಾಗಿಯೂ ವಿಷಾದದ ಸಂಗತಿ. ಇನ್ನು ರಾಷ್ಟ್ರಧ್ವಜ, ಬೇರೆ ದೇಶಗಳಲ್ಲಿ ನಮ್ಮ ದೇಶವನ್ನು ರಾಷ್ಟ್ರಧ್ವಜ ಪ್ರತಿನಿಧಿಸುತ್ತದೆ. ಅಂತರ ರಾಷ್ಟ್ರಕ್ಕೆ ಸಂಬಂಧಿಸಿದ ಯಾವುದೇ ಚಟುವಟಿಕೆಯಲ್ಲಿ ನಮ್ಮ ದೇಶ ಭಾಗವಹಿಸಿದರೆ ಅಲ್ಲಿ ನಮ್ಮ ಧ್ವಜ ಹಾರಾಡುತ್ತಿರುತ್ತದೆ. ನಮ್ಮ ರಾಷ್ಟ್ರದ ಧ್ವಜಕ್ಕೆ ಮೂರು ಬಣ್ಣಗಳಿವೆ. ಶೌರ್ಯದ ಗುರುತಾಗಿ ಕೇಸರಿ ಬಣ್ಣ, ಪರಿಶುದ್ಧತೆಯ ಕುರುಹಾಗಿ ಮಧ್ಯದಲ್ಲಿ ಬಿಳಿಯ ಬಣ್ಣ, ಮೂರನೆಯದಾಗಿ ಅಂದರೆ ಕೆಳಗಿರುವ ಬಣ್ಣ ಹಸಿರು. ಈ ಹಸಿರು ಸಮೃದ್ಧವಾಗಿ ಭೂಮಿಯ ಮೇಲೆ ಬೆಳೆದ ಪೈರು, ಮರ, ಗಿಡಗಳನ್ನು ಸೂಚಿಸುತ್ತದೆ. ಒಟ್ಟಿನಲ್ಲಿ ಹಸಿರು ಸಮೃದ್ಧಿಯ ಸಂಕೇತ. ಧ್ವಜದ ಮಧ್ಯದಲ್ಲಿ ಒಂದು ಚಕ್ರವಿದೆ ಗಮನಿಸಿದ್ದೀಯಾ ಪುಟ್ಟೂ, ಇದು ಅಶೋಕನ ಚಕ್ರದ ಗುರುತು. ಇದನ್ನೇಕೆ ಧ್ವಜದಲ್ಲಿ ಅಳವಡಿಸಿಕೊಂಡಿದ್ದಾರೆ ಗೊತ್ತೆ? ಅಶೋಕ ಚಕ್ರವರ್ತಿ ಪ್ರಜೆಗಳನ್ನು ಮಕ್ಕಳಂತೆ ಕಾಣುತ್ತಿದ್ದ. ಪ್ರಜೆಗಳ ಹಿತಕ್ಕಾಗಿ ಅನೇಕ ಕಾರ್ಯಗಳನ್ನು ಮಾಡಿದ ದೊರೆ. ಅವನ ಆಡಳಿತ ಕಾಲದಲ್ಲಿ ದೇಶ ಸುಖ-ಸಮೃದ್ಧಿಯಿಂದ ಕೂಡಿತ್ತು. ಜನ ನೆಮ್ಮದಿ, ತೃಪ್ತಿಗಳಿಂದ ಬದುಕುತ್ತಿದ್ದರು. ಈಗಿನ ನಮ್ಮ ದೇಶದ, ಅಂದರೆ ಜನರ ಸ್ಥಿತಿಯೂ ಅಂದಿನಂತೆ ಆಗಬೇಕೆಂಬುದು ಈ ಚಿನ್ಹೆಯ ಸಂಕೇತ ಹಾಗೂ ಉದ್ದೇಶ. ಆ ಚಕ್ರವನ್ನು ನೋಡುತ್ತಲೇ ಆ ಎಲ್ಲ ವಿಷಯಗಳೂ ನೆನಪಿಗೆ ಬಂದು, ಜನರಿಗೆ ತಮ್ಮ ಕರ್ತವ್ಯ ಪ್ರಜ್ಞೆ ಮೂಡಬೇಕು. ಅಲ್ಲದೆ ಚಕ್ರವೂ ಸದಾ ತಿರುಗುತ್ತಿರುತ್ತದೆಯಲ್ಲವೆ?

ಅದು ಪ್ರಗತಿಯ ಸಂಕೇತ. ನಮ್ಮ ದೇಶ ಸದಾ ಮುಂದುವರಿಯಬೇಕು; ಪ್ರಗತಿ ಹೊಂದಬೇಕೆಂಬ ಆಶಯವೂ ಇದರಲ್ಲಿ ಅಡಕವಾಗಿದೆ.

ಪುಟ್ಟೂ, ನಮ್ಮ ನಾಯಕರು ತುಂಬಾ ದೂರಾಲೋಚನೆಯಿಂದ ಇವುಗಳನ್ನು ಮಾಡಿದ್ದಾರೆ. ಅವರುಗಳ ಕನಸನ್ನು ನನಸಾಗಿ ಮಾಡುವುದು ಎಲ್ಲರ ಜವಾಬ್ದಾರಿ. ಎಲ್ಲರೊಳಗೆ ನೀನೂ ಒಬ್ಬ ಎಂಬುದನ್ನು ಮರೆಯಬೇಡ. ಕುಟುಂಬದ ಗೌರವವನ್ನು ಹೆಚ್ಚಿಸುವ ಬಗ್ಗೆ ಹೇಗೆ ಚಿಂತಿಸುತ್ತಾನೋ ಹಾಗೆಯೇ, ರಾಷ್ಟ್ರದ ಬಗ್ಗೆಯೂ ಚಿಂತಿಸಬೇಕು. ಕುಟುಂಬ ರಾಷ್ಟ್ರದ ಒಂದು ಅಂಶ. ಕುಟುಂಬದ ಹಿತವೇ ರಾಷ್ಟ್ರದ ಹಿತ; ರಾಷ್ಟ್ರದ ಹಿತವೇ ಕುಟುಂಬದ ಹಿತ. ಅನೇಕ ಕುಟುಂಬಗಳು ಸೇರಿ ಒಂದು ಸಮಾಜ. ಅನೇಕ ಸಮಾಜಗಳು ಸೇರಿ ಒಂದು ಊರು. ಅನೇಕ ಊರುಗಳು ಸೇರಿ ಒಂದು ರಾಜ್ಯ. ಅಂತಹ ರಾಜ್ಯಗಳೆಲ್ಲಾ ಸೇರಿಯೇ ಅಲ್ಲವೇ ರಾಷ್ಟ್ರವಾಗಿರುವುದು? ನಾವು ಬಾಲ್ಯದಿಂದಲೇ ಈ ಎಲ್ಲ ಅಂಶಗಳನ್ನೂ ಗಮನದಲ್ಲಿಟ್ಟುಕೊಂಡು ರಾಷ್ಟ್ರೀಯ ಭಾವನೆ ಬೆಳೆಸಿಕೊಳ್ಳಬೇಕು. ಇಲ್ಲದಿದ್ದಲ್ಲಿ, ಯಾವ್ಯಾವೋ ಸಣ್ಣ ಕಾರಣಗಳಿಗೆ, ಸ್ವಾರ್ಥದಿಂದ ರಾಷ್ಟ್ರವನ್ನು ಛಿದ್ರಗೊಳಿಸತಕ್ಕಂತಹ ಚಟುವಟಿಕೆಗಳಲ್ಲಿ ಭಾಗಿಯಾಗುವ, ಆ ರೀತಿಯೋಚಿಸುವ ಸ್ವಭಾವ ಬಂದು ಬಿಡುತ್ತದೆ. ಹಾಗಾಗಿ ಗಟ್ಟಿಯಾದ ರಾಷ್ಟ್ರೀಯ ಭಾವನೆಯನ್ನು ಚಿಕ್ಕಂದಿನಿಂದಲೆ ಬೆಳೆಸಿಕೊಂಡು ಗಟ್ಟಿಗೊಳಿಸಿಕೊಳ್ಳುತ್ತಾ ಹೋಗಬೇಕು. ಈ ಪತ್ರವನ್ನು ಪುನಃ ಓದು. ಆಗ ವಿಷಯಗಳು ತಿಳಿಯಾಗುತ್ತವೆ. ಈಗ ಸಾಕು. ಇನ್ನೊಮ್ಮೆ ಬರೆಯುವೆ.

ಇಂತು ನಿನ್ನ

ಹಿತೈಷಿ.

■

## ೭. ಮಿತ ಆಹಾರ

ಪ್ರೀತಿಯ ಪುಟ್ಟೂ

ನಾವು ಯಾವಾಗಲೂ ಮುಂಬರಬಹುದಾದ ಕಷ್ಟ-ಸುಖಗಳ ಬಗೆಗೆ ಯೋಚಿಸಿ, ಪೂರ್ವಸಿದ್ಧತೆ ಮಾಡಿಕೊಳ್ಳುವುದು ಒಳ್ಳೆಯದು. ಉದಾಹರಣೆಗೆ ಛಳಿಗಾಲ ಪ್ರಾರಂಭವಾದಾಗ ಬಹಳ ಮಕ್ಕಳು ಕೆಮ್ಮು ನೆಗಡಿಯಿಂದ ನರಳುತ್ತಾರೆ. ಇದು ಹವೆಯ ಬದಲಾವಣೆಯಿಂದ ಆಗುತ್ತದೆ. ಮಳೆಗಾಲ ಮುಗಿದು ಛಳಿಗಾಲ ಪ್ರಾರಂಭವಾಗಿ ಬದಲಾದ ಹವೆಗೆ ಹೋದುಕೊಳ್ಳುವಾಗ ಜಾಗರೂಕತೆ ವಹಿಸದಿದ್ದರೆ ಅದು ಆರೋಗ್ಯದ ಮೇಲೆ ಪರಿಣಾಮವಾಗುತ್ತದೆ. ಹೀಗಾಗುತ್ತದೆಯೆಂದು ನಮಗೆ ಮೊದಲೇ ಗೊತ್ತಿರುವುದರಿಂದ ಮುಂಜಾಗ್ರತೆ ವಹಿಸಿ ದುಷ್ಪರಿಣಾಮವನ್ನು ತಡೆಗಟ್ಟ

ಬಹುದು. ಬೆಚ್ಚಗಿನ ಉಡುಪು, ಬಿಸಿಯಾದ ಆಹಾರ, ಅಂಗಾಲು, ಕಿವಿ, ತಲೆಗೆ ಶೀತ ಬಡಿಯದಂತಹ ಎಚ್ಚರದಿಂದ, ಶೀತದ ತೊಂದರೆಗಳಿಂದ ತಪ್ಪಿಸಿಕೊಳ್ಳಬಹುದು. ರೋಗ ಬಂದುಮೇಲೆ ವಾಸಿಮಾಡಿಕೊಳ್ಳಲು ಪ್ರಯತ್ನಿಸುವುದಕ್ಕಿಂತ, ಬರದ ಹಾಗೆ ತಡೆಗಟ್ಟುವುದು ಜಾಣತನ.

'ಆರೋಗ್ಯವೇ ಭಾಗ್ಯ' ಎಂಬ ಮಾತನ್ನು ನೀನು ಕೇಳಿರಬಹುದು. ಆರೋಗ್ಯಕರವಾದ ದೇಹದಲ್ಲಿ ಆರೋಗ್ಯಕರ ವಿಚಾರಗಳು ಮೂಡುತ್ತವೆ ಎಂಬ ಹೇಳಿಕೆಯೂ ನಿನ್ನ ಕಿವಿಗೆ ಬಿದ್ದಿರಬಹುದು. ಆದ್ದರಿಂದ ಆರೋಗ್ಯದ ಬಗ್ಗೆಯೂ ಬಹಳ ಕಾಳಜಿ ತೆಗೆದುಕೊಳ್ಳಬೇಕು. ಇದರಿಂದ ನಿನಗೆ ಆರೋಗ್ಯದ ಮಹತ್ತು ತಿಳಿದಿರಬೇಕಲ್ಲವೆ? ಬಡವರಿಗೆ ಪುಷ್ಟಿಕರವಾದ ಆಹಾರದ ಕೊರತೆಯಿಂದಾಗಿ ಅನಾರೋಗ್ಯ ಉಂಟಾದರೆ, ಇದ್ದವರಿಗೆ ಹೊಟ್ಟೆಬಾಕತನದಿಂದ ಮಿತಿ ಇಲ್ಲದ ತಿನ್ನುವಿಕೆಯಿಂದ ಅನಾರೋಗ್ಯ ಉಂಟಾಗುತ್ತದೆ. ಪುಷ್ಟಿಕರವಾದ, ಮಿತ ಆಹಾರ ಹಿತಕರ. ಪೌಷ್ಟಿಕಾಂಶಗಳಿಂದ ಕೂಡಿದ ಸರಳವಾದ ಆಹಾರ ಆರೋಗ್ಯಕ್ಕೆ ಸಹಾಯಕ. ನಮಗೆ ಬೇಕಾದಷ್ಟಿದೆಯೆಂದು ಸಿಕ್ಕಾಪಟ್ಟೆ ತಿಂದರೆ, ಅದಕ್ಕೆ ಸಂಬಂಧಿಸಿದ ರೋಗಗಳು ದೇಹವನ್ನು ನಾಶಗೊಳಿಸುತ್ತವೆ. ಆದುದರಿಂದ ಆಹಾರ ತೆಗೆದುಕೊಳ್ಳಬೇಕು. ಅತಿಯಾದ ಸಿಹಿ ಪದಾರ್ಥ, ಅತಿಯಾದ ತುಪ್ಪ, ಕೆನೆಮೊಸರು, ಕರಿದ ಪದಾರ್ಥಗಳ ಮೂಲಕ ಜಿಡ್ಡಿನ ಪದಾರ್ಥಗಳ ಸೇವನೆಯಿಂದ, ಅತಿ ಬಿಸಿಯಾದ ಅಥವಾ ಅತೀ ತಂಪಿನ ಆಹಾರ ಸೇವಿಸುವುದರಿಂದಲೂ ಕೂಡ ಮನುಷ್ಯನ ಆರೋಗ್ಯಕ್ಕೆ ಹಾನಿಯುಂಟಾಗುತ್ತದೆ. ಈಗಿನ ಕಾಲದಲ್ಲಿ ಚಾಕೋಲೇಟ್, ಐಸ್‌ಕ್ರೀಂ ತಂಪು ಪಾನೀಯಗಳನ್ನು ಸೇವಿಸುವುದು ಒಂದು ರೀತಿಯ ಫ್ಯಾಷನ್ ಎಂದು ಪ್ರಾರಂಭಿಸುತ್ತಾರೆ. ನಂತರ ಅದೇ ಒಂದು ಚಟವಾಗಿ ಸಿಗರೇಟು, ಮದ್ಯಪಾನದ ರೀತಿಯಲ್ಲಿ ಅವು ಬೇಕೇ ಬೇಕು ಎನ್ನುವ ಸ್ಥಿತಿಗೆ ಕಾರಣವಾಗಿ ಬಿಡುತ್ತದೆ. ಈ ರೂಢಿ, ಆರೋಗ್ಯದ ಮೇಲೆ ಅತ್ಯಂತ ಅಪಾಯಕಾರಿ ಪರಿಣಾಮ ಉಂಟು ಮಾಡುತ್ತದೆ. ಆದುದರಿಂದ ಇಂತಹ ವಸ್ತುಗಳನ್ನು ತಿಂಗಳಿಗೆ ಒಮ್ಮೆಯೋ, ಎರಡು ತಿಂಗಳಿಗೊಮ್ಮೆಯೋ ತಿನ್ನುವುದರಿಂದ ಹಾನಿ ಏನಿಲ್ಲ. ಆದರೆ ಮೇಲಿಂದ ಮೇಲೆ ತಿನ್ನುವುದರಿಂದ ಬೊಜ್ಜು ದೇಹ, ಡಯಾಬಿಟೀಸ್, ಹೃದಯ ಸಂಬಂಧೀ ರೋಗಗಳು, ಅಪಚನ ಮುಂತಾದ ರೋಗಗಳಿಗೆ ಹಾದಿ ಮಾಡಿಕೊಟ್ಟಂತೆ ಆಗುತ್ತದೆ. ಆದುದರಿಂದ ಪುಟ್ಟಾ, ಎಂತಹ ಸಂದರ್ಭದಲ್ಲಿಯೂ ಇವುಗಳ ಬಗ್ಗೆ ಅತೀ ಆಸೆ ಬೆಳೆಯದಂತೆ ಎಚ್ಚರದಿಂದಿರು.

ಕೆಲವರಿಗೆ ಇನ್ನೊಂದು ರೀತಿಯ ಚಟ. ಸಿಕ್ಕಿದುದನ್ನೆಲ್ಲಾ ತಿನ್ನುವುದು. ತಿನ್ನುವುದಕ್ಕೆ ಕಾಲಮಿತಿಯೇ ಇಲ್ಲ. ಮೇಲಿಂದ ಮೇಲೆ ತಿನ್ನುವುದನ್ನು ರೂಢಿ ಮಾಡಿಕೊಂಡಿರುತ್ತಾರೆ.

ಅಂತಹವರಂತೂ ಅಜೀರ್ಣ, ಹೊಟ್ಟೆ ಶೂಲೆ, ಗ್ಯಾಸ್ಟ್ರಿಕ್ ಟ್ರಬಲ್ ಮುಂತಾದ ರೋಗಗಳಿಗೆ ಬಲಿಯಾಗುತ್ತಾರೆ. ನಾವು ತೆಗೆದುಕೊಳ್ಳುವುದನ್ನು ಕೆಲವು ಜಾಣರು ತುಂಬಾ ಯೋಗ್ಯ ಉದಾಹರಣೆಯಿಂದ ವಿವರಿಸಿದ್ದಾರೆ. ನೋಡು ಅದು ಹೀಗಿದೆ. ಒಬ್ಬ ಗೃಹಿಣಿ ಇರುತ್ತಾಳೆ. ಆಕೆಯ ಮನೆಗೆ ಇಬ್ಬರು ಅತಿಥಿಗಳು ಬರುತ್ತಾರೆ. ಆಗ ಆಕೆ ಒಂದು ಪಾವು ಅಕ್ಕಿಯನ್ನು ಅನ್ನ ಮಾಡಲು ಒಲೆಯ ಮೇಲೆ ಇಡುತ್ತಾಳೆ. ಅದು ಅರ್ಧ ಬೆಂದಿರುತ್ತದೆ. ಅಷ್ಟರಲ್ಲಿ ಇನ್ನಿಬ್ಬರು ಅತಿಥಿಗಳು ಬರುತ್ತಾರೆ. ಆಗ ಆಕೆ ಇನ್ನೊಂದು ಪಾವು ಅಕ್ಕಿಯನ್ನು ಕುದಿಯುತ್ತಿರುವ ಅನ್ನದ ಜೊತೆಗೆ ಸುರಿಯುತ್ತಾಳೆ. ಅದೂ ಕುದಿಯುತ್ತಿರುತ್ತದೆ. ಆಗ ಇನ್ನಿಬ್ಬರೂ ಅತಿಥಿಗಳು ಬರುತ್ತಾರೆ. ಆಗ ಮತ್ತೊಂದು ಪಾವು ಅಕ್ಕಿಯನ್ನು ಅದರಲ್ಲಿ ಸುರಿಯುತ್ತಾಳೆ. ಆಗ ನೀನೇ ಯೋಚಿಸು. ಅನ್ನದ ಪಾಡೇನಾಗಿರುತ್ತದೆಯೆಂದು! ಹಾಗೆಯೇ ನಾವು ತಿಂದ ಆಹಾರ ಪಚನವಾಗುವ ಮೊದಲು ಮತ್ತಷ್ಟು ಆಹಾರ ತೆಗೆದುಕೊಂಡರೆ, ಅದು ಅರ್ಧಪಚನವಾದ ಆಹಾರದೊಂದಿಗೆ ಕೂಡಿಕೊಳ್ಳುತ್ತದೆ. ಈ ಆಹಾರವು ಪೂರ್ಣಪಚನಗೊಳ್ಳುವ ಮೊದಲೇ ಇನ್ನಷ್ಟು ಆಹಾರವನ್ನು ಸೇವಿಸಿದರೆ, ಆಗ ಪಚನಕ್ರಿಯೆ ಸರಿಯಾಗಿ ಆಗುವುದಿಲ್ಲ. ಊಟ ಮಾಡಿದ ಆಹಾರ ರಕ್ತವೂ ಆಗುವುದಿಲ್ಲ. ಅದು ಅರ್ಧಂಬರ್ಧ ಜೀರ್ಣವಾಗಿ ಅಸ್ತವ್ಯಸ್ತಗೊಂಡು ವಿಷಪೂರಿತ ಆಗುತ್ತದೆ. ಅಜೀರ್ಣದಿಂದ ಎದೆಯಲ್ಲ ಮುಳ್ಳು ಮುಳ್ಳು ಆಗುತ್ತದೆ; ವಾಂತಿಯಾಗುತ್ತದೆ. ಗ್ಯಾಸ್ ಉತ್ಪನ್ನವಾಗುತ್ತದೆ. ತಲೆ ನೋವು, ಹೊಟ್ಟೆನೋವು ಬರಬಹುದು. ಹುಳಿತೇಗು ಬರುತ್ತದೆ. ಹೀಗೆ ನಾನಾ ರೀತಿಯ ತೊಂದರೆಗಳುಂಟಾಗಿ ಆರೋಗ್ಯದ ಮೇಲೆ ದುಷ್ಪರಿಣಾಮ ಉಂಟಾಗುತ್ತದೆ. ಆಗ ಏನೂ ಓದಲಾಗಲೀ ವಿಚಾರ ಮಾಡಲಾಗಲೀ ಆಗುವುದಿಲ್ಲ. ಆದುದರಿಂದ ಆಹಾರವನ್ನು ತೆಗೆದು ಕೊಳ್ಳುವಾಗ ಆರು ಗಂಟೆಗಳ ಬಿಡುವಿರಬೇಕು. ಕನಿಷ್ಠ ನಾಲ್ಕು ಗಂಟೆಗಳ ಅವಧಿಯಲ್ಲಿ ಏನೂ ತಿನ್ನಬಾರದೆಂಬ ನಿಯಮ ಆರೋಗ್ಯ ಜೀವನಕ್ಕೆ ತುಂಬಾ ಒಳ್ಳೆಯದು. ಅದಕ್ಕೇ ಅನುಭವಿಕರು 'ಮಾತು ಬಲ್ಲವನಿಗೆ ಜಗಳವಿಲ್ಲ, ಊಟ ಬಲ್ಲವನಿಗೆ ರೋಗವಿಲ್ಲ' ಎಂಬ ಗಾದೆ ಮಾತು ಹೇಳಿದ್ದಾರೆ. ನೀನು ಆಹಾರದ ನಿಯಮಗಳನ್ನು ಪಾಲಿಸು ಎಂದು ಹೇಳಿ ಪತ್ರ ಮುಗಿಸುತ್ತೇನೆ.

ಇಂತು ನಿನ್ನ,
ಹಿತೈಷಿ.

■

## ೮. ರಾಷ್ಟ್ರೀಯ ಶಿಕ್ಷಣ

ಪ್ರೀತಿಯ ಪುಟ್ಟಾ,

ನೀನು ಐರಿಷ್ ಮಹಿಳೆಯಾದ ಅನಿಬೆಸೆಂಟರ ಹೆಸರು ಕೇಳಿರಬೇಕಲ್ಲವೆ? ಆಕೆ ಹುಟ್ಟಿನಿಂದ ಐರ್ಲೆಂಡ್ ದೇಶದ ಮಹಿಳೆಯಾದರೂ ಬದುಕಿನಿಂದ ಭಾರತೀಯಳು. ಮಹೋನ್ನತವಾದ ಹಿಂದೂ ಧರ್ಮದ ಪರಂಪರೆ, ಆದರ್ಶ, ಸಂಸ್ಕೃತಿ, ನೀತಿ ಸಂಹಿತೆಗಳಿಂದ ಪ್ರಭಾವಿತಳಾಗಿ ತನ್ನ ನಲವತ್ತಾರನೇ ವಯಸ್ಸಿಗೆ, ಭಾರತಕ್ಕೆ ಬಂದು ನೆಲಸಿದಳು. ಆಗಿನಿಂದ, ಭಾರತ ತನ್ನ ತಾಯ್ನಾಡೆಂದೂ ಭಾರತೀಯರು ತನ್ನ ಜನರೆಂದೂ ತಿಳಿದು ಅದರಂತೆಯೇ ನಡೆದುಕೊಂಡಳು. ನಡೆ-ನುಡಿಯಲ್ಲಿ, ಆಚಾರ-ವಿಚಾರಗಳಲ್ಲಿ ಭಾರತೀಯ ಹಿಂದುವಿನಂತೆ ಬದುಕಿದಳು. ಸ್ವಾತಂತ್ರ್ಯ ಹೋರಾಟದಲ್ಲಿ ಗಾಂಧೀಜಿಯವರ ಜೊತೆ ಸೇರಿದಳು. ಕೆಲವು ಕಾಲ ಕಾಂಗ್ರೆಸ್ ಪಾರ್ಟಿಯ ಅಧ್ಯಕ್ಷಳೂ ಆಗಿದ್ದಳು.

ಭಾರತೀಯರಾದ ನಾವು ಹಿಂದೂ ಪರಂಪರೆ, ಆದರ್ಶ ಹಾಗೂ ನೀತಿಗಳನ್ನು ಮರೆತಿದ್ದೇವೆ. ಮರೆತಿದ್ದೇವಷ್ಟೇ ಅಲ್ಲ ಅವುಗಳನ್ನು ನಿಕೃಷ್ಟವಾಗಿ ಕಾಣುತ್ತಾ ಪಾಶ್ಚಾತ್ಯ ಸಂಸ್ಕೃತಿಯನ್ನು, ರೀತಿ-ನೀತಿಗಳನ್ನು, ಉಡುಗೆ-ತೊಡುಗೆಗಳನ್ನು ಅನುಕರಿಸಲು ಪ್ರಯತ್ನಿಸುತ್ತಿದ್ದೇವೆ. ಇದನ್ನು ಇಪ್ಪತ್ತನೆಯ ಶತಮಾನದ ಆದಿಯಲ್ಲೇ ಗಮನಿಸಿದ ಶ್ರೀಮತಿ ಆ್ಯನಿಬೆಸೆಂಟ್ ಭಾರತೀಯರನ್ನು ಜಾಗೃತಗೊಳಿಸಲು, ತಮ್ಮ ಸ್ವಂತ ಪರಂಪರೆಯನ್ನು ಅರಿತುಕೊಂಡು ಕಾರ್ಯೋನ್ಮುಖರನ್ನಾಗಿಸಲು ದೇಶದಾದ್ಯಂತ ಸಂಚಾರ ಕೈಗೊಂಡರು. ಭಾರತೀಯರಿಗೆ, 'ನೀವು ಪಾಶ್ಚಾತ್ಯರಿಂದ ಕಲಿಯಬೇಕಾದುದೇನೂ ಇಲ್ಲ; ಮಾರ್ಗದರ್ಶನ ಮಾಡುವಷ್ಟು, ಮಾದರಿಯಾಗಿರುವಷ್ಟು ಉನ್ನತ ಆದರ್ಶಗಳು, ಭಾರತೀಯ ಪರಂಪರೆಯಲ್ಲಿವೆ. ಸಂಸ್ಕೃತಿ, ಆದರ್ಶದ ರೀತಿ ನೀತಿಗಳಿಗೆ ಉಡುಗೆ-ತೊಡುಗೆಗಳಿಗಾಗಿ ಪಾಶ್ಚಾತ್ಯರ ಕಡೆ ಮುಖ ಮಾಡಬೇಡಿ' ಎಂದು ಕಳಕಳಿಯಿಂದ ಕರೆ ಇತ್ತರು. ಇದಕ್ಕಾಗಿ ಆಕೆ ತೋರಿಸಿದ ಆಸ್ಥೆ, ಮಾಡಿದ ಕೆಲಸ ಹಾಗೂ ದುಡಿತ ಅವರ್ಣನೀಯ. ನಮ್ಮತನವನ್ನೂ, ನಮ್ಮ ಕರ್ತವ್ಯಗಳನ್ನು ಪರದೇಶದ ಮಹಿಳೆ ಬಂದು ಎಚ್ಚರಿಸಿದರೂ ಪಾಶ್ಚಾತ್ಯರು, ನಮ್ಮ ತತ್ವಚಿಂತನೆ, ಪರಂಪರೆ ಆದರ್ಶಗಳನ್ನು ಮೆಚ್ಚಿ ಕೊಂಡಾಡುತ್ತಿರುವಾಗ, ಭಾರತೀಯರಾದ ನಾವು ಅವುಗಳನ್ನು ಕಡೆಗಣಿಸಿ ಪಾಶ್ಚಾತ್ಯರ ಥಳುಕು-ಬೆಳಕಿನ, ನೀತಿರಹಿತವಾದ, ಸ್ವೇಚ್ಛಾಚಾರದ ಬದುಕಿಗೆ ಮಾರು ಹೋಗುತ್ತಿರುವುದು ದುರ್ದೈವವೇ ಸರಿ.

ಪರೀಕ್ಷೆ ಪಾಸು ಮಾಡುವುದೇ ಮೂಲವಾಗಿರುವ ಆಧುನಿಕ ಶಿಕ್ಷಣವನ್ನು ಆ್ಯನಿಬೆಸೆಂಟ್ ಬಹು ತೀಕ್ಷ್ಣವಾಗಿ ಖಂಡಿಸಿದ್ದಾರೆ. ಶಿಕ್ಷಣದ ಉದ್ದೇಶ ಕೇವಲ ಜ್ಞಾನ ಸಂಪಾದನೆಯಲ್ಲ; ಅದು ವ್ಯಕ್ತಿ-ವ್ಯಕ್ತಿಗಳಲ್ಲಿರುವ ಸುಪ್ತಶಕ್ತಿಯನ್ನು ಅರಳಿಸಬೇಕು; ಮನಸ್ಸಿನ ಸಹಜ ಸ್ವಭಾವಗಳನ್ನು ಉದಾತ್ತೀಕರಿಸಿ, ಶಿಸ್ತಿನಿಂದ ಕೂಡಿರುವಂತೆ ಮಾಡಬೇಕು; ಈಗಿನ ಶಿಕ್ಷಣ, ದೈಹಿಕ, ನೈತಿಕ, ಆಧ್ಯಾತ್ಮಿಕ ಹಾಗೂ ಭಾವನಾತ್ಮಕ ಬೆಳವಣಿಗೆಯನ್ನು ಅಲಕ್ಷ್ಯಮಾಡಿದೆ. ಇಂತಹ ಶಿಕ್ಷಣ ಮಗುವಿನ ಸರಿಯಾದ ವ್ಯಕ್ತಿತ್ವ ರೂಪಿಸಲಾರದು; ಸರ್ವತೋಮುಖ ಬೆಳವಣಿಗೆಗೆ ಸಹಾಯಕವಾಗುವದಿಲ್ಲ. ಎಂದು ಟೀಕಿಸಿದ್ದಾರೆ. ಅವರು ಅಂದು ಮಾಡಿದ ಟೀಕೆ ಇಂದಿಗೂ ಸೂಕ್ತವಾಗಿದೆ.

ಅವರು, ಕೇವಲ ಟೀಕೆ ಮಾಡಲಿಲ್ಲ. ಭಾರತಿಯರಿಗೆ, ಭಾರತೀಯ ಸನ್ನಿವೇಶಕ್ಕೆ ಹೊಂದುವ ಶಿಕ್ಷಣದ ಯೋಜನೆಯನ್ನೇ ರೂಪಿಸಿ ಕೊಟ್ಟರು. ನಮ್ಮಲ್ಲಿ ಟೀಕಿಸುವವರು ಬಹಳ. ಆದರೆ ಪರಿಹಾರ ರೂಪಿಸುವವರು ವಿರಳ. ಆದರೆ, ಆ್ಯನಿಬೆಸೆಂಟ್, ಕ್ರಿಯಾತ್ಮಕವಾಗಿ ಟೀಕೆ ಮಾಡುತ್ತಿದ್ದರು. ದೋಷಗಳಿಗೆ ಪರಿಹಾರವನ್ನೂ ಕೊಟ್ಟಿದ್ದಾರೆ. ಅದನ್ನು ಉಪಯೋಗಿಸಿಕೊಂಡು, ಭಾರತೀಯರು ತಮ್ಮ ಪರಿಸ್ಥಿಯನ್ನು ಉತ್ತಮಗೊಳಿಸಿಕೊಳ್ಳಬೇಕಾಗಿದೆ.

ನೋಡು ಪುಟ್ಟೂ, ಈಗ ಎಲ್ಲಿ ನೋಡಿದರಲ್ಲಿ ಸ್ಟ್ರೈಕು. ಮಾನವನ ಅತ್ಯವಶ್ಯಕ ಕಾರ್ಯಗಳಿಗೆ ಸಂಬಂಧಿಸಿದ ಇಲಾಖೆಯವರು ಹರತಾಳ ಮಾಡಬಾರದೆಂಬುದು ಒಂದು ನೀತಿಯುತವಾದ ಕಟ್ಟುಪಾಡು. ವೈದ್ಯರು ಹರತಾಳ ಮಾಡಿದರೆ ಎಂತಹ ಅನಾಹುತ! ಹಾಲು ಸಪ್ಲೈ ಮಾಡುವವರು ಸ್ಟ್ರೈಕ್ ಮಾಡಿದರೆ ಎಂತೆಂತಹ ಸಮಸ್ಯೆಗಳು!! ಸಾರಿಗೆಯವರು, ವಿದ್ಯುಚ್ಛಕ್ತಿಯವರು, ಬ್ಯಾಂಕಿನವರು ಹರತಾಳ ಮಾಡಿದರೆ ಯಾವ್ಯಾವ ರೀತಿಯ ಕಷ್ಟ-ನಷ್ಟಗಳಿಗೆ ಜನರು ಒಳಗಾಗುವರೆಂಬುದನ್ನು ಊಹಿಸಲೂ ಸಾಧ್ಯವಿಲ್ಲ. ಆದರೂ ಈಗ ನಾವು ಈ ಎಲ್ಲಾ ಇಲಾಖೆಯ ಜನರೂ ಸರ್ಕಾರವನ್ನು ಅಸಹಾಯಕ ಮಾಡಿ, ತಮ್ಮ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಮುಲಾಜಿಲ್ಲದೆ ಸಂಪು ಹೂಡುವುದನ್ನು ಕಾಣುತ್ತಿದ್ದೇವೆ. ಕೆಲವು ಸಾರಿ, ಇದಕ್ಕೆ ಸರ್ಕಾರದ ನಡವಳಿಕೆಯೂ ಕಾರಣವಿರಬಹುದು. ಇವರಿಬ್ಬರ ತಿಕ್ಕಾಟದಲ್ಲಿ, ಪ್ರಜೆಗಳಿಗೆಷ್ಟು ತೊಂದರೆ! ಇದಕ್ಕೆಲ್ಲ ಮುಖ್ಯ ಕಾರಣ ಈಗಿನ ಜನರಲ್ಲಿ ಬೆಳೆದಿರುವ ಬೇಜವಾಬ್ದಾರಿತನ ಹಾಗೂ ಸ್ವಾರ್ಥ.

ಈ ಸಂಪಿನ ಮೂಲ ಏನೆಂದು ಗೊತ್ತೇ ಮಗು? ಯುದ್ಧವಿಲ್ಲದೆ ಶಾಂತಿಯಿಂದ ಸ್ವಾತಂತ್ರ್ಯ ಹೋರಾಟ ನಡೆಸಿದಾಗ ಬ್ರಿಟಿಷರು ಅಸಹಾಯಕರಾಗಿ, ನಮ್ಮ ದೇಶದ ಸ್ವಾತಂತ್ರ್ಯವನ್ನು ನಮಗೆ ಕೊಡುವಂತೆ ಮಾಡಲು ಗಾಂಧೀಜಿಯವರು ಉಪಯೋಗಿಸಿದ ಅಸಹಕಾರ ಅಸ್ತ್ರವಿದು. ಇದಿಲ್ಲದಿದ್ದರೆ ಬ್ರಿಟಿಷರನ್ನು ಮಣಿಸುವುದು

ಕಷ್ಟವಾಗುತ್ತಿತ್ತು. ಇದನ್ನು ಜಾರಿಗೆ ತರಲು ಪ್ರಯತ್ನಿಸಿದಾಗ ಅನಿಬೆಸೆಂಟ್, ಗಾಂಧೀಜಿಯವರಿಗೆ ತಮ್ಮ ಭಿನ್ನಾಭಿಪ್ರಾಯ ಸೂಚಿಸಿದರು. 'ಈಗ ಅದು ಉಪಯುಕ್ತವಾದರೂ ಮುಂದೆ ಪ್ರಾಜ್ಞರಲ್ಲದ ಜನ, ಇದನ್ನು ಸ್ವಾರ್ಥ ಸಾಧನೆಗೆ ಬಳಸಿಕೊಳ್ಳತೊಡಗಿದರೆ, ದೇಶದ ಆಡಳಿತಕ್ಕೇ ಸಮಸ್ಯೆಯಾಗುವ ಸಾಧ್ಯತೆ ಇದೆ. ಆದುದರಿಂದ ಈ ಮಾರ್ಗದಿಂದ ಸ್ವಾತಂತ್ರ ಪಡೆಯುವುದು ಬೇಡ' ಎಂದು ಹಠ ಹಿಡಿದರು. ನಿರ್ವಾಹವಿಲ್ಲದೆ, ಗಾಂಧೀಜಿ ಶ್ರೀಮತಿ ಆ್ಯನಿಬೆಸೆಂಟ್‌ರ ಸಲಹೆಯನ್ನು ಕಡೆಗಣಿಸಬೇಕಾಯ್ತು.

ಆ್ಯನಿಬೆಸೆಂಟರು ಊಹಿಸಿದಂತೆ ಇಂದು ನಮ್ಮ ಜನರು, ತಮ್ಮ ಕಾಲ ಮೇಲೆ ತಾವೇ ಕಲ್ಲು ಹಾಕಿಕೊಳ್ಳುವ ಕೆಲಸದಲ್ಲಿ ತೊಡಗಿದ್ದಾರೆ. ಈಗ ದಿನವೂ ಒಂದಲ್ಲ ಒಂದು ಸ್ಟ್ರೈಕು ದೇಶಾದ್ಯಂತ ನಡೆಯುತ್ತಿರುವುದು ನಮ್ಮ ದುರ್ದೈವ. ಪರಕೀಯರನ್ನು ಹೊರದೂಡಲು ಉಪಯೋಗಿಸಿದ ಅಸ್ತ್ರವನ್ನು, ಸ್ವಾರ್ಥ ಸಾಧನೆಗೆ ಉಪಯೋಗಿಸಿ ಕೊಳ್ಳುತ್ತಿರುವುದು, ಭಾರತೀಯರ ಸಂಕುಚಿತ ದೃಷ್ಟಿಯನ್ನು ಸೂಚಿಸುತ್ತದೆ. ರಾಷ್ಟ್ರೀಯ ಭಾವನೆಯನ್ನೂ, ಜವಾಬ್ದಾರಿಯುತ ನಡವಳಿಕೆಯನ್ನೂ ಕೊಡುವ ಶಿಕ್ಷಣ ಭಾರತೀಯರಿಗೆ ಇಲ್ಲದಿರುವುದು ಇದಕ್ಕೆ ಮುಖ್ಯ ಕಾರಣವೆನ್ನ ಬಹುದು. ಪುಟ್ಟಾ, ನೀನು ಇಂತಹ ಸ್ವಾರ್ಥಪರ ನಡವಳಿಕೆ ರೂಢಿಸಿಕೊಳ್ಳಬಾರದೆಂದು ಈಗಿನಿಂದಲೇ ನಿರ್ಧಾರ ಮಾಡಿಕೋ, ತಿಳಿಯಿತೆ?

ಈಗ ಇಷ್ಟಕ್ಕೆ ಸಾಕು ಮತ್ತೆ ಬರೆಯುವೆ.

ಇಂತು ನಿನ್ನ,
ಹಿತೈಷಿ.

■

## ೯. ಮಹಿಳೆಯರ ಶಿಕ್ಷಣ : ಶ್ರೀಮತಿ ಭಾಗೀರಥೀ ಬಾಯಿ

ಪ್ರೀತಿಯ ಪುಟ್ಟಾ,

ಧಾರವಾಡದಲ್ಲಿರುವ ವನಿತಾ ಸೇವಾ ಸಮಾಜವನ್ನು ನೋಡಿದ್ದೀಯಾ ಅಥವಾ ಅದರ ಹೆಸರನ್ನಾದರೂ ಕೇಳಿದ್ದೀಯಾ? ಅದರ ಹಿಂದೆ ಒಬ್ಬ ಆದರ್ಶಮಹಿಳೆಯ ಕಥೆ ಇದೆ ಮಗು. ಅದನ್ನು ಖಂಡಿತಾ ನೀನು ತಿಳಿದುಕೊಳ್ಳಬೇಕು. ಸದುದ್ದೇಶ ಒಂದಿದ್ದರೆ ಮನುಷ್ಯ ಏನು ಬೇಕಾದರೂ ಸಾಧಿಸಬಲ್ಲ ಎಂಬುದನ್ನು ಆ ಕಥೆ ಸಾರುತ್ತದೆ.

ಈ ವನಿತಾ ವಿದ್ಯಾಲಯಕ್ಕಾಗಿ ತನ್ನ ತನು-ಮನ-ಧನಗಳಿಂದ ದುಡಿದ

ಮಹಿಳೆ ಶ್ರೀಮತಿ ಭಾಗೀರಥಿಬಾಯಿ ಪುರಾಣಿಕ. ಈಕೆ ಶಾಲೆಗೆ ಹೋದವರಲ್ಲ. ಮನೆಯೇ ಇವರ ಶಾಲೆ; ತಾಯಿಯೇ ಶಿಕ್ಷಕಿ. ತಾಯಿಯಿಂದ ಕಲಿತ ವಿದ್ಯೆ ಎಂದರೆ ಮನೆಯ ಕಸಗುಡಿಸುವುದು,ಸಾರಿಸುವುದು, ಪಾತ್ರೆ ತೊಳೆಯುವುದು, ಬಟ್ಟೆ ಒಗೆಯುವುದು. ಇದನ್ನು ಬಹು ಅಚ್ಚುಕಟ್ಟಾಗಿ ಮಾಡುವುದನ್ನು ಕಲಿತಿದ್ದರು. ಜೊತೆಗೆ ಕಸೂತಿ ಹಾಕುವುದು ದೇವರ ನಾಮಗಳನ್ನು ಹಾಡುವುದನ್ನೂ ಕಲಿತಿದ್ದರು.

'ಹೆಣ್ಣು ಮಕ್ಕಳು ಶಾಲೆಗೆ ಹೋಗುವುದು ತಪ್ಪು; ವಿದ್ಯೆ ಕಲಿಯುವುದು ಪಾಪ' ಎಂಬ ನಂಬುಗೆಯಿದ್ದ ಕಾಲದಲ್ಲಿ ಹುಟ್ಟಿದವರು ಈ ಭಾಗೀರಥೀ ಬಾಯಿ, ಬಾಲ್ಯವಿವಾಹ ಬಳಕೆಯಲ್ಲಿದ್ದ ಕಾಲದಲ್ಲಿ ಬೆಳೆದವರು! ಹನ್ನೊಂದನೆಯ ವರ್ಷದಲ್ಲಿ ತವರು ಮನೆಗೆ ಹಿಂತಿರುಗಿದರು. ಇಲ್ಲಿಯೂ ಅಪಘಾತ ಕಾದಿತ್ತು. ಎರಡು ವರ್ಷಗಳಲ್ಲಿ ತಂದೆ ತೀರಿ ಹೋದರು. ಈಕೆಗೆ ಇಬ್ಬರು ತಂಗಿಯರು ಮಾತ್ರ ಇದ್ದರು. ಅಣ್ಣ-ತಮ್ಮಂದಿರು ಇರಲಿಲ್ಲ. ತಾಯಿ ಗರ್ಭಿಣಿ ಇದ್ದರು. ಈಗಲಾದರೂ ಗಂಡು ಮಗು ಹುಟ್ಟಿದ್ದರೆ, ಅವರಿಗೆಲ್ಲ ಮನೆಯಲ್ಲೊಂದು ಸ್ಥಾನವಿರುತ್ತಿತ್ತು. ಈ ಸಾರಿಯೂ ಹೆಣ್ಣಾಯಿತು. ಆಗಿನ ಕಾಲದಲ್ಲಿ ಹೆಂಡತಿಗಾಗಲೀ, ಹೆಣ್ಣು ಮಕ್ಕಳಿಗಾಗಲೀ, ಆಸ್ತಿಯಲ್ಲಿ ಹಕ್ಕು ಇರಲಿಲ್ಲ. ಹಾಗಾಗಿ ದಾಯಾದಿಗಳು ಅವರನ್ನೆಲ್ಲಾ ಹೊರಗೆ ಹಾಕಿದರು. ಇದೆಲ್ಲಾ ಪರಿಸ್ಥಿತಿಯಿಂದ ಜರ್ಝರಿತಳಾದ ತಾಯಿಯೂ ತೀರಿಹೋದಳು. ತಂಗಿಯರನ್ನು ಸಾಕುವ ಹೊಣೆಗಾರಿಕೆ, ಹದಿನೈದು ವರ್ಷದ ಭಾಗೀರಥೀ ಬಾಯಿಯ ಮೇಲೆ ಬಿದ್ದಿತು. ಬೇರೆಯವರ ಮನೆಯ ಅಡಿಗೆ, ಕಸ-ಮುಸುರೆ, ನೀರು ಮುಂತಾದ ಮನೆ ಕೆಲಸಗಳನ್ನು ಮಾಡಿ ಸಾಕಿ ಸಲಹಿದರು. ಆಮೇಲೆ ಈಕೆಯ ಮಾವನ ಆಸ್ತಿಗೆ ಯಾರೂ ವಾರಸುದಾರರಿಲ್ಲದ್ದರಿಂದ, ಈಕೆಗೆ ದೊರೆಯುವಂತೆ ಅವರ ಮಾವ ಮಾಡಿದರು. ಅದರಿಂದ ಆಕೆ ತಂಗಿಯರ ಮದುವೆ ಮಾಡಿ ಅವರ ಮಕ್ಕಳ ಆರೈಕೆಯಲ್ಲೇ ಸುಖ ಕಾಣಲು ಪ್ರಯತ್ನಿಸುತ್ತಿದ್ದರು. ಆದರೆ ದುರದೃಷ್ಟದಿಂದ ತಂಗಿಯರೂ ತೀರಿ ಹೋದರು. ಆಗ ಇದುವರೆಗೂ ಯಾವ ಸಹಾಯವನ್ನು ಮಾಡದಿದ್ದ ಬಂಧು ಬಳಗದವರು ಹಣದ ಆಸೆಯಿಂದ ಈಕೆಯ ಸುತ್ತಮುತ್ತ ತಿರುಗಹತ್ತಿದ್ದರು. ಇವರೆಲ್ಲರ ಕಾಟದಿಂದ ತಪ್ಪಿಸಿಕೊಳ್ಳಲು ಬೆಳಗಾವಿ ಜಿಲ್ಲೆ ಬಿಟ್ಟು ಧಾರವಾಡಕ್ಕೆ ಬಂದು ನೆಲಸಿದರು ಭಾಗೀರಥೀ ಬಾಯಿ.

ಧಾರವಾಡದಲ್ಲಿ ಮಹಿಳೆಯರ ಉದ್ಧಾರಕ್ಕಾಗಿ ಕೆಲಸ ಮಾಡುತ್ತಿದ್ದ ಡಾ. ಮಲೆಬೆನ್ನೂರರವರ ಪರಿಚಯವಾಯ್ತು. ಅವರು ಈಕೆಯನ್ನು ನೋಡಿ, 'ನಿರಾಶಾ ಜೀವಿಯಾದ ಈ ಹೆಣ್ಣುಮಗಳು ಸ್ವಾವಲಂಬಿಯಾಗಿ, ಆತ್ಮವಿಶ್ವಾಸದಿಂದ ಬದುಕುವಂತೆ ಮಾಡಬೇಕು' ಎಂದುಕೊಂಡರು. ಜೊತೆಗೆ ಈಕೆಯ ಮುಖಾಂತರ ಉಳಿದ ಮಹಿಳೆಯರ ಉದ್ಧಾರಕ್ಕೆ ಮಾರ್ಗ ತೋರಿಸಬೇಕು ಎಂದುಕೊಂಡು, ತಾವು

ಸ್ಥಾಪಿಸಿದ ಮಹಿಳಾ ವಿದ್ಯಾಲಯದಲ್ಲಿ, ಮಹಿಳೆಯರಿಗೆ ಸಂಸ್ಕೃತ ಶ್ಲೋಕಗಳನ್ನು, ಕನ್ನಡ ಹಾಡುಗಳನ್ನು ಹೇಳಿಕೊಡಲು ಹಚ್ಚಿದರು. ಇದರಿಂದ ಭಾಗೀರಥೀ ಬಾಯಿ ಸಂತೋಷದಿಂದ, ಹಾಗೂ ಉಪಯೋಗವಾಗುವ ರೀತಿಯಲ್ಲಿ ಸಮಯ ಕಳೆಯಲು ಸಾಧ್ಯವಾಯ್ತು. ನಂತರ ಹೆಣ್ಣುಮಕ್ಕಳಿಗೆ ಉಪಕಾರವಾಗುವಂತಹ ಕೆಲಸ ಮಾಡಬೇಕೆಂಬ ಇಚ್ಛೆ ಬೆಳೆಯಲು ಇದೇ ನಾಂದಿಯಾಯಿತು. ನಂತರ ಇವರು ಅಸಹಾಯಕ ಮಹಿಳೆಯರ ಸಹಾಯಕ್ಕಾಗಿ ವನಿತಾಸೇವಾ ಸಮಾಜ ಸ್ಥಾಪಿಸಿ ತಮ್ಮಲ್ಲಿದ್ದ ಹಣವನ್ನೆಲ್ಲಾ ಇದಕ್ಕೆ ಅರ್ಪಿಸಿಬಿಟ್ಟರು.

ಈ ಸಂಸ್ಥೆಯನ್ನು ಬೆಳೆಸುವಲ್ಲಿ ಅದಕ್ಕೆ ಬೇಕಾದ ಹಣ ಕೂಡಿಸುವಲ್ಲಿ ಈ ಮಹಿಳೆ ಪಟ್ಟ ಶ್ರಮ ವರ್ಣನಾತೀತ. ಬಿಸಿಲು ಮಳೆ ಎನ್ನದೆ ಮನೆ ಮನೆ, ಊರೂರು ಅಡ್ಡಾಡಿದರು, ಕುಲಕರ್ಣಿಯಿಂದ ಹಿಡಿದು ಕಲೆಕ್ಟರ್ ಅವರನ್ನು ಭೇಟಿಯಾದರು. ಆ ಸಂದರ್ಭದಲ್ಲಿ ಜನರ ಅಲಕ್ಷ್ಯಕ್ಕೆ, ನಿಂದೆಗೆ, ಅಪವಾದಕ್ಕೆ, ಅಪಹಾಸ್ಯಕ್ಕೆ ಗುರಿಯಾದರೂ, ಎದೆಗುಂದದೆ ನಿಷ್ಠೆಯಿಂದ ತಮ್ಮ ಕರ್ತವ್ಯ ಮಾಡುತ್ತಿದ್ದರು. ಅಂದು ಸ್ಥಾಪಿತವಾದ ಸಂಸ್ಥೆ ಇಂದೂ ಧಾರವಾಡದಲ್ಲಿ ಇದೆ. ಆದರೆ ಈಗ ಅದರ ಕಾರ್ಯ ರೀತಿ ಬೇರೆ. ಒಟ್ಟಿನಲ್ಲಿ ಅಕೆಯ ಗುರಿ ಸಾಧನೆಯ ಹಾದಿಯಲ್ಲಿ ಈ ಸಂಸ್ಥೆ ಕೆಲಸ ಮಾಡಿದರೆ ಸಾಕು.

ಮಗೂ, ನಾನು ಈಕೆಯ ಬಗ್ಗೆ ಏಕೆ ನಿನಗೆ ತಿಳಿಸಿದೆನೆಂದರೆ, ಒಬ್ಬ ನಿರಕ್ಷರ ಕುಕ್ಷಿಯಾದ, ಬಡ ವಿಧವಾ ಸ್ತ್ರೀ, ಇಪ್ಪತ್ತನೆಯ ಶತಮಾನದ ಆದಿಯಲ್ಲಿ ಸ್ತ್ರೀ ಶಿಕ್ಷಣವೆಂದರೇ ಜನ ಸಿಡಿದು ಬೀಳುತ್ತಿದ್ದ ಕಾಲದಲ್ಲಿ, ಮಹಿಳೆಯರಲ್ಲಿ ಜಾಗ್ರತಿ ಉಂಟು ಮಾಡಿದುದಲ್ಲದೆ, ಪುರುಷರೂ ಮಹಿಳೆಯರ ಸ್ಥಿತಿಯ ಬಗ್ಗೆ ವಿಚಾರ ಮಾಡುವಂತೆ ಮಾಡಿದುದು ಸಾಮಾನ್ಯವಾದ ಕೆಲಸವಲ್ಲ. ಜನರಲ್ಲಿ ಸ್ತ್ರೀಯರ ಏಳ್ಗೆಗೆ ಶಿಕ್ಷಣ ಅವಶ್ಯ ಎಂಬ ಅರಿವು ಮೂಡುವಂತೆ ಮಾಡಿದುದು ಕಡಿಮೆ ಸಾಧನೆಯಲ್ಲ. ಅವರ ಜೀವನ, ಪ್ರಜ್ಞಾವಂತ, ವಿದ್ಯಾವಂತ ಮಹಿಳೆಗೂ ಸಾಧಿಸಲು ಅಸಾಧ್ಯವಾದುದ್ದನ್ನು ಮಾಡಲು ಸಹಾಯಕವಾಯಿತು.

ಭಾಗೀರಥಿ ಬಾಯಿಯ ತ್ಯಾಗ ಮನೋಭಾವ, ಸೇವಾತತ್ಪರತೆ, ದಕ್ಷತೆ, ಧೈರ್ಯ, ಉತ್ಸಾಹಗಳನ್ನು ನೋಡಿ ಆಗಿನ ಬ್ರಿಟಿಷ್ ಸರಕಾರ ಅವರಿಗೆ 'ಕೇಸರ್–ಇ–ಹಿಂದ್' ಎಂಬ ಬಿರುದನ್ನು ಕೊಟ್ಟಿತು.

ಈಕೆಯ ಜೀವನವನ್ನು ನೋಡಿ ಪುಟ್ಟಾ ನೀನೂ ಸಹ ನಿನ್ನ ಆದರ್ಶ, ಗುರಿ, ಸಾಧನೆಯ ಮಾರ್ಗಗಳನ್ನೂ ರೂಪಿಸಿಕೊಳ್ಳಬೇಕು. ಈಗ ಸಮಾಜ ಸಾಕಷ್ಟು ಮುಂದುವರಿದಿದೆ. ಮನಸ್ಸು ಮಾಡಿದರೆ ಸಮಾಜಹಿತಕಾರ್ಯ ಮಾಡಲು ಅನೇಕ

ಅವಕಾಶಗಳಿವೆ. ಭಾಗೀರಥಿಬಾಯಿಯಂತಹ ಅವಿದ್ಯಾವಂತ ಮಹಿಳೆ ಎಷ್ಟೊಂದು ಸಾಧನೆ ಮಾಡಿರುವಾಗ, ಇಂದಿನ ದೋಷಗಳ ನಿವಾರಣೆಗೆ ಸಮಾಜದ ಹಿತಕ್ಕೆ ಪ್ರತಿಯೊಬ್ಬರೂ ತಮ್ಮ ತಮ್ಮ ಕೈಲಾದ ಸೇವೆಯನ್ನೂ ಸಲ್ಲಿಸಲು ಮುಂದೆ ಬಂದರೆ, ಜನರ, ದೇಶದ ಏಳ್ಗೆಗೆ ಸಹಾಯವಾಗುತ್ತದೆ. ಪತ್ರ ಮುಗಿಸುವೆ.

ಇಂತು ನಿನ್ನ,
ಹಿತೈಷಿ.

■

## ೧೧. ಶ್ರೀಮತಿ ಆ್ಯನಿಬೆಸೆಂಟ್ : ಭಾರತೀಯತೆ

ಪ್ರೀತಿಯ ಪುಟ್ಟೂ,

ಎಲ್ಲರಂತೆ ನಿನಗೂ ಟಿ.ವಿ. ನೋಡುವ ಹವ್ಯಾಸವಿರಬೇಕಲ್ಲವೆ? ನೋಡು ತಪ್ಪೇನಿಲ್ಲ. ಅದರಲ್ಲಿ ಕೆಲವು ಉತ್ತಮ ಕಾರ್ಯಕ್ರಮಗಳೂ ಇರುತ್ತವೆ. ಅದನ್ನು ಆರಿಸಿ ನೋಡಬೇಕಷ್ಟೆ. ಸಿಕ್ಕ ಸಿಕ್ಕದುದನ್ನೆಲ್ಲಾ ನೋಡಬಾರದು. ಅದರಲ್ಲಿ ಬರುವ ಅನೇಕ ವಿಷಯಗಳು, ದೃಶ್ಯಗಳು, ಉಡುಗೆ–ತೊಡುಗೆಗಳು, ರೀತಿ–ನೀತಿಗಳು ನಮ್ಮ ಸಂಸ್ಕೃತಿಯನ್ನೇ ಬುಡಮೇಲು ಮಾಡುವಂತಹವುಗಳು. ಚಿಕ್ಕ ವಯಸ್ಸಿನಿಂದಲೂ ಸತತವಾಗಿ ಅಂತಹವನ್ನು ನೋಡುತ್ತಲೇ ಇರುವುದರಿಂದ ಬಹಳ ದುಷ್ಪರಿಣಾಮವಾಗುವ ಸಾಧ್ಯತೆ ಇದೆ. ಆದುದರಿಂದ ಉತ್ತಮವಾದವುಗಳಷ್ಟನ್ನು ಮಾತ್ರ ನೋಡುವ ಹವ್ಯಾಸ ಬೆಳೆಸಿಕೋ. ಇಲ್ಲದಿದ್ದಲ್ಲಿ ನಮಗೇ ಗೊತ್ತಿಲ್ಲದಂತೆ ಪಾಶ್ಚಾತ್ಯ ಸಂಸ್ಕೃತಿಗೆ ಮಾರು ಹೋಗಿ ನಮ್ಮತನವನ್ನೇ ಕಳೆದುಕೊಳ್ಳುವುದಲ್ಲದೆ, ವಿನಾಶದ ಹಾದಿ ಹಿಡಿಯುವಂತಾಗುವುದು.

ನಮಗೆ ನಮ್ಮ ಸಂಸ್ಕೃತಿಯ, ಪರಂಪರೆಯ ಬೆಲೆಯೇ ಗೊತ್ತಿಲ್ಲ. 'ಹಿತ್ತಲ ಗಿಡ ಮದ್ದಲ್ಲ' ಎನ್ನುವಂತಾಗಿದೆ ನಮ್ಮ ಸ್ಥಿತಿ. ನೀನು ಆ್ಯನಿಬೆಸೆಂಟ್‌ರ ಹೆಸರನ್ನು ಕೇಳಿದ್ದೀಯಲ್ಲವೆ? ಇವರೊಬ್ಬ ಸ್ವತಂತ್ರ ವಿಚಾರಿಯಾದ ಐರಿಷ್ ಮಹಿಳೆ, ಈಕೆ ಭಾರತೀಯ ಸಂಸ್ಕೃತಿ, ಪರಂಪರೆ, ತತ್ವ, ನೀತಿಗಳನ್ನು ಓದಿ ತಿಳಿದುಕೊಂಡು, ಅದರಿಂದ ಆಕರ್ಷಿತರಾಗಿ ತಾನು ಭಾರತೀಯಳಾಗಿ ಬದುಕಬೇಕೆಂದು ಆಶಿಸಿದರು. ಹಾಗೆ ಬದುಕುವುದೊಂದು ಹೆಮ್ಮೆ ಎಂದು ಬಗೆದು ಭಾರತಕ್ಕೆ ಬಂದು ನೆಲಸಿ ತಮ್ಮ ಕೊನೆಯ ದಿನಗಳವರೆಗೆ ಇಲ್ಲಿಯೆ ಇದ್ದರು. ಆಕೆ ಭಾರತ ತನ್ನ ತಾಯ್ನಾಡೆಂದು, ಭಾರತೀಯರು ತನ್ನ ಜನರೆಂದು ತಿಳಿದು ಅದರಂತೆಯೇ ನಡೆದುಕೊಂಡರು.

ಉಡುಗೆ–ತೊಡುಗೆ, ರೀತಿ–ನೀತಿ, ಆಚಾರ ವ್ಯವಹಾರದಲ್ಲಿ ಶುದ್ಧ ಭಾರತೀಯಳಂತೆ ಬದುಕಿದರು.

ಭಾರತಿಯರು ಮಹೋನ್ನತವಾದ ಹಿಂದೂ ಧರ್ಮದ ತತ್ವ, ಆದರ್ಶ, ಪರಂಪರೆ ನೀತಿ, ಸಂಸ್ಕೃತಿಗಳನ್ನು ಮರೆತು ಅನೇಕ ಸಮಸ್ಯೆಗಳಿಗೆ ಗುರಿಯಾಗಿರುವುದನ್ನು ನೋಡಿ, ಭಾರತೀಯರನ್ನು ಎಚ್ಚರಗೊಳಿಸಬೇಕೆಂದು ಬಯಸಿದರು. ಭಾರತೀಯರು ತಮ್ಮ ಭವ್ಯ, ಪರಂಪರೆಯನ್ನು ಮರೆತು ತೊಳಲಾಡುತ್ತಿರುವ ಬಗ್ಗೆ, ಅವರ ಗಮನ ಸೆಳೆದರು.

ಶಿಕ್ಷಣ ಪದ್ಧತಿಯ ದೋಷಗಳ ಕಡೆಗೆ ಗಮನ ಸೆಳೆದು ಪರಿಹಾರಗಳನ್ನು ಸೂಚಿಸಿದ್ದಾರೆ. ಶಿಕ್ಷಕರಿಗೆ, ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡಿದ್ದಾರೆ. ಈಗಿನ ಶಿಕ್ಷಣ ಪದ್ಧತಿ ಸರಿಯಾದ ವ್ಯಕ್ತಿತ್ವ ರೂಪಿಸಲು ಸಹಾಯವಾಗುವುದಿಲ್ಲ. ಕೇವಲ ಬೌದ್ಧಿಕ ಬೆಳವಣಿಗೆಗೆ ಮಹತ್ವ ಕೊಟ್ಟಿದೆ. ವ್ಯಕ್ತಿ ಸರ್ವತೋಮುಖವಾದ ಬೆಳವಣಿಗೆಗೆ ಆಸ್ಪದ ಇಲ್ಲದಿರುವುದರಿಂದ, ಇಂತಹ ಶಿಕ್ಷಣ ಪಡೆದ ವ್ಯಕ್ತಿ ಸ್ವಾರ್ಥಿಯಾಗುತ್ತಾನೆ. ಆತ್ಮ ಗೌರವ, ಸಚ್ಚಾರಿತ್ರ್ಯ, ಸಾಮಾಜಿಕ ಭಾವನೆಗಳಿಲ್ಲದವನಾಗುತ್ತಾನೆ. ಅವನಲ್ಲಿ, ನೇರ ನಡವಳಿಕೆ ಇಲ್ಲದ, ಮುಚ್ಚು–ಮರೆಯ, ಮೋಸವಂಚನೆಗಳ ಸ್ವಭಾವ ಬೆಳೆಯುತ್ತದೆ. ತನ್ನ ಸ್ವಾರ್ಥ ಸಾಧನೆಗಾಗಿ ಎಂತಹ ಅನ್ಯಾಯ ಮಾಡಲೂ ಹಿಂಜರಿಯುವುದಿಲ್ಲ. ಉಳಿದವರ ಕಷ್ಟ, ನೋವು, ಅನ್ಯಾಯಗಳ ಬಗೆಗೆ ಅವನು ಕುರುಡನೂ, ಕಿವುಡನೂ, ಹೃದಯ ವಿಹೀನನೂ ಆಗಿರುತ್ತಾನೆಂದು ಅವರು ಹೇಳಿದ ಮಾತು ನೂರಕ್ಕೆ ನೂರು ಸತ್ಯ ಎಂದು ಇಂದಿನ ಜನಾಂಗವನ್ನು ನೋಡಿದರೆ ತಿಳಿದು ಬರುತ್ತದೆ.

ವಿದ್ಯಾರ್ಥಿಗಳಲ್ಲಿ ಕರ್ತವ್ಯ ಪ್ರಜ್ಞೆಯೇ ಮಾಯವಾಗಿದೆ ಎಂದು ನೊಂದು ನುಡಿದಿದ್ದಾರೆ. ಗುರುಗಳ ಬಗ್ಗೆ ಗೌರವದಿಂದ ಕೂಡಿದ ಪ್ರೀತಿಯುಳ್ಳವರಾಗಿ, ಅವಶ್ಯ ಬಿದ್ದಾಗ ಅವರ ಸೇವೆ ಮಾಡುತ್ತಾ ಅವರ ವಿಶ್ವಾಸಕ್ಕೆ ಪಾತ್ರರಾಗಿ ಬೆಳೆಯುವ ಮೂಲಕ ಕರ್ತವ್ಯಪ್ರಜ್ಞೆ ಹಾಗೂ ಕೃತಜ್ಞತಾ ಭಾವವನ್ನು ಪಡೆಯಲು ಸಾಧ್ಯ ಎಂದಿದ್ದಾರೆ. ಈಗಿನ ಯುವಕ–ಯುವತಿಯರು ತಮ್ಮ ಕೆಲಸವಾಗುವವರೆಗೆ ಪ್ರೀತಿ ಇರುವಂತೆ ನಟಿಸುತ್ತಾ ನಂತರ ಅವರನ್ನು ಅಲಕ್ಷಿಸುವ ಸ್ವಭಾವವನ್ನು ಹೊಂದಿರುತ್ತಾರೆ. ಇದು ನಮ್ಮ ಸಂಸ್ಕೃತಿಗೆ ವಿರುದ್ಧವಾದ ನಡವಳಿಕೆ. ಇಂತಹ ಸ್ವಾರ್ಥಿ ಹಾಗೂ ಕೃತಘ್ನ ಸ್ವಭಾವವನ್ನು ಆಕೆ ಖಂಡಿಸಿದ್ದಾರೆ. ಅವರು ವಿದ್ಯಾರ್ಥಿಗಳಿಗೆ ಇನ್ನೂ ಕೆಲವು ಹಿತವಚನಗಳನ್ನು ಹೇಳಿದ್ದಾರೆ. ವಿದ್ಯಾರ್ಥಿಯು ಆಡಂಬರಗಾರನಾಗಿರಬಾರದು. ಸರಳತೆಯೇ ಮೂರ್ತಿವೆತ್ತಂತಿರಬೇಕು. ಏಕೆಂದರೆ ಸರಳತೆ ಹಾಗೂ ಸ್ನೇಹ ಸ್ವಭಾವ

ಸುಗುಣದ ಹೆಗ್ಗುರುತು. ಇವುಗಳಿಲ್ಲದೆ ಉಳಿದ ಯೋಗ್ಯ ಗುಣಗಳನ್ನು ಬೆಳೆಸಿಕೊಳ್ಳಲು ಸಾಧ್ಯವೇ ಇಲ್ಲ ಎಂದಿದ್ದಾರೆ. ವಿದ್ಯಾರ್ಥಿಯು ಸತತ ಪರಿಶ್ರಮದಿಂದ ನೈತಿಕಧೈರ್ಯ, ತಾಳ್ಮೆ, ಆತ್ಮನಿಗ್ರಹಶಕ್ತಿ ಮತ್ತು ದೃಢ ಮನೋಭಾವವನ್ನು ಬೆಳೆಸಿಕೊಳ್ಳಬೇಕೆಂದು ಸಲಹೆ ನೀಡಿದ್ದಾರೆ. ಮೋಸಗಾರಿಕೆ, ಸುಳ್ಳು, ಹೊಟ್ಟೆಯಕಿಚ್ಚು, ದ್ವೇಷ ಮನೋಭಾವದಿಂದ ದೂರವಿರಬೇಕೆಂಬುದು ಅವರ ಬುದ್ಧಿವಾದ.

ಪುಟ್ಟೂ, ಆ್ಯನಿಬೆಸೆಂಟರು ಪರದೇಶದವರಾದರೂ ಭಾರತ ಹಾಗೂ ಭಾರತೀಯರ ಬಗ್ಗೆ, ನಮ್ಮ ಧರ್ಮ-ಸಂಸ್ಕೃತಿಯ ಬಗ್ಗೆ ಅಪಾರ ಪ್ರೀತಿ ಗೌರವ ಇಟ್ಟುಕೊಂಡವರು. ನಮ್ಮ ಒಳಿತಿಗಾಗಿ ಬಹಳಷ್ಟು ದುಡಿದಿದ್ದಾರೆ; ಕಳಕಳಿ ತೋರಿಸಿದ್ದಾರೆ. ಬೇರೆ ದೇಶದವರು ನಮ್ಮ ಧರ್ಮ, ಸಂಸ್ಕೃತಿಗಳನ್ನು ಉಚ್ಚ ಮಟ್ಟದ್ದೆಂದು ತಿಳಿದಿದ್ದರೆ, ನಾವು ಅದನ್ನು ತುಚ್ಛವಾಗಿ ಕಂಡು, ಅಧೋಗತಿಗೆ ಇಳಿಯುತ್ತಿದ್ದೇವೆ. ಈಗ ಬಹಳಷ್ಟು ಜನರು ನಮ್ಮ ಪರಂಪರೆ, ರೂಢಿಗಳನ್ನು ಹಳಿಯುತ್ತಾ ಪಾಶ್ಚಾತ್ಯರನ್ನು ಅನುಕರಿಸುತ್ತಿದ್ದಾರೆ. ಇದು ಖಂಡನೀಯ; ನಾಚಿಕೆಗೇಡು. ಪಾಶ್ಚಾತ್ಯರಲ್ಲಿಯೂ ಕೆಲವು ಒಳ್ಳೆಯ ಅಂಶಗಳಿವೆ. ಇಲ್ಲವೆಂದಲ್ಲ, ಆದರೆ ನಮ್ಮದಾದ ಯಾವ ಅಂಶಗಳನ್ನು ಉಳಿಸಿಕೊಳ್ಳಬೇಕು, ಇತರರಿಂದ ಏನನ್ನು ಕಲಿಯಬೇಕು ಎಂಬುದನ್ನು ಆಳವಾಗಿ ವಿಚಾರ ಮಾಡಿ ನಿರ್ಧಾರಕ್ಕೆ ಬರಬೇಕು. ಥಳುಕು-ಬೆಳಕಿಗೆ ಮಾರು ಹೋಗಬಾರದು. ಅಶ್ಲೀಲಕರವಾದ ನಡವಳಿಕೆ, ಅಸಹ್ಯ ರೀತಿಯ ಉಡುಪು ಧರಿಸುವುದು, ಮದ್ಯಪಾನ ಇವುಗಳನ್ನು ಅಳವಡಿಸಿಕೊಳ್ಳುವುದು ಒಂದು ರೀತಿಯ ಫ್ಯಾಷನ್ ಆಗಿಬಿಟ್ಟಿದೆ. ಆ ರೀತಿಯ ಜೀವನಕ್ಕೆ ಜೋತು ಬಿದ್ದರೆ ಆ ವ್ಯಕ್ತಿ ವಿನಾಶವಾದಂತೆಯೇ ಸರಿ. ಆದುದರಿಂದ ಬಹಳ ಎಚ್ಚರಿಕೆಯಿಂದ ಜೀವನದ ಹೆಜ್ಜೆಗಳನ್ನಿಡಬೇಕು ಎಂಬುದನ್ನು ಸದಾ ನೆನಪಿಡು. ನೀನು ಒಬ್ಬ ಶ್ರೇಷ್ಠ, ಸುಸಂಸ್ಕೃತ ಭಾರತೀಯನಾಗಿ ಬದುಕಬೇಕೆಂಬುದು ನನ್ನಾಸೆ. ಆಸೆಯನ್ನು ನೆರವೇರಿಸುತ್ತೀ ತಾನೆ?

ಇಂತು ನಿನ್ನ,

ಹಿತೈಷಿ.

■

## ೧೧. ಆಟ ಮತ್ತು ಮಕ್ಕಳು

ಪ್ರೀತಿಯ ಪುಟ್ಟೂ,

ನಿನಗೆ ಆಟವೆಂದರೆ ಬಹಳ ಇಷ್ಟ ಅಲ್ಲವೆ? ಆಟವೆಂದರೆ ಯಾವ ಮಕ್ಕಳಿಗೆ

ಇಷ್ಟವಿಲ್ಲ? ಆಟ ಮಕ್ಕಳಿಗೆ ಊಟವಿದ್ದಂತೆ. ಊಟ ಬಿಟ್ಟರೂ ಬಿಟ್ಟಾರು, ಆಟ ಬಿಡಲು ಮಕ್ಕಳಿಗೆ ಸೇರುವುದಿಲ್ಲ. ಮಕ್ಕಳಿಗೆ ಇಷ್ಟವಾದ ಆಟದ ಮೂಲಕವೇ ಬೇಕಾದುದ್ದನ್ನು ಕಲಿಯಬಹುದು. 'ಆಡುತ್ತ ಕಲಿ' ಎಂದು ಹೇಳುತ್ತಾರೆ. ಕೆಲವು ಹಿರಿಯರು ಮಕ್ಕಳು ಆಟಕ್ಕೆ ಹೋಗುತ್ತೇವೆ ಎಂದರೆ ಮುಖ ಸಿಂಡರಿಸುತ್ತಾರೆ. ಆಟದ ಕಡೆ ಗಮನ ಕೊಟ್ಟರೆ ಓದನ್ನು ಕಡೆಗಣಿಸುತ್ತಾರೆ ಎಂದು, ಕೆಲವರು ಮಕ್ಕಳನ್ನು ಆಟಕ್ಕೆ ಕಳಿಸುವುದೇ ಇಲ್ಲ. ಇದು ಸರಿಯಲ್ಲ. ಆಟವಿಲ್ಲದೆ ಬರೀ ಓದುವುದೂ ಕೆಟ್ಟದು. ಬರೀ ಆಟ ಆಡುತ್ತಾ ಓದನ್ನು ಕಡೆಗಣಿಸುವುದೂ ತಪ್ಪು. ಮನಸ್ಸು ಆಹ್ಲಾದಗೊಳ್ಳಲಿಕ್ಕೆ, ದೇಹಕ್ಕೆ ವ್ಯಾಯಾಮ ದೊರೆಯಲು ಆಟ ಅವಶ್ಯಕ. ಆದರೆ ಆಟ ಎಷ್ಟು ಆಡಬೇಕು, ಯಾವಾಗ ಆಡಬೇಕು ಎಂಬ ಬಗ್ಗೆ ನಿಯಮ ಪಾಲಿಸುವುದು ಒಳ್ಳೆಯದು. ಐದು ವರ್ಷಗಳವರೆಗಂತೂ ಮಕ್ಕಳ ಜೀವನವೆಲ್ಲಾ ಆಟವೇ. ಅವರು ಹೇಗೆ ಬೇಕೋ ಹಾಗೆ ಆಡಿಕೊಳ್ಳಲು ಬಿಟ್ಟರೊಳ್ಳೆಯದು; ಸ್ವಲ್ಪ ಮಾರ್ಗದರ್ಶನ ಇದ್ದರೆ ಸಾಕು. ನಂತರ ಶಾಲೆಯಲ್ಲಿ ಕೆಲವು ನಿಯಮಗಳನ್ನು ಪಾಲಿಸಬೇಕಾಗುತ್ತದೆ. ಹಾಗಾಗಿ ಆಟದ ವೇಳೆಯ ಬಗೆಗೂ ನಿಯಮಗಳು ಪ್ರಾರಂಭವಾಗುತ್ತವೆ.

ಆಟದಿಂದ ಕೇವಲ ಸಂತೋಷ, ವ್ಯಾಯಾಮವಷ್ಟೇ ಸಿಗುವುದಿಲ್ಲ. ಆಟವಾಡುತ್ತಾ, ಜೀವನಕ್ಕೆ ಬೇಕಾದ ಅನೇಕ ವಿಷಯಗಳನ್ನು ಕಲಿಯಬಹುದು. ಅದಕ್ಕಾಗಿಯೇ ಆಟದ ಬಯಲನ್ನು 'ಅನಾಚ್ಛಾದಿತ ಶಾಲೆ' (ಎಂದರೆ ಮಾಳಿಗೆಯಿಲ್ಲದ ವಿಶಾಲ ಬಯಲ ಶಾಲೆ) ಎನ್ನುತ್ತಾರೆ.

ಉತ್ತಮ ವ್ಯಕ್ತಿತ್ವ ಪಡೆಯಲು ಅನೇಕ ಸದ್ಗುಣಗಳನ್ನು ರೂಢಿಸಿಕೊಳ್ಳಬೇಕಾಗುತ್ತದೆ. ಜೀವನದ ಸೋಲು-ಗೆಲುವುಗಳನ್ನು ಸಹಜವಾಗಿ ಸ್ವೀಕರಿಸುವ ಸ್ವಭಾವ ಒಳ್ಳೆಯದು. ಬೇರೆಯವರ ಒಳಿತನ್ನು ನೋಡಿ ಅಸಹನೆ ಪಡಬಾರದು. ಸುತ್ತ-ಮುತ್ತಲಿನವರೊಡನೆ ವಿರಸ ಕಟ್ಟಿಕೊಳ್ಳದೆ ಸ್ನೇಹದಿಂದಿರಬೇಕು. ಕಷ್ಟ ಕಾಲದಲ್ಲಿ ಇತರರಿಗೆ ನೆರವು ನೀಡುವ ಸಹಕಾರ ಸ್ವಭಾವ ಇರುವುದು ಅಪೇಕ್ಷಣೀಯ. ಅವಶ್ಯಕ ಸಮಯದಲ್ಲಿ ಶೀಘ್ರವಾದ ಹಾಗೂ ಸರಿಯಾದ ನಿರ್ಣಯ ತೆಗೆದುಕೊಳ್ಳುವ ಗುಣ ಅವಶ್ಯಕ. ದಕ್ಷತೆಯಿಂದ ಹಾಗೂ ಸ್ವಪ್ರೇರಣೆಯಿಂದ ಕೆಲಸ ಮಾಡುವ ಸ್ವಭಾವ ಉತ್ತಮವಾದುದು. ನಿಯಮಗಳನ್ನು ಪಾಲಿಸುವ, ತಮ್ಮ ನಾಯಕನಿಗೆ ವಿಧೇಯವಾಗಿ ವರ್ತಿಸುವ ಗುಣ ಉತ್ತಮ ವ್ಯಕ್ತಿಯಲ್ಲಿ ಇರುತ್ತವೆ. ಪ್ರಸಂಗ ಬಿದ್ದಾಗ ತನ್ನ ಶಾಲೆ, ಕುಟುಂಬ, ಸಮಾಜ ಅಥವಾ ದೇಶಕ್ಕಾಗಿ ತನ್ನ ವೈಯಕ್ತಿಕ ಹಿತವನ್ನು ಕಡೆಗಣಿಸಲೂ ಸಿದ್ಧನಿರಬೇಕು. ಯುಕ್ತಾಯುಕ್ತ ವಿವೇಚಿಸುವ ಶಕ್ತಿಯೂ ಅವಶ್ಯಕ. ಇಂತಹ ಅನೇಕ ಉತ್ತಮ ವ್ಯಕ್ತಿತ್ವದ ಗುಣಗಳನ್ನು ಆಟವಾಡುತ್ತಾ

ಕಲಿಯಲು ಸಾಧ್ಯವಿದೆ. ಆದರೆ ಆಟವಾಡುವಾಗ ಪ್ರಾರಂಭಿಕ ಹಂತದಲ್ಲಿ ಶಿಕ್ಷಕರು ಆಟದ ಬಯಲಿನಲ್ಲಿ ಉಪಸ್ಥಿತರಿದ್ದು ಮಕ್ಕಳು, ನಿಯಮಗಳಿಗೆ ಬದ್ಧರಾಗಿ ಆಡುವಂತೆ, ಜಗಳವಾಡದಂತೆ, ಇತರರಿಗೆ ಅನ್ಯಾಯ ಮಾಡಲು ಅವಕಾಶ ಕೊಡದಂತೆ ಎಚ್ಚರಿಕೆ ವಹಿಸಬೇಕು. ಇಲ್ಲದಿದ್ದಲ್ಲಿ ಹುಡುಗರು ಮನ ಬಂದಂತೆ ಆಡುತ್ತಾರೆ. ನಿಯಮಗಳನ್ನು ಮುರಿಯುತ್ತಾರೆ; ಮೋಸ ಮಾಡುತ್ತಾರೆ. ತಮ್ಮ ಟೀಮಿನ ನಾಯಕನನ್ನೇ ಕಡೆಗಣಿಸುತ್ತಾರೆ. ಹೀಗೆ ಆಡಗೊಟ್ಟರೆ ಮಕ್ಕಳು ಉತ್ತಮ ಗುಣಗಳನ್ನು ಬೆಳೆಯಿಸಿ ಕೊಳ್ಳುವ ಬದಲು, ಅದಕ್ಕೆ ವಿರುದ್ಧವಾದ ಗುಣಗಳನ್ನು ಬೆಳೆಯಿಸಿಕೊಳ್ಳುತ್ತಾರೆ. ಆದುದರಿಂದ ಪ್ರಾರಂಭದಿಂದಲೆ ಒಳ್ಳೆಯ ರೀತಿಯಿಂದ ಆಡುವುದನ್ನು ರೂಢಿಸಿಕೊಳ್ಳಬೇಕು.

ಒಳ್ಳೆಯ ನಡವಳಿಕೆ ತೋರಿಸಬೇಕಾದಾಗ, Show some sportsman spirit ಎನ್ನುವುದನ್ನು ಕೇಳಿರುವಿಯಲ್ಲವೆ/ ಕ್ರಿಕೆಟ್, ವಾಲಿಬಾಲ್ ಮುಂತಾದ ರಾಷ್ಟ್ರಮಟ್ಟದ ಆಟವಾಡುವಾಗಲೂ ಈ sportsman spirit ಗೆ ಬಹಳ ಮಹತ್ವ ಕೊಡುತ್ತಾರೆ. ಆಟಗಾರರೇನಾದರೂ ತಪ್ಪಿ ನಡೆದರೆ ಆಗಿಂದಾಗಲೇ ಅದಕ್ಕೆ ತಕ್ಕ ಶಾಸ್ತಿ ಮಾಡಿಬಿಡುತ್ತಾರೆ. ಒಬ್ಬ ಕ್ರಿಕೆಟ್ ಆಟಗಾರ, ವಿರುದ್ಧ ಟೀಮಿನ ಆಟಗಾರನೊಬ್ಬನಿಗೆ ಹೀಯಾಳಿಕೆಯ ಮಾತನಾಡಿದನೆಂದು, ಹಾಗೆ ದುರ್ವರ್ತನೆ ತೋರಿದ ಆಟಗಾರನಿಗೆ ಕೊಡಬೇಕಾದ ಸಂಭಾವನೆಯ ಅರ್ದ ಹಣವನ್ನೇ ಕಡಿಮೆ ಮಾಡಿಬಿಟ್ಟರು ಎಂಬ ಸುದ್ದಿ ವರ್ತಮಾನ ಪತ್ರಿಕೆಯಲ್ಲಿ ಬಂದಿತ್ತು. ನೀನೂ ಓದಿರಬೇಕಲ್ಲವೆ? ಆಟಗಾರನು ಆಟದಲ್ಲಿ ಪ್ರವೀಣನಾಗಿರುವುದೊಂದೇ ಮುಖ್ಯವಲ್ಲ; ಉತ್ತಮ ಗುಣಗಳನ್ನೂ ತೋರಿಸಬೇಕು. ಆಗ ಅವನಿಗೆ ದೊರೆಯಬೇಕದ ಮನ್ನಣೆ ದೊರೆಯುತ್ತದೆ. ಏಕೆಂದರೆ ಅಟವಾಡುವಾಗ ಸರಿಯಾದ ನಡೆ-ನುಡಿ ತೋರಿಸಿದವನು ಜೀವನದಲ್ಲಿಯೂ ಅಂತಹ ರೀತಿಯಲ್ಲೇ ವರ್ತಿಸುತ್ತಾನೆ. ಸರಿಯಾದ ಅರ್ಥದಲ್ಲಿ 'ಒಳ್ಳೆಯ ಆಟಗಾರ' 'ಒಳ್ಳೆಯ ವಯಕ್ತಿ' ಯೂ ಆಗಿರುತ್ತಾನೆ.

ಪುಟ್ಟೂ ನೀನೂ ಸಹ ಒಳ್ಳೆಯ ಆಟಗಾರನಾಗಬೇಕು. ಎಂದರೆ ಒಳ್ಳೆಯ ವ್ಯಕ್ತಿಯಾಗು ಎಂಬುದು ನನ್ನ ಸಲಹೆ. ಆದರೆ ಆಟಕ್ಕಾಗಿ ನಿನ್ನ ಓದನ್ನು ಕೆಡಿಸಿ ಕೊಳ್ಳಬಾರದು. ಮನೆಯಲ್ಲಿಯ ನಿನ್ನ ಜವಾಬ್ದಾರಿಯನ್ನು ಬಿಡಬಾರದು. ಬಿಡುವಿನ ವೇಳೆಯಲ್ಲಿ, ಉಳಿದ ಕೆಲಸಗಳೆಲ್ಲ ಮುಗಿದ ಮೇಲೆ ಆಡಬೇಕು. ಆಟದ ನಿಯಮಗಳಿಗೆ, ನಾಯಕನ ಸಲಹೆಗಳಿಗೆ ಬೆಲೆಕೊಡಬೇಕು. ಅಂದರೆ ನೀನು ಒಬ್ಬ ಉತ್ತಮ ನಾಗರಿಕನು ಅನುಸರಿಸಬೇಕಾದ ನಿಯಮಗಳನ್ನು ಪಾಲಿಸುತ್ತೀಯೆ ಎಂದು ಅರ್ಥ.

ಆಟಗಳಲ್ಲಿ ನಿನಗೆ ಯಾವ ಆಟ ಇಷ್ಟ ಎಂಬುದನ್ನು ಕಂಡುಕೊಂಡು ಆ

ಆಟವನ್ನು ಆಡು. ಆಟದ ಗೀಳು ಬೆಳೆಸಿಕೊಳ್ಳದಂತೆ ಎಚ್ಚರದಿಂದಿರು. ದೊಡ್ಡ ದೊಡ್ಡ ಕ್ಲಾಸಿಗೆ ಹೋದಂತೆ, ಓದು ಹೆಚ್ಚಾಗಿ ಆಟವಾಡಲು ಬಿಡುವು ಸಿಕ್ಕದಂತಾಗಿ ಬಿಡುತ್ತದೆ. ಈ ಹದಿವಯಸ್ಸಿನಲ್ಲಿ ಮಾತ್ರ ಆಟವಾಡದಿರಬೇಡ. ಶಾಲೆ ದೂರವಿರುವ ಕಾರಣದಿಂದಲೋ ಮತ್ತಾವುದೋ ಕಾರಣದಿಂದಲೋ ದಿನವೂ ಆಡಲಾಗದಿದ್ದರೂ ವಾರದ ಕೊನೆಯ ರಜೆಯಲ್ಲಿಯಾದರೂ ಆಡುವುದನ್ನು ಮರೆಯಬೇಡ. ಪತ್ರ ಮುಗಿಸಲೇ?

ಇಂತು ನಿನ್ನ
ಹಿತೈಷಿ.

■

## ೧೨. ಸತತ ಪ್ರಯತ್ನ- ಗುರಿಸಾಧನೆ

ಪ್ರೀತಿಯ ಪುಟ್ಟೂ,

ಮನುಷ್ಯನಿಗೆ ಪಂಚೇಂದ್ರಿಯಗಳು ಎಂದರೆ ಕಣ್ಣು, ಮೂಗು, ಬಾಯಿ, ಕಿವಿ, ಹಾಗೂ ಚರ್ಮ (ಸ್ಪರ್ಶೇಂದ್ರಿಯ)ಅತಿ ಮುಖ್ಯ. ಅವನು ಏನೇ ಕೆಲಸ ಸಾಧಿಸಬೇಕಾದರೂ ಇವುಗಳ ಸಹಕಾರದಿಂದಲೇ ಸಾಧ್ಯ. ಈ ಐದು ಇಂದ್ರಿಯಗಳಲ್ಲಿ ಯಾವುದೊಂದರಲ್ಲಿ ನ್ಯೂನತೆ ಇದ್ದರೂ. ವ್ಯಕ್ತಿಗೆ ತುಂಬಾ ತೊಂದರೆಯಾಗುತ್ತದೆ. ಮನುಷ್ಯ ವಿದ್ಯಾವಂತನಾಗಿ, ತನ್ನ ಕಾಲ ಮೇಲೆ ತಾನು ನಿಂತುಕೊಳ್ಳುವ ಶಕ್ತಿಯನ್ನು ಪಡೆಯಲು ಕಣ್ಣು ಬಹಳ ಸಹಾಯಕ. ಕಣ್ಣಿಲ್ಲದ ಮನುಷ್ಯನ ಸ್ಥಿತಿ ತುಂಬಾ ದಯನೀಯ. ಯಾವೊಂದು ಇಂದ್ರಿಯ ಸರಿಯಾಗಿ ಕೆಲಸ ಮಾಡದಿದ್ದರೂ ಕಷ್ಟವೆ. ಕಣ್ಣಿಲ್ಲದಿದರಂತೂ, ಜಗತ್ತು ಹೇಗಿದೆ ಎಂಬುದನ್ನು ಕಾಣುವಂತೆಯೇ ಇಲ್ಲ. ಬಣ್ಣಗಳ ಭೇದ, ಸುಂದರ ಹೂವು ಅಥವಾ ವಸ್ತುವಿನ ಕಲ್ಪನೆ ಸಹ ಅವರಿಗೆ ಮಾಡಲಾಗುವುದಿಲ್ಲ. ಸ್ವಲ್ಪ ಆಳವಾಗಿ ಅವರ ಸ್ಥಿತಿಯ ಬಗ್ಗೆ ಯೋಚಿಸಿದರೆ, ಕುರುಡರ ಬಗ್ಗೆ ಅಯ್ಯೋ ಪಾಪ ಎನ್ನಿಸುತ್ತದೆ ಅಲ್ಲವೆ?

ಇಂತಹ ಕುರುಡರು ಓದು ಬರಹ ಕಲಿತು ಸ್ವಾವಲಂಬಿಗಳಾಗಿ ಜೀವನ ಮಾಡುವಂತೆ, ತಮ್ಮ ಭಾವನೆಗಳನ್ನು ಬರಹದ ಮೂಲಕ ವ್ಯಕ್ತಪಡಿಸಲು ಸಾಧ್ಯವಾಗುವಂತೆ ಮಾಡಿದ ಪುಣ್ಯ ಪುರುಷ ಲೂಯಿ ಬ್ರೈಲ್ ಎಂಬುದು ನಿನಗೆ ಗೊತ್ತೆ ಪುಟ್ಟೂ? ಅವನು ಕುರುಡರ ಬಾಳಿಗೆ ಬೆಳಕು ನೀಡಿದ ಮಹಾನ್‌ವ್ಯಕ್ತಿ. ಅವನು ಮಾಡಿದ ಈ ಮಹಾ ಉಪಕಾರದಿಂದ ಜಗತ್ತಿನ ಕುರುಡರೆಲ್ಲರೂ ಪ್ರಯೋಜನ ಪಡೆಯಬಹುದಾಗಿದೆ. ಸ್ವತಃ ಕುರುಡನಾಗಿದ್ದ ಲೂಯಿಗೆ ಕುರುಡರ ಕಷ್ಟದ ಅರಿವಿತ್ತು. ಓದು-ಬರಹ ಕಲಿಯುವಂತಿದ್ದರೆ ಅವರ ಜೀವನ ಉತ್ತಮಗೊಳ್ಳುವುದಕ್ಕೆ ಸಹಾಯಕ

ಎಂಬುದನ್ನು ಮನಗಂಡಿದ್ದ ಅವನು, ಅದಕ್ಕಾಗಿ ತನ್ನ ಜೀವನದುದ್ದಕ್ಕೂ ಬಹಳ ಪರಿಶ್ರಮಪಟ್ಟನು. ಅದರ ಫಲವೇ 'ಲೂಯಿ ಬ್ರೈಲ್ ಲಿಪಿ'ಯ ಆವಿಷ್ಕಾರ.

ಲೂಯಿ ಬ್ರೈಲ್ ಹುಟ್ಟಾ ಕುರುಡನಲ್ಲ. ಆದರೆ ದುರ್ದೈವದಿಂದ ಅವನು ಮೂರೂವರೆ ವರ್ಷದವನಾಗಿದ್ದಾಗ ನಡೆದ ಒಂದು ಭಯಂಕರ ದುರ್ಘಟನೆಯಿಂದ ಕುರುಡನಾದ. ತನ್ನ ತಂದೆಯ ವರ್ಕ್‌ಶಾಪಿನಲ್ಲಿ ಆಟವಾಡುತ್ತಿರುವಾಗ ಒಂದು ದಬ್ಬಳ ಅವನ ಎಡಗಣ್ಣಿನಲ್ಲಿ ನೆಟ್ಟಿತು. ತೀವ್ರವಾದ ರಕ್ತಸ್ರಾವವಾಗಿ ಎಡಗಣ್ಣು ಹೋಯಿತು. ತಂದೆ ತಾಯಿಗಳು ಸಾಕಷ್ಟು ಚಿಕಿತ್ಸೆ ಮಾಡಿಸಿದರು. ಎಚ್ಚರಿಕೆ ವಹಿಸಿದರು. ಆದರೆ ಏನೂ ಪ್ರಯೋಜನವಾಗಲಿಲ್ಲ. ಎಡಗಣ್ಣಿನ ರೋಗದ ಸೊಂಕು ಬಲಗಣ್ಣಿಗೂ ಹಬ್ಬಿ ಆ ಕಣ್ಣೂ ಹೋಯಿತು. ಲೂಯಿ ಸಂಪೂರ್ಣ ಕುರುಡನಾದನು. ಆಗ ಅವನ ತಂದೆ ತಾಯಿಗಳಿಗಾದ ದುಃಖ ಹೇಳತೀರದು. ಅವರು ಕುರುಡರು ಭಿಕ್ಷೆ ಬೇಡುವುದನ್ನು ಕಂಡಿದ್ದರು. ತಮ್ಮ ಮಗನ ಜೀವನವೂ ಎಲ್ಲಿ ಭಿಕ್ಷೆ ಬೇಡಿಕೊಂಡೇ ಕಳೆಯಬೇಕಾದೀತೋ ಎಂದು ಹೌಹಾರಿದರು. ಈ ಮಗುವಿನ ಜೀವನವನ್ನು ಸಂತೋಷಕರವಾಗಿ ಮಾಡಬೇಕೆಂದು ಇಡೀ ಕುಟುಂಬವೇ ಪ್ರಯತ್ನಿಸಿತು.

ತಮ್ಮ ಇತರ ಮಕ್ಕಳು ಓದುತ್ತಿದ್ದ ಶಾಲೆಗೆ ಇವನನ್ನೂ ಕಳಿಸಿದರು. ಆದರೆ ಇವನಿಗೆ ಪ್ರಗತಿ ಸಾಧಿಸಲಾಗಲಿಲ್ಲ. ಆಗ ಪ್ಯಾರಿಸ್‌ನಲ್ಲಿ ಒಂದೇ ಒಂದು ಶಾಲೆ ಕುರುಡ ಮಕ್ಕಳಿಗಾಗಿ ಇತ್ತು. ಅಲ್ಲಿಗೇ ಇವನನ್ನು ಕಳಿಸಿದರು.

ಪುಟ್ಟೂ, ನಾನು ಈ ಮಹಾಪುರುಷ ಯಾವ ದೇಶದವನು ಎಂದು ತಿಳಿಸಿಯೇ ಇಲ್ಲ ಅಲ್ಲವೆ? ಇವನು ಫ್ರಾನ್ಸ್ ದೇಶದವನು. ಪ್ಯಾರಿಸ್‌ಗೆ ಮೂವತ್ತೆರಡು ಕಿಲೋಮೀಟರ್ ದೂರದಲ್ಲಿರುವ ಕಾಪ್ರೆ ಎಂಬ ಹಳ್ಳಿಯಲ್ಲಿ ಒಂದು ಸಾಧಾರಣ ಕುಟುಂಬದಲ್ಲಿ ಕ್ರಿ.ಶ. ೧೮೦೯ ನೇ ಜನವರಿಯ ನಾಲ್ಕರಂದು, ಹುಟ್ಟಿದನು. ಇವನ ತಂದೆ-ತಾಯಿಗಳು ಸೈಮನ್‌ರೆನೆಬ್ರೈಲ್ ಮತ್ತು ಮೋನಿಕ.

ಲೂಯಿ, ಕುರುಡರ ಶಾಲೆಯಲ್ಲಿ ಕಲಿಯಲೆಂದು ಪ್ಯಾರಿಸ್‌ಗೆ ಹೋದಾಗ ಹತ್ತು ವರ್ಷಗಳಾಗಿದ್ದವು. ಇದು ಅವನ ಹೊಸ ಜೀವನದ ಮೊದಲನೆಯ ಹಂತ. ಮುಂದೆ ಅವನು ಸಾಧಿಸಿದ ಸಾಧನೆಯ ಪ್ರಥಮ ಮೆಟ್ಟಿಲೆಂದೇ ಹೇಳಬಹುದು. ವಿದ್ಯಾರ್ಥಿ ಆಗಿದ್ದಾಗಿನಿಂದಲೇ ಲೂಯಿಯು ಕುರುಡರಿಗೆ ಓದಲು-ಬರೆಯಲು ಒಂದು ಪ್ರತ್ಯೇಕ ಲಿಪಿಯು ಅವಶ್ಯಕ ಎಂಬುದನ್ನು ಸ್ವಾನುಭವದಿಂದ ಅರಿತಿದ್ದನು. ಆದಷ್ಟು ಬೇಗ ಅದು ದೊರೆಯುವಂತಾಗಬೇಕೆಂದು ಮನಸ್ಸಿನಲ್ಲಿಯೇ ಹಂಬಲಿಸುತ್ತಿದ್ದನು. 'ಬಯಕೆ ಬರುವುದರ ಕಣ್ಣನ್ನೇ ನೋಡಾ' ಎನ್ನುವುದು ಸತ್ಯ. ನೋಡು ಮರಿ, ಅವನು ಹದಿನೈದು ವರ್ಷದನಿದ್ದಾಗ ಅವನಿಗೆ ಚಾರ್ಲ್ಸ್ ಬಾರ್ಬೀಸ್

ಎಂಬ ಆರ್ಟಿಲರಿ ಆಫೀಸರನ ಭೇಟ್ಟಿಯಾಯಿತು. ಆ ಅಧಿಕಾರಿ ತನ್ನ ಮಿಲಿಟರಿ ಆಫೀಸುಗಳಿಗೆ ಗುಟ್ಟಿನಲ್ಲಿ ವಿಷಯಗಳನ್ನು ತಿಳಿಸಲು, ಅದನ್ನು ಸೈನಿಕರು ಬೆಳಕಿನ ಸಹಾಯವಿಲ್ಲದೆ ಓದಲು ಸಾಧ್ಯವಾಗುವ 'ನಾಕ್ಟುರನ್ ರೈಟಿಂಗ್' ಎಂಬ ಪದ್ಧತಿಯನ್ನು ಕಂಡು ಹಿಡಿದಿದ್ದನು. ಅದೇಂದರೆ ಕಾರ್ಡ್‌ಬೋರ್ಡ್ ಮೇಲೆ ಚುಚ್ಚಿದ ಚುಕ್ಕೆಗಳು ಒಂದು ನಿರ್ದಿಷ್ಟವಾದ ಶಬ್ದವನ್ನು ಸೂಚಿಸುತ್ತಿದ್ದವು. ಬಾರ್ಬಿಗೆ ಲೂಯಿಯು ಈ ಪದ್ಧತಿಯನ್ನು ವಿವರಿಸಿದಾಗ ಲೂಯಿಗೆ ತಕ್ಷಣ ತಾನು ಕುರುಡನಾಗಿ ಹುಡುಕುತ್ತಿದ್ದ ಲಿಪಿ ಇದು ಎಂದು ಕುಣಿದಾಡಿದನು. ಕುರುಡರಿಗೆ ಯಾರ ಸಹಾಯವಿಲ್ಲದೆ ಓದಲು ಬರೆಯಲು ಸಾಧ್ಯವಾಗುತ್ತದೆ. ಎಂಬುದನ್ನು ಅರಿತು ಅವನಿಗಾದ ಆನಂದ ಅಷ್ಟಿಷ್ಟಲ್ಲ. ಆಗಿನ್ನೂ ಅವನಿಗೆ ಹದಿನೈದು ವರ್ಷಗಳು. ನೋಡು ಪುಟ್ಟೂ, ಹದಿನೈದು ವರ್ಷಗಳ ಕುರುಡ ಹುಡುಗನ ಆಸೆ ಆಕಾಂಕ್ಷೆಗಳು ಎಷ್ಟು ಎತ್ತರಕ್ಕಿದ್ದವು. ಅವನ ಧ್ಯೇಯ ಎಷ್ಟು ಉನ್ನತಮಟ್ಟದ್ದು ಎಂಬುದನ್ನು ಯೋಚಿಸು. ಅಂತಹ ಉತ್ತಮ ಗುರಿ ಅವನಿಗಿದ್ದುದರಿಂದ ಅವನಿಂದ ಜಗತ್ತಿನ ಕುರುಡರಿಗೆಲ್ಲಾ ಉಪಕಾರವಾಯಿತು. ಎಷ್ಟೋ ಜನರ ಕಣ್ಣೀರನ್ನು ಒರೆಸಿ, ಅವರ ಜೀವನ ಸುಖಮಯವಾಗಲು ಸಹಾಯಕನಾದ, ಎಲ್ಲಾ ಇಂದ್ರಿಯಗಳೂ ಸರಿಯಾಗಿ ಕೆಲಸ ಮಾಡುವ ನಾವು ಉತ್ತಮ ಗುರಿಯನ್ನು ಮುಂದಿಟ್ಟುಕೊಂಡು ಪ್ರಯತ್ನ ಮಾಡಿದರೇನು ಬೇಕಾದರೂ ಸಾಧಿಸಲು ಸಾಧ್ಯವಾಗುತ್ತದೆ, ಮಗೂ. ಪ್ರತಿಯೊಬ್ಬ ಮನುಷ್ಯನಿಗೂ ಉತ್ತಮ ಗುರಿ ಇರಬೇಕು.

ಬಾರ್ಬಿಯ ಬರೆಯುವ ಪದ್ಧತಿಯ ಮೇಲೆ ಹದಿನೈದು ವರ್ಷದ ಲೂಯಿಬ್ರೈಲ್, ಸತತವಾಗಿ ಚಿಂತಿಸಿ ಅದರ ಮೇಲೆ ಬಹಳ ಶ್ರದ್ಧೆಯಿಂದ ಸ್ಟೈಲಸ್ ಮತ್ತು ಸ್ಲೇಟನ್ನು ಉಪಯೋಗಿಸಿ ಕೆಲಸ ಮಾಡಿದ. ಕೆಲವೇ ತಿಂಗಳಲ್ಲಿ ಅಂದರೆ ತನಗೆ ಹದಿನಾರು ವರ್ಷಗಳಾಗುವ ಮೊದಲೇ ತನ್ನ ಶಾಲೆಗೆ ಡಾಟ್ (ಚುಕ್ಕೆ) ಪದ್ಧತಿಯ ಅಕ್ಷರಮಾಲೆಯನ್ನು ಮಾಡಿ ಅರ್ಪಿಸಿದ. ಇನ್‌ಸ್ಟಿಟ್ಯೂಟಿನ ಕುರುಡ ವಿದ್ಯಾರ್ಥಿಗಳಿಗೆ ಕಲಿಯುವ ಹೊಸ ಯುಗ ಪ್ರಾರಂಭವಾಯ್ತು. ನೋಟ್ಸ್ ಬರೆದು ಕೊಳ್ಳಲು ಸಾಧ್ಯವಾಯ್ತು. ಲೇಖನಗಳನ್ನು ಬರೆಯಲು ಅನುಕೂಲವಾಯ್ತು. ಆದರೆ, ಅಧಿಕೃತವಾಗಿ ಆ ಲಿಪಿಯನ್ನು ಉಪಯೋಗಿಸಲು ಪರವಾನಗಿ ಇರಲಿಲ್ಲ; ಸ್ವಂತಕ್ಕಾಗಿ ಉಪಯೋಗಿಸಿಕೊಳ್ಳಬಹುದಿತ್ತು. ಅಷ್ಟೆ. ಅದರ ಬೆಲೆಯನ್ನು ಅರಿತು ಬ್ರೈಲ್ ಕಂಡುಹಿಡಿದ ಲಿಪಿಯಲ್ಲಿ ಪುಸ್ತಕ ಬರೆದು, ಕುರುಡರು ಶಾಲೆಯ ಕೆಲಸಕ್ಕಾಗಿ ಆ ಲಿಪಿಯಲ್ಲಿ ಬರೆದುದನ್ನು ಓದುವ ಪರಿಣಿತರನ್ನು ತಯಾರು ಮಾಡಲು ಸಂಸ್ಥೆ ಸಿದ್ಧವಿರಲಿಲ್ಲ. ಹಾಗಾಗಿ ಲೂಯಿಯೇ ತನ್ನ ಬಿಡುವಿನ ವೇಳೆಯಲ್ಲಿ ವಿದ್ಯಾರ್ಥಿಗಳಿಗೆ ಈ ಲಿಪಿಯ ಮೂಲಕ ಬೋಧಿಸುತ್ತಿದ್ದನು. ವಿದ್ಯಾರ್ಥಿಗಳಿಗೆಲ್ಲಾ ಈ ಬಗೆಗೆ ಆಸಕ್ತಿ

ಇದ್ದಿತು. ಲೂಯಿಯು ತನ್ನ ಜೀವಮಾನಪೂರ್ತಿ ತನ್ನ ಪದ್ಧತಿಗೆ ಒಪ್ಪಿಗೆ ದೊರಕಿಸಿಕೊಳ್ಳಲು ಪ್ರಯತ್ನಿಸಿದರೂ ಫಲ ಸಿಗಲಿಲ್ಲ. ಆದರೂ ಎದೆಗುಂದದೆ ಹೋರಾಟ ನಡೆಸಿ, ತನ್ನ ನಲವತ್ಮೂರನೆಯ ವಯಸ್ಸಿನಲ್ಲಿ ಕೊನೆಯುಸಿರೆಳೆದ.

ಪ್ರಾಮಾಣಿಕವಾದ ಸತ್ ಪ್ರಯತ್ನಕ್ಕೆ ಸೂಕ್ತ ಫಲ ಒಂದಿಲ್ಲೊಂದು ದಿನ ದೊರತೇ ದೊರೆಯುತ್ತದೆ. ಮುಂದೆ ಅನೇಕರು ವಿಧವಿಧವಾದ ಪದ್ಧತಿಗಳನ್ನು ಕಂಡು ಹಿಡಿದರು. ಕುರುಡರ ಶಿಕ್ಷಣ ತಜ್ಞರು ಪರಿಶೀಲನೆ ನಡೆಸಿ, ಬ್ರೈಲ್ ಪದ್ಧತಿಯೇ ಅತ್ಯುತ್ತಮವೆಂಬ ತೀರ್ಮಾನಕ್ಕೆ ಬಂದರು. ಹೀಗೆ ಬ್ರೈಲ್‌ನ ಕೆಲಸದ ಪ್ರತಿಭೆಯನ್ನು ಗುರುತಿಸಿ, ಅದನ್ನು ಜಾರಿಗೆ ತರುವ ನಿರ್ಧಾರ ಮಾಡಲು ಒಂದು ಶತಮಾನವೇ ಹಿಡಿಯಿತು. ಈಗ ಲೂಯಿ ಬ್ರೈಲ್‌ನ ಸದುದ್ದೇಶ ನೆರವೇರಿದೆ. ಅವನ ಪದ್ಧತಿ ಕುರುಡರ ಜೀವನಕ್ಕೊಂದು ದಾರಿದೀಪವಾಗಿದೆ. ಪುಟ್ಟೂ, ನೀನೂ ಕೂಡ ಒಂದು ಸದುದ್ದೇಶವಿಟ್ಟುಕೊಂಡು ಪ್ರಯತ್ನಿಸಿದರೆ, ಒಂದಲ್ಲ ಒಂದು ರೀತಿಯಲ್ಲಿ ಮಾನವತೆಯ ಸುಖಕ್ಕೆ ಸಹಾಯಕವಾಗಬಹುದು. ಹುಟ್ಟಿದುದಕ್ಕೆ ಜನ್ಮ ಸಾರ್ಥಕವಾಗುವ ಕೆಲಸವಾಗುತ್ತದೆ. ಉಪದೇಶ ಬಹಳವಾಯಿತೆ? ಪತ್ರ ಮುಗಿಸುವೆ.

ಇಂತು ನಿನ್ನ,
ಹಿತೈಷಿ.

■

## ೧೩. ನಾಳೆ ಮಾಡುವುದನ್ನು ಇಂದೇ ಮಾಡು

ಪ್ರೀತಿಯ ಪುಟ್ಟಾ,

ನಿನಗೆ ಅನೇಕ ಗೆಳೆಯ ಗೆಳತಿಯರಿದ್ದಾರೆ ಅಲ್ಲವೆ? ನೀವೆಲ್ಲ ಹೆಚ್ಚು ಕಡಿಮೆ ಒಂದೇ ವಯಸ್ಸಿನವರಿದ್ದರೂ, ಒಂದೇ ತರಗತಿಯಲ್ಲಿದ್ದರೂ ಒಬ್ಬೊಬ್ಬರದು ಒಂದೊಂದು ಸ್ವಭಾವ ಎಂಬುದನ್ನು ಗಮನಿಸಿದ್ದೀಯಾ? ಒಬ್ಬರಿದ್ದಂತೆ ಮತ್ತೊಬ್ಬರಿರುವುದಿಲ್ಲ. ಒಬ್ಬರದು ಚುರುಕು ಸ್ವಭಾವವಾದರೆ, ಮತ್ತೊಬ್ಬರದು ನಿಧಾನ ಅಲ್ಲವೆ? ಕೆಲವರು ತಾವು ಮಾಡಬೇಕಾದ ಕೆಲಸವನ್ನು ಆಗಿಂದಾಗಲೇ ಮಾಡಿ ಮುಗಿಸುತ್ತಾರೆ. ಮತ್ತೆ ಕೆಲವರು ಇರಲಿ ಬಿಡು; ನಾಳೆ ಮಾಡಿದರಾಯಿತು ಎಂದು ಮುಂದೂಡುತ್ತಾರೆ. ಆದರೆ ಯಾರು ತಮ್ಮ ಕೆಲಸವನ್ನು ನಾಳೆಗೆಂದು ಮುಂದೆ ಹಾಕದೆ ಆಗಿಂದಾಗಲೇ ಮಾಡಿ ಮುಗಿಸುತ್ತಾರೋ ಅವರನ್ನು 'ಅದೃಷ್ಟಶಾಲಿ' ಎನ್ನಬಹುದು. ಏಕೆಂದರೆ ಅಂಥವರನ್ನು ಮೆಚ್ಚುಗೆ, ಸಾಧನೆ, ಯಶಸ್ಸುಗಳು ಹಿಂಬಾಲಿಸುತ್ತವೆ.

ನಾಳೆ ಮಾಡಿದರೂ ನಡೆಯುತ್ತದೆ ಎಂದಿದ್ದರೂ ಇಂದೇ ಮಾಡಿ ಮುಗಿಸಬೇಕು. ಏಕೆಂದರೆ ನಾಳೆ ಆ ಕೆಲಸವನ್ನು ಮಾಡಲಿಕ್ಕೆ ಸಾಧ್ಯವಾಗದ ಪ್ರಸಂಗ ಬಂದರೂ ಬರಬಹುದು. ಹಾಗಾದಾಗ, ಮಾಡಬೇಕಾದ ಕೆಲಸವನ್ನು ಹಾಗೆಯೇ ಬಿಡಬೇಕಾಗುತ್ತದೆ. ಹಾಗೆ ಬಿಡುವುದರಿಂದ ಅನೇಕ ಕಷ್ಟ-ನಷ್ಟಗಳಿಗೆ ಗುರಿಯಾಗಬೇಕಾಗಬಹುದು. ಉದಾಹರಣೆಗೆ ಹೇಳುವುದಾದರೆ, ನಮಗೆ ಪರಿಚಯದವರೊಬ್ಬರ ಮಗುನಿಗೆ ತುಂಬಾ ಗಂಟಲು ನೋವಾಗಿತ್ತು. ಆ ಮಗುನಿನ ತಾಯಿ 'ವೈದ್ಯರ ಹತ್ತಿರ ಕರೆದುಕೊಂಡು ಹೋಗಿ' ಎಂದು ಗಂಡನಿಗೆ ದುಂಬಾಲು ಬಿದ್ದಳು. ಆದರೆ ಆತನಿಗೆ ಯಾವುದೇ ಕೆಲಸವನ್ನು ತಕ್ಷಣ ಮಾಡುವ ಸ್ವಭಾವವಿರಲಿಲ್ಲ. ಆದುದರಿಂದ 'ಇವತ್ತು ಏನಾದರೂ ಮನೆಯ ವೈದ್ಯ ಮಾಡು. ನಾಳೆ ಡಾಕ್ಟರಿಗೆ ತೋರಿಸಿದರಾಯ್ತು' ಎಂದು ಉದಾಸೀನ ಮಾಡಿದ. ರಾತ್ರಿಯಾದಂತೆ, ನೊವು ಹೆಚ್ಚಾಗಿ, ಮಗುವಿನ ಉಸಿರಾಟಕ್ಕೇ ಕಷ್ಟವಾಯಿತು. ಆಗಲೂ ಸಹ ಅವನು ಅವಸರಪಡಲಿಲ್ಲ. ಅಪರಾತ್ರಿಯಲ್ಲಿ ಯಾವ ಡಾಕ್ಟರು ನೋಡುತ್ತಾರೆ., ಬೆಳಗಾದ ಕೂಡಲೇ ತೋರಿಸಿದರಾಯ್ತೆಂದು ಬಿಟ್ಟ. ಬೆಳಗಾಗುವ ಹೊತ್ತಿಗೆ ಮಗುವಿನ ಸ್ಥಿತಿ ಇನ್ನೂ ಚಿಂತಾಜನಕವಾಯ್ತು. ಡಾಕ್ಟರ ಬಳಿ ಕರೆದೊಯ್ದಾಗ, ಕಾಲ ಮೀರಿತ್ತು. ಅವರು, 'ಇಷ್ಟೇಕೆ ತಡ ಮಾಡಿದಿರಿ?' ನಿನ್ನೆಯೇ ಕರೆತರಬೇಕಿತ್ತು. ಇದು ಡಿಫ್ತೀರಿಯಾ, ಮಗುವಿಗೆ ಉಸಿರಾಡಲು ಸಾಧ್ಯವಿಲ್ಲ. ಈ ಕೂಡಲೇ ಅಪರೇಷನ್ ಮಾಡಿ, ಕೃತಕ ರೀತಿಯಲ್ಲಿ ಉಸಿರಾಟಕ್ಕೆ ವ್ಯವಸ್ಥೆ ಮಾಡಬೇಕು. ಪ್ರಯತ್ನಿಸುತ್ತೇನೆ; ಎಂದು ಆಪ್ಪರೇಷನ್‌ಗೆ ಸಿದ್ಧತೆ ಮಾಡಿಕೊಳ್ಳುತ್ತಿದ್ದಂತೆಯೇ ಮಗು ಕೊನೆಯುಸಿರೆಳೆಯಿತು. ನೋಡು ಪುಟ್ಟ, ಉದಾಸೀನ ಮಾಡಿದುದಕ್ಕೆ ಸರಿಪಡಿಸಲಾರದಂತಹ ಕೆಡುಕಿಗೆ ಕಾರಣವಾಯ್ತು. ಆತನೇನಾದರೂ ಹಿಂದಿನ ದಿನವೇ ತೋರಿಸಿದ್ದಿದ್ದರೆ ಮಗು ಸಾಯುತ್ತಿರಲಿಲ್ಲ. ಹೀಗೆ ಕೆಲಸ ಮುಂದೂಡುವ ಸ್ವಭಾವ ಅನೇಕ ಅನಾಹುತಗಳಿಗೆ ಕಾರಣವಾಗುತ್ತದೆ. ಆದುದರಿಂದ ಮಾಡಬೇಕಾದ ಕೆಲಸಗಳನ್ನು ಆದಷ್ಟು ಬೇಗ ಮಾಡಿ ಮುಗಿಸುವ ಸ್ವಭಾವ ರೂಢಿಸಿಕೊಳ್ಳಬೇಕು. ಆಲಸ್ಯಕ್ಕೆ ಅವಕಾಶ ಕೊಡದೇ ಆಗಿಂದಾಗಲೇ ಕೆಲಸ ಮಾಡುವ ಸ್ವಭಾವ ಬೆಳೆಸಿಕೊಂಡವರಿಗೆ ಸಕಾಲಕ್ಕೆ ಕೆಲಸ ಮಾಡಿ ಮುಗಿಸದಿದ್ದರೆ, ಮನಸ್ಸಿಗೆ ಸಮಾಧಾನವಾಗುವುದೇ ಇಲ್ಲ. ಆಲಸ್ಯ ಪ್ರವೃತ್ತಿ ಮನುಷ್ಯನ ಮಹಾ ಶತ್ರು ಎಂಬುದನ್ನು ತಿಳಿ. 'ಆಲಸ್ಯಂ ಅಮೃತಂ ವಿಷಂ' ಎಂದು ಹೇಳುತ್ತಾರೆ. ಆಲಸ್ಯದಿಂದ ಅಮೃತವೂ ವಿಷವಾಗುತ್ತದೆ ಎಂದರೆ ವಿಷಕ್ಕೆ ಸಮನಾದ ದುಷ್ಪರಿಣಾಮವಾಗುತ್ತದೆ ಎಂದರ್ಥ.

ವಿದ್ಯಾರ್ಥಿಯಾದ ನೀನು ಓದಬೇಕಾದುದನ್ನು ಆಗಿಂದಾಗಲೇ ಮುಗಿಸು. ಯಾವ ಕಾರಣಕ್ಕೂ ಮುಂದೂಡಬೇಡ. ಓದುವ ವಿಷಯಗಳು ದಿನದಿನಕ್ಕೂ ಹೆಚ್ಚಾಗುತ್ತವೆ. ಪರೀಕ್ಷೆಯ ಸಮಯದಲ್ಲಿ ಓದುವ ವಿಷಯಗಳೆಷ್ಟು ಎಂಬುದನ್ನು

ನೆನೆಸಿಕೊಂಡರೇ ನಿನಗೆ ಗಾಬರಿಯಾಗಬಹುದು. ಉಳಿದಿರುವ ಸಮಯದಲ್ಲಿ ಅಷ್ಟೊಂದನ್ನು ಹೇಗೆ ಓದಿ ಅರ್ಥ ಮಾಡಿಕೊಳ್ಳಲು ಸಾಧ್ಯ? ಓದಿದ್ದು ನೆನಪಿರುತ್ತದೆಯೋ ಇಲ್ಲವೋ ಎಂದು ಮನಸ್ಸಿಗೆ ದಿಕ್ಕು ತೋಚದಂತಾಗುತ್ತದೆ. ಎಲ್ಲಿ ಫೇಲಾಗುತ್ತೇನೋ ಎಂಬ ಗಾಬರಿಯುಂಟಾಗಿ ಓದಿದ್ದೂ ಸಹ ಅರ್ಥವಾಗದೆ, ಸಮಯವೆಲ್ಲಾ ವ್ಯರ್ಥವಾಗುತ್ತದೆ. ನಂತರ ಪರೀಕ್ಷೆಯಲ್ಲಿ ಸರಿಯಾಗಿ ಬರೆಯಲೂ ಸಾಧ್ಯವಾಗದೇ ಭವಿಷ್ಯವೇ ಬರಡಾಗಿ ನಿರಾಸೆಯ ಸುಳಿಯಲ್ಲಿ ಸಿಕ್ಕು ಒದ್ದಾಡುವಂತಗುವುದು. ಆದುದರಿಂದ ಆಲಸ್ಯತನಕ್ಕೆ ಆಸ್ಪದ ಕೊಡದೆ, ನಾಳೆ ಮಾಡುವುದನ್ನು ಇಂದೇ ಮಾಡಿ ಮುಗಿಸುವ ಪ್ರವೃತ್ತಿ ಬೆಳೆಸಿಕೋ. ಅಂತಹವರನ್ನು ಅದೃಷ್ಟ ಬೆಂಬತ್ತಿ ಬರುತ್ತದೆ. ಯಶಸ್ಸು ನೆಮ್ಮದಿ, ಸಂಪತ್ತುಗಳು ಅವನಿಗಾಗಿ ಕಾದು ನಿಂತಿರುತ್ತವೆ.

ನಾಳೆ ಮಾಡುವುದನ್ನು ಇಂದೇ ಮಾಡಿ ಮುಗಿಸಬೇಕೆಂದು, ಹೇಗೋ ಮಾಡಿ ಮುಗಿಸಿದರೆ, ಕೆಲಸ ಮುಗಿಸಿದಂತಲ್ಲ. ಮಾಡುವ ಕೆಲಸವನ್ನು ಶ್ರದ್ಧೆಯಿಂದ ಮಾಡಬೇಕು; ನಿಷ್ಠೆಯಿಂದ ಮಾಡಬೇಕು; ಕೆಲಸದಲ್ಲಿ ಕೊರತೆ ಇರಬಾರದು ದೋಷವಿರಬಾರದು. ಹೀಗೆ ಮಾಡಿದವರು ಉನ್ನತಿಯನ್ನು ಪಡೆಯುತ್ತಾರೆ. ಎಲ್ಲರ ಮೆಚ್ಚುಗೆಗೆ ಪಾತ್ರರಾಗುತ್ತಾರೆ; ಸಂತುಷ್ಟರಾಗಿ ಬದುಕುತ್ತಾರೆ. ಅವರನ್ನು ಎಲ್ಲರೂ ಮೆಚ್ಚಗೆಯಿಂದ ಗುರುತಿಸುತ್ತಾರೆ. ಅಂತಹ ಮೆಚ್ಚುಗೆಗಳಿಸುವ ರೀತಿಯಲ್ಲಿ ನೀನು ಬೆಳೆಯಬೇಕು; ಬಾಳಬೇಕು; ತಿಳಿಯಿತೆ? ಪತ್ರ ಮುಗಿಸುವೆ.

ಇಂತು ನಿನ್ನ
ಹಿತೈಷಿ,

■

## ೧೪. ಸಾರ್ಥಕ ಜೀವನ

ಪ್ರೀತಿಯ ಪುಟ್ಟಾ,

'ಪುಸ್ತಕ ಅತ್ಯಂತ ಒಳ್ಳೆಯ ಮಿತ್ರ' ಎಂದು ಹೇಳುವ ಮಾತನ್ನು ಕೇಳಿರಬೇಕಲ್ಲವೆ? ಒಳ್ಳೆಯ ಮಿತ್ರನಾದವನು ನಮಗೆ ಸದಾ ಒಳಿತನ್ನು ಮಾಡುತ್ತಾನೆಯೇ ಹೊರತಾಗಿ ಕೆಡುಕು ಮಾಡುವುದಿಲ್ಲ. ಅವನು ಕಷ್ಟ ಕಾಲದಲ್ಲಿ ನೆರವು ನೀಡುವ ಆಪದ್ಬಾಂಧವನಾಗಿರುತ್ತಾನೆ. ಕೆಡುಕನ್ನಂತೂ ಎಂದಿಗೂ ಮಾಡುವುದಿಲ್ಲ. ವಿರಸ, ದ್ವೇಷ, ಮನಸ್ತಾಪಗಳು ಉಂಟಾಗುವುದೇ ಇಲ್ಲ.

ಅದೇ ರೀತಿ, ಓದುವ ರೂಢಿಯನ್ನು ನಾವು ಬೆಳೆಸಿಕೊಂಡರೆ, ಒಬ್ಬ ಒಳ್ಳೆಯ

ಸ್ನೇಹಿತನನ್ನು ಪಡೆದಂತೆ, ಏಕೆಂದರೆ ಯಾರೂ ಇಲ್ಲದೆ ಒಂಟಿಯಾಗಿ ಬೇಸರವಾದಾಗ ಪುಸ್ತಕ ಓದುತ್ತಿದ್ದರೆ, ಬೇಸರ ಓಡಿ ಹೋಗುತ್ತದೆ. ಮನಸ್ಸಿಗೆ ಆನಂದವಾಗುತ್ತದೆ. ಒಂಟಿತನ ಕಾಡುವುದಿಲ್ಲ. ಅಲ್ಲದೆ ಬಿಡುವಿನ ವೇಳೆಯ ಸದುಪಯೋಗವಾಗುತ್ತದೆ. ಜೊತೆಗೆ ಜ್ಞಾನಾರ್ಜನೆಯೂ ಉಂಟಾಗುತ್ತದೆ. ಅನೇಕ ಕ್ಷೇತ್ರದಲ್ಲಿ ವಿಷಯಗಳನ್ನು ತಿಳಿದುಕೊಂಡ ಮನುಷ್ಯ ಯಾವುದೇ ಸಂದರ್ಭ ಬಂದರೂ ಅಲ್ಲಿ ಅರ್ಥಪೂರ್ಣವಾಗಿ ಸ್ಪಂದಿಸಬಲ್ಲ. ಹಾಗೆ ಮಾಡಿದಾಗ ಬೇರೆಯವರಿಗೂ ಒಳಿತಾಗುವುದಲ್ಲದೆ, ಆ ವ್ಯಕ್ತಿಗೂ ಒಂದು ಗೌರವದ ಸ್ಥಾನ ದೊರೆಯುತ್ತದೆ. ಆದುದರಿಂದ ಓದುವ ಹವ್ಯಾಸ ಬೆಳೆಸಿಕೊಳ್ಳುವುದು ನಿಜವಾಗಿಯೂ ಬಹಳ ಪ್ರಯೋಜನಕರವಾದುದು.

ಈ ವಿಚಾರ ನಿನಗೆ ಏಕೆ ಬರೆಯಬೇಕು ಎನ್ನಿಸಿತೆಂದರೆ, ಈ ದಿನ ಆಕಸ್ಮಾತ್ತಾಗಿ 'ಸಾಧನೆಯ ಸಿರಿ' ಎಂಬ ಪುಸ್ತಕ ಒಂದು ನನ್ನ ಕಣ್ಣಿಗೆ ಬಿತ್ತು. ಅದು ಒಂದು ಮ್ಯಾಗಝೀನಿನಂತೆ ಕಾಣುತ್ತಿತ್ತು. ಅಷ್ಟೇನು ಕುತೂಹಲ ಉಂಟಾಗಲಿಲ್ಲವಾದರೂ, ಬಿಡುವಿದ್ದುದರಿಂದ, ಹಾಳೆಗಳನ್ನು ತಿರುವಿ ಹಾಕಹತ್ತಿದೆ. ಅಲ್ಲಿಯ ಕೆಲವು ಲೇಖನಗಳು ನನ್ನಲ್ಲಿ ಕುತೂಹಲ ಕೆರಳಿಸಿದವು. ತುಂಬಾ ಉಪಯುಕ್ತವಾದ ಅನೇಕ ವಿಷಯಗಳು ತಿಳಿದವಲ್ಲದೆ, ಇದುವರೆಗೂ ನನಗೆ ಗೊತ್ತಿಲ್ಲದ ಒಂದು ವಿಷಯ ತಿಳಿಯಿತು.

ಆ ಗ್ರಂಥ ಶ್ರೀ ಎಂ. ವಾಸುದೇವಾಚಾರ್ಯರೆಂಬುವರ ಎಪ್ಪತ್ತನೆ ಹುಟ್ಟು ಹಬ್ಬದ ಸವಿನೆನಪಿನ ಸಂಚಿಕೆಯಾಗಿತ್ತು. ನಾನು ಬಳ್ಳಾರಿ ಜಿಲ್ಲೆಯ ಕೊಟ್ಟೂರಿಗೆ ಅನೇಕ ಸಲ ಹೋಗಿರುವೆನಾದರೂ ಅಲ್ಲಿಗೆ ನಲವತ್ತೈದು ಕಿಲೋಮೀಟರ್ ದೂರದಲ್ಲಿರುವ 'ಸರ್ವೋದಯ ಗ್ರಾಮ ವಸತಿ ಶಾಲೆ'ಯ ಬಗ್ಗೆ ಕೇಳಿಯೇ ಇರಲಿಲ್ಲ. ಈ ಸಂಚಿಕೆಯಲ್ಲಿ ಅದರ ಬಗ್ಗೆ ಮಾಹಿತಿ ಇತ್ತು. ಈ ಶಾಲೆ ಶ್ರೀ ಎಂ.ವಾಸುದೇವಾಚಾರ್ಯರ ಶ್ರಮದ ಫಲ. ಅವರು ಈ ಒಂದು ಸಂಸ್ಥೆಯನ್ನು ಕಲ್ಲು ಮುಳ್ಳಿನ ಕಗ್ಗಾಡು ಪ್ರದೇಶವಾದ ಗುಡೇಕೋಟೆಯ ಸಮೀಪದಲ್ಲಿ ಕಟ್ಟಿ ಬೆಳೆಸಿರುವ ಸಂಗತಿ, ಒಂದು ಪವಾಡದಂತಿದೆ. ಒಬ್ಬನೇ ವ್ಯಕ್ತಿ, ಅವನ ಗುರಿ ಶ್ರೇಷ್ಠಮಟ್ಟದ್ದಾಗಿದ್ದು, ಸಂಕಲ್ಪ ದೃಢವಾಗಿದ್ದರೆ, ಕಾಯಾ, ವಾಚಾ, ಮನಸಾ, ದುಡಿಯುವ ಪ್ರವೃತ್ತಿ ಇದ್ದರೆ ಸದುದ್ದೇಶವಿದ್ದರೆ, ಸ್ವಾರ್ಥವೇ ಇಲ್ಲದ ತ್ಯಾಗಶೀಲ ಮನೋಭಾವವಿದ್ದರೆ, ಏನನ್ನು ಬೇಕಾದರೂ ಸಾಧಿಸಲು ಸಾಧ್ಯ ಎಂಬುದನ್ನು ಈ ವಸತಿಶಾಲೆ ಸಾರಿ ಹೇಳುತ್ತದೆ.

ಒಬ್ಬ ಸಾಮಾನ್ಯ ಶಿಕ್ಷಕರಾಗಿದ್ದ ಶ್ರೀ ಎಂ. ವಾಸುದೇವಾಚಾರ್ಯರು, ಸಂಬಳಕ್ಕಾಗಿ ದುಡಿಯುವುದರಿಂದ, ಆದರ್ಶ ಶಿಕ್ಷಕನಾಗಿ ತಾನು ಮಾಡಬೇಕಾದುದನ್ನು ಮಾಡುವುದಕ್ಕೆ ಸಾಧ್ಯವಿಲ್ಲವೆಂದು ತಿಳಿದು, ತನ್ನ ಉದ್ಯೋಗಕ್ಕೆ ರಾಜೀನಾಮೆ ನೀಡಿ ಈ ಒಂದು

ಸಂಸ್ಥೆಯನ್ನು ಕಟ್ಟಿದ್ದಾರೆ; ಬೆಳೆಸಿದ್ದಾರೆ; ಬೆಳಗಿಸುತ್ತಿದ್ದಾರೆ. ಮೂರುನೂರಾ ಐವತ್ತು ವಿದ್ಯಾರ್ಥಿಗಳ ಒಂದು ವಸತಿಶಾಲೆ ಆದರ್ಶ ರೂಪವಾಗಿ, ಇತರ ಶಾಲೆಗಳಿಗೆ ಮಾದರಿಯಾಗಿದೆ. ಒಂದು ಶಾಲೆ ನಿಜವಾಗಿ ತನ್ನ ವಿದ್ಯಾರ್ಥಿಗಳನ್ನು ಹೇಗೆ ರೂಪಿಸಬೇಕು ಎಂಬುದನ್ನು ಉದಾಹರಣೆಯಾಗಿ ಈ ಶಾಲೆ ತಲೆ ಎತ್ತಿನಿಂತಿದೆ ಎಂದರೆ, ಅದರ ರೂವಾರಿಗೆ ಎಂತಹ ನಿಷ್ಠೆ, ಆದರ್ಶ, ಸತತ ಪರಿಶ್ರಮ, ನಿಶ್ಚಿತ ಗುರಿ ಇರಬೇಕು ಎಂಬುದನ್ನು ಊಹಿಸಬಹುದು. ಶ್ರೀ ಎಂ. ವಾಸುದೇವಾಚಾರ್ಯರು ಸದ್ದುಗದ್ದಲವಿಲ್ಲದೆ, ಎಲೆ ಮರೆಯ ಕಾಯಿಯಂತೆ ದುಡಿದುದರ ಫಲವಾಗಿ ಗುಡ್ಡ, ಕಾಡುಗಳಿಂದ, ಕಾಡು ಮೃಗಗಳಿಂದ ಆವೃತವಾಗಿದ್ದ ಪ್ರದೇಶದಲ್ಲಿ ಅತ್ಯಾಧುನಿಕ ಬೃಹತ್ ಕಟ್ಟಡಗಳು ನಿಂತಿವೆ. ಹಣ್ಣು ಹಂಪಲುಗಳ ಮರ ಗಿಡಗಳು ತಲೆ ಎತ್ತಿವೆ. ಇದರ ಹಿಂದೆ ಒಬ್ಬ ವ್ಯಕ್ತಿ ಬೆನ್ನೆಲುಬಾಗಿ ನಿಂತಿದ್ದಾನೆ ಎಂದರೆ ಆಶ್ಚರ್ಯವಾಗುತ್ತದೆ. Where there is a will, there is a way ಎಂಬುದು ಇಲ್ಲಿ ಸಾಬೀತುಗೊಳಿಸಲ್ಪಟ್ಟಿದೆ.

'ಶ್ರೀ ಎಂ.ವಿ.'ಯವರೆಂದೇ ಪ್ರಖ್ಯಾತರಾಗಿರುವ ಎಂ. ವಾಸುದೇವಾಚಾರ್ಯರು ಎಪ್ಪತ್ತರ ವಯಸ್ಸಿನಲ್ಲಿ ಚಟುವಟಿಕೆಯ ಬುಗ್ಗೆಯಾಗಿ ಕೆಲಸ ಮಾಡುತ್ತಾರೆ. ಅವರ ತತ್ವ, ವ್ಯರ್ಥವಾಗಿ ಕಾಲವ್ಯಯ ಮಾಡುವುದು ಅಪರಾಧ ಎಂಬುದು. ಮನುಷ್ಯ ಸುಮ್ಮನೆ ಕುಳಿತಿರಬಾರದು, ಅದರಿಂದ ಅವನಿಗೂ ಕೇಡು, ದೇಶಕ್ಕೂ ಹಾನಿ ಎನ್ನುತ್ತಾರಂತೆ. ಬಹಳಷ್ಟು ಜನ ಮಾಡುವಂತೆ, ಬೇರೆಯವರಿಗೆ ಉಪದೇಶ ಮಾಡಿ, ತಾವು ಮಾತ್ರ ಕಾಲಕಳೆಯುವುದಿಲ್ಲ. ಎಲ್ಲರಿಗಿಂತ ಹೆಚ್ಚಾಗಿ ಅವರೇ ಇಂದಿಗೂ ದುಡಿಯುತ್ತಾರಂತೆ. ಇವರ ವಿಚಾರ ಓದಿ ನನಗೆ ಬಹಳಷ್ಟು ಸಂತೋಷವಾಯ್ತು. ಇಂತಹ ಜನ ನಮ್ಮಲ್ಲಿ ಅಪರೂಪ. ಆದರೆ, ಅಂತಹವರ ಮಾರ್ಗದರ್ಶನದಲ್ಲಿ ಬೆಳೆದ ಮಕ್ಕಳು ದೇಶಕ್ಕೆ ಕೀರ್ತಿ ತರುವುದರಲ್ಲಿ ಸಂಶಯವಿಲ್ಲ. ನಿನಗೂ ಆ ಪುಸ್ತಕ ಸಿಕ್ಕಿದರೆ ಓದು. ಅವರ ಜೀವನ, ಬೆಳೆಯುವವರಿಗೆ ಒಂದು ಮಾರ್ಗದರ್ಶನ.

ಇಲ್ಲಿಗೆ ಈ ಪತ್ರ ಮುಗಿಸುತ್ತೇನೆ. ಖಂಡಿತಾ ಪುಸ್ತಕ ಓದುವ ಹವ್ಯಾಸ ಬೆಳೆಸಿಕೋ. ಕೇವಲ ಪಾಠಕ್ಕೆ ಸಂಬಂಧಿಸಿದ ಪುಸ್ತಕಗಳಿಗಷ್ಟೇ ನಿನ್ನ ಓದು ಸೀಮಿತವಾಗದಿರಲಿ. ಅನೇಕ ಒಳ್ಳೆಯ 'ಪುಸ್ತಕಮಿತ್ರ' ರನ್ನು ಸಂಪಾದಿಸಿಕೋ.

ಇಂತು ನಿನ್ನ

ಹಿತೈಷಿ.

■

## ೧೫. ಮಿತವ್ಯಯ ಬದುಕು

ಪ್ರೀತಿಯ ಪುಟ್ಟಾ,

ನಿನಗೊಮ್ಮೆ ತಾಳ್ಮೆಯ ಬಗ್ಗೆ ಬರೆದಿದ್ದೆನಲ್ಲವೆ? ತಾಳ್ಮೆ ಉತ್ತಮ ವ್ಯಕ್ತಿತ್ವ ರೂಪಿಸಿಕೊಳ್ಳಲು ಅಗತ್ಯವಾದ ಒಂದು ಗುಣ. ನಾವು ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವ ಜೊತೆ-ಜೊತೆಯಲ್ಲೇ, ಜೀವನದಲ್ಲಿ ಸಮಸ್ಯೆಗಳಿಗೆ ಅವಕಾಶ ಕೊಡದೆ ಉತ್ತಮ ರೀತಿಯ ಯಶಸ್ವೀ ಜೀವನವನ್ನೂ ಬದುಕುವುದನ್ನು ಕಲಿತುಕೊಳ್ಳಬೇಕು. ನಾವು ಎಷ್ಟೇ ಒಳ್ಳೆಯವರಾಗಿದ್ದರೂ, ಬದುಕಲು ಬೇಕಾದ ಎಚ್ಚರಿಕೆ, ಜಾಣ್ಮೆಗಳು ಇಲ್ಲದಿದ್ದಲ್ಲಿ ಕಷ್ಟ-ನಷ್ಟಗಳಿಗೆ ಒಳಗಾಗುವ ಸಂಭವಗಳು ಹೆಚ್ಚು. ಆದುದರಿಂದ ಮಗೂ, ಈ ವಿಷಯದಲ್ಲೂ ಎಚ್ಚರಿಕೆ ಅವಶ್ಯ.

ಯಶಸ್ವೀ ಜೀವನ ಬದುಕಲು ಬೇಕಾದ, ಅನೇಕ ಮುಖ್ಯ ಗುಣಗಳಲ್ಲಿ ಮಿತವ್ಯಯವೂ ಒಂದು. ನಾವು ಸಿರಿವಂತರಿರಲಿ, ಬಡವರಿರಲಿ ಮಿತವ್ಯಯದ ಮಹತ್ವ ತಿಳಿದಿರಬೇಕು. ಬೇಕಾದಷ್ಟು ಸಂಪತ್ತಿದ್ದರೂ ಮಿತವ್ಯಯದಿಂದ ಬದುಕುವುದು ಗೊತ್ತಿಲ್ಲದ್ದಿದ್ದರೆ, ಅಂತಹ ವ್ಯಕ್ತಿ ಬೇರೆಯವರನ್ನು ಬೇಡುವಂತಹ ಸ್ಥಿತಿಗೆ ಬರಲು ತಡವಾಗುವುದಿಲ್ಲ. ದುಂದುಗಾರಿಕೆ ಮನುಷ್ಯನನ್ನು 'ನಾಳೆ'ಯ ಬಗ್ಗೆ ಚಿಂತಿಸದಂತೆ ಮಾಡುತ್ತದೆ. ಆಸೆ-ಆಮಿಷಗಳಿಗೆ ಒಳಗಾಗುವಂತೆ ಮಾಡುತ್ತದೆ. ದುಷ್ಟರ, ಸ್ವಾರ್ಥಿಗಳ ಒಡನಾಟಕ್ಕೆ ಹಾದಿ ಮಾಡುತ್ತದೆ. ಹಾಗಾಗಿ ಅವನಿಗೆ ಎಷ್ಟು ಸಂಪತ್ತಿದ್ದರೂ ಸಾಲದಾಗಿ, ಸಾಲಗಾರನಾಗಿ ಬಿಡುತ್ತಾನೆ. ಜೀವನಾವಶ್ಯಕಗಳಿಗೇ ಕಾಸಿಲ್ಲದವನಾಗಿ, ಪರಿತಪಿಸಬೇಕಾಗುತ್ತದೆ.

ಬಡವನಿಗಂತೂ ಮಿತವ್ಯಯ ಜೀವನ ಅನಿವಾರ್ಯ. ಅವನಿಗೇನಾದರೂ ದುಂದು ವೆಚ್ಚ ಮಾಡುವ ಸ್ವಭಾವವಿದ್ದರೆ ಅವನ ಕಥೆ ಮುಗಿದಂತೆಯೇ! ಬಡವನಾದವನು, ತನ್ನ ಆದಾಯವೇನು? ತನ್ನ ಅವಶ್ಯಕತೆಗಳೇನು? ತನಗೆ ಎಷ್ಟು ಖರ್ಚುಮಾಡಲು ಸಾಧ್ಯವಿದೆ? ತನ್ನ ಆಧಾಯಕ್ಕೂ ಖರ್ಚಿಗೂ ಹೇಗೆ ಸರಿದೂಗಿಸಿಕೊಳ್ಳಬೇಕು ಎಂಬುದನ್ನು ಮೊದಲೇ ಲೆಕ್ಕಾಚಾರ ಹಾಕಿಕೊಂಡು ಬದುಕಬೇಕು. ತನ್ನ ಅವಶ್ಯಕತೆಗಳಿಗೆ ಸಾಕಷ್ಟು ಹಣ ತನ್ನಲ್ಲಿ ಇರದಿದ್ದರೆ, ಯಾವ ಬಾಬತ್ತಿನಲ್ಲಿ ಕಡಿತ ಮಾಡಿಕೊಳ್ಳಬೇಕು, ಮಾಡಿಕೊಳ್ಳಬಹುದು ಎಂದು ಆಲೋಚಿಸಿ, ಎಲ್ಲೆಲ್ಲಿ ಖರ್ಚು ಕಡಿಮೆ ಮಾಡಿಕೊಳ್ಳಲು ಬರುತ್ತದೆಯೋ ಅಲ್ಲಲ್ಲಿ ಕಡಿತ ಮಾಡಿಕೊಳ್ಳಬೇಕು. ಇಲ್ಲದಿದ್ದಲ್ಲಿ ಅವನು ಅನೇಕ ಸಮಸ್ಯೆಗೆ ಒಳಗಾಗಿ ಭವಿಷ್ಯವನ್ನು ರೂಪಿಸಿಕೊಳ್ಳಲು ಅಸಾಧ್ಯವಾದ ಪರಿಸ್ಥಿತಿ ಅವನಿಗೆ ಬರಬಹುದು. ಅದಕ್ಕಾಗಿಯೇ ಅನುಭವಸ್ಥರು, 'ಹಾಸಿಗೆ ಇದ್ದಷ್ಟು ಕಾಲು ಚಾಚಬೇಕು', ಎಂದು ಬುದ್ಧಿಯ

ನುಡಿಗಟ್ಟನ್ನು ಹೇಳಿದ್ದಾರೆ. ಹಾಸಿಗೆ ಚಿಕ್ಕದಿದ್ದಾಗ ನಾವು ಅದರ ಹೊರಕ್ಕೂ ಕಾಲು ಚಾಚಿದರೆ, ಕಾಲಿಗೆ ತಂಪು ಅಡರಿ ಅನಾರೋಗ್ಯಕ್ಕೆ ಗುರಿಯಾಗಬೇಕಾಗುತ್ತದೆ. ಹಾಗೆಯೇ ನಮ್ಮ ಆದಾಯಕ್ಕೆ ಮೀರಿ ಖರ್ಚು ಮಾಡಿದರೆ, ಸಾಲಗಾರರಾಗಬೇಕಾಗುತ್ತದೆ. ಸಾಲಗಾರನಿಗೆ ಸಮಾಜದಲ್ಲಿ ಬೆಲೆ ಇಲ್ಲ. ಹಾಗಾಗಿ ಅವನು ಅವಮಾನಿತವಾಗಿ ಬದುಕಬೇಕಾಗುತ್ತದೆ. ಅಷ್ಟೇ ಅಲ್ಲ. ಸಾಲಕ್ಕೆ ಬಡ್ಡಿ ತೆರಬೇಕಾಗುತ್ತದೆ. ಆಗ ದುಡಿದದ್ದನ್ನೆಲ್ಲಾ ಬಡ್ಡಿಗೇ ತೆತ್ತು, ಜೀವನಾವಶ್ಯಕ ಖರ್ಚಿಗೆ ಕೊರತೆಯಾಗುತ್ತದೆ. ಮನೆಯ ಮಕ್ಕಳ ಆರೋಗ್ಯ, ಶಿಕ್ಷಣ, ಉಡುಗೆ ಮುಂತಾದವುಗಳಿಗೆ ಹಣವಿಲ್ಲವಾಗಿ ಮನಸ್ಸು ಚಿಂತೆಯೆಂಬ ಸಾಗರದಲ್ಲಿ ಮುಳುಗಿ ಹೋಗುತ್ತದೆ. ಸಾಲ ಮಾಡಿದವನ ಸ್ಥಿತಿ 'ಸಾಲ ಮಾಡಿ ಓಲೆ ತಂದ, ಓಲೆ ಮಾರಿ ಬಡ್ಡಿ ತೀರಿಸಿದ' ಎನ್ನುವಂತೆ, ಸಾಲದ ಹೊರೆಯಿಂದ ಬಿಡಿಸಿಕೊಳ್ಳಲು ಆಗುವುದೇ ಇಲ್ಲ.

ಆದುದರಿಂದ ಮಗೂ, ನೀನು ಮಿತವ್ಯಯದಿಂದ ಬದುಕುವುದನ್ನು ಈಗಿನಿಂದಲೆ, ಕಲಿ. ಕೆಲವು ಮಕ್ಕಳು ಬೇರೆ ಯಾರೋ ಹುಡುಗರು, ಒಳ್ಳೊಳ್ಳೆಯ ಬಟ್ಟೆ ಧರಿಸುತ್ತಾರೆ. ವಾಹನದಲ್ಲಿ ಬರುತ್ತಾರೆ ಎಂದು, ತಮಗೂ ಅಂತಹದ್ದೆಲ್ಲಾ ಬೇಕೆಂದು ಹಟ ಮಾಡುವುದುಂಟು. ಹಾಗೆ ಮಾಡಿದಾಗ ತಂದೆ-ತಾಯಿಯರು ಅಷ್ಟುಕೊಳ್ಳಲು ಹಣವಿಲ್ಲದೆ, ಇಲ್ಲವೆಂದಾಗ ದುಃಖದಿಂದ, ಸಿಟ್ಟಿನಿಂದ ಅನೇಕ ತೊಂದರೆಗಳಿಗೆ ಒಳಗಾಗುತ್ತಾರೆ. ಕೆಲವು ಹುಡುಗರು ಪುಸ್ತಕ, ಪೆನ್ನು, ಪೆನ್ಸಿಲ್ ಮುಂತಾದ ಅವಶ್ಯಕ ಸಾಮಾನುಗಳನ್ನು ವ್ಯರ್ಥವಾಗುವಂತೆ ಬಳಸುತ್ತಾರೆ. ಎಚ್ಚರಿಕೆ ವಹಿಸದೆ ಕಳೆದುಕೊಳ್ಳುತ್ತಾರೆ. ಅದರಿಂದಲೂ ಹಣದ ಅಪವ್ಯಯವಾಗಿ ತೊಂದರೆಗಳಿಗೆ ಗುರಿಯಾಗಬೇಕಾಗುತ್ತದೆ. ಹಾಗಾಗದಂತೆ ನೀನು ನಿನ್ನ ವಸ್ತುಗಳನ್ನು ಸರಿಯಾಗಿ ನೋಡಿಕೊಳ್ಳಬೇಕು. ವ್ಯರ್ಥವಾಗದ ರೀತಿ ಬಳಸಬೇಕು. ಗಾಂಧೀಜಿಯವರಿಂದ ನಾವು ಮಿತವ್ಯಯದ ಪಾಠಕಲಿಯಬಹುದು. ಅವರಿಗೆ ದಿನವೂ ಅನೇಕ ಪತ್ರಗಳು ಬರುತ್ತಿದ್ದವು. ಕೆಲವು ಪತ್ರಗಳಿಗೆ ಗುಂಡುಸೂಜಿ (ಟಾಚನಿ)ಯನ್ನು ಚುಚ್ಚಿರುತ್ತಿದ್ದರು. ಕೆಲವು ಹಾಳೆಗಳಲ್ಲಿ ಕೆಲವೇ ಸಾಲುಗಳು ಬರೆದಿರುತ್ತಿದ್ದವು. ಉಳಿದೆಲ್ಲ ಭಾಗ ಖಾಲಿ ಇರುತ್ತಿತ್ತು. ಆಗ ಮಹಾತ್ಮಾಗಾಂಧಿಜೀ ಏನು ಮಾಡುತ್ತಿದ್ದರು ಗೊತ್ತೆ? ಪತ್ರದ ಕೆಲಸ ಮುಗಿದ ಮೇಲೆ ಅದರಲ್ಲಿದ್ದ ಗುಂಡುಸೂಜಿಯನ್ನು ತೆಗೆದುಕೊಂಡು, ತಮ್ಮ ಕೆಲಸಕ್ಕೆ ಬೇಕಾದಾಗ ಬಳಸಿಕೊಳ್ಳುತ್ತಿದ್ದರು. ಪತ್ರದೊಂದಿಗೆ ಎಸೆಯುತ್ತಿರಲಿಲ್ಲ. ಖಾಲಿ ಇದ್ದ ಹಾಳೆಗಳನ್ನು ಅಷ್ಟೇ ಅಷ್ಟು ಭಾಗವನ್ನು ಕತ್ತರಿಸಿಟ್ಟುಕೊಂಡು, ತಮ್ಮ ಬರವಣಿಗೆಗೆ ಉಪಯೋಗಿಸಿಕೊಳ್ಳುತ್ತಿದ್ದರಂತೆ. ನೋಡು ಮರಿ, ಅಂತಹ ದೊಡ್ಡ ಮನುಷ್ಯರು ತಮಗೆ ಬೇಕೆಂದಿದ್ದರೆ, ಥಾನುಗಟ್ಟಲೇ ಹಾಳೆಗಳನ್ನು ತಂದು ಕೊಡುವ ಜನರಿದ್ದರು.

ಬೇಕಾದಷ್ಟು ಸಿಗುತ್ತದೆ ಎಂದು ಅವರೆಂದೂ ಸಿಕ್ಕಾಪಟ್ಟೆ ಬಳಸುತ್ತಿರಲಿಲ್ಲ. ಯಾವುದನ್ನೂ ವ್ಯರ್ಥವಾಗಲೂ ಬಿಡುತ್ತಿರಲಿಲ್ಲ. ಅವರು ನಮಗೆಲ್ಲಾ ಮಿತವ್ಯಯಕ್ಕೆ ಒಂದು ಮಾದರಿಯಾಗಿದ್ದಾರೆ.

ನೀನು ಈಗಿನಿಂದಲೇ ಎಚ್ಚರಿಕೆಯಿಂದ ಖರ್ಚು ಮಾಡುವುದನ್ನು ಕಲಿ. ಆಗ ಮುಂದೆ ಎಷ್ಟೇ ಹಣವಿದ್ದರೂ ದುಂದು ವೆಚ್ಚ ಮಾಡುವ ಸ್ವಭಾವ ಬರುವುದಿಲ್ಲ. ಈಗ ಇಲ್ಲಿಗೆ ಸಾಕು. ಮತ್ತೆ ಬರೆಯುವೆ.

ಇಂತಿ ನಿನ್ನ,
ಹಿತೈಷಿ.

## ೧೬. ಇತರರನ್ನು ಧಿಡೀರನೆ ನಂಬಬೇಡ

ಪ್ರೀತಿಯ ಪುಟ್ಟಾ,

ಜೀವನದಲ್ಲಿ ಕಲಿಯುವುದು ಬಹಳವಿದೆ. ಹುಟ್ಟಿನಿಂದ ಸಾಯುವವರೆಗೆ ಹೆಜ್ಜೆ ಹೆಜ್ಜೆಗೂ ಕಲಿಬೇಕು. ಕೇವಲ ಪುಸ್ತಕದ ಓದಿನಿಂದ ಬಂದ ಕಲಿಕೆ ಸಾಲದು. ಜೀವನವೇ ಒಂದು ಪುಸ್ತಕ ಭಂಡಾರ. ಜೀವನದ ಪ್ರತಿಯೊಂದು ಅನುಭವವೂ ನಮಗೊಂದು ಪಾಠ. ಅದರಿಂದ ನಮ್ಮ ತಿಳಿವಳಿಕೆಯನ್ನು ಹೆಚ್ಚಿಸಿಕೊಳ್ಳುತ್ತಾ ನಮ್ಮ ನಡವಳಿಕೆಯನ್ನು ತಿದ್ದಿಕೊಳ್ಳುತ್ತಾ ಹೋಗಬೇಕು.

ನಾವು ಎಷ್ಟೋ ಸಾರಿ ಬೇರೆಯವರ ಮಾತಿನಿಂದ ಪ್ರಭಾವಿತರಾಗಿ ಏನೋ ಕೆಲಸ ಮಾಡುತ್ತೇವೆ. ಆಗ ತಪ್ಪುಗಳೂ ಆಗಬಹುದು. ನಮ್ಮ ತಪ್ಪು ನಂತರ ಗೊತ್ತಾಗುತ್ತದೆ. ಆಗ ನಾವು, 'ಹೀಗೆ ವಿಮರ್ಶೆ ಮಾಡದೆ ಬೇರೆಯವರ ಮಾತನ್ನು ನಂಬಿ ಕಾರ್ಯಪ್ರವೃತ್ತರಾಗಬಾರದು' ಎಂಬ ಪಾಠ ಕಲಿತುಕೊಳ್ಳಬೇಕು. ಅಲ್ಲದೆ, ಪುನಃ ಪುನಃ ಇತರರ ಮಾತಿಗೆ ಸಾರಾಸಾರ ವಿಚಾರ ಮಾಡದೆ ಬೆಲೆಕೊಡುತ್ತಾ ತಪ್ಪುಗಳನ್ನು ಮಾಡುತ್ತಾ ಹೋದರೆ, ಅದು ಮೂರ್ಖತನವಾಗುತ್ತದೆ. ಮೂರ್ಖತನವಾಗುವುದಷ್ಟೇ ಅಲ್ಲ; ನಾವು ಅನೇಕ ಸಮಸ್ಯೆಗಳಿಗೂ ಒಳಗಾಗಬಹುದು. ಅಥವಾ ತುಂಬಾ ಕೆಡುಕುಂಟುಮಾಡುವ ಅಪರಾಧಕ್ಕೂ ಒಳಗಾಗಬಹುದು.

ಅಂದರೆ ಬೇರೆಯವರ ಮಾತಿಗೆ ಬೆಲೆ ಕೊಡಲೇ ಬಾರದು ಎಂದು ಅರ್ಥವಲ್ಲ. ಬೇರೆಯವರ ಮಾತಿಗೆ ಬೆಲೆ ಕೊಡುವಾಗ, ಆ ವ್ಯಕ್ತಿ ನಂಬಿಕೆಗೆ ಅರ್ಹನೆ ಎಂಬುದನ್ನು ಯೋಚಿಸಬೇಕು. ಅವನ ಗುಣ-ಸ್ವಭಾವ ಚೆನ್ನಾಗಿ ಗೊತ್ತಿರಬೇಕು. ಅವನು ಹೇಳಿದ

ಮಾತನ್ನು ಕೂಡಲೇ ನಂಬದೆ, ಅದು ಸರಿಯೇ ಅಲ್ಲವೇ ಎಂದು ಸ್ವತಃ ತರ್ಕಿಸಿ ನೋಡಬೇಕು. ಯಾವುದೇ ವಿಚಾರವನ್ನೂ ಪ್ರಮಾಣಿಸಿ ನೋಡಬೇಕು. ಈ ಬಗ್ಗೆ ಒಂದು ದೃಢವಾದ ನಿರ್ಧಾರ ಮಾಡಿಕೋ.

ಸಾಮಾನ್ಯವಾಗಿ ಒಳ್ಳೆಯ ಜನರು ಬೇಗ ಇತರರನ್ನು ನಂಬಿ ಬಿಡುತ್ತಾರೆ. ಏಕೆಂದರೆ ತಾವು ಇತರರಿಗೆ ಕೆಟ್ಟದನ್ನೇನೂ ಹೇಳುವುದಿಲ್ಲ. ಇತರರೂ ಹಾಗೆಯೇ ಎಂದು ತಿಳಿದುಕೊಂಡು ಬಿಡುತ್ತಾರೆ. ಆದರೆ ಅವರ ಮುಗ್ಧ ಸ್ವಭಾವವನ್ನು ಅರಿತ ದುಷ್ಟರು, ಇವರನ್ನು ಸುಲಭವಾಗಿ ನಂಬಿಸಿ ಮೋಸ ಮಾಡಿ, ಲಾಭ ಮಾಡಿಕೊಳ್ಳಬಹುದೆಂದು ಅರ್ಥ ಮಾಡಿಕೊಳ್ಳುತ್ತಾರೆ. ವಂಚಿಸಿ ಅವರನ್ನು ಕಷ್ಟಕ್ಕೆ ಗುರಿ ಮಾಡಿ, ತಾವು ಲಾಭ ಮಾಡಿಕೊಳ್ಳುತ್ತಾರೆ. ಎಲ್ಲರೂ ಹಾಗೆ ಮಾಡುವುದಿಲ್ಲವಾದರೂ ಅಂಥವರೂ ಇರುತ್ತಾರೆ ಎಂಬ ಎಚ್ಚರವಿರಲಿ.

ನಿನಗೊಂದು ಘಟನೆಯನ್ನು ವಿವರಿಸುತ್ತೇನೆ ಕೇಳು. ಆಗ ನಿನಗೆ ಸಮಾಜದಲ್ಲಿ ಎಂತಹ ನಯವಂಚಕರಿರುತ್ತಾರೆ ಎಂದು ಅರ್ಥವಾಗುತ್ತದೆ. ಒಬ್ಬ ಸಜ್ಜನನಿದ್ದ. ಒಂದು ದಿನ ಅವನೊಬ್ಬನೇ ಮನೆಯಲ್ಲಿದ್ದಾಗ ಅವನ ಪರಿಚಿತನೊಬ್ಬ ಅವನ ಮನೆಗೆ ಸಾಲ ಕೇಳಲು ಬಂದಿದ್ದ. ಅದೇ ಸಮಯಕ್ಕೆ ಸರಿಯಾಗಿ ಊರಿನಿಂದ ತನ್ನ ಅಣ್ಣನಿಗೆ ಅಪಘಾತವಾಗಿ ತುಂಬಾ ಸೀರಿಯಸ್ಸಾಗಿದೆಯೆಂದು ತಾರೊಂದು ಬಂದು. ಇದ್ದಕ್ಕಿದ್ದಂತೆ ಮನೆ ಬಿಟ್ಟು ಹೋಗುವದು ಅವನಿಗೆ ಕಷ್ಟವಾಗಿತ್ತು. ಅದೇ ಊರಿನಲ್ಲಿದ್ದ ತನ್ನ ಆಪ್ತ ಸ್ನೇಹಿತನೊಬ್ಬನನ್ನು ಕಂಡು ಅವನಿಗೆ ಮನೆ ನೋಡಿಕೊಳ್ಳಲು ಹೇಳಿ ಹೋಗಬೇಕೆಂದುಕೊಂಡ. ಆದರೆ ಮನೆಗೆ ಬಂದಿದ್ದ ಪರಿಚಿತ, ತಾನೇ ಮನೆ ನೋಡಿಕೊಳ್ಳುವುದಾಗಿಯೂ, ಇಂತಹ ಸಮಯದಲ್ಲಿ ನೆರವಾಗದಿದ್ದರೆ, ತಾನಿದ್ದೂ ಏನು ಉಪಯೋಗ, ಈ ಅವರಸದಲ್ಲಿ ಮತ್ತ್ಯಾರನ್ನೂ ಹುಡುಕುವುದು ಬೇಡ ತಾನೇ ಅವರು ಹಿಂತಿರುಗಿ ಬರುವವರೆಗೆ ಮನೆನೋಡಿಕೊಳ್ಳುವುದಾಗಿ ನಂಬಿಸಿದ. ಆಗ ಸಜ್ಜನನಾದ ಇವನು ಸಕಾಲಕ್ಕೆ ನೆರವಿಗೆ ಬಂದ ಆತನನ್ನು ಅಭಿನಂದಿಸಿ ಊರಿಗೆ ಹೋದ. ಇತ್ತ ಇವನು ಮನೆಯ ಪೆಟ್ಟಿಗೆಗಳಿಗೆ ಡೂಪ್ಲಿಕೇಟ್ ಕೀಲಿಕೈಗಳನ್ನು ಮಾಡಿಸಿಕೊಂಡು ಅದರಲ್ಲಿದ್ದ ಬೆಳ್ಳಿ–ಬಂಗಾರದ ವಸ್ತುಗಳನ್ನು ಅಪಹರಿಸಿ, ಮೊದಲಿನಂತೆಯೇ ಕೀಲಿ ಹಾಕಿಬಿಟ್ಟ, ಎರಡು ದಿನಗಳ ನಂತರ ಸಜ್ಜನನು ಹಿಂತಿರುಗಿ ಬಂದಾಗ, ಮನೆ ಸುರಕ್ಷಿತವಾಗಿ ಕಂಡಿತು. ಪರಿಚಿತನು ಆಕಸ್ಮಾತ್ತಾಗಿ ಬಂದು ಸಮಯದಲ್ಲಿ ನೆರವು ನೀಡಿದುದಕ್ಕೆ ವಂದಿಸಿ, ಅವನಿಗೆ ಯಥೇಚ್ಛವಾಗಿ ಆದರೋಪಚಾರ ಮಾಡಿ ಬೀಳ್ಕೊಟ್ಟ. ಕೆಲವು ದಿನಗಳ ಮೇಲೆ ಮನೆಯ ಹೆಣ್ಣು ಮಕ್ಕಳು ಊರಿಂದ ಬಂದರು. ಪೆಟ್ಟಿಗೆ ತೆಗೆದಾಗ, ಎಲ್ಲಾ ಖಾಲಿಯಾಗಿತ್ತು! ನಂತರ ಇದು ಹೇಗಾಗಿರಬಹುದೆಂದು ಗೊತ್ತಾದರೂ

ಸಹಾಯಮಾಡಿದ ಅವನ ಮೇಲೆ ಕಳ್ಳತನದ ಹೊರೆಹೊರಿಸುವುದು ಸಜ್ಜನನಿಗೆ ಸಾಧ್ಯವಾಗಲಿಲ್ಲ. ಹಾಗೆ ಹೇಳಿದ್ದರೂ ಆ ಧೂರ್ತ ಒಪ್ಪುವ ಸಂಭವವಿರಲಿಲ್ಲ. ಹಾಗಾಗಿ ಒಡವೆ ವಸ್ತು ಕಳೆದುಕೊಂಡು ತೆಪ್ಪಗಾದರು. ಇದು ಒಂದು ಸಣ್ಣ ಘಟನೆ ಅಷ್ಟೆ. ದೊಡ್ಡ ದೊಡ್ಡ ಅನಾಹುತಗಳೂ, ಬೇರೆಯವರ ಮಾತನ್ನು ವಿಮರ್ಶೆ ಮಾಡದೆ ನಂಬುವುದರಿಂದ ಘಟಿಸಿವೆ. ಪುಟ್ಟೂ, ಹಿಟ್ಲರ್ ಸಹ ಒಂದು ರಾಜ್ಯದ ಮೇಲೆ ದಂಡೆತ್ತಿ ಹೋಗುವಾಗ ಸುತ್ತಮುತ್ತಲಿನ ರಾಜ್ಯದವರಿಗೆ 'ನಾನು ನಿಮ್ಮ ತಂಟೆಗೆ ಬರುವುದಿಲ್ಲ; ಅದೊಂದು ರಾಜ್ಯ ಮಾತ್ರ ಗೆದ್ದುಕೊಳ್ಳುತ್ತೇನೆ' ಎನ್ನುತ್ತಿದ್ದ. ಆಗ ಉಳಿದವರು, ನಮ್ಮ ತಂಟೆಗೆ ಬರದಿದ್ದರಾಯ್ತು, ಬೇರೆಯವರ ಗೊಡವೆ ನಮಗೇಕೆ ಎಂದು ಸುಮ್ಮನಿದ್ದರು, ಆ ರಾಜ್ಯ ಗೆದ್ದ ಮೇಲೆ ಇನ್ನೊಂದು ರಾಜ್ಯಕ್ಕೂ ಹೀಗೆ ಮಾಡಿದ. ಇದೇ ರೀತಿ ಎಲ್ಲಾ ರಾಜ್ಯಗಳನ್ನು ಒಂದೊಂದಾಗಿ ಗೆದ್ದುಕೊಂಡ ! ಕೊನೆಗೆ ಜನ ಎಚ್ಚೆತ್ತುಕೊಂಡರು. ಆದರೇನು ? ಊರು ಹಾಳದ ಮೇಲೆ ದಿಡ್ಡಿ ಬಾಗಿಲು ಹಾಕಿದಂತೆ, ಆದ್ದರಿಂದ ನಂಬುವಾಗ ಎಚ್ಚರಬೇಕು. ಹುಂಬರಂತೆ ಹೇಳಿದುದನ್ನೆಲ್ಲಾ ನಂಬಬಾರದು. ವಿಚಾರ ಮಾಡದೆ ಯಾವುದನ್ನೂ, ಯಾರ ಮಾತನ್ನೂ ನಂಬಬಾರದು ಎಂಬುದನ್ನು ನೆನಪಿನಲ್ಲಿಡುವಿಯಷ್ಟೆ ?

ಇಂತು ನಿನ್ನ
ಹಿತೈಷಿ.

## ೧೬. ದೋಷರಹಿತ ಸುಂದರ ಬರವಣಿಗೆ

ಪ್ರೀತಿಯ ಪುಟ್ಟೂ

ಈ ದಿನ ನನಗೆ ಬಿ.ಎ. ಮೊದಲ ವರ್ಷದ ವಿದ್ಯಾರ್ಥಿಯೊಬ್ಬನಿಂದ ಪತ್ರ ಬಂದಿತು. ಅದನ್ನು ನೋಡುತ್ತಿದ್ದಂತೆಯೇ ಮನಸ್ಸಿನಲ್ಲಿ ನಿನಗೆ ಈ ಬಗ್ಗೆ ಈಗಲೇ ಎಂದರೆ ಸಕಾಲದಲ್ಲಿಯೇ ಎಚ್ಚರ ಕೊಡಬೇಕೆನ್ನಿಸಿ ಕೂಡಲೇ ಪತ್ರ ಬರೆಯುತ್ತಿರುವೆ.

ನಿನಗಾಗಲೇ ಏನು ವಿಚಾರ? ಏತರ ಎಚ್ಚರ? ಎಂದು ಕೂತೂಹಲ ಉಂಟಾಗಿರಬೇಕಲ್ಲವೆ? ನೋಡು ಮರೀ, ಆ ಪತ್ರ ಓದಲು, ಒಂದು ಗಂಟೆಯ ಮೇಲೆ ಬೇಕಾಯ್ತು, ನನಗೆ, ಪತ್ರ ಅಷ್ಟು ದೊಡ್ಡದಾಗಿತ್ತು ಎಂದುಕೊಳ್ಳಬೇಡ, ಅಕ್ಷರಗಳು ಅಷ್ಟು ವಿಚಿತ್ರವಾಗಿದ್ದವು ! ಅವು ಯಾವ ಅಕ್ಷರಗಳು ಎಂದು ಎಷ್ಟೇ ಪ್ರಯತ್ನ ಮಾಡಿದರೂ ಅರ್ಥ ಮಾಡಿಕೊಳ್ಳಲು ಕಷ್ಟವಾಗುತ್ತಿತ್ತು. ವಾಕ್ಯದ ಅಲ್ಲೊಂದು ಇಲ್ಲೊಂದು ಪದವನ್ನು ತಿಳಿದುಕೊಂಡು ವಾಕ್ಯ ಏನಿರಬೇಕೆಂದು

ಊಹಿಸಿಕೊಳ್ಳಬೇಕಾಯ್ತು. ಅಷ್ಟು ಅರ್ಥವಾಗದ ರೀತಿಯಲ್ಲಿ ಬರೆಯಲಾಗಿದೆ. ವಿದ್ಯಾರ್ಥಿಯ ಬರಹದಲ್ಲಿದ್ದ ಮತ್ತೊಂದು ದೋಷವೆಂದರೆ, ಕಾಗುಣಿತದ ತಪ್ಪುಗಳು ! ಬಿ.ಎ. ತರಗತಿಯಲ್ಲಿ ಓದುವ ವಿದ್ಯಾರ್ಥಿಯ ಬರಹದಲ್ಲಿ ಇದ್ದ ಅಷ್ಟೊಂದು ದೋಷಗಳನ್ನು ನೋಡಿದರೆ, ಅವನು ಈ ತರಗತಿಯವರೆಗೆ ಹೇಗೆ ಪಾಸಾಗಿ ಬಂದನೋ ಎಂದು ಆಶ್ಚರ್ಯ ಆಗುತ್ತದೆ. ಅವನೇನೋ ಹೀಗೆಯೇ ಬಿ.ಎ. ಮುಗಿಸಬಹುದು. ಆದರೆ ಅಂತಹ ಓದಿನಿಂದ, ವಿದ್ಯೆಯಿಂದ ಏನು ಪ್ರಯೋಜನ? ಮುಂದೆ ತನ್ನ ಪದವಿಯ ಬಲದಿಂದ ನೌಕರಿ ಸಂಪಾದಿಸಿದರೂ ಅವನು ತನ್ನ ಕೆಲಸವನ್ನು ಹೇಗೆ ತಾನೇ ನಿರ್ವಹಿಸಬಲ್ಲ ! ನಾವು ಯಾವುದೇ ಕೆಲಸ ವಹಿಸಿಕೊಂಡರೂ ಅದನ್ನು ಸಮರ್ಥವಾಗಿ ನಿರ್ವಹಿಸಬಲ್ಲ ಸಾಮರ್ಥ್ಯವನ್ನು ನಾವು ಓದುವಾಗಲೇ ಮೈ ಗೂಡಿಸಿಕೊಳ್ಳುತ್ತಾ ಹೋಗಬೇಕು. ಅದು ಇದ್ದಕ್ಕಿದ್ದಂತೆ ಕರಗತವಾಗುವುದಿಲ್ಲ.

ನಾವು ಬರೆಯುವ ಉದ್ದೇಶ, ಇತರರು ಅದನ್ನು ಓದಿ ಅರ್ಥ ಮಾಡಿಕೊಳ್ಳಲೆಂದು ಅಲ್ಲವೆ ? ನಾವು ಬರೆದದ್ದು ಇತರರಿಗೆ ಓದಲು ಸಾಧ್ಯವಾಗದಂತಿದ್ದರೆ, ತಪ್ಪುಗಳಿಂದ ತುಂಬಿದ್ದರೆ, ಬರೆಯುವ ಉದ್ದೇಶವೇ ನೆರವೇರುವುದಿಲ್ಲವಲ್ಲ ! ಹಾಗೆ ಬರೆದಾಗ ಓದಿದವರು ಓದಲಾಗದೆ, ಓದದೇ ಇರಬಹುದು ಅಥವಾ ನೀನೊಂದು ಬರೆದಿದ್ದರೆ ಅವರು ಬೇರೆಯಾಗಿಯೇ ತಿಳಿದುಕೊಳ್ಳಬಹುದು. ಪರೀಕ್ಷೆಗೆ ಬರೆದಾಗ ಪರೀಕ್ಷಕರು ಓದಲಾಗದೆ, ಸರಿಯಾಗಿ ಬರೆದ ಉತ್ತರವನ್ನು ಓದಲಾಗದೆ ತಮಗೆ ತಿಳಿದಷ್ಟು ಅಂಕಗಳನ್ನು ಕೊಡಬಹುದು ಅಥವಾ ಸಿಟ್ಟು ಬಂದು ಸೊನ್ನೆ ಕೊಡಬಹುದು. ಹೀಗೆ ದೋಷ ಪೂರಿತವಾದ ಹಾಗೂ ಓದಲಾಗದಂತಹ ಬರಹಗಳಿಂದ ತುಂಬಾ ಅನಾನುಕೂಲಗಳು ಉಂಟಾಗುತ್ತವೆ. ಆದ್ದರಿಂದ ನೀನು ಆ ಬಗ್ಗೆ ಈಗಿನಿಂದಲೇ ಎಚ್ಚರ ವಹಿಸಬೇಕು. ಈ ಅಂಶಗಳಿಗೆ ಶಾಲಾ ಹಂತದಲ್ಲಿಯೇ ಗಮನ ಕೊಡಬೇಕು. ಮುಂದೆ ಈ ಬಗೆಗೆ ಲಕ್ಷ್ಯ ಕೊಡಲು ಬಿಡುವಾಗದಷ್ಟು ಓದುವುದಿರುತ್ತದೆ. ಶಿಕ್ಷಕರಿಗೂ ಸಹ ಈ ಕಡೆ ಗಮನ ಕೊಡಲು ಸಾಧ್ಯ ಆಗುವುದಿಲ್ಲ. ಆ ಹಂತದಲ್ಲಿ ಈ ಕೆಲಸ ಮಾಡಲು ಅವರಿಗೆ ಬಿಡುವು ಇರುವುದಿಲ್ಲ. ಆಗ ಅವರು ಮಾಡಬೇಕಾದ ಕೆಲಸಗಳೇ ಬೇರೆ ಇರುತ್ತವೆ.

ನೋಡು ಪುಟ್ಟೂ, ಅಕ್ಷರಗಳನ್ನು ಕೇವಲ ಲಕ್ಷಣವಾಗಿ ಬರೆಯುವುದು ಮುಖ್ಯವಲ್ಲ. ಅವುಗಳ ಆಕಾರ ಹೇಗಿರಬೇಕೋ ಹಾಗೆಯೇ ಇರಬೇಕು. ಇಲ್ಲದೆ ಅಲಂಕಾರ ಮಾಡಲು ಹೋಗಬೇಡ. ಕಾಗುಣಿತದಲ್ಲೂ ತಪ್ಪುಗಳಿಲ್ಲದಂತೆ ಬರೆಯಬೇಕು. ನೀನು ದೋಷವಿಲ್ಲದೆ ಬರೆಯುತ್ತೀಯೋ ಇಲ್ಲವೋ ಎಂಬುದನ್ನು ತಿಳಿದುಕೊಳ್ಳಲು ಮನೆಯಲ್ಲಿ ದೊಡ್ಡವರಿಂದ ಉಕ್ತಲೇಖನವನ್ನು ಬರೆದು

ಪುಸ್ತಕದಲ್ಲಿದ್ದುದಕ್ಕೆ ಹೋಲಿಸಿ ನೋಡಿ, ತಪ್ಪಿದ್ದರೆ ಆ ಬಗ್ಗೆ ಲಕ್ಷ್ಯಗೊಟ್ಟು ತಿದ್ದಿಕೊ, ನಿನ್ನ ಬರಹದಲ್ಲಿ ದೋಷಗಳಿದ್ದರೆ, ಕೂಡಲೇ ಲಕ್ಷ್ಯಕೊಡು. ದಿನವೂ ಒಂದು ಪ್ಯಾರಾವನ್ನಾದರೂ ಪುಸ್ತಕ ನೋಡದೆ, ಬೇರೆಯವರಿಂದ ಹೇಳಿಸಿಕೊಂಡು ಬರೆ, ನಂತರ ತಪ್ಪುಗಳು ಏನೇನು ಆಗಿವೆ ಎಂಬುದನ್ನು ಗುರುತಿಸಿಕೊ, ಆಗ ನೀನು ಎಲ್ಲಿ, ಹೇಗೆ ತಪ್ಪುತ್ತೀಯೇ ಎಂಬುದು ನಿನಗೇ ಗೊತ್ತಾಗುತ್ತದೆ. ಆಗ ದೋಷಗಳನ್ನು ಗಮನವಿಟ್ಟು ತಿದ್ದಿಕೊ, ಹೀಗೆ ಒಂದೆರಡು ತಿಂಗಳು ಗಮನವಿಟ್ಟು ಮಾಡಿದರೆ, ದೋಷವಿಲ್ಲದೆ ಬರೆಯುವುದನ್ನು ಕಲಿಯಲು ಸಾಧ್ಯವಾಗುತ್ತದೆ. ಅಲ್ಲದೆ, ಮುಂದೆ ಆ ಬಗ್ಗೆ ಲಕ್ಷ್ಯ ಕೊಡುವ ಸ್ವಭಾವವೇ ಬಂದು ಬಿಡುತ್ತದೆ. ಅಕ್ಷರಗಳು ಚೆನ್ನಾಗಿಲ್ಲದಿದ್ದರೆ, ದಿನವೂ ಒಂದು ಎಂಟು ಹತ್ತು ಸಲ ಕಾಪಿ ಬರೆಯಬೇಕು. ಕಾಪಿ ಬರೆಯುವಾಗ ನಿಧಾನವಾಗಿ ಬರೆಯಬೇಕು, ಬರೆಯುವಾಗ ಅಕ್ಷರದ ಆಕಾರ, ಪ್ರಮಾಣ, ಅಕ್ಷರದಿಂದ ಅಕ್ಷರಕ್ಕೆ, ಪದದಿಂದ ಪದಕ್ಕೆ, ಸಾಲಿನಿಂದ ಸಾಲಿಗೆ ಇರುವ ಅಂತರ, ಇವುಗಳಲ್ಲಿ ಏಕರೂಪತೆ, ಇರುವ ಕಡೆ ಲಕ್ಷ್ಯ ಕೊಡಬೇಕು. ದೃಢ ಮನಸ್ಸಿನಿಂದ ಕೆಲವು ತಿಂಗಳು ಹೀಗೆ ಮಾಡಿದರೆ, ಮುಂದೆ ಅವಸರದಲ್ಲಿ ಬರೆದಾಗಲೂ ಅಕ್ಷರಗಳು ಕೆಡುವುದಿಲ್ಲ; ಏಕ ರೂಪತೆಯಲ್ಲೂ ದೋಷ ಇರುವುದಿಲ್ಲ.

ನೀನು ಈಗಿನಿಂದಲೇ ಈ ವಿಷಯದ ಕಡೆಗೆ ಗಮನ ಕೊಟ್ಟು ಚೆನ್ನಾಗಿ ಬರೆಯುವುದನ್ನು ರೂಢಿ ಮಾಡಿಕೊಳ್ಳುವಿಯೆಂದು ಆಶಿಸಿ ಪತ್ರ ಮುಗಿಸುವೆ.

ಇಂತು ನಿನ್ನ,
ಹಿತೈಷಿ.

■

## ೧೮. ಸುಖ – ದು:ಖಗಳಲ್ಲಿ ಪರಸ್ಪರ ಸ್ಪಂದನ

ಪ್ರೀತಿಯ ಪುಟ್ಟಾ,

ಈ ದಿನ ಸರ್ವಜ್ಞನ ವಚನಗಳನ್ನು ಓದುತ್ತಾ ಇದ್ದೆ, ಅಬ್ಬಾ ಅವನೆಂತಹ ಅನುಭವಿ 'ಆಡುಮುಟ್ಟದ ಗಿಡವಿಲ್ಲ, ಸರ್ವಜ್ಞ ಹೇಳದ ವಿಷಯವಿಲ್ಲ' ಎನ್ನಿಸುತ್ತದೆ. ಎಲ್ಲರಿಗೂ ಅವನ ವಚನಗಳಲ್ಲಿ ಮಾರ್ಗದರ್ಶನ ಸಿಗುತ್ತದೆ. ನನಗೆ ಅವನ ಅನೇಕ ವಚನಗಳು ಇಷ್ಟವಾದವು. ' ಮಾತು' ಇದರ ಬಗ್ಗೆ ಅವನು ಹೇಳಿರುವ ವಚನಗಳನ್ನು ಓದು. ನಾವು ಮಾತನಾಡುವಾಗ ಎಚ್ಚರವಿಲ್ಲದೆ ಮಾತನಾಡಿ ಬಿಡುತ್ತೇವೆ. ಒಳ್ಳೆಯ ಮಾತಿನಿಂದ ಎಷ್ಟು ಲಾಭ; ಕೆಟ್ಟ ಮಾತಿನಿಂದ ಎಷ್ಟು ಕೆಡುಕು ಎಂಬುದನ್ನು ಈ ವಚನಗಳಿಂದ ತಿಳಿದುಕೊಳ್ಳಬಹುದು. 'ಮಾತಿನ' ಮಹತ್ವ ಅಷ್ಟಿಷ್ಟಲ್ಲ; 'ಮಾತು ಬಲ್ಲವನಿಗೆ ಜಗಳವಿಲ್ಲ, ಊಟ ಬಲ್ಲವನಿಗೆ ರೋಗವಿಲ್ಲ' ಎನ್ನುವ ಗಾದೆ ಮಾತಿನ

ಮಹತ್ತನ್ನು ತಿಳಿಸುತ್ತದೆ. 'ಮಾತು ಆಡಿದರೆ ಹೋಯ್ತು, ಮುತ್ತು ಒಡೆದರೆ ಹೋಯ್ತು' ಎಂಬ ಗಾದೆಯ ಮಾತನ್ನು ಆಡುವಾಗ ಬಹು ಎಚ್ಚರಿಕೆಯಿಂದ ಆಡಬೇಕೆಂಬ ಅಂಶಗಳನ್ನು ತಿಳಿಸುತ್ತದೆ. ಇದೇ ರೀತಿ ಸರ್ವಜ್ಞನ ವಚನಗಳು ನಮಗೆ ಅನೇಕ ವಿಷಯಗಳ ಬಗೆಗೆ ಮಾರ್ಗದರ್ಶನ ನೀಡುತ್ತವೆ. ಅವು ಅತ್ಯಂತ ಸರಳ, ಸುಲಭ, ನೀನೇ ಓದಿಕೋ.

ನಾವು ಹುಟ್ಟುತ್ತಲೇ ಸರ್ವಜ್ಞರಾಗುವುದು ಸಾಧ್ಯವಿಲ್ಲ. ಅನೇಕ ಮಾರ್ಗಗಳಿಂದ ವಿಷಯಗಳನ್ನು ತಿಳಿದುಕೊಂಡು ಮಾನವ ಜ್ಞಾನಿಯಾಗಲು ಸಾಧ್ಯ ಎಂಬ ಅಂಶವನ್ನು 'ಸೋಮೇಶ್ವರ ಶತಕ' ಸುಂದರವಾಗಿ ನಿರೂಪಿಸುತ್ತದೆ.

ಕೆಲವಂ ಬಲ್ಲವರಿಂದ ಕಲ್ತು, ಕೇಳುತಂ ಕೆಲವಂ ಶಾಸ್ತ್ರಂಗಳಂ
ಕೆಲವಂ ಮಾಳ್ಪವರಿಂದ ಕಲ್ತು, ಕೆಲವಂ ಸುಜ್ಞಾನದಿಂ ನೋಡುತಂ
ಕೆಲವಂ ಸಜ್ಜನ ಸಂಗದಿಂದಲರಿಯಲ್ ಸರ್ವಜ್ಞನಪ್ಪಂ ನರಂ
ಪಲವುಂ ಪಳ್ಳ ಸಮುದ್ರವೈ ಹರಹರಾ ಶ್ರೀ ಚನ್ನಸೋಮೇಶ್ವರಾ.

'ಕೆಲವು ಸಂಗತಿಗಳನ್ನು ಅನುಭವಿಗಳಿಂದ ಕಲಿತುಕೊಳ್ಳಬೇಕು; ಮತ್ತೆ ಕೆಲವು ವಿಚಾರಗಳನ್ನು ಶಾಸ್ತ್ರಗ್ರಂಥಗಳ ಕೇಳುವಿಕೆಯಿಂದ ಅರಿತುಕೊಳ್ಳಬೇಕು; ಇನ್ನು ಕೆಲವನ್ನು ಸ್ವಯಂ ಜ್ಞಾನಾನುಭವದಿಂದ ನೋಡಿಕಲಿಯಬೇಕು; ಸಜ್ಜನರ ಸ್ನೇಹದಿಂದಲೂ ಕೆಲವನ್ನು ಪಡೆಯಬೇಕು; ಹಾಗಾದಾಗ ಮಾತ್ರ ಮನುಷ್ಯ ಸರ್ವಜ್ಞ ( ಅಂದರೆ ಸರ್ವವಿಷಯಗಳನ್ನೂ ಅರಿತವನು ) ಆಗುತ್ತಾನೆ. ಹಲವು ಹಳ್ಳಕೊಳ್ಳಗಳು ಸೇರಿದಾಗ ತಾನೇ ಸಮುದ್ರವಾಗುವುದು' ಹೀಗೆ, ನಾನಾ ಮಾರ್ಗಗಳಿಂದ ವಿಷಯಗಳನ್ನು ತಿಳಿದುಕೊಂಡು ಜ್ಞಾನಿಗಳಾಗಬಹುದು ಎಂದು ನಾವು ತಿಳಿದುಕೊಳ್ಳಬಹುದಾಗಿದೆ. ಮನುಷ್ಯ ಕೇವಲ ಜ್ಞಾನಿಯಾದರೆ ಸಾಲದು. ಆ ಜ್ಞಾನದ ಸಹಾಯದಿಂದ ತನ್ನಲ್ಲಿರುವ ದೋಷಗಳನ್ನು ಅರ್ಥ ಮಾಡಿಕೊಂಡು ತನ್ನನ್ನು ತಾನು ತಿದ್ದಿಕೊಳ್ಳಬೇಕು. ಯಾವ ಮನುಷ್ಯನು ತನ್ನಲ್ಲಿರುವ ದೋಷಗಳನ್ನು ಅರ್ಥ ಮಾಡಿಕೊಂಡು, ತಿದ್ದಿಕೊಂಡು, ತನ್ನ ನುಡಿಯನ್ನು , ನಡೆಯನ್ನು ಸರಿಪಡಿಸಿಕೊಳ್ಳುತ್ತಾನೋ ಅವನು ಪುಟಕ್ಕಿಟ್ಟ ಚಿನ್ನದಂತೆ ಪರಿಶುದ್ಧನಾಗುತ್ತಾನೆ. ಜ್ಞಾನಿಗಳೊಬ್ಬರು 'ತಿಳಿದುಕೊಳ್ಳುವುದು – ತಿದ್ದಿಕೊಳ್ಳುವುದು ಇಡೀ ಬಾಳಿನ ಎರಡು ಸುವರ್ಣ ರೇಖೆಗಳು' ಎಂದಿದ್ದಾರೆ. ಕಲಿಯುವುದು ಮುಗಿಯುವುದೇ ಇಲ್ಲ. ಅದು ಜೀವನ ಪೂರ್ತಿ ಇದ್ದದ್ದೇ, ಕಲಿತು 'ನಮ್ಮ ವಿಕೃತಿಗಳನ್ನು ಸರಿಪಡಿಸಿಕೊಂಡು, ಮತ್ತೆ ಪ್ರಕೃತಿಗೆ ಹತ್ತಿರವಾಗುವುದು' ಜೀವನದ ಗುರಿಯಾಗಬೇಕು.

ಇಂದಿನ ಪೀಳಿಗೆಯ ಬಹಳಷ್ಟು ಜನರು ಇನ್ನೊಬ್ಬರ ಮಾತನ್ನು ಕೇಳಿದರೆ

ತಮಗೆ ಅವಮಾನ ಎಂದು ತಿಳಿದುಕೊಂಡು, ಬೇರೆಯವರ ಮಾತಿಗೆ ಬೆಲೆ ಕೊಡುವುದೇ ಇಲ್ಲ. ಪುಸ್ತಕಗಳನ್ನು ಓದಿದರೂ ಅದನ್ನು ಪರೀಕ್ಷೆ ಪಾಸು ಮಾಡಲೆಂದೋ, ಮನರಂಜನೆಗೆಂದೋ ಓದುತ್ತಾರೆ. ಅದರಲ್ಲಿರುವ ಒಳ್ಳೆಯ ವಿಷಯಗಳನ್ನು ತಮ್ಮಲ್ಲಿ ಅಳವಡಿಸಿಕೊಳ್ಳಲು ಪ್ರಯತ್ನಿಸುವುದೇ ಇಲ್ಲ. ಆದ್ದರಿಂದಲೇ ಇಂದು ಅನೇಕ ವಿದ್ಯಾವಂತ ಖದೀಮರನ್ನು ಕಾಣುತ್ತಿದ್ದೇವೆ. ಡಿಗ್ರಿಗಳನ್ನು ನೌಕರಿ ಪಡೆಯುವ ಭಿಕ್ಷಾ ಪಾತ್ರೆಗಳಂತೆ ಉಪಯೋಗಿಸಿಕೊಳ್ಳುತ್ತಾರೆ. ಅಂತಹವರು ಕಲಿತ ವಿದ್ಯೆಯಿಂದ ಸಂಸ್ಕಾರ ಪಡೆಯುವುದೇ ಇಲ್ಲ. ಅಂತರಂಗದ ಪರಿಶುದ್ಧತೆಗೆ ಪ್ರಯತ್ನಿಸುವುದಿಲ್ಲವಾಗಿ ಅವರಲ್ಲಿ ವಿವೇಕ, ವಿವೇಚನಗಳು ಅರಳುವುದೇ ಇಲ್ಲ, ಅವರು ಧೂರ್ತರಾಗಿ ಮಾರ್ಪಾಡಾಗುವುದರಿಂದ, ಸಮಾಜದಲ್ಲಿ ಅನೇಕ ಸಮಸ್ಯೆಗಳು ಜನ್ಮ ತಾಳುತ್ತವೆ. ಇದರಿಂದ ಇಡೀ ಮಾನವ ಜನಾಂಗ ನರಳುವಂತಾಗುತ್ತದೆ. ಅದಕ್ಕೆಂದೇ ಈಗಿನ ಪರಿಸರದಲ್ಲಿ ಯಾರಿಗೂ ಸುಖವಿಲ್ಲ. ಪ್ರತಿಯೊಬ್ಬರೂ ಒಂದಲ್ಲ ಒಂದು ಸಮಸ್ಯೆಯಿಂದ ತೊಳಲಾಡುತ್ತಾರೆ. ಮನುಷ್ಯ ಈ ಮೂರ್ಖತನವನ್ನು ಬಿಟ್ಟು, ಜ್ಞಾನದ ಸಹಾಯದಿಂದ ತನ್ನನ್ನು ತಿದ್ದಿಕೊಂಡು ಉತ್ತಮ ಮಾರ್ಪಾಟು ಮಾಡಿಕೊಂಡರೆ, ತಾನೂ ಸುಖವಾಗಿರಬಹುದು; ತನ್ನ ಪರಿಸರದ ಇತರರೂ ನೆಮ್ಮದಿಯಿಂದ ಬಾಳುವಂತೆ ಮಾಡಬಹುದು, ಸಂಘಜೀವಿಯಾದ ಮನುಷ್ಯ ಇತರರೊಡನೆ ಕಷ್ಟ – ಸುಖಗಳನ್ನು ಹಂಚಿಕೊಂಡು ಬಾಳುವುದನ್ನು ಕಲಿಯಬೇಕು. ಕಷ್ಟಗಳನ್ನು ಒಬ್ಬರಿಗೊಬ್ಬರು ಹಂಚಿಕೊಂಡರೆ, ಬಂದ ಕಷ್ಟಗಳು ಭಾರವಾಗಿ ಕಾಣುವುದಿಲ್ಲ. ಅವುಗಳನ್ನು ಸಹಿಸುವ ಶಕ್ತಿ ಬರುತ್ತದೆ. ಈ ಒಂದು ತತ್ವದ ಆಧಾರದ ಮೇಲೆಯೇ ಯಾರಾದರೂ ತೀರಿ ಹೋದಾಗ ಬಂಧು – ಬಳಗದವರು, ಆಪ್ತೇಷ್ಟರು ಬಂದು ಮಾತನಾಡಿಸಿಕೊಂಡು ಹೋಗುವ ಸಂಪ್ರದಾಯ ನಮ್ಮಲ್ಲಿ ಬೆಳೆದು ಬಂದಿದೆ. ಬಂದವರು ದು:ಖಿಗಳಿಗೆ ನಾನಾ ರೀತಿಯ ಸಮಾಧಾನದ ಮಾತುಗಳನ್ನು ಹೇಳುತ್ತಾರೆ; ಧೈರ್ಯ ತುಂಬುತ್ತಾರೆ; ಸಾಂತ್ವನಗೊಳಿಸುತ್ತಾರೆ. ಇಂತಹದೇ ಅನೇಕ ಉದಾಹರಣೆಗಳನ್ನು ಹೇಳಿ ಮನಸ್ಸು ಗಟ್ಟಿಯಾಗುವಂತೆ ಮಾಡುತ್ತಾರೆ. ಆಗ ಕಷ್ಟಕ್ಕೆ ಒಳಗಾದ ಜನರಿಗೆ ತಮ್ಮ ಕಷ್ಟವನ್ನು ಸಹಿಸುವ ಮನೋಧೈರ್ಯ ಉಂಟಾಗುತ್ತದೆ; ಮನಸ್ಸಿಗೆ ಸಮಾಧಾನವಾಗುತ್ತದೆ. ಹಾಗೆಯೇ ಸುಖ ಬಂದಾಗಲೂ ಅಷ್ಟೇ, ಆ ಸುಖವನ್ನು ಬೇರೆಯವರೊಡನೆ ಹಂಚಿಕೊಳ್ಳದಿದ್ದರೆ, ಸುಖ ಬಂದ ಮನುಷ್ಯನಿಗೆ, ಅಂತಹ ಆನಂದವೇನೂ ಆಗುವುದಿಲ್ಲ. ಬೇರೆಯವರು ಸೇರಿಕೊಂಡು, ಅವನು ಪಡೆದ ಸುಖದ ಬಗ್ಗೆ ಮೆಚ್ಚಿದರೆ, ಕೊಂಡಾಡಿದರೆ, ಆನಂದ ವ್ಯಕ್ತಪಡಿಸಿದರೆ ಸುಖ ಬಂದವನಿಗೂ ಆನಂದ ಹೆಚ್ಚುತ್ತದೆ. ಅಲ್ಲದೆ ಉಳಿದವರು ಹೊಟ್ಟೆಕಿಚ್ಚು ವ್ಯಕ್ತಪಡಿಸಿದರೆ, ಅಸಹನೆಯ ಮಾತನಾಡಿದರೆ ಇವನ ಮನಸ್ಸಿಗೆ ನೋವಾಗಿ ಪಡೆದ ಸುಖದ ಆನಂದವೇ ದೊರೆಯುವುದಿಲ್ಲ, ನೋಡು ಪುಟ್ಟಾ, ನೀನು ತರಗತಿಯಲ್ಲೇ

ಮೊದಲಿಗನಾಗಿ ಬಂದೆ ಎಂದಿಟ್ಟುಕೋ, ಆಗ ಶಾಲೆಯ ಶಿಕ್ಷಕರೂ, ಮನೆಯ ಹಿರಿಯರೂ, ನೆರೆ- ಹೊರೆಯವರೂ ಕೊಂಡಾಡಿದರೆ, ನಿನ್ನ ಆನಂದ ಇಮ್ಮಡಿಯಾಗುತ್ತದೆ; ಉತ್ಸಾಹ ಮೂಡುತ್ತದೆ. ಇಲ್ಲದೆ ಕಾಪಿ ಮಾಡಿರಬೇಕು ಅದಕ್ಕೆ ಫಸ್ಟ್ ಬಂದಿದ್ದೀಯಾ ? ನಿಮ್ಮ ಶಿಕ್ಷಕರು ಸರಿಯಾಗಿ ತಿದ್ದದೇ ಕಣ್ಣು ಮುಚ್ಚಿಕೊಂಡು ಅಂಕಗಳನ್ನು ಹಾಕಿದ್ದಕ್ಕಾಗಿ ನೀನು ಮೊದಲಿಗನಾಗಿ ಬಂದಿದ್ದೀಯೆ ಎಂದು ಚುಚ್ಚು ಮಾತನಾಡಿದರೆ, ಉತ್ಸಾಹ ಕಮರಿ, ಮನಸ್ಸಿಗೆ ನೋವಾಗುತ್ತದೆ. ಇದರಂತೆ ಎಲ್ಲಾ ವಿಷಯಗಳೂ ಅಷ್ಟೆ. ಆದುದರಿಂದ ಪ್ರತಿಯೊಬ್ಬರೂ ಇತರರ ಕಷ್ಟಗಳಲ್ಲಿ ಭಾಗಿಯಾಗುವ, ಸುಖವನ್ನು ಹಂಚಿಕೊಳ್ಳುವ ಶಕ್ತಿ ಬರುವುದಲ್ಲದೆ, ತಮ್ಮದೇ ಸುಖಕ್ಕಲ್ಲದೆ, ಬೇರೆಯವರ ಸುಖದಲ್ಲೂ ಪಾಲ್ಗೊಂಡು ಸಂತೋಷಪಡುವುದರಿಂದ, ಒಂದು ರೀತಿಯ ಆನಂದ, ತೃಪ್ತಿ ದೊರೆತು, ವಿವೇಕದ ಸಮತೋಲನ ವ್ಯಕ್ತಿತ್ವ ಉಂಟಾಗುತ್ತದೆ. ಆದುದರಿಂದ ಪುಟ್ಟೂ ನೀನೂ ಸಹ ಈಗಿನಿಂದಲೇ ನಿನ್ನ ಕಷ್ಟ – ಸುಖಗಳಲ್ಲಿ ಇತರರು ಭಾಗಿಯಾಗುವಂತಹ, ಬೇರೆಯವರ ಕಷ್ಟ – ಸುಖಗಳನ್ನು ನೀನೂ ಹಂಚಿಕೊಂಡು ಅನುಭವಿಸುವ ಸ್ವಭಾವವನ್ನು ಬೆಳೆಕೋ, ಇದರಿಂದ ಸಂತೃಪ್ತ ಸಮಾಜ ರೂಪುಗೊಳ್ಳುವಲ್ಲಿ ಸಂಶಯವಿಲ್ಲ.

ಇಂತು ನಿನ್ನ,
ಹಿತೈಷಿ.

■

## ೧೯. ಕರ್ತವ್ಯ ಪ್ರಜ್ಞೆ.

ಪ್ರೀತಿಯ ಪುಟ್ಟಾ,

ಈಗಿನ ಪೀಳಿಗೆಯ ಮನೋಭಾವವನ್ನು ಗಮನಿಸಿದಾಗ ನಿನಗೆ ನಾಲ್ಕು ಮಾರ್ಗದರ್ಶಿ ಮಾತುಗಳನ್ನು ಬರೆಯಬೇಕೆನ್ನಿಸಿತು. ಏಕೆಂದರೆ ಈಗಿನ ಪೀಳಿಗೆಯ ಸ್ವಭಾವವೇ ಸಾರ್ವಜನಿಕವಾಗಿ ಹಬ್ಬಿದರೆ, ಸಮಾಜದಲ್ಲಿ ಶಿಸ್ತಾಗಲೀ, ಶಾಂತಿಯಾಗಲೀ, ಸಮಾಧಾನವಾಗಲೀ, ನೆಮ್ಮದಿಯಾಗಲೀ ನೆಲೆಯೂರಲು ಸಾಧ್ಯವಿಲ್ಲ. ಶಾಂತಿ, ಸಮಾಧಾನ, ಶಿಸ್ತು, ನೆಮ್ಮದಿಯಿಂದ ಕೂಡಿದ ಜೀವನ ಕುಟುಂಬದಲ್ಲಿ, ಸಮಾಜದಲ್ಲಿ, ರಾಷ್ಟ್ರದಲ್ಲಿ ಅಷ್ಟೇ ಏಕೆ ಜಗತ್ತಿನಲ್ಲಿ ಇರಬೇಕಾದರೆ, ಜನರಲ್ಲಿ ಕೆಲವೊಂದು ಮೌಲ್ಯಾಧಾರಿತ ನಡೆ ನುಡಿಗಳಿರಬೇಕು. ಅದಕ್ಕಾಗಿಯೇ ನಮ್ಮ ಹಿರಿಯರು, ಕೆಲವೊಂದು, ರೀತಿ – ನೀತಿಗಳನ್ನು, ನಡೆ – ನುಡಿಗಳನ್ನು ಸಾರ್ವಜನಿಕ ಮತ್ತು ಸಾಮಾಜಿಕ ನಡೆ – ನುಡಿ, ರೀತಿ – ನೀತಿಗಳಾಗಿ ಬೆಳೆಸಿಕೊಂಡು ಬಂದಿದ್ದಾರೆ.

ನಮ್ಮ ಭಾರತೀಯ ಸಂಸ್ಕಾರದಂತೆ ಕಿರಿಯರು ಗುರು – ಹಿರಿಯರಿಗೆ

ಗೌರವದಿಂದ ನಡೆದುಕೊಳ್ಳಬೇಕೆಂಬ ಆಚಾರ ಬೆಳೆದು ಬಂದಿದೆ. ಅಂತಹ ಗುಣಗಳನ್ನು ಕಿರಿಯರು ಅಳವಡಿಸಿಕೊಂಡಾಗ ಅವರ ರೀತಿ – ನೀತಿ ಮೆಚ್ಚುವಂತಹುದಾಗಿ ಕಾಣುವುದಲ್ಲದೆ ವ್ಯಕ್ತಿಯಲ್ಲಿ, ಕುಟುಂಬದಲ್ಲಿ ಶಿಸ್ತು, ಸಂಯಮ ಹಾಸು ಹೊಕ್ಕಾಗಿ ನೆಲೆಸಿರುತ್ತದೆ. ಆಗ ಸಮಸ್ಯೆಗಳಾಗಲೀ, ಗೊಂದಲಗಳಾಗಲೀ ವಿರಸಗಳಾಗಲೀ ಇರುವುದಿಲ್ಲ. ಆದರೆ ಈಗಿನ ಕಾಲದಲ್ಲಿ ಕಾಣುವುದೇನು ? ಬಸ್ಸಿನಲ್ಲಿ ಹೋಗುವಾಗ, ಮುದುಕರು, ಮಹಿಳೆಯರು, ಪುಟ್ಟ ಮಕ್ಕಳನ್ನು ಎತ್ತಿಕೊಂಡವರು, ಕೊನೆಗೆ ಶಿಕ್ಷಕರಾದವರು ನಿಂತುಕೊಂಡು ತುಂಬಾ ಕಷ್ಟದಿಂದ ಪ್ರಯಾಣಿಸುತ್ತಿದ್ದರೂ, ಧಾಂಡಿಗರಾದ ಯುವಕ ಯುವತಿಯರು ಯಾವುದೇ ರೀತಿಯ ಸಂಕೋಚವಿಲ್ಲದೆ ಆರಾಮಾಗಿ ಕುಳಿತಿರುತ್ತಾರೆ. ಇದನ್ನು ನೋಡಿದರೆ ಮನುಷ್ಯರಲ್ಲಿ ಮಾನವೀಯತೆ ಮಾಯವಾಗುತ್ತಿದೆಯೇ ಎನ್ನಿಸುತ್ತದೆ.

ಕರ್ತವ್ಯ ಪರಿಪಾಲನೆ ಈಗಿನ ಜನರಿಗೆ ಬೇಡ. ಈ ಗುಣವನ್ನು ಬೆಳೆಸಿಕೊಂಡರೆ ಕೆಲವು ಜವಾಬ್ದಾರಿಗಳನ್ನು ನಿರ್ವಹಿಸಬೇಕಾಗುತ್ತದೆ. ತಮ್ಮ ಐಷಾರಾಮೀ ಜೀವನಕ್ಕೆ ಅಡ್ಡಿಯುಂಟಾಗುತ್ತದೆ. ಅದಕ್ಕಾಗಿ ಈಗಿನವರು ಕರ್ತವ್ಯ ಅರ್ಥವಿಹೀನ ಎಂದು ಟೀಕಿಸಿ, ತಮ್ಮ ಹೊಣೆಗಾರಿಕೆಯಿಂದ ಜಾರಿಕೊಂಡು ಮಜಾ ಮಾಡಿಕೊಂಡು ಕಾಲ ಕಳೆಯುತ್ತಾರೆ. ನೋಡು ಪುಟ್ಟಾ, ಮಕ್ಕಳಿಗೆ ಮುಪ್ಪಿನಲ್ಲಿ ತಂದೆ – ತಾಯಿಗಳ ರಕ್ಷಣೆ ಮಾಡುವುದು ಕರ್ತವ್ಯ. ಹಾಗಿರುವಾಗ ಮಕ್ಕಳ 'ಕರ್ತವ್ಯ' ಅರ್ಥವಿಲ್ಲದ್ದು ಎಂದು ನಿರ್ಲಕ್ಷಿಸಿದರೆ, ಮುಪ್ಪಿನ ಅವರನ್ನು ನೋಡಿಕೊಳ್ಳುವವರಾರು ? ಹಾಗೆ ಅವರು ಅಲಕ್ಷ್ಯಕ್ಕೆ ಒಳಗಾಗಬಾರದೆಂದೇ ನಮ್ಮ ಹಿರಿಯರು ತಂದೆ – ತಾಯಿಗಳನ್ನು ಮುಪ್ಪಿನಲ್ಲಿ ರಕ್ಷಿಸುವುದು ಮಕ್ಕಳ ಕರ್ತವ್ಯ ಎಂಬ ಮೌಲ್ಯವನ್ನು ಕುಟುಂಬದಲ್ಲಿ ಬೆಳೆಸಿದರು. ಮಕ್ಕಳು ಚಿಕ್ಕವರಿದ್ದಾಗ ಅಸಹಾಯಕರಿರುತ್ತಾರೆ. ಅವರ ಊಟ, ಬಟ್ಟೆ, ವಸತಿ, ವಿದ್ಯೆ, ಆರೋಗ್ಯ ಮುಂತಾದವುಗಳ ಬಗೆಗೆ ತಂದೆ ತಾಯಿಗಳ ಕರ್ತವ್ಯವಿದೆ. ಮಕ್ಕಳನ್ನು ರಕ್ಷಿಸುವುದು, ಅವರಿಗೆ ಶಿಕ್ಷಣ ಕೊಡುವುದು, ಅವರು ತಮ್ಮ ಕಾಲಮೇಲೆ ತಾವು ನಿಲ್ಲುವಂತೆ ಮಾಡುವುದು ನಮ್ಮ ಸಮಾಜದ ಸಂಪ್ರದಾಯದ ಪ್ರಕಾರ ತಂದೆ – ತಾಯಿಗಳ ಕರ್ತವ್ಯವಾಗಿದೆ. ಅದರಂತೆ ಸುಮಾರಾಗಿ ಎಲ್ಲಾ ತಂದೆ – ತಾಯಿಗಳು ತಮ್ಮ ಹೊಟ್ಟೆ – ಬಟ್ಟೆ ಕಟ್ಟಿಯಾದರೂ ಮಕ್ಕಳಿಗೆ ಮಾಡಬೇಕಾದುದನ್ನು ಮಾಡುತ್ತಾರೆ. ಮಕ್ಕಳ ಸುಖ ಪ್ರಗತಿಯನ್ನೇ ತಮ್ಮ ಜೀವನದ ಗುರಿಯನ್ನಾಗಿಟ್ಟುಕೊಂಡು ಶ್ರಮಿಸುತ್ತಾರೆ. ಅವರ ಬೇಕು – ಬೇಡಗಳಿಗೆ ಸ್ಪಂದಿಸುತ್ತಾರೆ. ಅದೇ ರೀತಿ ಆ ಮಕ್ಕಳು ದೊಡ್ಡವರಾದಾಗ, ಈ ತಂದೆ – ತಾಯಿಗಳಿಗೆ ಮುಪ್ಪು ಬಂದಾಗ, ಅವರ ಯೋಗಕ್ಷೇಮ ನೋಡಿಕೊಳ್ಳುವುದು, ಅವರನ್ನು ಸಂತೋಷವಾಗಿ ಇಟ್ಟುಕೊಳ್ಳುವುದು ಮಕ್ಕಳ ಕರ್ತವ್ಯ, ಮಕ್ಕಳು ಕರ್ತವ್ಯ ಚ್ಯುತರಾಗಬಾರದು. ತಮ್ಮ

ತಂದೆ – ತಾಯಿಗಳು ಕರ್ತವ್ಯ ಚ್ಯುತರಾಗಿದ್ದಿದ್ದರೆ, ತಮ್ಮ ಸ್ಥಿತಿ ಏನಾಗುತ್ತಿತ್ತು ? ಎಂಬುದನ್ನು ಮಕ್ಕಳು ನೆನಪಿನಲ್ಲಿಟ್ಟುಕೊಳ್ಳಬೇಕು. ಈ ಕೊಡು – ಕೊಳ್ಳುವಿಕೆಯಿಂದಲೇ ಕೌಟುಂಬಿಕ ನೆಮ್ಮದಿ, ಸುಖ – ಸಂತೋಷ, ಶ್ರೇಯಸ್ಸು, ನಿಂತಿದೆ, ತಂದೆ – ತಾಯಿಗಳೂ ಕರ್ತವ್ಯಚ್ಯುತರಾಗಬಾರದು. ಹಾಗೆಂದೇ ಮಕ್ಕಳೂ ಕರ್ತವ್ಯಲೋಪ ಮಾಡಬಾರದು.

ಹೆತ್ತವರ ಮತ್ತು ಮಕ್ಕಳ ಸಂಬಂಧ ಎಂದ ತಕ್ಷಣ ನನಗೆ ಹಿಂದಿನ ವಿಚಾರದೊಂದು ನೆನಪಿಗೆ ಬರುತ್ತದೆ. ನೋಡು ಮಗೂ, ಒಬ್ಬ ತಾಯಿ ಸಂಗೀತದಲ್ಲಿ ತುಂಬಾ ವಿದ್ವಾಂಸರಾಗಿದ್ದರು. ಅವಳಿಗೆ ಒಬ್ಬ ಮಗನಿದ್ದ, ಮಗನನ್ನು ಚೆನ್ನಾಗಿ ಬೆಳೆಸಿದಳು. ವಿದ್ಯಾವಂತನನ್ನಾಗಿ ಮಾಡಿದರು. ಜೊತೆ ಜೊತೆಯಲ್ಲೇ ಮನೆಯಲ್ಲಿ ತಾನೇ ಪಿಟೀಲನ್ನು ಕಲಿಸಿದಳು. ಮಗ ದೊಡ್ಡವನಾದ, ದೊಡ್ಡ ಅಧಿಕಾರಿಯಾದ, ತಾಯಿಯನ್ನು ತುಂಬಾ ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದ, ತಾಯಿ ಬರುಬರುತ್ತಾ ಮುಪ್ಪಾದಳು. ಪಾರ್ಶ್ವವಾಯು ರೋಗಕ್ಕೆ ತುತ್ತಾದರು. ಈಗ ಮಗನ ಹೆಂಡತಿ, ಆಕೆಯ ಸೇವೆ ಮಾಡಲು ಇಷ್ಟವಾಗದೆ, ನಿರಾಕರಿಸಿದಳು. ಮಗ ಹೆಂಡತಿಯನ್ನು ದಂಡಿಸಲಿಲ್ಲ, ತಾಯಿಯ ಪ್ರೀತಿ, ಅವಳ ಕಷ್ಟ, ತನಗೆ ತೋರಿದ ಮಮತೆ ತನ್ನನ್ನು ಬೆಳೆಸಿದ ರೀತಿ ಗೊತ್ತಿಲ್ಲದವಳು ಅವಳು. ಆವಳಿಗೆ ರಕ್ತ ಸಂಬಂಧವೂ ಇಲ್ಲ. ನನ್ನ ಗಂಡನ ತಾಯಿ ಎಂಬ ಕರ್ತವ್ಯ ಪ್ರಜ್ಞೆಯೂ ಇಲ್ಲ. ಅಂತಹವಳಿಂದ ಒತ್ತಾಯಪೂರ್ವಕ ತಾಯಿಯ ಯೋಗಕ್ಷೇಮ ನೋಡಿಕೊಳ್ಳುವಂತೆ ಮಾಡುವುದು ಒಳ್ಳೆಯದಲ್ಲ ಎಂದರಿತು, ಬೇಡಿದಷ್ಟು ಸಂಬಳ ಕೊಟ್ಟು ಒಬ್ಬ ಕೆಲಸದವಳನ್ನು ತಾಯಿಗೆ ಅವಶ್ಯಕವಾದ ಸೇವೆ ಮಾಡಲು ನೇಮಿಸಿದ. ತಾನು ಬೆಳಗಿನ ಚಹಾ ಕುಡಿಯುವ ಹೊತ್ತಿನಲ್ಲಿ ಅವಳ ಬಳಿ ಕುಳಿತು, ಅವಳಿಗೆ ಸಂತೋಷವಾಗುವಂತೆ ಮಾತನಾಡುತ್ತಾ, ಅವಳ ಯೋಗಕ್ಷೇಮವನ್ನು ವಿಚಾರಿಸುತ್ತಿದ್ದ, ಆಕೆಗೆ ಸಂಗೀತ ತುಂಬಾ ಇಷ್ಟವೆಂದು ಗೊತ್ತಿದ್ದುದರಿಂದ ಸಂಜೆ ಆಫೀಸಿನಿಂದ ಬಂದ ಮೇಲೆ ಆಕೆಯ ಮುಂದೆ ಕುಳಿತು ಒಂದು ಗಂಟೆ ಪಿಟೀಲು ಬಾರಿಸುತ್ತಿದ್ದ, ನಂತರ ಅಲ್ಲಿಯೇ ಕುಳಿತು ಮಕ್ಕಳಿಗೆ ಪಾಠ ಹೇಳಿಕೊಡುತ್ತಿದ್ದ, ಹೀಗಾಗಿ ಆ ತಾಯಿ ಖಾಹಿಲೆಯ ಹಿಂಸೆ ಹೆಚ್ಚು ಅನುಭವಿಸದೆ, ತೃಪ್ತಿಯಿಂದ ಇರುತ್ತಾ ಒಂದು ದಿನ ಕಣ್ಣು ಮುಚ್ಚಿದಳು.

ಪುಟ್ಟಾ ಇದರಿಂದ ಆ ವ್ಯಕ್ತಿಯ ಸದ್ಗುಣ ಎದ್ದು ಕಾಣುತ್ತದೆ. ಹಾಗೆ ಮಾಡುವುದರಿಂದ ಅವನೇನೂ ಕಳೆದುಕೊಳ್ಳಲಿಲ್ಲ. ಆದರೆ ವಿವೇಕದಿಂದ ವಿಚಾರ ಮಾಡಿ ನಡೆದುಕೊಂಡುದರಿಂದ ಕರ್ತವ್ಯವನ್ನು ತುಂಬಾ ಸಮರ್ಥವಾಗಿ ನಿರ್ವಹಿಸಿದ. ಮುಪ್ಪಿನ ತಾಯಿ ನೆಮ್ಮದಿಯ ಬದುಕನ್ನು ಬದುಕಿದಳು. ಆದರೆ ಈಗಿನ ಕಾಲದಲ್ಲಿ

ತಂದೆ ತಾಯಿಗಳು ಮುದುಕರಾದ ಮೇಲೆ ಅವರನ್ನು ಕಡೆಗಣಿಸುವವರೇ ಹೆಚ್ಚು. ಒಬ್ಬ ರೈತ ಎತ್ತುಗಳನ್ನು ತನ್ನ ಹೊಲದಲ್ಲಿ ದುಡಿಯಲು ಅನೇಕ ವರ್ಷ ಉಪಯೋಗಿಸಿಕೊಳ್ಳುತ್ತಾನೆ. ಬೇಕಾದಷ್ಟು ಪ್ರಯೋಜನ ಮಾಡಿಕೊಳ್ಳುತ್ತಾನೆ. ಅವು ಮುದಿಯಾಗಿ ದುಡಿಯದಂತಾದಾಗ, ಕೆಲವು ರೈತರು, ಅವುಗಳಿಂದ ತಮ್ಮ ಸಂಪತ್ತು ಹೆಚ್ಚಿತೆಂದು, ಅವುಗಳಿಂದ ತಾವು ಅನ್ನ ತಿನ್ನುತ್ತಿದ್ದೇವೆಂದು ಕೃತಜ್ಞರಾಗಿ, ಅವುಗಳನ್ನು 'ಬಸವಣ್ಣ' ಎಂದು ಪೂಜಿಸಿ, ಮೇವು ಹಾಕಿ ರಕ್ಷಿಸುತ್ತಾರೆ. ಸತ್ತ ಮೇಲೆ ತಮ್ಮ ಹೊಲದಲ್ಲೇ ಸಮಾಧಿ ಮಾಡಿರುವ ಉದಾಹರಣೆಗಳಿಗೂ ಲೆಕ್ಕವಿಲ್ಲ. ಆದರೆ ಮಾನವೀಯ ಗುಣವಿಲ್ಲದ ಕೆಲವರು, ಅವು ದುಡಿಯದಂತಾದಾಗ, ಅವುಗಳನ್ನು ಕಸಾಯಿ ಖಾನೆಗೆ ಮಾರಿ ಹಣ ಪಡೆಯುತ್ತಾರೆ. ಮುಪ್ಪಿನಲ್ಲಿ ತಂದೆ–ತಾಯಿಗಳನ್ನು ರಕ್ಷಿಸದೆ ಅಲಕ್ಷಿಸುವ ಮಕ್ಕಳು, ಕಸಾಯಿಖಾನೆಗೆ ಎತ್ತನ್ನು ಮಾರುವ ಮನುಷ್ಯರಿಗೆ ಸಮಾನ. ಪುಟ್ಟಾ, ನೀನು ಹಾಗೆ ಕೃತಘ್ನನಾಗದೆ, ಕರ್ತವ್ಯಚ್ಯುತನಾಗದೆ ಮಾನವೀಯ ಗುಣಗಳುಳ್ಳ ಸತ್ಪುತ್ರನಾಗಿ ಬಾಳಬೇಕು ತಿಳಿಯಿತೆ? ಇಲ್ಲಿಗೆ ಪತ್ರ ಮುಗಿಸುತ್ತೇನೆ.

ಇಂತು ನಿನ್ನ,
ಹಿತೈಷಿ.

■

## ೨೦. ಕೃತಜ್ಞತೆ

ಪ್ರೀತಿಯ ಪುಟ್ಟಾ,

ಬಂಧುಗಳಲ್ಲಿ, ಕುಟುಂಬದಲ್ಲಿ, ಸ್ನೇಹದಲ್ಲಿ, ಸಮಾಜದಲ್ಲಿ ಪ್ರೀತಿಯ ಸಂಬಂಧ ಉಳಿಯಬೇಕಾದರೆ, ಪರಸ್ಪರ ಸಹಾಯ ಹಾಗೂ ಕೃತಜ್ಞತೆ ಜನರಲ್ಲಿರುವುದು ಅವಶ್ಯಕ. ಹಾಗಾಗಿ ಕೃತಜ್ಞತೆ ಪ್ರತಿಯೊಬ್ಬರಲ್ಲಿ ಅವಶ್ಯಕವಾಗಿ ಇರಬೇಕಾದ ಒಂದು ಸುಗುಣ. ಮಾನವ ಪರಾವಲಂಬಿ. ನಾಗರಿಕತೆ ಬೆಳೆದಂತೆ ಪರಸ್ಪರ ಅವಲಂಬನೆ, ಎಂದರೆ ಸಹಕಾರ ಮತ್ತಷ್ಟು ಹೆಚ್ಚುತ್ತಾ ಹೋಗುತ್ತದೆ. ಯಾರ ಹಂಗೂ ಇಲ್ಲದಂತೆ ಯಾವ ಮನುಷ್ಯನೂ ಬದುಕಲಾರ. ವಿದ್ಯಾವಂತರು, ಹಳ್ಳಿಗರು, ಪಟ್ಟಣಿಗರು, ಬಡವರು, ಬಲ್ಲಿದರು, ಗುಣವಂತರು, ಅವಿದ್ಯಾವಂತರು, ಬಲಿಷ್ಠರು, ಅಶಕ್ತರು ಎಲ್ಲರಿಗೂ ಇನ್ನೊಬ್ಬರ ನೆರವು ಒಂದಲ್ಲ ಒಂದು ಕಾರಣಕ್ಕಾಗಿ ಬೇಕೇಬೇಕು.

ಇನ್ನೊಬ್ಬರ ನೆರವನ್ನು ಬಯಸುವ ವ್ಯಕ್ತಿ ತಾನೂ ಪ್ರತಿಯಾಗಿ ಏನನ್ನಾದರೂ ಕೊಡುವಂತಿರಬೇಕು. ಕೊಡಲು ಸಾಧ್ಯವಿಲ್ಲದಿದ್ದರೆ ಕೃತಜ್ಞತೆಯ ನಡೆಯನ್ನಾದರೂ ತೋರಿಸಬೇಕು. ಉಪಕಾರ ಮಾಡಿದ ವ್ಯಕ್ತಿಯನ್ನು ಗೌರವದಿಂದ ಕಾಣಬೇಕು.

ಅವನಿಗೆ ಬೇರೆ ಯಾವುದೇ ರೀತಿಯ ನೆರವು ಬೇಕಾದಾಗ ಸ್ವ-ಇಚ್ಛೆಯಿಂದ ಸಹಾಯ ಮಾಡಲು ಮುಂದಾಗಬೇಕು. ಉಪಕಾರವನ್ನು ಮಾಡಿದವರಿಗೆ ಅಪಕಾರವನ್ನಂತೂ ಮಾಡಲೇಬಾರದು. ಹಾಗೆ ಮಾಡಿದ್ದೇ ಆದರೆ, ಅದು ಒಂದು ದುಷ್ಟ ಉದಾಹರಣೆಯಾಗಿ ಸಮಾಜದಲ್ಲಿ ಪಸರಿಸಿ, ಸಾಮಾಜಿಕ ಆರೋಗ್ಯವನ್ನು ಕೆಡಿಸಿ ಬಿಡುತ್ತದೆ.

ಈಗಿನ ಕಾಲದಲ್ಲಿ ಉಪಕಾರ ಪಡೆದುಕೊಂಡು, ಉಪಕಾರ ಮಾಡಿದವರನ್ನು ಕಡೆಗಣಿಸಿ, ಅವರಿಂದ ದೂರವಿದ್ದು ಅವರ ಮುಂದೇ ಅಹಂಕಾರದಿಂದ ಮೆರೆಯುವವರೂ ಇದ್ದಾರೆ. ಅವರಿಂದಲೇ ಅಭಿವೃದ್ಧಿ ಸ್ಥಿತಿಗೆ ಬಂದು, ಅವರೆಂದುರಿಗೇ ಅಹಂಕಾರದ ದುರ್ವರ್ತನೆಯನ್ನು ತೋರಿಸುತ್ತಾ ಅಹಂಭಾವದಿಂದ ಮೆರೆಯುತ್ತಾರೆ. ಉಪಕಾರ ಪಡೆಯುತ್ತಾ, ಉಪಕಾರ ಮಾಡಿದವರನ್ನು ಮರೆಯುತ್ತಾ, ತಮ್ಮ ದೊಡ್ಡಸ್ತಿಕೆಯನ್ನು ಮೆರೆಸುವವರೆ ಜಾಣರು! ಅವರೇ ಲೋಕ ವ್ಯವಹಾರವನ್ನು ಅರಿತವರು! ಎಂದು ತಿಳಿದುಕೊಳ್ಳುವಂತಹ ವಾತಾವರಣ ಇಂದು ಸೃಷ್ಟಿಯಾಗಿದೆ. ಹಾಗಾಗಿ ಉಪಕಾರ ಮಾಡುವ ಸ್ವಭಾವದವರು ತುಂಬಾ ನೊಂದುಕೊಳ್ಳುವಂತಹ, ಇಂತಹ ಸ್ವಭಾವವನ್ನೇ ತ್ಯಜಿಸಬೇಕೆಂದು ನಿರ್ಧರಿಸಬೇಕು ಎನ್ನುವಂತಹ ಪರಿಸ್ಥಿತಿ ನಿರ್ಮಾಣವಾಗುತ್ತಿದೆ. ದುರಾದೃಷ್ಟದಿಂದ ಸಜ್ಜನರು ಸಮಾಜದಲ್ಲಿ ಕ್ಷೀಣಿಸುತ್ತಾ ಹೋದರೆ ಸ್ವಸ್ಥ್ಯ ಸಮಾಜ ಇಲ್ಲವಾಗುತ್ತದೆ. ಆಗ ಎಲ್ಲೆಲ್ಲೂ ಅಶಾಂತಿ ಅಸಮಾಧಾನ, ನೆಮ್ಮದಿಯ ಕೊರತೆ, ವಿರಸಗಳು ಹರಡುತ್ತವೆ. ಇದು ಹೊಡೆದಾಟ ಬಡಿದಾಟಗಳಲ್ಲಿ, ಮೋಸ, ದ್ವೇಷಗಳಲ್ಲಿ ಪರ್ಯವಸಾನವಾಗುತ್ತದೆ.

ಈ ಸಹಕಾರ, ಪ್ರೀತಿ ವಿಶ್ವಾಸಗಳು ಕೇವಲ ವ್ಯಕ್ತಿಗಳಲ್ಲಿ ಅಲ್ಲ. ಕುಟುಂಬಗಳಲ್ಲಿ, ರಾಜ್ಯಗಳಲ್ಲಿ, ರಾಷ್ಟ್ರಗಳಲ್ಲಿಯೂ ಇಂದಿನ ಜೀವನದಲ್ಲಿ ಹಾಸು-ಹೊಕ್ಕಾಗಿ ಇರಬೇಕಾಗಿದೆ. ಒಂದು ರಾಷ್ಟ್ರ ಕಚ್ಚಾವಸ್ತುವಿಗಾಗಿ ಇನ್ನೊಂದು ರಾಷ್ಟ್ರವನ್ನು ಅವಲಂಬಿಸಿದರೆ, ಈ ರಾಷ್ಟ್ರ ಸಿದ್ಧವಸ್ತುಗಳಿಗಾಗಿ ಆ ರಾಷ್ಟ್ರವನ್ನು ಅವಲಂಬಿಸಬೇಕಾಗುತ್ತದೆ. ಒಂದು ರಾಷ್ಟ್ರ ಆಹಾರ ಪದಾರ್ಥಕ್ಕಾಗಿ ಇನ್ನೊಂದು ರಾಷ್ಟ್ರವನ್ನು ಅವಲಂಬಿಸಿದರೆ, ಆ ರಾಷ್ಟ್ರ, ತಾಂತ್ರಿಕ ಜ್ಞಾನಕ್ಕಾಗಿ ಮತ್ತೊಂದು ರಾಷ್ಟ್ರದ ನೆರವು ಅಪೇಕ್ಷಿಸಬೇಕಾಗುತ್ತದೆ. ಒಂದು ರಾಜ್ಯ ಇನ್ನೊಂದು ರಾಜ್ಯದಿಂದ ನೀರನ್ನು ನಿರೀಕ್ಷಿಸಿದರೆ, ಆ ರಾಜ್ಯ ಈ ರಾಜ್ಯದಿಂದ ವಿದ್ಯುಚ್ಛಕ್ತಿಯನ್ನು ಕೇಳಬಹುದು. ಹೀಗೆ ಪರಸ್ಪರ ಅವಲಂಬನೆ ಅನಿವಾರ್ಯ. ಈ ಕೊಡು – ಕೊಳ್ಳುವಿಕೆ ನಿರಂತರವಾಗಿ ನಡೆಯಬೇಕಾದರೆ, ಪರಿಸ್ಪರ ಸ್ನೇಹ, ಪ್ರೀತಿ, ವಿಶ್ವಾಸ ಇದ್ದಷ್ಟು ಸಹಕಾರ ಸುಲಭ ಎಂಬುದನ್ನು ಮರೆಯಬಾರದು.

ಪುಟ್ಟೂ, ಮನುಷ್ಯನಲ್ಲಿ ಕೃತಜ್ಞತಾ ಸ್ವಭಾವ ಹೇಗಿರಬೇಕೆಂಬುದನ್ನು ತಿಳಿಸಲು

ನಾನೋಡಿದ ಒಂದು ಘಟನೆಯನ್ನು ತಿಳಿಸುವೆ ಕೇಳು, ಒಬ್ಬ ಬಡ ಹುಡುಗನಿದ್ದ, ತುಂಬಾ ಕಷ್ಟಪಟ್ಟು ದುಡಿದು ಜೀವನ ನಿರ್ವಹಣೆ ಮಾಡುತ್ತಿದ್ದ, ಆದರೂ ಹೊಟ್ಟೆಗಿದ್ದರೆ ಬಟ್ಟೆಗಿಲ್ಲ; ಬಟ್ಟೆಗಿದ್ದರೆ ಹೊಟ್ಟೆಗಿಲ್ಲ ಎನ್ನುವಂತಾಗಿತ್ತು ಅವನ ಸ್ಥಿತಿ. ಇದನ್ನು ಒಬ್ಬ ಶಿಕ್ಷಕರು ಗಮನಿಸುತ್ತಿದ್ದರು, ಒಂದು ದಿನ ಆ ಹುಡುಗನಿಗೆ ನೂರು ರೂಪಾಯಿ ಕೊಟ್ಟು, ಇದನ್ನು ಉಪಯೋಗಿಸಿಕೊಂಡು ಏನಾದರೂ ಸಣ್ಣ ಬಿಸಿನೆಸ್ ಮಾಡಿಕೊಂಡು ನಿನ್ನ ಸ್ಥಿತಿ ಸುಧಾರಿಸಿಕೊ ಎಂದರು. ಆಗ ಆ ಹುಡುಗ, ನನ್ನ ಪ್ರಯತ್ನದಲ್ಲಿ ನಾನು ಸೋತರೆ, ನಿಮಗೆ ಇಷ್ಟೊಂದು ಹಣ ಹೇಗೆ ಹಿಂತಿರುಗಿಸಲಿ? ಎಂದ. ಆ ಬಗ್ಗೆ ಚಿಂಚಿಸಬೇಡ. ನಿನ್ನ ಪ್ರಯತ್ನದಲ್ಲಿ ನೀನು ಯಶಸ್ವಿಯಾದರೆ ನನಗೆ ಸಿಗುವ ಸಂತೋಷವೇ ಸಾಕು. ಯಶಸ್ವಿಯಾಗದಿದ್ದರೆ, ನೀನು ಪ್ರಯತ್ನಶೀಲನಾಗಿ ಕಾರ್ಯ ಪ್ರವೃತ್ತನಾಗಿ ಪಡೆದ ಅನುಭವದಿಂದ ನನ್ನ ಹಣ ವಾಪಸ್ಸು ಪಡೆದಂತಾಗುತ್ತದೆ ಎಂದು ಹೇಳಿ ಹೋದರು. ಆಗ ಈ ಹುಡುಗ, ಈ ಹಣವನ್ನು ಮನೆಗೆ ಒಯ್ದು, ತಾಯಿಯೊಡನೆ ಚರ್ಚಿಸಿ, ಇಡ್ಲಿ ಮಾಡಿ ಮಾರುವ ಬಿಸಿನೆಸ್ ಪ್ರಾರಂಭಿಸಿದ, ಒಂದು ಫ್ಯಾಕ್ಟರಿಯ ಸಮೀಪ ಮಧ್ಯಾಹ್ನ ಊಟದ ಸಮಯಕ್ಕೆ ಸರಿಯಾಗಿ ಬಿಸಿ, ಬಿಸಿಯಾದ, ರುಚಿ – ರುಚಿಯಾದ, ಶುಚಿ – ಶುಚಿಯಾದ ಇಡ್ಲಿಯನ್ನು ಸಿದ್ಧಮಾಡಿ ಮಾರುತ್ತಿದ್ದ, ದುರಾಸೆ ಮಾಡದೆ ಬೆಲೆಯನ್ನು ಎಲ್ಲರಿಗೂ ಸುಲಭವಾಗುವ ರೀತಿಯಲ್ಲಿ ಇಟ್ಟಿದ್ದ, ಹಾಗಾಗಿ ದಿನದಿನಕ್ಕೂ ಡಿಮ್ಯಾಂಡ್ ಹೆಚ್ಚಿತು. ತಾಯಿಯೊಬ್ಬಳಿಗೇ ಡಿಮ್ಯಾಂಡ್ ಇದ್ದಷ್ಟು ಇಡ್ಲಿಯನ್ನು ಸಿದ್ಧ ಮಾಡುವುದಾಗದೇ ಒಬ್ಬ ಸಹಾಯಕನನ್ನು ಗೊತ್ತು ಮಾಡಬೇಕಾಗಿ ಬಂದು, ಇನ್ನೊಬ್ಬ ಬಡವನಿಗೆ ನೆರವು ನೀಡಲು ಅವನಿಗೆ ಸಾಧ್ಯವಾಯಿತು. ದಿನಕ್ಕೆ ಐದುನೂರು ಆರುನೂರು ರೂಪಾಯಿಯ ವ್ಯಾಪಾರವಾಗಿ, ಮೂರು ನೂರು ರೂಪಾಯಿಯಷ್ಟು ಲಾಭ ಬರಲಾರಂಭಿಸಿತು. ಬಿಸಿನೆಸ್ ಬೆಳೆಯುತ್ತಾ ಹೋಯಿತು. ಒಂದು ರೆಸ್ಟೋರೆಂಟನ್ನೇ ತೆಗೆದು ಅದರ ಮಾಲೀಕನಾದ. ಇದ್ದಕ್ಕಿದ್ದಂತೆ ಒಂದು ದಿನ ಅವನಿಗೆ ಸಹಾಯ ಮಾಡಿದ ಶಿಕ್ಷಕರಿಗೆ ಅಪಘಾತವಾಗಿ ತುಂಬಾ ಚಿಂತಾಜನಕ ಸ್ಥಿತಿಯಲ್ಲಿ ದವಾಖಾನೆಯಲ್ಲಿರುವ, ಅವರಿಗೆ ಅರ್ಜೆಂಟಾಗಿ 'ಬಿ ಪಾಸಿಟಿವ್ ಗ್ರೂಪ್'ನ ರಕ್ತ ಬೇಕಾಗಿರುವ ತಿಳಿಯಿತು. ದೈವಯೋಗದಿಂದ ಅವನ ರಕ್ತವೂ ಅದೇ ಗುಂಪಿನದಾಗಿತ್ತು. ಕೂಡಲೇ ದವಾಖಾನೆಗೆ ಹೋಗಿ, ಡಾಕ್ಟರನ್ನು ಕಂಡು, ತನ್ನ ರಕ್ತವನ್ನು ತೆಗೆದುಕೊಂಡು ಶಿಕ್ಷಕರನ್ನು ಉಳಿಸಬೇಕಾಗಿ ವಿನಂತಿಸಿಕೊಂಡ. ಸಕಾಲಕ್ಕೆ ಆರೋಗ್ಯಪೂರಿತ ರಕ್ತ ದೊರೆತು, ಶಿಕ್ಷಕರನ್ನು ಉಳಿಸಲು ಡಾಕ್ಟರಿಗೂ ಸಾಧ್ಯವಾಯಿತು. ಶಿಕ್ಷಕರ ಮನೆಯವರಿಗೆ ರಕ್ತ ಕೊಟ್ಟವರು ಯಾರು, ಅವರು ಬದುಕಲು ಸಹಾಯಕರಾದವರು, ಯಾರು ಎಂಬುದೇ ಗೊತ್ತಿರಲಿಲ್ಲ. ಶಿಕ್ಷಕರಿಗೆ ಪ್ರಜ್ಞೆ ಬಂದ ಮರು ದಿವಸ, ರೆಸ್ಟೋರೆಂಟಿನ ಮಾಲೀಕನು ಒಂದು ಹರಿವಾಣದ ತುಂಬಾ ಹಣ್ಣುಗಳನ್ನೂ ಒಂದು ಕವರಿನಲ್ಲಿ ದವಾಖಾನೆಯ ಖರ್ಚಿಗೆಂದು ಐದು

ಸಾವಿರ ರೂಪಾಯಿಗಳನ್ನು ಇಟ್ಟುಕೊಂಡು ವಾರ್ಡಿಗೆ ಬಂದ. ಹರಿವಾಣವನ್ನು ಶಿಕ್ಷಕರ ಮುಂದಿಟ್ಟು ಪಾದಕ್ಕೆ ನಮಸ್ಕರಿಸಿದ. ಶಿಕ್ಷಕರು ಮೊದಲು ಕಕ್ಕಾಬಿಕ್ಕಿಯಾದರು. ಆದರೆ ಮರುಕ್ಷಣದಲ್ಲೇ ಅವನನ್ನು ಗುರ್ತಿಸಿದರು. ಅವರ ಕಣ್ಣಲ್ಲಿ ಆನಂದಬಾಷ್ಪ ಸುರಿಯಿತು. 'ಇಷ್ಟೆಲ್ಲ ಏಕೆ ತಂದೆಯಪ್ಪ ?' ಎಂದರು. ಆಗ ಬಂದ ಡಾಕ್ಟರಿಂದ ತನ್ನ ರಕ್ತ ಕೊಟ್ಟು ಪ್ರಾಣ ಉಳಿಸಿದ ಮಹಾಶಯ ಇವನೇ ಎಂದು ತಿಳಿದು ಮಾಸ್ತರರಿಗಾದ ಆನಂದ ಅಷ್ಟಿಷ್ಟಲ್ಲ, 'ಕೊಟ್ಟಿದ್ದು ಕೆಟ್ಟಿತೆನಬೇಡ, ಅದು ಮುಂದೆ ಕಟ್ಟಿಹುದು ಬುತ್ತಿ' ಎಂಬ ಸರ್ವಜ್ಞನ ಪದಗಳ ಸಾಲು ನೆನಪಿಗೆ ಬಂದವು. 'ಎಂತಹ ಉಪಕಾರ ಮಾಡಿದೆಯಪ್ಪಾ! ನೀನಿಂದು ನನಗೆ ಜೀವ ಕೊಟ್ಟ ಉಪಕಾರಿ' ಎಂದರು. ಆಗ ಆತ, 'ಸಾರ್ ಬಡವನಾದ ನನ್ನನ್ನು, ನೆರವು ನೀಡಿ, ಮೇಲಕ್ಕೆತ್ತಿದಿರಿ. ಇಂದು ನಾನೊಬ್ಬ ದೊಡ್ಡ ಮನುಷ್ಯನಾಗುವಂತೆ ಮಾಡಿದಿರಿ, ನೀವು ನನಗೆ ಜೀವನ ಕೊಟ್ಟಿರಿ, ನಾ ನಿಮ್ಮ ಜೀವ ಉಳಿಸಲು ನೆರವಾಗಿದ್ದರೆ, ಅದು ನಾನು ನಿಮಗೆ ಅರ್ಪಿಸಿದ ಕೃತಜ್ಞತೆ' ಎಂದು ಹೇಳಿ ಮತ್ತೊಮ್ಮೆ ನಮಸ್ಕರಿಸಿದ.

ಪ್ರೀತಿಯ ಪುಟ್ಟಾ, ಸಮಾಜದಲ್ಲಿ ಇಂತಹವರ ಸಂಖ್ಯೆ ಹೆಚ್ಚಾಗಬೇಕು. ಶಿಕ್ಷಕರಿಗಿದ್ದಂತಹ ಮಾನವೀಯ ಗುಣ, ಆ ಬಡ ಹುಡುಗನಲ್ಲಿದ್ದ ಕೃತಜ್ಞತಾ ಭಾವ, ಉಪಕಾರ ಸ್ಮರಣೆ ಎಲ್ಲರಲ್ಲಿಯೂ ಬೆಳೆಯಬೇಕು. ಆಗ ಎಲ್ಲರ ಜೀವನವೂ ಹಸನಾಗುತ್ತದೆ. ನೆಮ್ಮದಿ, ಸಮಾಜದಲ್ಲಿ ಹಾಸು ಹೊಕ್ಕಾಗುತ್ತದೆ. ಬೇರೆಯವರ ಗೊಡವೆ ಬಿಡು. ನೀನಂತೂ ಈ ಸದ್ಗುಣಗಳನ್ನು ಅಳವಡಿಸಿಕೊ ಪತ್ರ ಮುಗಿಸಲೆ?

ಇಂತು ನಿನ್ನ,
ಹಿತೈಷಿ.

■

## ೨೧. ಮೂಢನಂಬಿಕೆಗಳು

ಪ್ರೀತಿಯ ಪುಟ್ಟಾ,

ಮೂಢನಂಬಿಕೆಗಳಿಗೆ ನಮ್ಮ ದೇಶ ಪ್ರಸಿದ್ಧಿಯಾಗಿದೆ. ಅಂತಹ ಮೂಢ ನಂಬಿಕೆಗಳಿಂದ ಮನುಷ್ಯನು ಅನೇಕ ತೊಂದರೆಗಳಿಗೆ ಒಳಗಾಗುತ್ತಾನೆ. ಆದುದರಿಂದ ಈಚೆಗಂತೂ, 'ಮೂಢ ನಂಬಿಕೆಗಳಿಂದ ಮುಕ್ತರಾಗಿರಿ' ಎಂಬ ಆಂದೋಲನವೇ ಪ್ರಾರಂಭವಾಗಿದೆ ಎನ್ನಬೇಕು. ಅರ್ಥಹೀನವಾದ ಮೂಢನಂಬಿಕೆಗಳನ್ನು ಆಚರಿಸುವುದು ಮೂಢತನವೇ ಸರಿ.

ಮೂಢನಂಬಿಕೆ ಎಂದ ತಕ್ಷಣ ಒಂದು ವಿಷಯ ನೆನಪಿಗೆ ಬರುತ್ತೆ

ನೋಡು,ಅಲ್ಲೊಬ್ಬರ ಮನೇಲಿ ಶ್ರಾದ್ಧದ ದಿನ, ಮನೆಯಲ್ಲಿ ಬೆಕ್ಕು ಇಲ್ದಿದ್ರೂ ಎಲ್ಲಿಂದಾದ್ರೂ ಹಿಡ್ಕೊಂಡು ಬಂದು ಅದನ್ನು ಸ್ಟೋರ್ ರೂಮಲ್ಲಿ ಇಟ್ಟು ಅದು ಹೊರಗೆ ಬರದಹಾಗೆ ಒಂದು ಬುಟ್ಟಿ ಬೋರಲು ಹಾಕಿ, ಎಲ್ಲಾ ಕಾರ್ಯ ಮುಗಿದ ಮೇಲೆ ಸಾಯಂಕಾಲ ಹೊರಕ್ಕೆ ಬಿಡ್ತಿದ್ರಂತೆ, ಅವರ ಮನೇವ್ರನ್ನ ಯಾಕೆ ಹೀಗ್ಮಾಡ್ತೀರ? ಅಂದ್ರೆ, 'ನಮಗ್ಗೊತ್ತಿಲ್ಲಪ್ಪಾ, ನಮ್ಮನೇಲಿ ಮೊದಲಿಂದ ಹಾಗೆ ಮಾಡ್ತಿದ್ರು ನಾವೂ ಹಾಗೆ ಮಾಡ್ತೀವಿ' ಅಂತ ಹೇಳಿದ್ರಂತೆ, ಅವರ ಮನೆತನದಲ್ಲಿ ಒಬ್ಬ ವಿಚಾರವಂತ ಇದ್ನಂತೆ ಅವ್ನು, ಇದೇನಿದು ಹೀಗೆ ಮಾಡೋದ್ರಿಂದ ಏನು ಉಪಯೋಗ ? ಅರ್ಥ ಇಲ್ಲದ ಪದ್ಧತೀನ ಆಚರಿಸೋದು ಹುಚ್ಚುತನ ಅಂತ, ಬಿಡ್ಸೋಕೆ ಪ್ರಯತ್ನ ಪಟ್ಟರೆ, ಮನೇಲಿ ಎಲ್ಲರೂ ಸಿಟ್ಟಿಗೆದ್ದುಬಿಟ್ರಂತೆ, ಆಮೇಲೆ ಅವ್ನು ಇದರ ಮೂಲ ತಿಳ್ಕೋಬೇಕೂಂತ ಪಯತ್ನಪಟ್ಟಾಗ, ಅವರ ಮುತ್ತಜ್ಜನ ಕಾಲದಲ್ಲಿ ಅವರ ಮನೇಲಿ ಬೆಕ್ಕು ಸಾಕಿದ್ರಂತೆ, ಶ್ರಾದ್ಧದ ದಿನ ಇವ್ರೆಲ್ಲಾ ಮಡಿ – ಹುಡಿ ಮಾಡ್ತಾ ಇದ್ರೆ, ಅದು ಬಂದು ಎಲ್ಲದ್ರಲ್ಲೂ ಮೂತಿ ಇಡ್ತಿತ್ತಂತೆ, ಹೀಗೆ ಎಂಜಲು – ಮಂಜಲು ಮಾಡುತ್ತೇಂತ ಅದನ್ನು ತೊಗೊಂಡು ಹೋಗಿ ಸ್ಟೋರ್ ರೂಮಲ್ಲಿ ಹಾಕಿ, ಬುಟ್ಟಿ ಮುಚ್ಚತ್ತಾ ಇದ್ರಂತೆ, ಈಚೆಗೆ ಅವರ ಮನೇಲಿ ಬೆಕ್ಕು ಸಾಕ್ದೆ ಇದ್ರೂ, ಹಾಗ್ಯಾಕೆ ಮಾಡ್ತಿದ್ರೂಂತ ತಿಳ್ಕೊಳ್ಳೋಕೂ ಪ್ರಯತ್ನ ಮಾಡ್ತಿಡ್ದೆ, ಹಿರಿಯೋರು ಮಾಡ್ತಿದ್ರೂಂತ ಇವ್ರು ಎಲ್ಲಿಂದಾದ್ರು ಬೆಕ್ತಂದು ಆ ದಿನ ಬುಟ್ಟಿ ಮುಚ್ಚತ್ತಾ ಇದ್ರಂತೆ ! ಹೀಗೆ ನಮ್ಮಲ್ಲಿ ಹಿಂದೆ ಅರ್ಥ ಪೂರ್ಣವಾಗಿದ್ದ ಅನೇಕ ರೂಢಿಗಳು ಇಂದು ಅರ್ಥ ಕಳೆದುಕೊಂಡಿವೆ. ಅಂಥವನ್ನು ಬಿಟ್ಟು ಬಿಡಬೇಕು.

ನೋಡು ಪುಟ್ಟು, ಹಿಂದಿನ ಆಚರಣೆಗಳೆಲ್ಲಾ ಅರ್ಥಹೀನವಲ್ಲ. ಈಗ ನೋಡು ಎಲ್ಲಾ ಆಚರಣೆಗಳಿಗೂ ಅರ್ಥವಿಲ್ಲದ ಆಚರಣೆ, ಮೂಢ ನಂಬಿಕೆ ಅಂತ ಹಿಂದಿನ ಪದ್ಧತಿಗಳನ್ನೆಲ್ಲಾ ಬಿಡ್ತಾ ಇದ್ದಾರೆ, ಹೀಗ್ಮಾಡೋದು ಸರಿಯಲ್ಲ. ನಾವು ಯಾವುದೇ ಒಂದು ರೂಢಿಯನ್ನು ಬಿಡಬೇಕಾದರೆ, ಏನನ್ನಾದರೂ ಹೊಸದನ್ನು ಒಪ್ಪಿಕೊಳ್ಳಬೇಕಾದರೆ, ಎರಡರ ಬಗೆಗೂ ಆಳವಾಗಿ ವಿಚಾರ ಮಾಡಬೇಕು. ಹಳೆಯದು ಎಂಬ ಕಾರಣಕ್ಕೆ ಬಿಡುವುದು, ಹೊಸದು ಎಂಬ ಕಾರಣಕ್ಕೆ ಒಪ್ಪಿಕೊಳ್ಳುವುದು ಮೂರ್ಖತನ.

ನಮ್ಮದು ಮೌಲ್ಯಾಧಾರಿತ ಸಂಸ್ಕೃತಿ; ಮೌಲ್ಯಗಳಿಗೆ ಮಹತ್ವಕೊಟ್ಟು ಅದನ್ನು ಬದುಕಿನಲ್ಲಿ ಅಳವಡಿಸಿಕೊಂಡು ಬಂದಿದ್ದೇವೆ. ಕೃತಜ್ಞತೆ, ಸಹಕಾರ, ಪ್ರಾಮಾಣಿಕತೆ, ದಯೆ ಮುಂತಾದ ಗುಣಗಳಿಗೆ ಇಲ್ಲಿ ಮಾನ್ಯತೆ ಇದೆ. ಕೃತಜ್ಞತೆಯನ್ನು ನಮ್ಮ ಜನ, ತಮ್ಮ ಧಾರ್ಮಿಕ ಜೀವನದಲ್ಲಿ ಮೊದಲಿನಿಂದಲೂ ಅಳವಡಿಸಿಕೊಂಡಿದ್ದಾರೆ. ನಮ್ಮ ಪೂರ್ವಜರು, ಭೂಮಿ, ನೀರು, ಬೆಂಕಿ, ಗಿಡ ಮರಗಳನ್ನು ಪೂಜಿಸುತ್ತಿದ್ದರು.

ಇಂದಿನವರು ಅವುಗಳನ್ನು ಅವಿವೇಕದ ಆಚರಣೆಗಳು, ಮೂಢ ನಂಬಿಕೆಗಳು ಎಂದು ಟೀಕಿಸುತ್ತಾರೆ. ಆದರೆ ನಮ್ಮ ಸಂಪ್ರದಾಯಗಳನ್ನು, ಹಬ್ಬಗಳನ್ನು, ರೂಢಿಗಳನ್ನು ವಿಶ್ಲೇಷಿಸಿದರೆ, ಆ ಆಚರಣೆಗಳ ಹಿಂದೆ ಸದುದ್ದೇಶ ಅಡಗಿರುವುದನ್ನು ಕಾಣಬಹುದು. ಅಲ್ಲಿ ಸಾಮಾಜಿಕವಾದ, ನೈತಿಕವಾದ, ಅಥವಾ ಆರೋಗ್ಯದ ಅಂಶಗಳು ಅಡಕವಾಗಿರುವುದು ಗೋಚರಿಸುತ್ತದೆ. ನೀರು, ಬೆಂಕಿ, ಭೂಮಿ, ಗಿಡ, ಮರ ಇವೆಲ್ಲಾ ಪ್ರಕೃತಿದತ್ತವಾದ ಜೀವನಾಧಾರ ಅಂಶಗಳು. ಮನುಷ್ಯನ ಬದುಕು ಇವಿಲ್ಲದಿದ್ದರೆ ನಡೆಯುವುದೇ ಇಲ್ಲ. ಇವೆಲ್ಲಾ ಪ್ರಕೃತಿಯ ಕೊಡುಗೆಗಳು, ಇವುಗಳಿಂದಲೇ ಬದುಕಲು ಸಾಧ್ಯ. ಆದ್ದರಿಂದ ಅವುಗಳಿಗೆ ಪೂಜೆಯನ್ನು ಮಾಡುವ ಮೂಲಕ ಅವಕ್ಕೆ ಕೃತಜ್ಞತೆ ಅರ್ಪಿಸುತ್ತಿದ್ದರು ಅಷ್ಟೆ. ಇಂತಹ ಆಚರಣೆಗಳಿಂದ ಮಕ್ಕಳಲ್ಲಿ ಉಪಕಾರ ಮಾಡಿದವರನ್ನು ನೆನೆಯುವ, ಅವರಿಗೆ ಕೃತಘ್ನರಾಗದೆ ಕೃತಜ್ಞರಾಗಿ ಬದುಕುವ ಸ್ವಭಾವ ಬೆಳೆಯುತ್ತದೆ. ಅಲ್ಲದೆ ಎಲ್ಲರೂ ಒಂದುಗೂಡಿ ಪೂಜೆ ಮಾಡುವುದರಿಂದ ಮನೆಯ ಜನರಲ್ಲಿ ಐಕ್ಯತೆ ಉಳಿಯಲು, ಸಂತೋಷದಿಂದ ಸಮಯ ಕಳೆಯಲು ಸಾಧ್ಯವಾಗುತ್ತದೆ. ದಿನದ ಒಂದೇ ತರಹದ ಜೀವನದಿಂದ ಸ್ವಲ್ಪ ಬದಲಾವಣೆ ಉಂಟಾಗಿ, ಜೀವನದಲ್ಲಿ ಆಸಕ್ತಿ ಹೆಚ್ಚಾಗುತ್ತದೆ. ಮಡಿ, ಮೈಲಿಗೆ ಎಂಜಲು ಈ ಅನಿಸಿಕೆಗಳ ಹಿಂದೆ ಆರೋಗ್ಯ ಸೂತ್ರವಿದೆ. ಹೀಗೆ ಬಹಳಷ್ಟು ಆಚರಣೆಗಳ ಉದ್ದೇಶ ಅರ್ಥಪೂರ್ಣವಾಗಿಯೂ, ಒಂದು ಬಗೆಯ ಶಿಸ್ತಿನ ಬೆಳವಣಿಗೆಗೆ ಸಹಾಯಕವೂ ಆಗಿವೆ. ಕೆಲವು ಸಂಪ್ರದಾಯಗಳು, ರೂಢಿಗಳು ಈಗಿನ ಜೀವನಕ್ಕೆ ಅನವಶ್ಯಕವೆನ್ನಿಸಿದರೆ, ಅವುಗಳನ್ನು ಬಿಡಬಹುದು. ಆದರೆ ಕೆಲವು ಅರ್ಥವಿಲ್ಲದವುಗಳಾಗಿ ಕಂಡರೂ, ಅವುಗಳು ನಮ್ಮ ಸಂಸ್ಕೃತಿಯ, ಪರಂಪರೆಯ ಪ್ರತೀಕಗಳಾಗಿದ್ದರೆ, ಅವುಗಳನ್ನು ಉಳಿಸಿಕೊಳ್ಳಬೇಕು. ಸಮೃದ್ಧ ಸಂಸ್ಕೃತಿ ಹಾಗೂ ಪರಂಪರೆ, ಇತಿಹಾಸ, ರಾಷ್ಟ್ರಕ್ಕೊಂದು ಭೂಷಣ ಮತ್ತು ಗೌರವ; ಅವುಗಳನ್ನು ಕಳೆದುಕೊಳ್ಳುವುದು ಮೂರ್ಖತನ. ಸಂಸ್ಕೃತಿಯನ್ನು, ಪರಂಪರೆಯನ್ನು ಉಳಿಸುವುದು, ಪೀಳಿಗೆಯಿಂದ ಪೀಳಿಗೆಗೆ ವರ್ಗಾಯಿಸುವುದು ಶಿಕ್ಷಣದ ಕರ್ತವ್ಯ. ಆದುದರಿಂದ ಪುಟ್ಟೂ, ಸಂಸ್ಕೃತಿ ಮೂಲವಾದ ನಮ್ಮ ರೂಢಿಗಳನ್ನು ಕಾಯ್ದಿರಿಸಿಕೊಳ್ಳುವ ಜವಾಬ್ದಾರಿ ನಿನ್ನ ಮೇಲೆಯೂ ಇದೆ ಎಂಬುದನ್ನು ಮರೆಯಬೇಡ, ಈ ಬಗೆಗೆ ಹೇಳುವುದು ಬೇಕಾದಷ್ಟಿದೆ. ಸಿಕ್ಕಾಗ ಹೇಳಬಹುದು, ಪತ್ರ ದೀರ್ಘವಾಯಿತು. ಮುಗಿಸುತ್ತೇನೆ.

ಇಂತು ನಿನ್ನ,

ಹಿತೈಷಿ.

■

## ೨೨. ಬಹುಭಾಷಾ ಪರಿಣತಿ

ಪ್ರೀತಿಯ ಪುಟ್ಟಾ,

ಫೆಬ್ರವರಿ ತಿಂಗಳಲ್ಲಿ ಅನೇಕ ಪ್ರಖ್ಯಾತರು ಜನ್ಮವೆತ್ತಿದ್ದಾರೆ. ಗಾಂಧೀಜಿಯವರ ಅನುಯಾಯಿಗಳಾದ ಶ್ರೀ ಮುರಾರ್ಜಿ ದೇಸಾಯಿಯವರು ಹುಟ್ಟಿದ್ದು ಫೆಬ್ರವರಿ ತಿಂಗಳ ಕಡೆಯ ದಿನ. ಅದೂ ಇಪ್ಪತ್ತೊಂಭತ್ತನೆಯ ತಾರೀಖು. ಇದೇ ತಿಂಗಳು ಹುಟ್ಟಿದ ಮತ್ತೊಬ್ಬ ದೊಡ್ಡ ವ್ಯಕ್ತಿ ಎಂದರೆ, ಭಾರತದ ಕೋಗಿಲೆ ಎನ್ನಿಸಿರುವ ಶ್ರೀಮತಿ ಸರೋಜಿನಿ ನಾಯ್ಡು, ಇವರು ಹೈದರಬಾದಿನಲ್ಲಿ ಸಾವಿರದ ಎಂಟುನೂರಾ ಎಪ್ಪತ್ತೊಂಭತ್ತನೆಯ ಇಸವಿ ಫೆಬ್ರವರಿ ಹದಿಮೂರನೆಯ ತಾರೀಖು ಜನ್ಮ ತಾಳಿದರು.

ಈಕೆ ಬಹುಪ್ರತಿಭಾವಂತೆ, ಹೆಣ್ಣು ಮಕ್ಕಳು ಹೆಚ್ಚು ಓದದಿದ್ದ ಕಾಲದಲ್ಲಿ ಆಕೆ ತನ್ನ ಹನ್ನೆರಡನೆಯ ವಯಸ್ಸಿನಲ್ಲಿಯೇ ಮ್ಯಾಟ್ರಿಕ್ಯುಲೇಷನ್ ಪರೀಕ್ಷೆ ಮುಗಿಸಿದಳು. ಹದಿನಾರು ವರ್ಷದ ಹುಡುಗಿಯಾಗಿದ್ದಾಗಲೇ ಒಂದು ಇಂಗ್ಲಿಷ್ ನಾಟಕವನ್ನು ಪರ್ಷಿಯನ್ ಭಾಷೆಗೆ ಅನುವಾದಿಸಿದಳು. ಇದನ್ನು ನೋಡಿ ಖುಷಿಯಾದ ಹೈದರಾಬಾದಿನ ನಿಜಾಮ, ಈಕೆಗೆ ಸ್ಕಾಲರ್‌ಷಿಪ್ ಕೊಟ್ಟು ವಿದೇಶಕ್ಕೆ ಕಳುಹಿಸುವ ವ್ಯವಸ್ಥೆ ಮಾಡಿದನಂತೆ ! ನೋಡು ಮಗೂ, ಪ್ರತಿಭೆ ಇದ್ದರೆ, ಅದನ್ನು ಚೆನ್ನಾಗಿ ಬಳಸಿಕೊಂಡು ಕೆಲಸ ಮಾಡಿದರೆ ಎಂತೆಂತಹ ಪ್ರತಿಫಲ ದೊರೆಯುತ್ತದೆ.

ಸರೋಜಿನಿಗೆ ಭಾಷೆಗಳನ್ನು ಕಲಿತುಕೊಳ್ಳಲು ಬಹಳ ಆಸಕ್ತಿ ಇತ್ತಂತೆ. ಇದನ್ನು ಗಮನಿಸಿದ ಆಕೆಯ ತಂದೆ, ಇಂಗ್ಲೀಷ್ ಹಾಗೂ ಫ್ರೆಂಚ್ ಭಾಷೆಗಳನ್ನು ಕಲಿಸುವ ಏರ್ಪಾಡು ಮಾಡಿದರಂತೆ, ಮನೆಯಲ್ಲಿದ್ದ ವೈವಿಧ್ಯಮಯ ಭಾಷಾ ಕಲಿಕೆಯ ವಾತಾವರಣದಿಂದ ಈಕೆ ಬಂಗಾಳಿ, ಇಂಗ್ಲೀಷ್, ಫ್ರೆಂಚ್, ತೆಲುಗು, ಹಿಂದುಸ್ತಾನಿ ಮತ್ತು ಪರ್ಷಿಯನ್ ಭಾಷೆಗಳ ಪರಿಣತಿ ಪಡೆದಿದ್ದಳಂತೆ, ಈ ಎಲ್ಲಾ ಭಾಷೆಗಳು ಗೊತ್ತಿದ್ದುದರಿಂದ ಆಕೆಗೆ ಭಾಷೆಯನ್ನು ಉಪಯೋಗಿಸುವಲ್ಲಿ ಒಂದು ರೀತಿಯ ಪ್ರಭುತ್ವ ಬಂದಿತು. ಎಲ್ಲಾ ಭಾಷೆಗಳ ಮೂಲಕ, ಅನೇಕ ವಿಷಯಗಳನ್ನು ತಿಳಿದುಕೊಳ್ಳಲು ಆಕೆಗೆ ಸುಲಭ ಸಾಧ್ಯವಾಯಿತು.

ಪುಟ್ಟೂ, ಚಿಕ್ಕ ವಯಸ್ಸಿನಲ್ಲಿಯೇ ಎಷ್ಟು ಸಾಧ್ಯವೋ ಅಷ್ಟೂ ಭಾಷೆಗಳನ್ನು ಕಲಿತುಕೊಳ್ಳಬೇಕು. ನಮ್ಮ ದೇಶ, ಬಹು ಭಾಷೆಗಳ ದೇಶ. ನಮ್ಮ ರಾಜ್ಯ ಬಿಟ್ಟು ಹೊರಗೆ ಹೋದರೆ ಸಾಕು, ಉಳಿದ ಭಾಷೆಗಳ ಪರಿಚಯವಿರದಿದ್ದರೆ ಪರಕೀಯರಾಗಿ ಬಿಡುತ್ತೇವೆ. ದೇಶದ ಅನೇಕ ಭಾಗಗಳಿಗೆ ನಾನಾ ಕಾರಣಗಳಿಗಾಗಿ ಹೋಗಬೇಕಾಗುತ್ತದೆ. ಸಕ್ರಿಯವಾಗಿ, ಭಾಗವಹಿಸಬೇಕಾಗುತ್ತದೆ. ಅದಕ್ಕಾಗಿ

ಭಾರತೀಯರಾದವರಿಗೆ ಈಗಿನ ಪರಿಸ್ಥಿತಿಯಲ್ಲಿ ಕನಿಷ್ಠ ಮೂರು ಭಾಷೆಗಳಾದರೂ ಬೇಕೇ ಬೇಕು, ಮಾತೃಭಾಷೆ, ಭಾರತದ ರಾಷ್ಟ್ರಭಾಷೆಯಾದ ಹಿಂದಿ ಮತ್ತು ಅಂತರರಾಷ್ಟ್ರೀಯ ಮಟ್ಟದಲ್ಲಿ ಹಾಗೂ ರಾಷ್ಟ್ರೀಯ ವಿಚಾರ ಸಂಕಿರಣಗಳಲ್ಲಿ ಭಾಗವಹಿಸಲು ಇಂಗ್ಲೀಷ್ ಅವಶ್ಯಕ. ಕನಿಷ್ಠ ಇಷ್ಟು ಭಾಷೆಗಳನ್ನಾದರೂ ಪ್ರತಿಯೊಬ್ಬರೂ ಕಲಿಯಲೇಬೇಕು. ಅದಕ್ಕಾಗಿಯೇ ಶಿಕ್ಷಣ ತಜ್ಞರು ದೇಶದಲ್ಲಿ ತ್ರಿಭಾಷಾ ಸೂತ್ರವನ್ನು ರಾಷ್ಟ್ರದ ಶಿಕ್ಷಣ ವ್ಯವಸ್ಥೆಯಲ್ಲಿ ಜಾರಿಗೆ ತಂದಿದ್ದಾರೆ.

ಮನುಷ್ಯನಿಗೆ ಒಂದನೇ ವಯಸ್ಸಿನಿಂದ ಹದಿನಾಲ್ಕು ವರ್ಷಗಳಾಗುವವರೆಗೆ ಭಾಷೆ ಕಲಿಯುವ ಶಕ್ತಿಯು ತೀವ್ರವಾಗಿರುತ್ತದೆ. ಈ ಅವಧಿಯಲ್ಲಿ ಸ್ವಾಭಾವಿಕ ಪರಿಸರದಲ್ಲಿ ಬೇರೆ ಬೇರೆ ಭಾಷೆಗಳನ್ನು ಸುಲಭವಾಗಿ ಕಲಿಯಬಹುದು. ಆದುದರಿಂದ ಈ ಅವಧಿಯಲ್ಲಿ ಎಷ್ಟು ಭಾಷೆಗಳನ್ನು ಕಲಿಯಲು ಸಾಧ್ಯವೋ ಅಷ್ಟೂ ಭಾಷೆಗಳನ್ನು ಕಲಿತುಕೊಳ್ಳಲು ಪ್ರಯತ್ನಿಸು. ಎಷ್ಟೆಷ್ಟು ಹೆಚ್ಚು ಭಾಷೆಗಳನ್ನು ಕಲಿಯುತ್ತೀಯೋ ಅಷ್ಟಷ್ಟು ಪರಿಣತಿ, ದಕ್ಷತೆ ನಿನ್ನಲ್ಲಿ ಹೆಚ್ಚುತ್ತದೆ. ನೀನು ಯಾವುದೇ ಸಂದರ್ಭದಲ್ಲಿ ಹಿಂಜರಿಕೆ ಇಲ್ಲದೆ ನಿನ್ನ ಅಭಿಪ್ರಾಯ ಮಂಡಿಸಲು ಧೈರ್ಯದಿಂದ ಮುಂದೆ ಹೋಗುವ ಶಕ್ತಿಯನ್ನು ಭಾಷಾ ಪರಿಣತಿ ಕೊಡುತ್ತದೆ. ಭಾಷಾ ಪರಿಣತಿ ಬರಲು ಭಾಷೆ ಕಲಿಕೆಯ ಜೊತೆಗೆ, ಸಾಕಷ್ಟು ಪುಸ್ತಕಗಳನ್ನು ಓದುವ ಹವ್ಯಾಸವನ್ನು ಬೆಳೆಸಿಕೊಳ್ಳಬೇಕು. ಮನುಷ್ಯರಿಗೆ ಓದುವ ಹವ್ಯಾಸ ಬಹಳಷ್ಟು ಉತ್ತಮ ಫಲಗಳನ್ನು ಕೊಡುತ್ತದೆ. ಎನ್ನುವುದನ್ನು ನೆನಪಿನಲ್ಲಿಟ್ಟುಕೊ, ಪತ್ರ ದೀರ್ಘವಾಯಿತು. ಮುಗಿಸಲೇ? ಮುಗಿಸುತ್ತೇನೆ.

ಇಂತಿ ನಿನ್ನ,
ಹಿತೈಷಿ.

■

## ೨೩. ಸತ್ಪುತ್ರ – ಸತ್ಪ್ರಜೆ

ಪ್ರೀತಿಯ ಪುಟ್ಟಾ,

'ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸಿ' ಎಂಬ ಹೇಳಿಕೆಯನ್ನು ನೀನು ಕೇಳಿರಬೇಕಲ್ಲವೆ ? ಒಂಭತ್ತು ತಿಂಗಳು ಹೊತ್ತು, ಹೆತ್ತು, ಕಾಲಕಾಲಕ್ಕೆ ತನ್ನ ಮಗುವಿಗೆ ಆಹಾರವನ್ನಿತ್ತು. ನಡೆ – ನುಡಿಗಳನ್ನು ಕಲಿಸಿ, ವಿದ್ಯಾವಂತನಾಗಲು ಸಹಾಯಕಳಾದ ತಾಯಿ, ಸ್ವರ್ಗಕ್ಕಿಂತ ಹೆಚ್ಚಲ್ಲದೆ ಮತ್ತೇನು ! ಇದೇ ರೀತಿ, ತಾಯಿಯಿಂದ ರೂಪುಗೊಂಡ ವ್ಯಕ್ತಿಗೆ, ನೀರು, ಬೆಳಕು, ಊಟ–ವಸತಿ, ವಿದ್ಯೆ

ಬುದ್ಧಿ ಪಡೆಯಲಿಕ್ಕೆ ಸಹಾಯಕವಾಗುವ, ಮುಂದೆ ತಾನು ಆರಿಸಿಕೊಂಡ ರೀತಿಯಲ್ಲಿ ಬದುಕಲು ಎಲ್ಲ ರೀತಿಯ ಸೌಕರ್ಯಗಳಿಗೆ ಆಧಾರವಾದ ರಾಷ್ಟ್ರವೂ ತಾಯಿಯಂತೆಯೇ ಗೌರವಾದರಗಳಿಗೆ ಪಾತ್ರವಾದುದು ಮತ್ತು ಸ್ವರ್ಗಕ್ಕಿಂತ ಹೆಚ್ಚಿನದು. ನಮ್ಮ ಜೀವನಕ್ಕೆ ಊರುಗೋಲಾಗಿರುವ ರಾಷ್ಟ್ರವು ಹೆತ್ತ ತಾಯಿಗೆ ಸಮಾನ. ತಾಯಿ ಹಾಗೂ ರಾಷ್ಟ್ರದ ಗೌರವ ರಕ್ಷಣೆಗಾಗಿ ಮಕ್ಕಳು, ಪ್ರಜೆಗಳು, ಯಾವ ತ್ಯಾಗಕ್ಕಾದರೂ ಸಿದ್ಧರಿರಬೇಕು ಎಂಬುದರಲ್ಲಿ ಎರಡು ಮಾತಿಲ್ಲ. ಹಾಗಿಲ್ಲದ ಮಕ್ಕಳು ಮತ್ತು ಪ್ರಜೆಗಳು ನಿಜವಾದ ಅರ್ಥದಲ್ಲಿ ದ್ರೋಹಿಗಳು. ದೇಶಕ್ಕೆ ಮೋಸ ಮಾಡಿದರೆ ದೇಶದ್ರೋಹಿಗಳು ಎನ್ನಿಸಿಕೊಳ್ಳುತ್ತಾರೆ.

ಪುಟ್ಟಾ, ನೀನೆಂದೂ ದ್ರೋಹ ಬಗೆಯಬಾರದು, ತಿಳಿಯಿತೆ ? ಹಾಗೆಯೇ ರಾಷ್ಟ್ರಕ್ಕೂ ಅನ್ಯಾಯ ಮಾಡಬಾರದು ಎಂಬ ತತ್ವವನ್ನು ಈಗಿನಿಂದಲೇ ಮನಸ್ಸಿನಲ್ಲಿ ಬೇರೂರಿಸಿಕೊ, ಉತ್ತಮ ಸಂಸ್ಕಾರವಿಲ್ಲದೆ ಬೆಳೆದವರಿಗೆ ಗುರು – ಹಿರಿಯರ ಬಗೆಗಾಗಲೀ, ತಾಯಿ – ತಂದೆಗಳ ವಿಷಯದಲ್ಲಿ ಆಗಲೀ ಗೌರವಾದರಗಳಿರುವುದಿಲ್ಲ. ಎಷ್ಟೋ ಜನ ಮಕ್ಕಳು ತಾವು ದೊಡ್ಡವರಾದ ಮೇಲೆ ತಂದೆ – ತಾಯಿಗಳ ಮನನೋಯುವಂತೆ ಹೀಯಾಳಿಸಿ ಮಾತನಾಡುವವರಿದ್ದಾರೆ. ವೃದ್ಧಾಪ್ಯದಲ್ಲಿ ಅವರನ್ನು ಕಡೆಗಣಿಸಿದವರಿದ್ದಾರೆ. ಎಷ್ಟೋ ಜನ ತಾಯಿ – ತಂದೆಗಳು, ಮಕ್ಕಳು ದೊಡ್ಡ ಹುದ್ದೆಯಲ್ಲಿದ್ದರೂ, ಹೊಟ್ಟೆ – ಬಟ್ಟೆಗಿಲ್ಲದೆ ನರಳುವವರಿದ್ದಾರೆ. ಇಷ್ಟೇ ಅಲ್ಲದೆ ತುಂಬಾ ಕಡೆಗಣಿಸಲ್ಪಟ್ಟು, ಮಾನಸಿಕ ನೆಮ್ಮದಿ ಇಲ್ಲದೆ, ಅಸಹಾಯಕತೆಯಿಂದ ವೃದ್ಧಾಪ್ಯವನ್ನು ಕಳೆಯಬೇಕಾದಂತಹ ಸ್ಥಿತಿ ಅನೇಕ ತಂದೆ – ತಾಯಿಗಳಿಗೆ ನಮ್ಮ ದೇಶದಲ್ಲಿ ಇದೆ. ಪಾಶ್ಚಾತ್ಯರು ತಮ್ಮ ತಂದೆ – ತಾಯಿಗಳನ್ನು ತಮ್ಮೊಡನೆ ಇಟ್ಟುಕೊಳ್ಳದೆ, ವೃದ್ಧಾಶ್ರಮದಲ್ಲಿ ಇರುವಂತೆ ಮಾಡುತ್ತಾರೆ. ಎಂದು ನಾವು ಟೀಕಿಸುತ್ತೇವೆ. ಆದರೆ, ಹೆಸರಿಗೆ ಮನೆಯಲ್ಲಿ ಮಕ್ಕಳ ಜೊತೆ ಇದ್ದುಕೊಂಡು ಅಸಹಾಯಕರಾಗಿ, ಅನ್ಯಾಯಗಳನ್ನು ನುಂಗಿಕೊಂಡು, ಅವಮಾನಪಟ್ಟುಕೊಳ್ಳುತ್ತಾ ಬದುಕುವುದಕ್ಕಿಂತ, ಪರದೇಶದಲ್ಲಿಯಂತೆ, ಸರ್ಕಾರದ ವ್ಯವಸ್ಥೆಯಲ್ಲಿ ತಮ್ಮಂತಹ ಇತರರೊಡನೆ, ಯಾವ ಕಿರುಕುಳವಿಲ್ಲದೆ ಬದುಕುವುದು, ನಮ್ಮ ಅಸಹಾಯಕರಾದ ಅನೇಕ ತಂದೆ – ತಾಯಿಗಳ ಹೀನ ಸ್ಥಿತಿಗಿಂತ ಉತ್ತಮ. ಆದರೆ ಮಗೂ ಆ ರೀತಿ ತಂದೆ – ತಾಯಿಗಳನ್ನು ಸಂತೋಷವಾಗಿ, ಸುಖವಾಗಿ ಇಟ್ಟುಕೊಳ್ಳುವುದು ಮಕ್ಕಳ ಕರ್ತವ್ಯವೆಂಬುದು ನಮ್ಮ ನಾಡಿನ ನಿಯಮಗಳಲ್ಲಿ ಒಂದು. ಅಂತಹ ನಿಯಮ ಪಾಲನೆಯು ನಿನ್ನದೂ ಆಗಬೇಕು ತಿಳಿಯಿತೆ?

ರಾಷ್ಟ್ರದಲ್ಲೂ ಅಷ್ಟೆ , ಮೋಸ, ದ್ವೇಷ, ಭ್ರಷ್ಟಾಚಾರ ಹಾಸುಹೊಕ್ಕಾಗಿ ಬಿಟ್ಟಿದೆ. ಎಲ್ಲ ತರಹದ ಜನರೂ ಈ ಒಂದು ಜಾಲದಲ್ಲಿ ಸೇರಿಕೊಂಡು ರಾಷ್ಟ್ರೀಯ

ಜೀವನವನ್ನು ಅಸ್ತವ್ಯಸ್ತ ಮಾಡಿದ್ದಾರೆ. ಬೋಫೋರ್ಸ್ ಹಗರಣ, ಹವಾಲ ಹಗರಣ, ಹರ್ಷದ್ ಮೆಹತಾ ಹಗರಣ, ಅಲ್ಲದೆ, ಇನ್ನೂ ಅನೇಕ ಹಗರಣಗಳು ನಮ್ಮ ದೇಶದ ಮುಖಕ್ಕೆ ಮಸಿ ಬಳಿದಿವೆ. ಈ ಹಗರಣದಲ್ಲಿ ದೊಡ್ಡ ದೊಡ್ಡ ಜನರು ಶಾಮೀಲಾಗಿರುವುದು ನಮ್ಮ ರಾಷ್ಟ್ರದ ದುರಂತವೇ ಸರಿ. ಜನರು ರಾಷ್ಟ್ರದ ಬಗ್ಗೆ ನಿಜವಾದ ಕಳಕಳಿ ಬೆಳೆಯಿಸಿಕೊಂಡರೆ ಇಂತಹ ದುಷ್ಟ ವ್ಯವಹಾರದಲ್ಲಿ ಸೇರಿಕೊಳ್ಳುವುದಿಲ್ಲ.

ನಮಗೆ ಸ್ವತಂತ್ರ ಗಳಿಸಿಕೊಡಲು ಎಷ್ಟು ಜನ ತಮ್ಮ ತನು, ಮನ, ಧನಗಳಿಂದ ರಾಷ್ಟ್ರಕ್ಕಾಗಿ ದುಡಿದರು, ಗೋಪಾಲಕೃಷ್ಣ ಗೋಖಲೆ, ಮಹಾತ್ಮ ಗಾಂಧೀಜಿ, ಸುಭಾಷ್‌ಚಂದ್ರ ಭೋಸ್, ಕಾರ್ನಾಡ್ ಸದಾಶಿವರಾಯರು, ಬಾಲಗಂಗಾಧರ ತಿಲಕ್, ಭಗತ್‌ಸಿಂಗ್, ಧಿಂಗ್ರಾ ಮುಂತಾದ ಲೆಕ್ಕವಿಲ್ಲದಷ್ಟು ಮಂದಿ ತಮ್ಮ ಪ್ರಾಣವನ್ನು ಕಡೆಗಣಿಸಿ ರಾಷ್ಟ್ರಕ್ಕಾಗಿ ಹೋರಾಡಿದರು. ಅವರು ಮಾಡಿದ ತ್ಯಾಗದಿಂದ, ನಮ್ಮ ರಾಷ್ಟ್ರ ಇಂದು ಸ್ವತಂತ್ರ ರಾಷ್ಟ್ರವಾಗಿ ಜಗತ್ತಿನಲ್ಲಿ ತಲೆ ಎತ್ತಿ ನಿಂತಿದೆ. ಆ ವ್ಯಕ್ತಿಗಳು ಇಂದು ದೇಶ, ಕಾಲವನ್ನು ಮೀರಿ, ಎಲ್ಲರ ಗೌರವಾದರಗಳಿಗೆ ಪಾತ್ರರಾಗಿದ್ದಾರೆ. ಇಂತಹ ವ್ಯಕ್ತಿಗಳು ಎಲ್ಲೆಡೆ ಹೆಚ್ಚಬೇಕು. ಆಗ ಜತ್ತಿನಲ್ಲಿ ವಿರಸ – ದ್ವೇಷಗಳು ಇಲ್ಲವಾಗಿ, ಶಾಂತಿ – ಸೌಹಾರ್ದತೆಗಳು ಹೆಚ್ಚುತ್ತವೆ. ಜಗತ್ತೆಲ್ಲಾ ಒಂದು; ಮಾನವರೆಲ್ಲಾ ಅಣ್ಣ – ತಮ್ಮಂದಿರೆಂಬ ವಿಶಾಲ ಭಾವನೆ ಅಂತಹ ಸಜ್ಜನರ ಬದುಕಿನಿಂದ ಮೂಡುತ್ತದೆ.

ಹೀಗೆ ರಾಷ್ಟ್ರೀಯ ಭಾವನೆಯನ್ನು ಮನೆಯಲ್ಲಿ ನಿನ್ನ ತಂದೆ ತಾಯಿಗಳೂ, ಶಾಲೆಯಲ್ಲಿ ಶಿಕ್ಷಕರೂ ನಿನ್ನಲ್ಲಿ ಉಂಟುಮಾಡಬಹುದು, ಜೊತೆಗೆ ನೀನೂ ಸಹ ರಾಷ್ಟ್ರ ಪ್ರೇಮಿಗಳ ಜೀವನ ಚರಿತ್ರೆಯನ್ನು ಓದುತ್ತಿರಬೇಕು. ಇತಿಹಾಸದಲ್ಲಿ ರಾಜರ ದುರಾಸೆಗಳಿಂದ ಜನರು ಎಷ್ಟು ಹಿಂಸೆ, ಕ್ರೌರ್ಯಕ್ಕೆ ಒಳಗಾಗಿದ್ದರೆಂಬುದನ್ನು ತಿಳಿದುಕೊಂಡರೆ, ಯುದ್ಧ ಬೇಡ ಎಂಬ ಅರಿವು ಮೂಡುತ್ತದೆ. ಒಳ್ಳೆಯ ಮೌಲ್ಯಗಳನ್ನು ಅಳವಡಿಸಿಕೊಂಡವರು, ರಾಷ್ಟ್ರ ಪ್ರೇಮಿಗಳಾಗಿದ್ದವರು, ದೊಡ್ಡ ದೊಡ್ಡ ಸ್ಥಾನಗಳಿಗೆ ಹೋದರೆ, ಅವರು ದಕ್ಷರೂ ಪ್ರಾಮಾಣಿಕರೂ ಆಗಿದ್ದರೆ, ರಾಷ್ಟ್ರದ ಪ್ರಗತಿಯಾಗುತ್ತದೆ. ಆದುದರಿಂದ ಪುಟ್ಟಾ, ನೀನು ಸತ್ಪುತ್ರನಾಗಿ ಬದುಕಬೇಕು; ಸತ್ಪ್ರಜೆಯಾಗಿ ಬಾಳಬೇಕು, ಇದು ನಿನ್ನ ಜೀವನದ ಗುರಿಯಾಗಿರಲಿ.

ಇಂತು ನಿನ್ನ

ಹಿತೈಷಿ.

■

## ೨೪. ಹಾಸಿಗೆ ಇದ್ದಷ್ಟು . . . . .

ಪ್ರೀತಿಯ ಪುಟ್ಟಾ,

ನಮ್ಮ ದೇಶದಲ್ಲಿ ಲೆಕ್ಕವಿಲ್ಲದಷ್ಟು ಬಡವರು. ಬಡಮಕ್ಕಳಿಗೆ ಉಣ್ಣಲಿದ್ದರೆ ಉಡಲು ಇಲ್ಲ, ಉಡಲಿದ್ದರೆ, ಉಣ್ಣಲು ಇಲ್ಲ, ಎರಡೂ ಇಲ್ಲದವರು ಬೇಕಾದಷ್ಟು ಮಂದಿ, ಅದಕ್ಕಾಗಿ ನಮ್ಮೆಲ್ಲರ 'ಬಾಪೂ' ಆಗಿದ್ದ ಮಹಾತ್ಮ ಗಾಂಧೀಜಿ, ನಮ್ಮ ದೇಶದ ಅನೇಕರು ಉಪವಾಸ ಸಾಯುತ್ತಿರುವಾಗ, ಉಡಲು ಸಾಕಷ್ಟು ಉಡುಗೆ ಇಲ್ಲದೆ ತೊಳಲುತ್ತಿರುವಾಗ, ನನಗೆ ಬೇಕಾದಷ್ಟು ಸಿಗುತ್ತದೆ ಎಂದು ಮಜಾ ಮಾಡಲೆ ಎಂದು ಬರೀ ಸೇಂಗಾ ಹಾಗೂ ಸ್ವಲ್ಪ ಆಡಿನ ಹಾಲನ್ನು ತಮ್ಮ ಊಟಕ್ಕೆ ಉಪಯೋಗಿಸುತ್ತಿದ್ದರಂತೆ, ಅವರ ಫೋಟೋವನ್ನು ನೋಡಿದರೆ ಅವರು ಉಡುತ್ತಿದ್ದ ಬಟ್ಟೆಯ ಪರಿಚಯವಾಗುತ್ತದೆ. ಗಾಂಧೀಜಿಯವರ ಅನುಯಾಯಿಗಳಾಗಿದ್ದ ಲಾಲ್ ಬಹಾದ್ದೂರ್ ಶಾಸ್ತ್ರಿಯವರೂ ಸಹ ಬಹಳ ಸರಳ ಜೀವಿಗಳಾಗಿದ್ದರು.

ಮಗೂ ಈ ಮಾತನ್ನು ಏಕೆ ಬರೆಯುತ್ತಿದ್ದೇನೆ ಗೊತ್ತೇ ? ನಾವು ಸ್ವತಂತ್ರ ಪಡೆದು ಐವತ್ತು ವರ್ಷಗಳೇ ಆಗಿಹೋದವು. ಆದರೂ ನಮಗೆ ಬಡತನವನ್ನು ನಿವಾರಿಸಿಕೊಳ್ಳಲಾಗಿಲ್ಲ. ದೇಶ ದಿನದಿಂದ ದಿನಕ್ಕೆ ಬಡತನದಿಂದ ತೊಳಲಾಡುತ್ತಲಿದೆ. ಸಾಲದ ಹೊರೆ ಹೆಚ್ಚುತ್ತಲಿದೆ. ಇದೆಲ್ಲಾ ಏಕೆ ? ಏಕೆ ? ಇದಕ್ಕೆ ನಮ್ಮ ದುಂದುಗಾರಿಕೆ ಕಾರಣ, ನಮ್ಮ ಅಪ್ರಾಮಾಣಿಕ ಜೀವನ ಕಾರಣ, ಹಾಸಿಗೆ ಇದ್ದಷ್ಟು ಕಾಲು ಚಾಚದೆ, ಹಾಸಿಗೆಯಿಂದ ಹೊರಕ್ಕೂ ಕಾಲು ಚಾಚುವುದರಿಂದ ಉಂಟಾಗಿದೆ. ನಾವು ಯಾವಾಗಲೂ ನಮ್ಮ ಉತ್ಪನ್ನಕ್ಕೆ ತಕ್ಕಂತೆ ಜೀವನ ಮಾಡಬೇಕು. ನಮ್ಮ ಆದಾಯಕ್ಕಿಂತ ಹೆಚ್ಚು ಖರ್ಚು ಮಾಡಿದರೆ ನಾವು ಸಾಲಗಾರರಾಗುತ್ತೇವೆ. ಈ ವಿಷಯವನ್ನು ಚಿಕ್ಕ ವಯಸ್ಸಿನಲ್ಲೇ ಮನಗಂಡು ಹಿತಮಿತವಾಗಿ ಬದುಕುವುದನ್ನು ಕಲಿತವನಲ್ಲಿ ದುಂದುಗಾರಿಕೆ ಬೆಳೆಯುವುದಿಲ್ಲ. ತನ್ನ ಜೀವನದಲ್ಲೂ ದುಂದು ಮಾಡುವುದಿಲ್ಲ. ತಾನು ಕೆಲಸ ಮಾಡುವಲ್ಲಿಯೂ ದುಂದು ಇಲ್ಲದಂತೆ ಎಚ್ಚರಿಕೆ ವಹಿಸುತ್ತಾನೆ.

ನಮ್ಮ ಆದಾಯ ಎಷ್ಟೇ ಇರಲಿ, ಅದರಲ್ಲಿ ಸ್ವಲ್ಪ ಭಾಗವನ್ನು ನಾಳೆಗಿರಲಿ ಎಂದು ತೆಗೆದಿಡಬೇಕು. ಹೀಗೆ ತೆಗೆದಿಟ್ಟ ಹಣ ನಮ್ಮ ಆಪತ್ಕಾಲದಲ್ಲಿ ಉಪಯೋಗಕ್ಕೆ ಬರುತ್ತದೆ. ಆಗ ನಾವು ಯಾರ ಮುಂದೂ. ಕೈಚಾಚಬೇಕಾಗುವುದಿಲ್ಲ. ನಮ್ಮ ಆದಾಯ ಸಾಕಷ್ಟಿದ್ದರೂ ದುಂದು ಮಾಡುವ ಸ್ವಭಾವವಿದ್ದರೆ, ಯುಕ್ತಾಯುಕ್ತ ಯೋಚಿಸಿದೆ ಖರ್ಚು ಮಾಡುವ ಗುಣವಿದ್ದರೆ, ಸದಾ ಹಣದ ಕೊರತೆಯನ್ನು ಅನುಭವಿಸಬೇಕಾಗುತ್ತದೆ. ಅನಿವಾರ್ಯ ಸಂದರ್ಭಗಳಲ್ಲಿ ಇನ್ನೊಬ್ಬರ ಮುಂದೆ

ಕೈ ಚಾಚುವಂತಾಗುತ್ತದೆ. ಕಡೆಗೆ ಸಾಲಗಾರರಾಗಿ, ಮಡದಿ, ಮಕ್ಕಳು, ಮನೆಯವರೆಲ್ಲಾ ದು:ಖಕ್ಕೆ ಗುರಿಯಾಗಬೇಕಾಗುತ್ತದೆ.

ಇದಕ್ಕೊಂದು ಪುಟ್ಟ ಕಥೆ ಹೇಳುತ್ತೇನೆ ಕೇಳು. ಒಬ್ಬ ಪ್ರೈಮರಿ ಶಿಕ್ಷಕನಿದ್ದನಂತೆ, ಅವನಿಗೆ ಎರಡು ಮಕ್ಕಳು ಹಾಗೂ ತಂದೆ – ತಾಯಿಗಳಿದ್ದರು, ಆದರೂ ಅವನು ತನ್ನ ಆದಾಯದಲ್ಲಿ ಸ್ವಲ್ಪವನ್ನು ಪ್ರತಿ ತಿಂಗಳು ಮಿಗಿಸುತ್ತಿದ್ದ, ಎಲ್ಲಿ ಖರ್ಚು ಉಳಿಸಲು ಸಾಧ್ಯವೋ ಅಲ್ಲೆಲ್ಲಾ ಅವನ ಹೆಂಡತಿಯೂ ಹಣ ಮಿಗಿಸುತ್ತಿದ್ದಳು. ಹೀಗಾಗಿ ಆ ಕಡಿಮೆ ಆದಾಯದಲ್ಲೂ ಅವನು ಸಾಕಷ್ಟು ಹಣ ಕೂಡಿಸಿಟ್ಟಿದ್ದ, ಬ್ಯಾಂಕಿನಲ್ಲಿ ಆ ಹಣ ವರ್ಷ ವರ್ಷಕ್ಕೆ ಬೆಳೆಯುತ್ತಿತ್ತು. ಅವನ ಮಕ್ಕಳು ದೊಡ್ಡವರಾದರು. ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಹೆಚ್ಚು ಹಣ ಬೇಕಾಯ್ತು. ಅವನಿಗೆ ಚಿಂತೆಯೇ ಆಗಲಿಲ್ಲ. ತಾನು ಕೂಡಿಟ್ಟ ಹಣದ ಸ್ವಲ್ಪ ಭಾಗ ತೆಗೆದು ವಿದ್ಯಾಭ್ಯಾಸ ಮುಗಿಸಿದ. ಆ ಮಕ್ಕಳೂ ಸಹ ತಮ್ಮ ತಂದೆ – ತಾಯಿಗಳು ಎಚ್ಚರದಿಂದ ಹಣ ಖರ್ಚು ಮಾಡುವುದನ್ನೇ ನೋಡುತ್ತಿದ್ದರಾಗಿ, ಅವರೂ ಸಹ ಒಂದು ರೂಪಾಯಿಯನ್ನು ವ್ಯರ್ಥವಾಗಿ ಖರ್ಚು ಮಾಡುತ್ತಿರಲಿಲ್ಲ. ಅವರ ಓದು ಮುಗಿಸಿ, ಯಾವ ತೊಂದರೆಯೂ ಇಲ್ಲದೆ ಮಕ್ಕಳ ವಿವಾಹವನ್ನು ಮುಗಿಸಿದರು. ಅವರ ಜೀವನ ನೆಮ್ಮದಿಯುತವಾಗಿತ್ತು. ಆದರೆ ಅದೇ ಊರಲ್ಲಿ ಒಬ್ಬ ಶ್ರೀಮಂತನಿದ್ದ, ಬೇಕಾದಷ್ಟು ಆದಾಯವಿತ್ತು. ಆದರೆ ಬಹಳ ದುಂದುಗಾರ. ಆದಾಯ ಒಂದು ಪಾಲಾದರೆ ಖರ್ಚು ಎರಡು ಪಾಲು ಮಾಡುತ್ತಿದ್ದ, ಹಾಗಾಗಿ ಅವನಿಗೆ ಯಾವಾಗಲೂ ಹಣದ ಕೊರತೆ ಇರುತ್ತಿತ್ತು. ತೋಟ, ಗದ್ದೆಗಳಲ್ಲಿ ಸಕಾಲಕ್ಕೆ ಕೆಲಸ ಮಾಡಿಸಲು ದುಡ್ಡಿರದೆ ಅಕಾಲದಲ್ಲಿ ಕೆಲಸ ಮಾಡಿಸುತ್ತಿದ್ದ, ಆದ್ದರಿಂದ ಆದಾಯ ಕಡಿಮೆ ಬರತೊಡಗಿತು. ಆದರೂ ಅವನಲ್ಲಿ ದುಂದು ಸ್ವಭಾವ ಬೆಳೆದು ಬಂದುದರಿಂದ, ಹೆಚ್ಚು ಹೆಚ್ಚಾಗಿಯೇ ಖರ್ಚು ಮಾಡುತ್ತಿದ್ದ, ಈ ವರ್ಷವಲ್ಲದಿದ್ದರೆ ಮುಂದಿನ ವರ್ಷ ಫಸಲು ಚೆನ್ನಾಗಿ ಬಂದು ಸಾಲತೀರಿಸಬಹುದೆಂದು ಸಾಲ ಮಾಡಿದ. ಕಡಿಮೆ ಉತ್ಪನ್ನದ ಜೊತೆಗೆ ಸಾಲದ ಹೊರೆಯೂ ಹೆಚ್ಚಿತು. ಆಗಲೂ ಅವನ ದುಂದುಗಾರಿಕೆ ಕಡಿಮೆಯಾಗಲಿಲ್ಲ. ಮಕ್ಕಳ ಓದಿಗಾಗಿ ಹೆಚ್ಚಿನ ಹಣ ಬೇಕಾಯ್ತು. ಆದರೆ ಸಾಕಷ್ಟು ಸಾಲವಿದ್ದ ಅವನಿಗೆ ದಿಕ್ಕೇ ತೋಚದಂತಾಯ್ತು. ಮತ್ತೆ ಆಸ್ತಿಯ ಸ್ವಲ್ಪಭಾಗವನ್ನು ಮಾರಿದ. ಹಣದ ಕೊರತೆಯಿಂದ ಅನೇಕ ಸಮಸ್ಯೆಗಳು ಅವನ ತಲೆ ತಿನ್ನುತ್ತಿದ್ದವು, ನೆಮ್ಮದಿ ಇರಲಿಲ್ಲ. ಇಂತಹ ಪರಿಸ್ಥಿತಿ ಉಂಟಾಗಲು ಕಾರಣ, ಅವನ ದುಂದುಗಾರಿಕೆ, ಅವನ ಮಗಳ ಮದುವೆ ಮಾಡಬೇಕಾದಾಗಲಂತೂ ಅವನ ಸ್ಥಿತಿ ವರ್ಣಿಸಲಸಾಧ್ಯ. ಇದ್ದುಬಿದ್ದ ಆಸ್ತಿಯನ್ನೆಲ್ಲಾ ಮಾರಿ, ಮಗಳ ಮದುವೆ ಮಾಡಿದ, ಮುಂದೆ ಜೀವನಕ್ಕೂ ಮಾರ್ಗವಿಲ್ಲದಂತಾಯ್ತು. ಅಷ್ಟು ಐಶ್ವರ್ಯವಂತನಾಗಿದ್ದರೂ ದುಂದುಗಾರಿಕೆಯ ಸ್ವಭಾವದಿಂದ ಅತ್ಯಂತ ಬಡವನಾದ,

ಆದರೆ ಆ ಶಿಕ್ಷಕನು ಬಡವನಾದರೂ ದೂರಾಲೋಚನೆಯುಳ್ಳವನೂ, ಎಚ್ಚರದಿಂದ ಜೀವನ ಮಾಡುವ ಸ್ವಭಾವದವನೂ ಆಗಿದ್ದುದರಿಂದ ಸಿರಿವಂತನಂತೆ ಇದ್ದ, ಯಾರ ಮುಂದೂ ಕೈಚಾಚದೆ ಸ್ವಾಭಿಮಾನದಿಂದಲೂ, ಆತ್ಮ ವಿಶ್ವಾಸದಿಂದಲೂ ಬದುಕಿದ, ಹೆಚ್ಚಿನ ಖರ್ಚು ಮಾಡಬೇಕಾಗಿ ಬಂದಾಗ·ಸಮಸ್ಯೆಯುಂಟಾಗಲಿಲ್ಲ.

ಎಷ್ಟೇ ಆದಾಯವಿರಲಿ, ನಾಳೆಗಿರಲಿ ಎಂದು ಬಂದ ಆದಾಯದಲ್ಲೇ ನಾಲ್ಕು ಕಾಸು ಉಳಿಸುವವನೇ ಶ್ರೀಮಂತ. ಎಷ್ಟೇ ಶ್ರೀಮಂತನಿದ್ದರೂ, ದುಂದುಗಾರನಾಗಿ, ಜವಾಬ್ದಾರಿ ಇಲ್ಲದವನಂತೆ ತನ್ನ ಆದಾಯಕ್ಕಿಂತಲೂ ಹೆಚ್ಚು ಖರ್ಚು ಮಾಡುವವನೇ ಬಡವ.

ಆದ್ದರಿಂದ ಪುಟ್ಟೂ, ಹಾಸಿಗೆ ಇದ್ದಷ್ಟು ಕಾಲು ಚಾಚುವುದನ್ನು ಕಲಿ, ಕಷ್ಟಪಟ್ಟು ದುಡಿಯುವುದನ್ನು ಕಲಿ, ಇದರಿಂದ ನಿನಗೂ ಕ್ಷೇಮ, ದೇಶಕ್ಕೂ ಹಿತ.

ಇಂತು ನಿನ್ನ
ಹಿತೈಷಿ.

■

## ೨೫. 'ಮದ' ಗಳಿಗೆ ವಶನಾಗಬೇಡ

ಪ್ರೀತಿಯ ಪುಟ್ಟೂ,

ನೀನು ಮನುಷ್ಯನನ್ನು ಅವಿವೇಕಿಯನ್ನಾಗಿ ಮಾಡುವ 'ಮದ' ಗಳ ಬಗ್ಗೆ ಕೇಳಿರಬೇಕಲ್ಲವೆ? ಮನುಷ್ಯ, ದೇವರ ಸೃಷ್ಟಿಯಲ್ಲಿ ಅತ್ಯಂತ ಉತ್ತಮ ಮಟ್ಟದವನಾದರೂ ಅವನು 'ಮದ' ಗಳಿಗೆ ಒಳಗಾದರೆ, ಅತ್ಯಂತ ಅಧಮನಾಗಿ ವರ್ತಿಸಬಲ್ಲ, ಆದ್ದರಿಂದ 'ಮದ' ಗಳಿಗೆ ವಶನಾಗದಂತೆ ಮೊದಲಿನಿಂದಲೂ ಎಚ್ಚರವಾಗಿರಬೇಕು. ಮದಗಳು ಎಂಟು, ಧನಮದ, ವಿದ್ಯಾಮದ, ಯೌವನ ಮದ, ಅಧಿಕಾರ ಮದ, ಸೌಂದರ್ಯಮದ, ಬುದ್ಧಿಮದ, ಶಕ್ತಿಮದ, ಕೀರ್ತಿಮದ, ಎಂಬುವುಗಳಾಗಿವೆ. ವ್ಯಕ್ತಿ ಇವುಗಳಲ್ಲಿ ಯಾವುದಾದರೊಂದಕ್ಕೆ ವಶನಾದರೂ ತನಗೆ ಸಮನಾದವರು ಯಾರೂ ಇಲ್ಲ ಎಂದು ಅವಿವೇಕಿಯಂತೆ ವರ್ತಿಸುತ್ತಾನೆ. ರಾಕ್ಷಸನಂತೆ ಮೆರೆಯುತ್ತಾನೆ. ಯಾರ ಭಯವೂ ಇರುವುದಿಲ್ಲ. ಯಾರನ್ನೂ ಲಕ್ಷಿಸುವುದಿಲ್ಲ. ಅಂತಹವನು ಯುಕ್ತಾಯುಕ್ತ ವಿವೇಚನೆ ಇಲ್ಲದವನಾಗುತ್ತಾನೆ. ತಾನು ಮಾಡುವ ಕೆಲಸಗಳಿಂದ, ಆಡುವ ಮಾತುಗಳಿಂದ ದುಷ್ಪರಿಣಾಮವಾದೀತೆಂಬ ಎಚ್ಚರ ಲವಲೇಶವೂ ಅವನಲ್ಲಿರುವುದಿಲ್ಲ. ಮದಿಸಿದ ಆನೆಯಂತೆ ದಿಕ್ಕು ತಪ್ಪಿ ಮೆರೆಯುತ್ತಾನೆ. ಕಣ್ಣಿದ್ದೂ ಕುರುಡನಾಗುತ್ತಾನೆ. ಅನಾಹುತಗಳಿಗೆ ಕಾರಣನಾಗುತ್ತಾನೆ. ಇಂತಹುದರಲ್ಲಿ

ಎಲ್ಲಾ ಮದಗಳು ಕೂಡಿದಂತಹ ವ್ಯಕ್ತಿಯಂತೂ ಬಹು ಅಪಾಯಕಾರಿ. ಆ ವ್ಯಕ್ತಿ ಇತರರಿಗೆ ಕೇಡು ಮಾಡುವುದಲ್ಲದೆ ತಾನೂ ಕೇಡಿಗೆ ಒಳಗಾಗುತ್ತಾನೆ. ಅವನು ಯಾರ ಹಿತವಚನಕ್ಕೂ, ಕಿವಿಗೊಡುವುದಿಲ್ಲ. ಅವನು ಜೀವನದಲ್ಲಿ ಪೆಟ್ಟು ತಿಂದು, ಅಸಹಾಯಕನಾದಾಗ ಕಣ್ಣು ತೆರೆಯುತ್ತಾನೆ. ಅಲ್ಲಿಯವರೆಗೂ ಯಾರೂ ಅವನನ್ನು ಮಾತನಾಡಿಸುವುದು ಸಹ ಕಷ್ಟ. ಆದುದರಿಂದ ಪುಟ್ಟೂ, ಯಾರು ಎಷ್ಟೇ ಬುದ್ಧಿವಂತರಿದ್ದರೂ, ರೂಪವಂತರಿದ್ದರೂ, ಯೌವ್ವನವಿದ್ದರೂ ಅದಕ್ಕಾಗಿ ಅಹಂಕಾರ ಪಡಬಾರದು. ಅವು ಇವೆಯೆಂದು ಅಹಂಕಾರಕ್ಕೊಳಗಾದರೆ ಅವುಗಳಿದ್ದುದರಿಂದ ಹಾನಿಯಾಗುತ್ತದೆಯೇ ವಿನಃ ಪ್ರಯೋಜನವಾಗುವುದಿಲ್ಲ. ಐಶ್ವರ್ಯವಾಗಲೀ, ಸೌಂದರ್ಯವಾಗಲೀ, ಅಧಿಕಾರವಾಗಲೀ, ಶಕ್ತಿಯಾಗಲೀ, ಯೌವ್ವನವಾಗಲೀ, ಆರೋಗ್ಯವಾಗಲಿ, ಸ್ಥಿರವಾದವುಗಳಲ್ಲ. ಲಕ್ಷ್ಮಿ ಚಂಚಲೆ. ಇಂದು ಲಕ್ಷಾಧಿಪತಿಯಾದವನು ನಾಳೆ ಭಿಕ್ಷಾಧಿಪತಿಯಾಗಬಹುದು. ರೂಪವೂ ಅಷ್ಟೇ. ಕಾಯಿಲೆಗಳಿಂದ, ದುಃಖಗಳಿಂದ ಅಥವಾ ವಯೋ ಧರ್ಮದ ಕಾರಣ ಕುಂದಿ ಹೋಗುತ್ತದೆ. ಅಧಿಕಾರವೂ ಅಷ್ಟೆ ನಾಲ್ಕು ದಿನ. ಯಾವುದೇ ಕಾರಣಕ್ಕೆ ಅಧಿಕಾರದಿಂದ ಇಳಿಯಬೇಕಾಗಬಹುದು. ಇಲ್ಲದಿದ್ದರೂ ನಿವೃತ್ತಿಯಾದ ನಂತರವಾದರೂ ಅಧಿಕಾರ ಕಳೆದುಕೊಳ್ಳಬೇಕಾಗುತ್ತದೆ. ವಿದ್ಯಾವಿನಯೇನ ಶೋಭತೆ. ವಿನಯವಿಲ್ಲದ, ಅಹಂಕಾರಭರಿತವಾದ ವಿದ್ಯೆ. ವಿದ್ಯೆಯೇ ಅಲ್ಲ. ಅವೆಲ್ಲಾ ಸಂಪತ್ತುಗಳು ಇದ್ದಾಗ ಅವುಗಳ ನಶ್ವರತೆಯನ್ನು ತಿಳಿದು ಸದುಪಯೋಗ ಮಾಡಿಕೊಂಡು, ಸರಿಯಾಗಿ ಅರ್ಥ ಮಾಡಿಕೊಂಡು, ವಿವೇಕದಿಂದ ಬಾಳಿದವನು ನಿಜವಾದ ಸುಖಿ. ಅನೇಕರು ಭಗವಂತನ ದೇಣಿಗೆಯಾಗಿ ಬಂದ ಈ ಸಂಪತ್ತುಗಳ ಸದುಪಯೋಗದಿಂದ ಭಾಗ್ಯವಂತರಾಗಿ ಬಾಳಿದ್ದಾರೆ. ಹಾಗೆಯೇ ದುರುಪಯೋಗ ಮಾಡಿಕೊಂಡವರು ಬೇರೆಯವರನ್ನು ಹಾಳುಮಾಡಿ, ತಾವೂ ಹಾಳಾಗಿದ್ದಾರೆ. ಇಂತಹ ಉದಾಹರಣೆಗಳು ಅನೇಕ.

ಪುಟ್ಟೂ, ನೀನು, ಮದಗಳಿಗೆ ವಶರಾಗಿ ವಿನಾಶ ಹೊಂದಿದ ಅನೇಕ ಕಥೆ ಪುರಾಣಗಳನ್ನು ಕೇಳಿರಬೇಕಲ್ಲವೆ? ತನ್ನಲ್ಲಿ ಬೇಕಾದಷ್ಟು ಸಾಹಸವಿದೆ. ನನ್ನನ್ನು ಯಾರೂ ಸೋಲಿಸಲಾರರು ಎಂದು ಮೆರೆದ ರಾವಣನ ಗತಿ ಏನಾಯ್ತು? ವಿವೇಕದಿಂದಲೂ, ನೀತಿವಂತನಾಗಿಯೂ ಬಾಳಿದ ವಿಭೀಷಣ ಏನಾದ? ಯೌವ್ವನ ಮದದಿಂದಲೂ, ಅಧಿಕಾರ ಮದದಿಂದಲೂ, ಶೂರನೆಂಬ ಅಹಂಕಾರದಿಂದಲೂ ಅವಿವೇಕದಿಂದ ವರ್ತಿಸಿದ ದುರ್ಯೋಧನನ ಪಾಡೇನಾಯಿತು? ತಾನೇ ಅಲ್ಲದೆ ತನ್ನ ಸೋದರರು, ಗುರು–ಹಿರಿಯರು, ಪ್ರಜೆಗಳೆಲ್ಲರೂ ಸಾವು ನೋವುಗಳಿಗೆ ತುತ್ತಾಗುವಂತೆ ಮಾಡಿದನಲ್ಲವೆ? ಸದ್ದಾಂ ಹುಸೇನ್ ಸ್ಥಾನ ಗರ್ವದಿಂದ ಮಾಡಿದ ದುಸ್ಸಾಹಸ ತನ್ನ ದೇಶದವರನ್ನಲ್ಲದೆ ಅನೇಕ ದೇಶಗಳ ಮೇಲೂ ದುಷ್ಪರಿಣಾಮ ಉಂಟು ಮಾಡಿತು. ಮದೋನ್ಮತ್ತನಾದ ಮಾನವ ತಾನು ಮಾಡುವ ಕೆಲಸಗಳಿಂದ,

ಆಡುವ ಮಾತುಗಳಿಂದ ಆಗುವ ದುಷ್ಪರಿಣಾಮಗಳ ಬಗ್ಗೆ ಯೋಚಿಸದೆ ದುಡುಕಿನಿಂದ ಕೆಲಸ ಮಾಡುತ್ತಾನೆ.

ಪುಟ್ಟೂ, ಇಂದಿನ ಮಕ್ಕಳು ನಾಳೆ ದೊಡ್ಡ ಅಧಿಕಾರಿಗಳಾಗಬಹುದು. ಆಗ ತನ್ನ ಸ್ಥಾನ ದೊಡ್ಡದೆಂದು ಅಹಂಕಾರದಿಂದ ಮೆರೆಯದೆ, ತಮ್ಮೊಡನೆ ಕೆಲಸ ಮಾಡುವ ಸಣ್ಣ ಕೆಲಸಗಾರರಿಗೆ ಅನ್ಯಾಯವಾಗಿ ಕಿರುಕುಳ ಕೊಡಬಾರದಂತಿರುವ ನಡೆ ಈಗಿನಿಂದಲೇ ಬೆಳೆಸಿಕೊಳ್ಳಬೇಕು. ಹೆಣ್ಣು ಮಕ್ಕಳೂ ಸಹ ಈಗಿನ ಕಾಲದಲ್ಲಿ ದೊಡ್ಡ ದೊಡ್ಡ ಅಧಿಕಾರ ಸ್ಥಾನಗಳಲ್ಲಿ ಕೆಲಸ ಮಾಡುತ್ತಾರೆ. ಅನೇಕ ಹುಡುಗಿಯರು ವಿವಾಹಿತರಾಗಿ ಗೃಹಿಣಿಯರಾಗಬಹುದು. ಕೆಲವು ರೂಪವತಿಯರೂ, ಐಶ್ವರ್ಯವತಿಯರೂ, ಬುದ್ಧಿವಂತರೂ, ಆದ ಹುಡುಗಿಯರು ಅಹಂಕಾರದಿಂದ ಮದೋನ್ಮತ್ತರಾಗಿ ವರ್ತಿಸುತ್ತಾರೆ. ಅಂತಹ ಮನೆಯ ಪ್ರಗತಿ ಕುಂಠಿತವಾದಂತೆಯೇ ಸರಿ. ಗೌರವ ಇಳಿಮುಖವಾಗುವುದು ಸ್ಪಷ್ಟ. ಸಂಪತ್ತು ಕ್ಷೀಣವಾಗತೊಡಗುವುದರಲ್ಲಿ ಸಂಶಯವಿಲ್ಲ. ಆದುದರಿಂದ ಮಕ್ಕಳು ಎಲ್ಲಾ ರೀತಿಯ ಸಂಪತ್ತಿದ್ದಾಗಲೂ ಅಹಂಕಾರಕ್ಕೆ ಒಳಗಾಗದೆ, ಅವುಗಳ ಸದುಪಯೋಗವಾಗುವಂತಹ, (ಮಾಡಿಕೊಳ್ಳುವಂತಹ) ತರಬೇತಿಯನ್ನು ಬಾಲ್ಯದಿಂದಲೇ ಪಡೆಯಬೇಕು. ಯಾವ ಕಾರಣಕ್ಕೂ ಅವಿವೇಕದಿಂದ ವರ್ತಿಸಬಾರದು. ಅವಿವೇಕದ ವರ್ತನೆಯ ವ್ಯಕ್ತಿಯು ಅಧೋಗತಿಗೆ ಇಳಿಯುತ್ತಾನೆ. ಅವನ ಪರಿಸರದಲ್ಲಿ ಬಂದವರನ್ನು ದುಃಖಕ್ಕೆ ಗುರಿ ಮಾಡುತ್ತಾನಾದುದರಿಂದ ವಿವೇಕದ ನಡೆ–ನುಡಿಯನ್ನು ಬೆಳೆಸಿಕೊಳ್ಳಬೇಕು.

ಪುಟ್ಟೂ, ಬುದ್ಧಿವಂತನಾದ ನೀನು ವಿದ್ಯಾವಂತನಾಗುವುದರಲ್ಲಿ ಸಂಶಯವಿಲ್ಲ. ವಿದ್ಯೆಗೆ ವಿನಯ ಸೇರಿದಾಗಲೇ ಬೆಲೆ ಎಂಬುದನ್ನು ಮರೆಯಬೇಡ. ವಿದ್ಯೆ ವ್ಯಕ್ತಿಯನ್ನು ಸುಸಂಸ್ಕೃತನನ್ನಾಗಿ ಮಾಡುತ್ತದೆ. ನೀನೂ ಸುಸಂಸ್ಕೃತ ವ್ಯಕ್ತಿಯಾಗಿ ರೂಪುಗೊಳ್ಳಬೇಕು, ತಿಳಿಯಿತೆ?

ಇಂತಿ ನಿನ್ನ
ಹಿತೈಷಿ

■

## ೨೬. ಜೀವನ ಧರ್ಮ

ಪ್ರೀತಿಯ ಪುಟ್ಟಾ,

ನೀನೀಗ ಇನ್ನೂ ಚಿಕ್ಕವನು. ನಿನ್ನ ಹೊಣೆಗಾರಿಕೆಗಳು ಈಗ ಹೆಚ್ಚೇನು ಇರುವುದಿಲ್ಲ. ಮನೆಯಲ್ಲಿಯ ಸಣ್ಣ ಪುಟ್ಟ ಕೆಲಸಗಳನ್ನು ಮಾಡಿ ಶಾಲೆಯ

ಕೆಲಸಗಳನ್ನು ಸಮರ್ಪಕವಾಗಿ ಮುಗಿಸಿದರೆ ಆಯ್ತು. ನೀನು ನಿಶ್ಚಿಂತನಾಗಿರಬಹುದು. ಆದರೆ ದೊಡ್ಡವನಾದಂತೆ ನಿನ್ನ ಹೊಣೆಗಾರಿಕೆಗಳು ಹೆಚ್ಚುತ್ತಾ ಹೋಗುತ್ತವೆ. ಸುಖದ ಹಾಗೂ ದುಃಖದ ಸನ್ನಿವೇಶಗಳನ್ನು ನೀನು ಎದುರಿಸಬೇಕಾಗುತ್ತದೆ. ಯಾವುದೇ ಸನ್ನಿವೇಶವನ್ನು ಅತ್ಯಂತ ಸಮರ್ಪಕವಾಗಿ, ತಪ್ಪಾಗಲು ಅವಕಾಶವಾಗದಂತಹ ರೀತಿಯಲ್ಲಿ ಎದುರಿಸಬೇಕು. ಹಾಗೆ ಎದುರಿಸಲು ಈ ಬೆಳೆಯುವ ವಯಸ್ಸಿನಲ್ಲಿಯೇ ತರಬೇತಿ ಪಡೆಯಬೇಕು. ಓದುವಾಗ, ಆಡುವಾಗ, ಕೆಲಸ ಮಾಡುವಾಗ, ಶಾಲೆಯಲ್ಲಿ ಪಾಠ ಕೇಳುವಾಗ, ಟಿ.ವಿ. ನೋಡುವಾಗ ಸಹ ನಾವು ಅನೇಕ ವಿಷಯಗಳನ್ನು ಕಲಿತುಕೊಳ್ಳಲು ಸಾಧ್ಯವಿದೆ. ನಮ್ಮ ಸ್ನೇಹಿತರೂ, ನೆರೆ ಹೊರೆಯವರೂ, ಆಳು-ಕಾಳುಗಳೂ ಪರೋಕ್ಷವಾಗಿ ನಮಗೆ ಜೀವನ ಪಾಠಗಳನ್ನು ಕಲಿಸುತ್ತಾರೆಂದೇ ಹೇಳಬೇಕು. ಕಲಿಯಲು ತೆರೆದ ಮನಸ್ಸೊಂದಿರಬೇಕು. ಜೊತೆಗೆ ಯುಕ್ತಾಯುಕ್ತ ವಿವೇಚನೆಯನ್ನು ಬೆಳೆಸಿಕೊಳ್ಳಬೇಕು. ಆಗ ನಮ್ಮ ಜೀವನದ ಆದರ್ಶವೇನು, ಗುರಿ ಏನು ಎಂಬುದನ್ನು ಕಂಡುಕೊಳ್ಳಲು ಸಾಧ್ಯವಾಗುತ್ತದೆ.

ನಾವು ನಮ್ಮ ಜೀವನದಲ್ಲಿ ಉತ್ತಮ ಆದರ್ಶವನ್ನು ಕಂಡುಕೊಂಡು ಅದರ ಮಾರ್ಗದಲ್ಲಿ ನಡೆದು ಜೀವನದ ಗುರಿ ಮುಟ್ಟಲು ಪ್ರಯತ್ನಿಸಬೇಕು. ನಮ್ಮ, ಆದರ್ಶ ಜೀವನದ ಬಗ್ಗೆ ನಮಗೆ ಎಚ್ಚರವಿದ್ದರೆ, ಅದು ನಮ್ಮ ಸಂದಿಗ್ಧ ಸಮಯಗಳಲ್ಲಿ ನಾವು ಅನುಸರಿಸಬೇಕಾದ ಮಾರ್ಗ ಯಾವುದು ಎಂಬುದನ್ನು ತಿಳಿಸಿ, ನಮ್ಮನ್ನು ಸಂದಿಗ್ಧತೆಯಿಂದ ಪಾರಾಗಲು ಸಹಾಯವಾಗುತ್ತದೆ. ಅದಕ್ಕಾಗಿಯೆ 'ಅರಿವೇ ಗುರು' ಎಂಬ ಮಾತನ್ನು ಮಹಾತ್ಮರು ಪ್ರತಿಪಾದಿಸಿದ್ದಾರೆ. ಸರಿಯಾದ ಅರಿವಿದ್ದವನಿಗೆ, ಅಂತಹ ಒಂದು ಸಾಧನೆಯನ್ನು ಪಡೆದುಕೊಂಡವನಿಗೆ ಬೇರೆಯವರ ಸಲಹೆಗಳ ಅಗತ್ಯ ಬೀಳುವುದಿಲ್ಲ. ಈಗಿನ ಕಾಲದಲ್ಲಿ ಬೇರೆಯವರ ಸಲಹೆಗಳು ನಿಜವಾಗಿಯೂ ಸದ್ಭಾವನೆಯಿಂದ ಕೂಡಿರುತ್ತವೆಯೆಂದು ಹೇಳಲು ಬರುವುದಿಲ್ಲ. ಕೇಡಿಗಳಾದವರು ಸ್ನೇಹಿತರಂತೆ ನಟಿಸಿ, ನಮ್ಮ ಸಂದಿಗ್ಧ ಸಮಯದಲ್ಲಿ ಹಿತಚಿಂತಕರಂತೆ ಬಂದು, ನಮಗೆ ಅಹಿತವಾಗುವಂತಹ ಸಲಹೆಗಳನ್ನು ಕೊಟ್ಟು, ನಮ್ಮನ್ನು ಕಷ್ಟದಲ್ಲಿ ನೂಕುವ ಸಾಧ್ಯತೆ ಇದೆ. ಆದುದರಿಂದ ಸಲಹೆಗಳನ್ನು ತೆಗೆದುಕೊಳ್ಳುವಾಗ ಎಚ್ಚರಿಕೆಯಿಂದಿರಬೇಕು. ನಯವಂಚಕರಿಂದ ದೂರವಿರಬೇಕು. ನಾವು ಕುಟಿಲ ತಂತ್ರಗಳಿಗೆ ಬಲಿಯಾಗುವವರಲ್ಲ ಎಂದು ಗೊತ್ತಾದರೆ ಅಂತಹ ಜನ ನಮ್ಮ ಬಳಿಯೂ ಸುಳಿಯುವುದಿಲ್ಲ. ಆಗ ನಾವು ಬೇರೆಯವರ ಕುತಂತ್ರಗಳಿಗೆ ಒಳಗಾಗುವ ಸನ್ನಿವೇಶಗಳು ಇಲ್ಲವಾಗುತ್ತವೆ. ಆದುದರಿಂದ ನಿನಗೆ ಮಾರ್ಗದರ್ಶನ ನೀಡಬಲ್ಲಂತಹ ಅರಿವನ್ನು ಪಡೆಯಲು ಈಗಿನಿಂದ ಪ್ರಯತ್ನಿಸು.

ಈ ದಿಶೆಯಲ್ಲಿ ಮೊದಲು ಧಾರ್ಮಿಕ ಜೀವನವನ್ನು ಬದುಕಬೇಕು. ಧಾರ್ಮಿಕ

ಎಂದ ತಕ್ಷಣ ಯಾವ ಧರ್ಮ ಎಂಬ ಪ್ರಶ್ನೆ ನಿನ್ನ ಮನಸ್ಸಿನಲ್ಲಿ ಮೂಡಬಹುದು. ಆ ಧರ್ಮ, ಈ ಧರ್ಮ, ಆ ಜಾತಿ, ಈ ಜಾತಿ ಎಂಬುದರಲ್ಲಿಯೆ ಬಹಳಷ್ಟು ಕಷ್ಟ ಕಾರ್ಪಣ್ಯಗಳಿಗೆ ಮಾನವ ಒಳಗಾಗಿದ್ದಾನೆ. ಮಾನವ ಧರ್ಮವೇ ಎಲ್ಲಕ್ಕಿಂತ ದೊಡ್ಡ ಧರ್ಮ. ಸಕಲ ಜೀವರಾಶಿಗಳಿಗೂ ಲೇಸನ್ನೇ ಬಯಸುವುದೇ ಧರ್ಮ. ಸತ್ಯವ ನುಡಿಯುವುದೇ ಸ್ವರ್ಗ, ಮಿಥ್ಯವ ನುಡಿವುದೇ ನರಕ ಎಂಬುದನ್ನು ತಿಳಿದು ನಡೆದರೆ ನಮ್ಮಿಂದ ಕೆಡುಕುಂಟಾಗುವುದು ಇಲ್ಲವಾಗುತ್ತದೆ. ನಮ್ಮ ಜೀವನ ಪ್ರತಿಯೊಂದು ಕ್ಷೇತ್ರದಲ್ಲೂ, ಘಟ್ಟದಲ್ಲೂ, ನಮ್ಮ ಧರ್ಮವಾವುದು ಅದನ್ನು ಹೇಗೆ ಆಚರಿಸುವುದು ಯೋಗ್ಯ ಎಂದು ತಿಳಿದುಕೊಳ್ಳಬೇಕು. ನಾನು ಕುಟುಂಬದ ಸದಸ್ಯರಾಗಿ ನನ್ನ ಕರ್ತವ್ಯಗಳೇನು ಎಂದು ಅರಿವುದೇ ಕುಟುಂಬ ಧರ್ಮ, ಒಬ್ಬ ಮಾನವನಾಗಿ ಯಾವ, ಯಾವ ಗುಣಗಳನ್ನು ಪಡೆಯಬೇಕು ಎಂದು ತಿಳಿದುಕೊಳ್ಳುವುದೇ ಮಾನವ ಧರ್ಮ, ಒಬ್ಬ ಸಾಮಾಜಿಕ ವ್ಯಕ್ತಿಯಾಗಿ ಹೇಗಿರಬೇಕು ಎಂದು ವಿಚಾರಿಸಿದಾಗ ಅದಕ್ಕೆ ಸೂಕ್ತವಾದ ಮಾರ್ಗಗಳನ್ನು ಸಮಾಜಧರ್ಮವೆಂದು ಹೇಳಬಹುದು. ಹಾಗೆಯೇ ವೃತ್ತಿಧರ್ಮ, ಪ್ರಜಾಧರ್ಮ, ಮುಂತಾದವುಗಳಲ್ಲೂ ತನ್ನ ಪಾತ್ರವೇನು? ಹೇಗಿದ್ದರೆ ತನಗೂ, ತಾನು ಬದುಕಿರುವ ಕ್ಷೇತ್ರಕ್ಕೂ ಹಿತವಾಗುತ್ತದೆ, ಒಳಿತಾಗುತ್ತದೆ ಎಂದು ತಿಳಿದು ನಡೆಯುವುದೇ ನಿಜವಾದ ಧಾರ್ಮಿಕ ನಡೆ. ನಾವು ಯಾವುದೇ ಒಂದು ಜಾತಿ ಧರ್ಮಕ್ಕೆ ಸೇರದೆಯೂ ಧಾರ್ಮಿಕ ವ್ಯಕ್ತಿಗಳಾಗಿ ಬದುಕಲು ಬರುತ್ತದೆ. ಅಲ್ಲದೆ ಒಂದು ಧರ್ಮವನ್ನು ಅನುಸರಿಸಿಯೂ ಅಧರ್ಮೀಯರಂತೆ ಬಾಳಲು ಸಾಧ್ಯ. ಹುಟ್ಟಿದ ಮನುಷ್ಯ ಒಂದಲ್ಲ ಒಂದು ದಿನ ಸಾಯಲೇಬೇಕು. ಈ ಹುಟ್ಟು ಸಾವಿನ ನಡುವೆ ಅವನು ಹೇಗೆ ಬದುಕಿದ ಎನ್ನುವುದು ಮುಖ್ಯ. ಎಂದಾದರೊಂದು ದಿನ ಸಾಯಲೇಬೇಕಲ್ಲ. ಇದರ ಎಚ್ಚರವಿಲ್ಲದೆ ಜನ ಸ್ವಾರ್ಥ ಸಾಧನೆಗಾಗಿ ಏನೇನೋ ಮಾಡುತ್ತಾರೆ. ಮೋಸ ಮಾಡುತ್ತಾರೆ. ವಂಚಿಸುತ್ತಾರೆ, ಕೊಲೆ, ಸುಲಿಗೆ ದರೋಡೆಗಳನ್ನು ಮಾಡುತ್ತಾರೆ. ಇದರಿಂದ ಮನುಷ್ಯ ಸುಖವಾಗಿರಲು ಸಾಧ್ಯವೆ? ಪ್ರತಿ ಕ್ಷಣವೂ ತಾನೆಲ್ಲಿ ಸಿಕ್ಕಿ ಹಾಕಿಕೊಳ್ಳುತ್ತೇನೆಯೋ ಎಂಬ ಭಯದಲ್ಲಿ, ಸಿಕ್ಕದಂತೆ ತಪ್ಪಿಸಿಕೊಳ್ಳಬೇಕು ಎಂಬ ಪ್ರಯತ್ನದಲ್ಲಿ ತೊಳಲಾಡುತ್ತಲಿರುತ್ತಾನೆ. ಇಂತಹ ತೊಳಲಾಟದಲ್ಲಿ ಸಿಕ್ಕವನಿಗೆ ನೆಮ್ಮದಿ ಎಲ್ಲಿಯದು? ಹೀಗೆ ಅಂತಹ ಮನುಷ್ಯ ತಾನೂ ದುಃಖಪಡುತ್ತಾ ಬೇರೆಯವರನ್ನೂ ದುಃಖಕ್ಕೆ ಗುರಿ ಮಾಡುತ್ತಾ ಅಶಾಂತಿಗೆ ಕಾರಣನಾಗುತ್ತಾನೆ. ಆದುದರಿಂದ ಪುಟ್ಟ, ತಾನೂ ಹಿತವಾಗಿ ಬದುಕಲು ಸಾಧ್ಯವಾಗುವ, ಬೇರೆಯವರಿಗೂ ಸಹಾಯಕವಾಗಿ, ಅವರಿಗೂ ಸಂತೋಷವಾಗುವಂತೆ ಬದುಕುವ ಮನೋಭಾವವನ್ನು ಬೆಳೆಸಿಕೊ. ಇದಕ್ಕೆ ದ್ವೇಷ, ಅಸೂಯೆ, ಸ್ವಾರ್ಥ ಇಂತಹ ಭಾವನೆಗಳು ಮನಸ್ಸಿನಲ್ಲಿ ಮನೆಮಾಡಿಕೊಳ್ಳಲು ಇಂಬುಗೊಡದೆ, ಪ್ರೀತಿ, ಸಹಕಾರ, ಸೌಹಾರ್ದತೆಯ

ಭಾವನೆಗಳು ಮನದಲ್ಲಿ ಮೂಡಲು ಅವಕಾಶ ಮಾಡಿ ಕೊಡಬೇಕು. ಆಗ ಸುಖೀ ಸಮಾಜ ನಿರ್ಮಾಣಕ್ಕೆ ಸಾಧ್ಯವಾಗುತ್ತದೆ. ಸುಖೀ ಸಮಾಜ ಪ್ರಗತಿಗೆ ದಾರಿ ಮಾಡಿಕೊಡುತ್ತದೆ ಎಂಬುದು ನೆನಪಿರಲಿ.

ಇಂತಿ ನಿನ್ನ,
ಹಿತೈಷಿ

■

## ೨೭. ದೃಢಸಂಕಲ್ಪ

ಪ್ರೀತಿಯ ಪುಟ್ಟೂ,

ಮೊನ್ನೆ ಒಬ್ಬರ ಮನೆಗೆ ಹೋಗಿದ್ದೆ. ಅವರ ಮನೆಯ ಹುಡುಗನ ಸ್ವಭಾವವನ್ನು ಗಮನಿಸಿದಾಗ ನಿನಗೊಂದು ಪತ್ರ ಬರೆಯಬೇಕೆನ್ನಿಸಿ ಬರೆಯುತ್ತಿರುವೆ. ಆ ಹುಡುಗ ಆಲಸಿಯೂ, ಸ್ವಾರ್ಥಿಯೂ, ಬೇಜವಾಬ್ದಾರಿಯ ನಡೆ-ನುಡಿಯುಳ್ಳವನೂ ಆಗಿದ್ದನು. ಅವನಿಗೆ ಮಜಾ ಮಾಡುವ ಮನೋಭಾವ; ಎಳ್ಳಷ್ಟೂ ಕೆಲಸ ಮಾಡುವ ಮನಸ್ಸಿಲ್ಲ. ದೊಡ್ಡವರ ಬಗ್ಗೆ ಯಾವುದೇ ರೀತಿಯ ಗೌರವವಿಲ್ಲ. ಕರ್ತವ್ಯ ಪ್ರಜ್ಞೆಯಂತೂ ಕಿಂಚಿತ್ತೂ ಇರಲಿಲ್ಲ. ಈಗ ಬಹಳಷ್ಟು ಹುಡುಗ-ಹುಡುಗಿಯರು ಇಂತಹ ಸ್ವಭಾವವನ್ನು ಮೈಗೂಡಿಸಿಕೊಂಡಿದ್ದಾರೆಂದು ಕೇಳಿರುವೆ. ಈ ರೀತಿ ಬೆಳೆದವರು ಮುಂದೆ ಸಮಾಜಕ್ಕೆ ಹೊರೆಯಾಗುವುದಲ್ಲದೇ ಸಮಸ್ಯೆಯೂ ಆಗುತ್ತಾರೆ. ಬೇರೆಯವರಿಗೆ ಸಮಸ್ಯೆಯಾಗುವುದಿರಲಿ ಅವರ ಜೀವನ ಅಸಹಾಯಕವೂ, ಅವಹೇಳನಕರವೂ ಆಗುವುದರಲ್ಲಿ ಎಳ್ಳಷ್ಟೂ ಅನುಮಾನವಿಲ್ಲ.

ಬಹಳಷ್ಟು ಹುಡುಗರು ತಂದೆ-ತಾಯಿಗಳು ಮನೆಯ ಕೆಲಸವನ್ನು ಮಾಡುತ್ತಾ ಇದ್ದರೆ, ತಾವು ಆರಾಮಾಗಿ ಟಿ.ವಿ. ನೋಡುತ್ತಾ ಕುಳಿತಿರುತ್ತಾರೆ. ಏನಾದರೂ ಕೆಲಸ ಹೇಳಿದರೆ ನೂರೆಂಟು ನೆಪ ಹೇಳಿ ಜವಾಬ್ದಾರಿಯಿಂದ ನುಣುಚಿಕೊಳ್ಳುತ್ತಾರೆ ಅಥವಾ ಬೆಳಿಗ್ಗೆ ಕೆಲಸ ಹೇಳಿದಾಗ ಸಂಜೆ ಮಾಡುತ್ತೇನೆನ್ನುವದು, ಸಂಜೆಯಾದ ಮೇಲೆ ನಾಳೆ ಮಾಡುತ್ತೇನೆ ಎನ್ನುವದು, ನಾಳೆ ಬಂದಾಗ ಮತ್ತೇನೋ ಕಾರಣ ಹೇಳುವದನ್ನು ನೋಡಿದ್ದೇವೆ. ಹೀಗೆ ಬಾಲ್ಯದಿಂದಲೂ ಎಲ್ಲಾ ಕೆಲಸಗಳನ್ನು ತಪ್ಪಿಸಿಕೊಳ್ಳುತ್ತಾ, ಸೋಮಾರಿಯಾಗಿ, ಸ್ವಾರ್ಥಿಯಾಗಿ ಕಾಲ ಕಳೆಯುತ್ತಾ ಉಂಡಾಡಿಗುಂಡಗಳಾಗಿ ಬೆಳೆದ ಹುಡುಗರು, ತಮ್ಮ ಭವಿಷ್ಯವನ್ನೆ ಹಾಳು ಮಾಡಿಕೊಳ್ಳುತ್ತಾರೆ. ಮೊದಲಿನಿಂದಲೂ, ಸಾಧ್ಯವಾದಷ್ಟು ಕೆಲಸಗಳನ್ನು ಅಚ್ಚುಕಟ್ಟಾಗಿ, ಸಮಯಕ್ಕೆ ಸರಿಯಾಗಿ ಮಾಡುವ ಮನೋಭಾವ ಬೆಳೆಯಿಸಿಕೊಂಡ ವ್ಯಕ್ತಿಯಲ್ಲಿ ದಕ್ಷತೆ, ಆತ್ಮವಿಶ್ವಾಸಗಳು ತಾನೇ ತಾನಾಗಿ ಮೈಗೂಡಿಸಿಕೊಳ್ಳುತ್ತವೆ. ಅಂತಹವನನ್ನು

ಎಲ್ಲರೂ ಗೌರವದಿಂದ ಕಾಣುತ್ತಾರೆ. ನಿನ್ನ ಕೈಲಾದ ಕೆಲಸಗಳನ್ನು ಮುಂದೂಡದೆ ಆಗಿಂದಾಗಲೇ ಅಚ್ಚುಕಟ್ಟಾಗಿ ಮಾಡುವ ಸ್ವಭಾವವನ್ನು ಬೆಳೆಸಿಕೊ.

ಯಾವುದೇ ಕೆಲಸ ಕೈಗೊಂಡರೂ, ಗುರಿಮುಟ್ಟುವವರೆಗೆ ಕೈ ಬಿಡಬಾರದು. ಕೆಲವರಂತೂ ಉತ್ಸಾಹದಲ್ಲಿ ಕೆಲಸ ಪ್ರಾರಂಭಿಸುತ್ತಾರೆ. ನಂತರ ಯಾವುದೋ ಒಂದು ಸಣ್ಣ ಅಡ್ಡಿ ಬಂದರೂ ಅದನ್ನು ಕೈ ಬಿಡುತ್ತಾರೆ. ಅಂತಹ ವ್ಯಕ್ತಿಗಳು ಜೀವನದಲ್ಲಿ ಏನನ್ನೂ ಸಾಧಿಸುವುದಿಲ್ಲ. ಅಂತಹವರಿಗೆ ಯಾವ ಕೆಲಸ ವಹಿಸಿದರೂ ಅವರು ಅರ್ಧಂಬರ್ಧ ಮಾಡುವ ಸ್ವಭಾವದವರಾದುದರಿಂದ ಆ ಕೆಲಸ ವ್ಯರ್ಥವಾಗಿ ಹೋಗುತ್ತದೆ. ಅಂತಹವರ ಜೀವನವೂ ವ್ಯರ್ಥವೇ. ಇಂತಹ ಸ್ವಭಾವ ಅವರಲ್ಲಿ ಬೆಳೆಯಲು ಅವರಿಗೆ ಬಾಲ್ಯದಲ್ಲಿ ದೊರೆತ ಅನುಭವಗಳೇ ಕಾರಣ. ಸರಿಯಾದ ಮಾರ್ಗದರ್ಶನದ ಅಭಾವವೂ ಪೂರಕ.

ಉದಾಹರಣೆಯೊಂದನ್ನು ನಿನಗೆ ಕೊಡುತ್ತೇನೆ. ನೋಡು. ನನಗೆ ಪರಿಚಿತಳಾದ ಒಬ್ಬ ಮಹಿಳೆ ತನ್ನ ಮಗುವನ್ನು ಬೆಳೆಯಿಸುತ್ತಿದ್ದುದನ್ನು ಗಮನಿಸಿದ್ದೇನೆ. ನಾನು ಊಹಿಸಿದಂತೆ ಆ ಹುಡುಗಿ ಅದಕ್ಷಳೂ, ಯಾವದೇ ಕೆಲಸವನ್ನು ಪೂರೈಸುವ ಮನೋಭಾವವಿಲ್ಲದವಳೂ ಆಗಿದ್ದಳು. ಶಿಕ್ಷಣವನ್ನು ಅಷ್ಟೇ. ಯಾವ ಕೋರ್ಸನ್ನು ಪೂರ್ತಿ ಮುಗಿಸುವಂತಿಲ್ಲ. ಆ ಹುಡುಗಿ ಚಿಕ್ಕವಳಿದ್ದಾಗ ಅವಳ ತಾಯ್ತಂದೆಗಳು ಅವಳನ್ನು ಬೆಳೆಸಿದ ರೀತಿಯೇ ಇದಕ್ಕೆ ಕಾರಣ. ಡಾನ್ಸ್ ಕಲಿಸಬೇಕೆಂದು ಡಾನ್ಸ್ ಕ್ಲಾಸಿಗೆ ಕಳಿಸಿದರು. ಹುಡುಗಿ ತುಂಬಾ ಆಸಕ್ತಿಯಿಂದ ಕಲಿಯುತ್ತಿದ್ದಳು. ಚೆನ್ನಾದ ಪ್ರಗತಿಯೂ ಇತ್ತು. ಆದರೆ ಹುಡುಗಿಗೆ ತೊಂದರೆಯಾಗುತ್ತದೆಯೆಂದು ಅಷ್ಟಕ್ಕೇ ನಿಲ್ಲಿಸಿದರು. ನಂತರ ಸಂಗೀತದ ಕ್ಲಾಸಿಗೆ ಕಳಿಸಿದರು. ಶಾಸ್ತ್ರೀಯ ಸಂಗೀತ ಬೇಡ, ಸುಮ್ಮನೆ ಹಾಡಲು ಕಲಿತರೆಸಾಕೆಂದು ಶಿಕ್ಷಕರಿಗೆ ತಿಳಿಸಿದರು. ಹಾಗಾಗಿ, ಜನಪ್ರಿಯವಾದ ಹಾಡುಗಳನ್ನು ಕಲಿಸುತ್ತಿದ್ದರು. ಅಷ್ಟರಲ್ಲಿ ಯಾರೋ ಆಕೆಯ ಸ್ನೇಹಿತರು, ನಿಮ್ಮ ಹುಡಿಗಿಗೆ ಸಂಗೀತದಲ್ಲಿ ಆಸಕ್ತಿ ಇದೆ. ತುಂಬಾ ಚೆನ್ನಾಗಿ ಹಾಡುತ್ತಾಳೆ. ಶಾಸ್ತ್ರೀಯ ಸಂಗೀತ ಕಲಿಸಿದರೆ, ಒಳ್ಳೆಯ ಸಂಗೀತಗಾರ್ತಿಯಾಗುತ್ತಾಳೆ ಎಂದರು. ಆಗ, ಸುಗಮ ಸಂಗೀತ ನಿಲ್ಲಿಸಿ, ಶಾಸ್ತ್ರೀಯ ಸಂಗೀತಕ್ಕೆ ಕಳಿಸಿದರು. ಅಷ್ಟರಲ್ಲಿ ಅವಳಿಗೆ ಪಿ.ಯು.ಸಿ. ಪಾಸಾಗಿ ಇಂಜಿನಿಯರಿಂಗ್ ಸೀಟು ದೊರೆಯಿತು. ನಂತರ ಸಂಗೀತ, ಓದಿಗೆ ಅಡ್ಡಿಯಾಗುತ್ತದೆಯೆಂದು ಸಂಗೀತ ನಿಲ್ಲಿಸಿದರು. ಇಂಜಿನಿಯರಿಂಗ್ ಒಂದು ವರ್ಷ ಓದಿದಳು. ಅಷ್ಟರಲ್ಲಿ ತಂದೆ-ತಾಯಿಯರಿಗೆ ಬೇರೆ ಊರಿಗೆ ವರ್ಗವಾಯಿತು. ತಾಯಿಗೆ ಮಗಳನ್ನು ಬಿಟ್ಟಿರಲು ಇಷ್ಟವಿರಲಿಲ್ಲ. ಹಾಗಾಗಿ ಓದುವುದನ್ನು ಬಿಡಿಸಿ ಕರೆದುಕೊಂಡು ಹೋಗಿ ಬಿ.ಎ.ಗೆ. ಸೇರಿಸಿದರು. ಹೀಗೆ ಒಂದಲ್ಲ ಒಂದು ಕಾರಣದಿಂದ ಎಲ್ಲವನ್ನೂ ಅರ್ದಂಬರ್ಧ ಮಾಡುತ್ತಾ

ಬೆಳೆದ ಆ ಹುಡುಗಿಗೆ ಯಾವುದೇ ಕೆಲಸದ ಬಗ್ಗೆ ಶ್ರದ್ಧೆಯಾಗಲೀ, ಹಿಡಿದ ಕೆಲಸವನ್ನು ಸಾಧಿಸಬೇಕೆಂಬ ಮನೋಭಾವವಾಗಲೀ ಬೆಳೆಯಲೇ ಇಲ್ಲ. ಹೇಗೆ ಬಂದರೆ ಹಾಗೆ ಕಾಲಹಾಕುವ ಸ್ವಭಾವ ಮೂಡಿ, ಆ ಹುಡುಗಿಗೆ ಒಂದು ಸರಿಯಾದ ವ್ಯಕ್ತಿತ್ವವೇ ಇಲ್ಲವಾಗಿದೆ. ಆದುದರಿಂದ ಪುಟ್ಟೂ, ಎಷ್ಟೇ ಕಷ್ಟವಾದರೂ ಕೈಕೊಂಡ ಕೆಲಸವನ್ನು ಅರ್ಧಕ್ಕೆ ನಿಲ್ಲಸಬೇಡ. ಕೆಲಸ ಹಿಡಿಯುವಾಗಲೇ ಯೋಚಿಸಿ ಪ್ರಾರಂಭಿಸಬೇಕು. ಪ್ರಾರಂಭಿಸಿದ ಮೇಲೆ ಕೊನೆಗಾಣಿಸಬೇಕು. ಆಗ ನೀನು ಸಮರ್ಥನಾದ, ದೃಢಸಂಕಲ್ಪದ, ಆತ್ಮ ವಿಶ್ವಾಸವುಳ್ಳ ಮನುಷ್ಯನಾಗಿ ರೂಪುಗೊಳ್ಳುತ್ತೀಯೆ. ಈಗ ಇಲ್ಲಿಗೆ ಸಾಕು. ಮತ್ತೆ ಬರೆಯುವೆ.

ಇಂತಿ ನಿನ್ನ,
ಹಿತೈಷಿ.

■

## ೨೮. ಸಂಸ್ಕೃತಿಯ ಸಂರಕ್ಷಣೆ

ಪ್ರೀತಿಯ ಪುಟ್ಟೂ,

ಪ್ರತಿಯೊಬ್ಬರೂ ಜೀವನದಲ್ಲಿ 'ಕರ್ತವ್ಯ'ಗಳನ್ನು ನಿರ್ವಹಿಸಬೇಕಾಗುತ್ತದೆ. ಆ ಕರ್ತವ್ಯಗಳು ನಮ್ಮ ದೇಶದ ಸಂಸ್ಕೃತಿಯ ಪ್ರತೀಕ. ರಾಷ್ಟ್ರದ ಹಿತರಕ್ಷಣೆ ಮಾಡುವುದು ಪ್ರತಿಯೊಬ್ಬ ಪ್ರಜೆಯ ಕರ್ತವ್ಯ. ಮುಪ್ಪಿನಲ್ಲಿ ತಂದೆ–ತಾಯಿಗಳನ್ನು ರಕ್ಷಿಸುವುದು ಮಕ್ಕಳ ಕರ್ತವ್ಯ. ರೋಗಿಯ ಆರೈಕೆ ಮಾಡುವುದು, ಸೂಕ್ತ ಚಿಕಿತ್ಸೆ ಕೊಡುವುದು ವೈದ್ಯನ ಕರ್ತವ್ಯ. ಮಕ್ಕಳನ್ನು ಬಾಲ್ಯದಲ್ಲಿ ಪೋಷಿಸಿ, ಬೆಳೆಸಿ ಉತ್ತಮ ಗುಣಗಳನ್ನು ಹೊಂದುವಂತೆ ಮಾಡಿ, ವಿದ್ಯೆ–ಬುದ್ಧಿಗಳನ್ನೂ ದೊರಕಿಸಿ, ಅವರು ತಮ್ಮ ಕಾಲ ಮೇಲೆ ತಾವು ನಿಲ್ಲುವಂತೆ ಮಾಡುವುದು ತಂದೆ–ತಾಯಿಗಳ ಕರ್ತವ್ಯ. ಹೀಗೆ ಮನುಷ್ಯನು ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆಯಾದ ಅನೇಕ ಕರ್ತವ್ಯಗಳನ್ನು ನಿರ್ವಹಿಸಬೇಕಾಗುತ್ತದೆ.

ಕರ್ತವ್ಯದಂತೆ ಮೌಲ್ಯಗಳು ಮನುಷ್ಯನ ಜೀವನಕ್ಕೆ ಅವಶ್ಯಕ, ಕರ್ತವ್ಯಪಾಲನೆ ಮಾಡುವ ಮನೋಭಾವದ, ಮೌಲ್ಯಾಧಾರಿತ ಜೀವನ ನಡೆಸುವ ವ್ಯಕ್ತಿಗಳು ದೇಶದ ಸಂಪತ್ತು. ಯಾವುದೇ ಕೆಲಸವು ನೀತಿಯ ನೆಲಗಟ್ಟಿನ ಮೇಲೆ ನಿಂತಿದ್ದರೆ, ಅದು ಶಾಶ್ವತವೂ, ಫಲಪ್ರದವೂ ಆಗಬಲ್ಲದು. ಯಾವ ಕುಟುಂಬದಲ್ಲಿ ಯಾವ ಸಮಾಜದಲ್ಲಿ, ಯಾವ ರಾಷ್ಟ್ರದಲ್ಲಿ ಜನರು ಮೌಲ್ಯಗಳನ್ನು ಅಳವಡಿಸಿಕೊಂಡು ಬದುಕುತ್ತಾರೋ ಅಲ್ಲಿ ಪ್ರಗತಿ, ಸಂತೋಷ, ನೆಮ್ಮದಿ ಪ್ರೀತಿ–ವಿಶ್ವಾಸಗಳು ತಾಂಡವವಾಡುತ್ತಿರುತ್ತವೆ;

ವಿರಸ, ದ್ವೇಷ, ಕಲಹಗಳಿಗೆ ಅವಕಾಶವಿರುವುದಿಲ್ಲ. ಆದರೆ ವ್ಯಕ್ತಿಗಳು ಭ್ರಷ್ಟಾಚಾರಿಗಳೂ, ಕುಟಿಲರೂ, ಮೋಸ–ದ್ವೇಷ ಮಾಡುವವರೂ, ಸುಳ್ಳು ಕುತಂತ್ರಗಳಲ್ಲಿ ಪರಿಣತರೂ ಆಗಿದ್ದರೆ, ಅದು ಕುಟುಂಬವೇ ಆಗಿರಲಿ, ಸಮಾಜವೇ ಆಗಿರಲಿ, ರಾಷ್ಟ್ರವೇ ಆಗಿರಲಿ ಅಲ್ಲಿ ಶಾಂತಿ ಸಮಾಧಾನಗಳ ಸುಳಿವೂ ಇರುವುದಿಲ್ಲ. ಎಲ್ಲರಿಗೂ ಒಂದಲ್ಲ ಒಂದು ಬಗೆಯ ಅಸಮಾಧಾನ, ಅಸಹಾಯಕತೆ; ಪ್ರಗತಿಯಂತೂ ಸಾಧ್ಯವೇ ಇಲ್ಲ. ಕಾಲಾನುಕ್ರಮದಲ್ಲಿ ಎಲ್ಲವೂ ವಿನಾಶ. ಆದುದರಿಂದ ಮೌಲ್ಯಾಧಾರಿತ ಜೀವನವನ್ನು ಬಾಳಬೇಕೆಂಬ ಮನಸ್ಸನ್ನು ಪ್ರತಿಯೊಬ್ಬರೂ ಹೊಂದಬೇಕು. ಕಪಟರಹಿತ, ಸರಳವಾದ ಸ್ನೇಹಮಯವಾದ, ಪ್ರೀತಿಯಿಂದೊಡಗೂಡಿದ ಸ್ವಭಾವ ಪಡೆದುಕೊಳ್ಳಬೇಕು.

ನಮ್ಮ ಸಂಸ್ಕೃತಿಯು ಅನೇಕ ಮೌಲ್ಯಗಳನ್ನು ಒಳಗೊಂಡಿದೆ. ಕಷ್ಟದಲ್ಲಿರುವವರಿಗೆ ನೆರವು ನೀಡಬೇಕು. ಉಪಕಾರ ಮಾಡಿದವರನ್ನು ಮರೆಯದೆ ಅವರಿಗೆ ಕೃತಜ್ಞರಾಗಿರಬೇಕು. ಗುರುಹಿರಿಯರನ್ನು ಗೌರವದಿಂದ ಕಾಣಬೇಕು. ಐಶ್ವರ್ಯ, ಸ್ಥಾನಮಾನ, ಕೀರ್ತಿಗಳು ಬಂದರೂ ಅಹಂಕಾರಿಯಾಗಬಾರದು. ಇತರರನ್ನು ಹಿಂಸಿಸಬಾರದು. ತಮ್ಮ ಲಾಭಕ್ಕಾಗಿ ಬೇರೆಯವರಿಗೆ ಮೋಸ ಮಾಡಬಾರದು, ತಮ್ಮ ಕರ್ತವ್ಯಗಳಿಗೆ ಚ್ಯುತಿಯಾಗದಂತೆ ಬದುಕಬೇಕು. ಹೊಟ್ಟೆಕಿಚ್ಚಿನಿಂದ ಇತರರ ಮನ ನೋಯಿಸಬಾರದು. ಹೀಗೆ ಬರೆಯುತ್ತಾ ಹೋದರೆ, ಲೆಕ್ಕವಿಲ್ಲದಷ್ಟು ಇವೆ. ಇವುಗಳೆಲ್ಲವುಗಳ ಪರಿಚಯವಿಟ್ಟುಕೊಂಡು ಅವು ಸಕಾಲದಲ್ಲಿ ನಮಗೆ ಸಹಾಯಕವಾಗಿ ನಾವು ಅಡ್ಡದಾರಿಗೆ ಹೋಗದಂತೆ ನೋಡಿಕೊಳ್ಳಬೇಕು. ದುರಾಸೆಗೆ ಬಿದ್ದ ಮನುಷ್ಯ ಎಂತಹ ಹೇಯ ಕೆಲಸ ಮಾಡಲೂ ಹಿಂಜರಿಯುವುದಿಲ್ಲ. ಅದಕ್ಕಾಗಿಯೇ ನಮ್ಮ ಪೂರ್ವಿಕರು ಕರ್ತವ್ಯ, ಗೌರವಗಳ ಹೆಸರಿನಲ್ಲಿ ಕುಟುಂಬಕ್ಕೆ, ರಾಷ್ಟ್ರಕ್ಕೆ, ಸಮಾಜಕ್ಕೆ ಸಹಾಯಕವಾದ ಸಂಪ್ರದಾಯಗಳನ್ನು ಬಿಟ್ಟು ಹೋಗಿದ್ದಾರೆ. ನಮ್ಮ ಅನೇಕ ಸಂಪ್ರದಾಯಗಳು ನಮ್ಮಲ್ಲಿ ಒಗ್ಗಟ್ಟನ್ನು ಉಂಟು ಮಾಡಲು, ಪ್ರೀತಿ–ವಿಶ್ವಾಸಗಳನ್ನು ವೃದ್ಧಿಮಾಡಲು, ವಿರಸ–ದ್ವೇಷಗಳನ್ನು ಮರೆತು ಒಂದಾಗಲು ಸಹಾಯಕವಾಗಿವೆ. ಆದರೆ ಈಗಿನ ಯುವ, ಯುವತಿಯರು ಅವುಗಳನ್ನು ಆಳವಾಗಿ ಯೋಚಿಸದೆ, ತಿಳಿಯುವ ಗೊಡವೆಗೆ ಹೋಗದೆ, ಮೇಲ್ನೋಟದಲ್ಲಿಯೇ ಅವುಗಳನ್ನು ಹೀಯಾಳಿಸಿ, ನಗೆಪಾಟಲು ಮಾಡಿ ಅವುಗಳಿಗೆ ಬೆಲೆಯೇ ಇಲ್ಲದಂತೆ ಮಾಡುತ್ತಿದ್ದಾರೆ.

ಇವೆಲ್ಲ ಸಂಪ್ರದಾಯಗಳು, ರೂಢಿಗಳು, ಮೌಲ್ಯಗಳು, ಕರ್ತವ್ಯಪ್ರಜ್ಞೆಗಳೂ ಜನರಲ್ಲಿ ಒಂದು ಬಗೆಯ ಶಿಸ್ತನ್ನು ಬೆಳೆಸುತ್ತವೆ. ಸಾಮರಸ್ಯ ಜೀವನದಲ್ಲಿ ಕರ್ತವ್ಯ ಪ್ರಜ್ಞೆಯ ಮನೋಭಾವವನ್ನು ಉಂಟುಮಾಡುತ್ತವೆ. ಅವುಗಳನ್ನು

ಬೋಧಿಸುವ ಬದಲು ಬಾಲ್ಯದಿಂದಲೂ ಜೀವನ ಕ್ರಮದಲ್ಲಿಯೇ ಮೈಗೂಡಿ ಬರುವಂತಹ ಉತ್ತಮ ಕ್ರಮವನ್ನು ನಮ್ಮ ಹಿರಿಯರು ಕೌಟುಂಬಿಕ ಜೀವನದಲ್ಲಿ ಬೆಸೆದಿದ್ದಾರೆ. ಉದಾಹರಣೆಗೆ ಹೇಳುವುದಾದರೆ, ಗುರುಹಿರಿಯರಲ್ಲಿ ಗೌರವದಿಂದ ನಡೆದುಕೊಳ್ಳಬೇಕೆಂಬ ಮೌಲ್ಯ ಈಗಿನ ಸಮಾಜದಲ್ಲಿ ಬೆಲೆ ಕಳೆದುಕೊಂಡಿರುವುದರಿಂದ ಅನೇಕ ಅಶಿಸ್ತಿನ ನಡವಳಿಕೆಗಳನ್ನು ನಾವು ಇಂದು ಕುಟುಂಬದಲ್ಲಿ, ಸಮಾಜದಲ್ಲಿ ಕಾಣುತ್ತಿದ್ದೇವೆ. ತಂದೆ–ತಾಯಿಯರನ್ನು ಮಕ್ಕಳು ರಕ್ಷಿಸಬೇಕೆಂಬ ನಮ್ಮ ಸಂಸ್ಕೃತಿಯು ಪಾಶ್ಚಾತ್ಯ ಜೀವನದ ಪ್ರಭಾವದಿಂದ ವೃದ್ಧಾಪ್ಯ ಕಾಲದಲ್ಲಿ ಅವರು ಅಸಹಾಯಕರಾಗಿ ಒಂಟಿತನವನ್ನು ಅನುಭವಿಸುವಂತೆ, ಸಹಾಯಕರಿಲ್ಲದೇ ಒದ್ದಾಡುವಂತೆ, ವೃದ್ಧಾಶ್ರಮಗಳನ್ನು ಸೇರಿಕೊಳ್ಳುವಂತೆ ಮಾಡಿದೆ.

ಪುಟ್ಟೂ, ನಮ್ಮ ಸಂಸ್ಕೃತಿ, ತತ್ವ, ಪರಂಪರೆ, ಮೌಲ್ಯಗಳು ತುಂಬಾ ಉನ್ನತವಾದವು. ಅವುಗಳ ರಕ್ಷಣೆ ಪ್ರತಿಯೊಬ್ಬರ ಕರ್ತವ್ಯ. ಅವುಗಳನ್ನು ಕಳೆದುಕೊಂಡರೆ ಭಾರತೀಯತೆಯನ್ನೇ ಕಳೆದುಕೊಂಡಂತೆ. ಕೆಲವು ಹಳೆಯ ಸಂಪ್ರದಾಯಗಳು ಆಗಿನ ಕಾಲಕ್ಕೆ ಸೂಕ್ತವಾಗಿದ್ದರೂ, ಈಗಿನ ಪರಿಸ್ಥಿತಿಯಲ್ಲಿ ಅರ್ಥ ಕಳೆದುಕೊಂಡಿರಬಹುದು. ಅಂತಹವುಗಳನ್ನು ಕೈಬಿಡುವುದರಲ್ಲಿ ತಪ್ಪೇನಿಲ್ಲ. ಆದರೆ ಯಾವುದೇ ಒಂದು ರೂಢಿಯನ್ನು, ಸಂಪ್ರದಾಯವನ್ನು ಬಿಡಬೇಕಾದರೂ ಹೊಸದನ್ನು ಅಳವಡಿಸಿಕೊಳ್ಳಬೇಕಾದರೂ, ಆಳವಾಗಿ ವಿಚಾರ ಮಾಡಬೇಕು. ಸಾಧಕ–ಬಾಧಕಗಳನ್ನು ಯೋಚಿಸಬೇಕು. ಕೂಲಂಕಷವಾಗಿ ಪರಿಶೀಲಿಸಿದ ನಂತರ ಅವುಗಳನ್ನು ಬಿಡುವ ಅಥವಾ ಹೊಸದನ್ನು ಒಪ್ಪಿಕೊಳ್ಳುವ ತೀರ್ಮಾನಕ್ಕೆ ಬರಬೇಕು. ದುಡುಕು ಸರ್ವಥಾ ಒಳಿತಲ್ಲ. ವ್ಯಕ್ತಿತ್ವ ರೂಪುಗೊಳ್ಳುವ ಹಂತದಲ್ಲಿರುವ ನೀನು ಈ ಬಗ್ಗೆ ಸದಾ ಜಾಗೃತನಾಗಿರಬೇಕು. ತಿಳಿಯಿತೇ? ಪತ್ರ ದೊಡ್ಡದಾಯಿತಲ್ಲವೇ? ಮುಗಿಸುತ್ತೇನೆ. ನೀನು ಒಳ್ಳೆಯವನಾಗಿ ಸುಖವಾಗಿ, ಬಾಳಬೇಕು ಎಂಬ ಆಸೆಯಿಂದ ಒಮ್ಮೊಮ್ಮೆ ದೊಡ್ಡ ಪತ್ರ ಬರೆದುಬಿಡುತ್ತೇನೆ. ಬೇಜಾರಿಲ್ಲ ತಾನೆ? ಪತ್ರ ಮುಗಿಸುವೆ.

ಇಂತಿ ನಿನ್ನ,
ಹಿತೈಷಿ.

■

## ೨೯. ಸತ್ಸಂಗ – ಸದ್ವಿಚಾರ

ಪ್ರೀತಿಯ ಪುಟ್ಟೂ,

ಸೃಷ್ಟಿಯಲ್ಲಿರುವ ಅದ್ಭುತವನ್ನು ಗಮನಿಸಿರುವೆಯಾ? ಎಷ್ಟೊಂದು ವೈವಿಧ್ಯತೆ!

ಲೆಕ್ಕವಿಲ್ಲದಷ್ಟು ಜಾತಿಯ ಗಿಡ–ಮರಗಳು, ಪಶು–ಪಕ್ಷಿಗಳು, ಕ್ರಿಮಿ–ಕೀಟಗಳು! ಕಾಡಿಗೆ ಹೋದರೆ ಕಣ್ ತಣಿಸುವ ಗಿಡಮರಗಳ ಹಸಿರು. ಆ ಹಸಿರನಲ್ಲಿಯೂ ಎಷ್ಟು ವಿಧ! ಹಸಿರೆಂದ ಮಾತ್ರಕ್ಕೆ ಎಲ್ಲಾ ಹಸಿರು ಒಂದೇ ತೆರನಲ್ಲ. ತಿಳಿ ಹಸಿರು, ಕಡು ಹಸಿರು, ಗಿಣಿ ಹಸಿರು, ಅವುಗಳ ವೈವಿಧ್ಯತೆ ವರ್ಣಿಸಲು ನಮ್ಮ ಭಾಷೆ ಸೋಲುತ್ತದೆ. ಒಂದು ಹಸಿರಿನಂತೆ ಇನ್ನೊಂದು ಹಸಿರಿಲ್ಲ. ಹೂವುಗಳೂ ಅಷ್ಟೆ ತರಾವರಿಯ ಬಣ್ಣಗಳು. ಅವುಗಳ ರೂಪ ಕಣ್ಣಿಗೆ ಹಬ್ಬ; ಮನಕ್ಕೆ ಆನಂದ. ಹಣ್ಣುಗಳಲ್ಲೂ ಎಷ್ಟೊಂದು ವಿಧ! ರುಚಿಯಲ್ಲೂ ವೈವಿಧ್ಯತೆ. ಒಂದೇ ಜಾತಿಯ ಹಣ್ಣುಗಳಲ್ಲೂ ಒಂದೇ ರುಚಿ ಇಲ್ಲ. ಮಾವಿನ ಹಣ್ಣನ್ನು ನೋಡು ಅದರಲ್ಲಿ ಎಷ್ಟು ಬಗೆ ; ಗಿಣಿ ಮಾವು, ನಾಟಿ ಮಾವು, ರಸಪೂರಿ, ಬದಾಮಿ, ಮಲಗೂಬ (ಮರ್ಮಗೋವಾ ಇರಬಹುದು). ನೀಲಂ ಮುಂತಾದ ಹಲವಾರು ರೀತಿ. ಅವುಗಳ ರುಚಿಯೂ ಬೇರೆ ಬೇರೆ. ಬಾದಾಮಿ (ಆಪೋಸ, ಆಲ್ಫೊಂಜ) ಹಣ್ಣುಗಳೆಲ್ಲ ಒಂದೇ ರುಚಿಯಲ್ಲ. ಅವುಗಳ ರುಚಿಯಲ್ಲೂ ವೈವಿಧ್ಯತೆ. ಹಾಗೇ ಎಲ್ಲಾ ಹಣ್ಣುಗಳಲ್ಲೂ ಅನೇಕ ಬಗೆಯನ್ನು ಕಾಣಬಹುದು. ಪಕ್ಷಿಗಳು ಅವುಗಳ ಧ್ವನಿ ಎಲ್ಲವನ್ನೂ ಬಿಡಿಸಿ ವರ್ಣಿಸಲಾದೀತೆ? ಪಶು–ಪ್ರಾಣಿಗಳು ಕ್ರಿಮಿ–ಕೀಟಗಳು ಎಷ್ಟು ಬಗೆ ಇವೆ ಎಂಬುದನ್ನು ಎಣಿಸಿ ಲೆಕ್ಕ ಇಡಲಾದೀತೆ? ಇದೆಲ್ಲಾ ಸೃಷ್ಟಿಯ ವೈಚಿತ್ರ್ಯ – ವೈಭವ.

ಸೃಷ್ಟಿಯಲ್ಲಿ ಹುಟ್ಟಿಬಂದಿರುವ ಕೋಟ್ಯಾನುಕೋಟಿ ಜೀವಿಗಳಲ್ಲಿ ಮನುಷ್ಯ ಜನ್ಮ ಶ್ರೇಷ್ಠವಾದುದು. ಮನುಷ್ಯನ ಬುದ್ಧಿಶಕ್ತಿ, ಮಾತನಾಡುವ ಶಕ್ತಿ ಮತ್ತಾವ ಪ್ರಾಣಿಗೂ ಇಲ್ಲ. ಈ ಅಮೂಲ್ಯವಾದ ಮನುಷ್ಯ ಜನ್ಮವನ್ನೂ ಸಾರ್ಥಕ ಪಡಿಸಿಕೊಳ್ಳಬಹುದು; ಹಾಳು ಮಾಡಿಕೊಳ್ಳಲೂಬಹುದು. ಮಾನವ ತನ್ನ ಕ್ರಿಯೆಗಳಿಂದ, ಬದುಕಿನಿಂದ, ದೈವತ್ವಕ್ಕೂ ಏರಬಲ್ಲ, ದಾನವನೂ ಆಗಬಲ್ಲ, ದೇವತ್ವಕ್ಕೇರಿರುವ ಉದಾಹರಣೆಗಳು ಅನೇಕ. ಅವುಗಳಲ್ಲಿ ರಾಮ, ಕೃಷ್ಣ, ಬುದ್ಧ, ಬಸವ, ರಾಮಕೃಷ್ಣ, ವಿವೇಕಾನಂದ ಮುಂತಾದವರು ಈ ಸಾಲಿನಲ್ಲಿ ಬರುತ್ತಾರೆ. ಎಲ್ಲರೂ ಅಂತಹ ಅತ್ಯುನ್ನತ ಮಟ್ಟಕ್ಕೆ ಏರಲು ಸಾಧ್ಯವಾಗದಿದ್ದರೂ ತಮ್ಮ ಉದಾತ್ತವಾದ ಕಾರ್ಯಗಳಿಂದ ಸಮಾಜದ, ಮಾನವತೆಯ ಒಳಿತಿಗಾಗಿ ತಮ್ಮ ತನು–ಮನ–ಧನವನ್ನು ಅರ್ಪಿಸುವ ಮೂಲಕ ಶ್ರೇಷ್ಠ ಮಾನವರೆನ್ನಿಸಿಕೊಂಡು ಮಾನವ ಕೋಟಿಯ ಗೌರವಾದರಕ್ಕೆ ಪಾತ್ರರಾಗುವವರು, ಎರಡನೆಯ ಸಾಲಿನಲ್ಲಿ ನಿಲ್ಲುತ್ತಾರೆ. ಅಂತಹವರಲ್ಲಿ ಮಹಾತ್ಮ ಗಾಂಧೀಜಿ, ಸಾಮ್ರಾಟ ಅಶೋಕ, ರಾಜಾರಾಮ ಮೋಹನರಾಯ, ನೆಲ್ಸನ್ ಮಂಡೇಲಾ ಮುಂತಾದವರನ್ನು ಹೆಸರಿಸಬಹುದು. ಮಾನವರಾಗಿ ಹುಟ್ಟಿಯೂ ದಾನವರಾಗಿ ಬದುಕಿರುವ ಇನ್ನೊಂದು ಗುಂಪು ಇದೆ. ಅವರೆಂದರೆ ಕೊಲೆಗಡುಕರು, ದರೋಡಕೋರರು, ಭಯೋತ್ಪಾದಕರು,

ಹಸುಗೂಸುಗಳು ಮತ್ತು ಅಸಹಾಯಕರ ಮೇಲೆ ಅತ್ಯಾಚಾರವೆಸಗುವ ಅನೀತಿವಂತರು, ಮೋಸಗಾರರು, ಕ್ರೂರಿಗಳು ಆದಂತಹವರನ್ನು ದಾನವರು ಅಥವಾ ಮಾನವ ಸ್ವರೂಪದ ರಾಕ್ಷಸರು ಎನ್ನಬಹುದು. ಅಂಥವರ ಲೆಕ್ಕ ಇಡುವವರಾರು?

ಒಟ್ಟಿನಲ್ಲಿ, ಮಾನವನಾಗಿ ಹುಟ್ಟಿದರೂ, ಅವನು ತನ್ನ ಕೃತ್ಯಗಳಿಂದ ಬದುಕಿನ ರೀತಿಗಳಿಂದ ಶ್ರೇಷ್ಠಮಾನವನಾಗಬಲ್ಲ ಹಾಗೂ ದೈವತ್ವಕ್ಕೇರಬಲ್ಲ. ಇಲ್ಲವೇ ದಾನವರಾಗಬಲ್ಲ. ದುರ್ಲಭವಾದ ಈ ಮಾನವ ಜನ್ಮವನ್ನು ಪಡೆದಿರುವ ಎಲ್ಲರೂ ದೈವತ್ವದ ಮಟ್ಟಕ್ಕೇರುವುದು ಸಾಧ್ಯವಿಲ್ಲವಾದರೂ, ಕಡೆಯ ಪಕ್ಷ ಯೋಗ್ಯ ಮಾನವರಾಗಿ ಬದುಕಲು ಪ್ರತಿಯೊಬ್ಬರಿಗೂ ಸಾಧ್ಯವಿದೆ. ಮನುಷ್ಯ, ಸಮಾಜಕ್ಕೆ, ರಾಷ್ಟ್ರಕ್ಕೆ, ಮಾನವತೆಗೆ ಒಳಿತಾದುದನ್ನು ಮಾಡಲು ಸಾಧ್ಯವಿಲ್ಲವಾದರೆ, ಕಡೆಯ ಪಕ್ಷ ಕೆಡುಕನ್ನಾದರೂ ಮಾಡದಿದ್ದರೆ ಅದೇ ಒಂದು ದೊಡ್ಡ ಕೊಡುಗೆಯಾಗುತ್ತದೆ. ಆದರೂ ಸಮಾಜದಲ್ಲಿ ಬದುಕಿದ ಮೇಲೆ ಕಿಂಚಿತ್ತಾದರೂ, ಕಷ್ಟದಲ್ಲಿರುವವರಿಗೆ, ಸಮಾಜದ ಒಳಿತಿಗೆ, ಧರ್ಮರಕ್ಷಣೆಗೆ, ಸಂಸ್ಕೃತಿ ಪಾಲನೆಗೆ, ತನ್ನ ಕೈಲಾದ ರೀತಿಯಲ್ಲಿ ಸೇವೆ ಸಲ್ಲಿಸಿದರೆ, ನೆರವಾದರೆ ಹುಟ್ಟಿದುದು ಸಾರ್ಥಕವಾದೀತು. ನಮ್ಮ ಕರ್ತವ್ಯವನ್ನು ಸ್ವಲ್ಪ ಮಟ್ಟಿಗಾದರೂ ಮಾಡಿದೆವೆಂಬ ತೃಪ್ತಿಯನ್ನು ಪಡೆಯಬಹುದು.

ಸಾಮಾನ್ಯವಾಗಿ ಮನುಷ್ಯ ಸ್ವಾರ್ಥಿ. ಎಷ್ಟಿದ್ದರೂ ತನಗೆ ಬೇಕು, ತನ್ನವರಿಗೆ ಬೇಕು. ಇನ್ನಷ್ಟು ಬೇಕು, ಬೇಕು ಬೇಕು ಎನ್ನುವದು ಅವನ ಸಾಮಾನ್ಯಗುಣ. ಈ ಸ್ವಭಾವವನ್ನು ಉದಾತ್ತೀಕರಿಸಕೊಳ್ಳದಿದ್ದರೆ, ಆ ಬೇಕಿಗಾಗಿ ಏನೆಲ್ಲಾ ಮಾಡುತ್ತಾನೆ. ಹಾಗಾಗಿಯೇ ನಾವಿಂದು ಲೆಕ್ಕವಿಲ್ಲದಷ್ಟು ಮಂದಿ ಭ್ರಷ್ಟ ಅಧಿಕಾರಿಗಳನ್ನು, ರಾಜಕಾರಣಿಗಳನ್ನು, ಉದ್ಯೋಗಿಗಳನ್ನು ಕಾಣಬಹುದಾಗಿದೆ. ಈ 'ಬೇಕು' ಮಿತಿ ಮೀರಿದಾಗ ಸಮಾಜ, ರಾಷ್ಟ್ರ ಯಾವುದೂ ಉಳಿಯುವುದಿಲ್ಲ. ಅದಕ್ಕಾಗಿಯೇ ಜ್ಞಾನಿಗಳು, ಯೋಗಿಗಳು, ಧಾರ್ಮಿಕ ವ್ಯಕ್ತಿಗಳು, ಮಾನವತೆಯ ಹಿತಚಿಂತಕರು ನಾನಾ ರೀತಿಯಲ್ಲಿ ಜನರಿಗೆ ಹಿತೋಪದೇಶ ಮಾಡಿದ್ದಾರೆ. ಮಾರ್ಗದರ್ಶನ ನೀಡಿದ್ದಾರೆ. ಅವುಗಳನ್ನು ಮನನಮಾಡಿಕೊಂಡು ನಮ್ಮ ನಡೆ-ನುಡಿಗಳನ್ನು ತಿದ್ದಿಕೊಳ್ಳಬೇಕು.

ನಮ್ಮ ಸ್ವಭಾವವನ್ನು ಉತ್ತಮಗೊಳಿಸಿಕೊಳ್ಳಲು, ಸತ್ಸಂಗದಲ್ಲಿರಬೇಕು. ಮಹಾನುಭಾವರ ಜೀವನ ಚರಿತ್ರೆಗಳನ್ನು ಓದಬೇಕು. ಸ್ನೇಹಮಾಡುವಾಗ ಬಹು ಎಚ್ಚರಿಕೆಯಿಂದರಿಬೇಕು. ಹದಿವಯಸ್ಸಿನಲ್ಲಿ ಬರುವ ಸಂಪರ್ಕಗಳು ವ್ಯಕ್ತಿಯನ್ನು ರಸಾತಳಕ್ಕಾದರೂ ತಳ್ಳಬಹುದು. ಎತ್ತರಕ್ಕಾದರೂ ಎತ್ತಬಹುದು. ನಮಗೆ ದೊರೆಯುವ ಸಮಯವನ್ನು ಉತ್ತಮ ಕೆಲಸಕ್ಕಾಗಿ ಸರಿಯಾಗಿ ಹಂಚಿಕೊಂಡು

ಚಿತ್ತ ಚಂಚಲವಾಗದ ಹಾಗೆ, ಕೆಟ್ಟಕಾರ್ಯಗಳ ಕಡೆಗೆ ಗಮನ ಹರಿಯದಂತೆ ನೋಡಿಕೊಳ್ಳಬೇಕು. ಈ ಬಗ್ಗೆ ತಂದೆ-ತಾಯಿಗಳ, ಶಿಕ್ಷಕರ, ಜವಾಬ್ದಾರಿ ಸಾಕಷ್ಟಿದೆಯಾದರೂ ನೀನೇ ಈ ಬಗ್ಗೆ ಎಚ್ಚರಿಕೆಯಿಂದ ಇದ್ದರೆ ಅವರ ಪ್ರಯತ್ನ ಸುಲಭವಾಗುತ್ತದೆ; ಶ್ರಮ ಸಾರ್ಥಕವಾಗುತ್ತದೆ. ಅವರೆಷ್ಟೇ ಪ್ರಯತ್ನಪಟ್ಟರೂ ನಿನ್ನ ಮನಸ್ಸು ಆ ಕಡೆಗೆ ಇಲ್ಲದಿದ್ದರೆ ಪ್ರಯೋಜನವಾಗುವುದಿಲ್ಲ. ಕುದುರೆಯನ್ನು ನದಿಗೆ ಕರೆದುಕೊಂಡು ಹೋಗಿ ನಿಲ್ಲಿಸುವುದು ಸಾಧ್ಯ. ಆದರೆ ನೀರನ್ನು ಕುದುರೆ ತಾನೆ ಕುಡಿಯಬೇಕು? ಅದಕ್ಕೆ ಕುಡಿಯುವ ಮನಸ್ಸಿಲ್ಲದಿದ್ದರೆ ನದಿಗೆ ಕರೆದುಕೊಂಡು ಹೋದರೂ ಪ್ರಯೋಜನವಿಲ್ಲ.

ಪುಟ್ಟೂ, ನಾನು ಇದನ್ನೆಲ್ಲಾ ಬರೆಯಲು ಮುಖ್ಯ ಕಾರಣ, ನೀನು ಒಳ್ಳೆಯ ವ್ಯಕ್ತಿಯಾಗಬೇಕು, ಭಾರತಮಾತೆಯ ಸತ್ಪುತ್ರನಾಗಬೇಕೆಂಬ ನನ್ನ ಹಂಬಲವೇ ಕಾರಣ. ನನ್ನ ಹಂಬಲ, ಆಸೆ ಕೈಗೂಡುವಂತೆ ಮಾಡುವಿಯಲ್ಲವೆ ಮಗೂ? ಪತ್ರ ಮುಗಿಸುವೆ.

ಇಂತಿ ನಿನ್ನ,
**ಹಿತೈಷಿ.**

■

## ೩೦. ಪ್ರಾಮಾಣಿಕತೆಯ ಮಾದರಿ

ಪ್ರೀತಿಯ ಪುಟ್ಟಾ,

ನಮ್ಮ ಭಾರತ ಅನೇಕ ಮೇಧಾವಿಗಳ ನಾಡು. ಹೆಸರಾಂತ ಸಾಹಿತಿಗಳು, ದಾರ್ಶನಿಕರು, ವಿಜ್ಞಾನಿಗಳು ಇಲ್ಲಿ ಆಗಿ ಹೋಗಿದ್ದಾರೆ. ವಿಶ್ವವಿಖ್ಯಾತ ವಿಜ್ಞಾನಿ ಸರ್. ಸಿ.ವಿ. ರಾಮನ್‌ರವರ ಹೆಸರನ್ನು ನೀನು ಕೇಳಿರಬೇಕಲ್ಲವೆ? ಅವರು ನಮ್ಮ ದೇಶದ ಹೆಮ್ಮೆಯ ಸತ್ಪುತ್ರರು. ಅವರು ಭೌತವಿಜ್ಞಾನದಲ್ಲಿ ಪರಿಣತರಾಗಿದ್ದರು. ಅವರು ಮಾಡಿದ ಸಂಶೋಧನೆಯು 'ರಾಮನ್ ಎಫೆಕ್ಟ್' ಎಂದೇ ಪ್ರಸಿದ್ಧಿ ಪಡೆದಿದೆ. ಶ್ರೀಯುತರಿಗೆ ಭೌತವಿಜ್ಞಾನದಲ್ಲಿ ಅದ್ಭುತ ಸಂಶೋಧನೆಗಾಗಿ ೧೯೩೦ ರಲ್ಲಿ ನೊಬೆಲ್ ಪಾರಿತೋಷಕ ದೊರೆಯಿತು.

ಇಂತಹ ಡಾ॥ ರಾಮನ್ ಕೇವಲ ವಿಜ್ಞಾನಕ್ಕಷ್ಟೇ ಮಹತ್ವ ಕೊಡುತ್ತಿರಲಿಲ್ಲ. ಮಾನವೀಯ ಮೌಲ್ಯಗಳ ಬಗೆಗೂ ಅತ್ಯಂತ ಬೆಲೆ ಇಟ್ಟುಕೊಂಡಿದ್ದರು. ಪ್ರಾಮಾಣಿಕತೆ, ನಿಷ್ಠೆ, ಶ್ರದ್ಧೆಯ ಬಾಳನ್ನು ಬಾಳಿದವರು, ಅಲ್ಲದೆ, ಅವುಗಳ ಬಗೆಗೆ ಬಹಳಷ್ಟು ಗೌರವ ಇಟ್ಟುಕೊಂಡಿದ್ದರು. ಒಮ್ಮೆ, ಅವರೇ ಸ್ಥಾಪಿಸಿದ 'ರಾಮನ್ ಇನ್‌ಸ್ಟಿಟ್ಯೂಟ್

ಆಫ್ ರಿಸರ್ಚ್' ಗೆ ಭೌತಶಾಸ್ತ್ರ ತೆಗೆದುಕೊಂಡು ಬಿ.ಎ. ಪದವಿ ಪಡೆದ ಒಬ್ಬ ವ್ಯಕ್ತಿ ಬೇಕಾಗಿದ್ದಿತು. ಅದಕ್ಕಾಗಿ ಅರ್ಜಿಗಳನ್ನು ಕರೆದಿದ್ದರು. ಸಂದರ್ಶನಕ್ಕೆ ಬರುವವರಿಗೆ ಪ್ರಯಾಣ ಭತ್ಯೆ ಕೊಡುವ ವ್ಯವಸ್ಥೆ ಮಾಡಿದ್ದರು. ಅನೇಕರು ಸಂದರ್ಶನಕ್ಕೆ ಬಂದಿದ್ದರು. ಅದರಲ್ಲಿ ಒಬ್ಬನನ್ನು ಆರಿಸಿಕೊಂಡು, ಉಳಿದವರಿಗೆಲ್ಲ ಪ್ರಯಾಣ ಭತ್ಯೆ ಕೊಟ್ಟರು. ಆಯ್ಕೆಯಾಗಿದ್ದ ವ್ಯಕ್ತಿಗೆ ಆರ್ಡರ್ ಸಿದ್ಧವಾಗುತ್ತಿತ್ತು. ಅಷ್ಟರಲ್ಲಿ, ಆರಿಸಲ್ಪಡದ ವ್ಯಕ್ತಿಯೊಬ್ಬ ಆಫೀಸಿನಲ್ಲಿ ಭತ್ಯೆ ತೆಗೆದುಕೊಂಡು ಹೋದವನು, ವಾಪಸು ಬಂದು 'ಹತ್ತು ರೂಪಾಯಿ ಹೆಚ್ಚು ಕೊಟ್ಟಿದ್ದೀರಿ' ಎಂದು ಗುಮಾಸ್ತನಿಗೆ ಹಣ ಹಿಂದಿರುಗಿಸುತ್ತಿದ್ದ. ಅದೇ ಸಮಯಕ್ಕೆ ಸರಿಯಾಗಿ ರಾಮನ್‌ರವರು ಯಾವುದೋ ಕೆಲಸ ನಿಮಿತ್ತ ಆಫೀಸಿಗೆ ಬಂದರು. ಆಗ ಆ ಅಭ್ಯರ್ಥಿ ಹೆಚ್ಚಿನ ಹಣವನ್ನು ತೆಗೆದುಕೊಂಡು ಹೋಗಿ ಬಿಡಬಹುದಾಗಿದ್ದರೂ, ಆತ ಪ್ರಾಮಾಣಿಕತೆಯಿಂದ ಹಿಂದಿರುಗಿಸಿ ಹೋಗುತ್ತಿದ್ದುದನ್ನು ಗಮನಿಸಿದ ಶ್ರೀ ರಾಮನ್, ತಕ್ಷಣವೇ ಆತನನ್ನು ಕರೆದು, 'ನಿನ್ನ ಪ್ರಾಮಾಣಿಕತೆ ನೋಡಿ ಸಂತೋಷವಾಯ್ತು, ಭೌತಶಾಸ್ತ್ರ ಗೊತ್ತಿರುವವರು ಬೇಕಾದಷ್ಟು ಜನ, ಸಿಕ್ಕಿಯಾರು. ಆದರೆ ಪ್ರಾಮಾಣಿಕತೆಯಿಂದ ನಡೆಯುವವರು ಅಪರೂಪ. ಪ್ರಾಮಾಣಿಕ ಸ್ವಭಾವದ ನೀನು ಹೆಚ್ಚಿನ ಭೌತಶಾಸ್ತ್ರ ಜ್ಞಾನ ಪಡೆಯುವುದು ಕಷ್ಟವೇನಲ್ಲ, ನಿನ್ನನ್ನೇ ಕೆಲಸಕ್ಕೆ ತೆಗೆದುಕೊಂಡಿದ್ದೇನೆ' ಎಂದು ಹೇಳಿ, ಸಿದ್ಧವಾಗುತ್ತಿದ್ದ ಆರ್ಡರನ್ನು ಬದಲಿಸಿ ನೇಮಕಾತಿಯ ಪತ್ರವನ್ನು ಈ ವ್ಯಕ್ತಿಗೇ ಕೊಡಲು ಆಫೀಸನವರಿಗೆ ತಿಳಿಸಿದರು. ಹೀಗೆ, ದೊಡ್ಡವರು ಯಾವಾಗಲೂ ದೊಡ್ಡ ಗುಣಗಳಿಗೆ ಮಹತ್ವಕೊಡುತ್ತಾರೆ.

ಉತ್ತಮ ಮೌಲ್ಯಗಳನ್ನು ಬದುಕುವ, ಮೌಲ್ಯಗಳಿಗೆ ಬೆಲೆ ಕೊಡುವ ಜನ ಸಮಾಜದಲ್ಲಿ ಈಗೀಗ ತುಂಬ ಕಡಿಮೆಯಾಗುತ್ತಿದ್ದಾರೆ. ಮೌಲ್ಯಾಧಾರಿತ ಜೀವನ ನಡೆಸುವ ವ್ಯಕ್ತಿ, ಮೃದುಸ್ವಭಾವದವನಿರುತ್ತಾನೆ. ಯಾರಿಗೂ ಕೆಡುಕು ಮಾಡುವುದಿಲ್ಲ. ಆದರೆ, ದುಷ್ಟನಾದವನು, ಬೇರೆಯವರಿಗಾಗುವ ತೊಂದರೆ ಬಗೆಗೆ ಚಿಂತಿಸದೆ, ಹೆದರಿಸಿ, ಬೆದರಿಸಿ, ಕೆಡುಕು ಮಾಡಿ, ತನ್ನ ಸ್ವಾರ್ಥ ಸಾಧಿಸಿಕೊಳ್ಳುತ್ತಾನೆ. ಈಗೀಗ ಅಂಥವರ ಸಂಖ್ಯೆ ಹೆಚ್ಚುತ್ತಿದೆ. ಹೀಗಾಗಲು ಕಾರಣವೇನೆಂದರೆ, ಟಿ.ವಿ., ಪತ್ರಿಕೆ, ಸಿನಿಮಾ ಮುಂತಾದ ಮಾಧ್ಯಮಗಳಲ್ಲಿ ಭಾರತೀಯರಿಗೆ ಪಾಶ್ಚಾತ್ಯರ ಐಷಾರಾಮೀ ಜೀವನವೇ ಕಾಣಿಸುತ್ತಿದೆ. ಅವರಂತೆ ಮಜಾ ಮಾಡಬೇಕು; ದಿಢೀರನೆ ಹಣಗಳಿಸಬೇಕು ಎಂಬ ಮನೋಭಾವ, ನಮ್ಮ ಯುವ ಪೀಳಿಗೆಯಲ್ಲಿ ಹರಡಿಬಿಟ್ಟಿದೆ. ತಮ್ಮ ಬೇಕು–ಬೇಡಗಳಿಗೆ, ದುಡಿದು, ಹೇರಳ ಹಣ ಸಂಪಾದಿಸುವುದು ಕಷ್ಟ. ಇಂಥ ಜನರಿಗಾದರೋ ಕಷ್ಟಪಡದೆ ಹಣ ಬೇಕು. ಅದಕ್ಕಾಗಿ ದುಷ್ಟ ಮಾರ್ಗಗಳಿಂದ ಸುಲಭವಾಗಿ ಹಣಗಳಿಸಲು, ಸುಳ್ಳು, ಕಳ್ಳತನ, ಮೋಸ, ವಂಚನೆ, ಕೊಲೆ, ಸುಲಿಗೆ ದರೋಡೆಗಳ ಹಾದಿ ಹಿಡಿದು, ಮಜಾ ಮಾಡತೊಡಗಿದ್ದಾರೆ. ಸಜ್ಜನರು ಇಂತಹ

ದುಷ್ಟರನ್ನು ಎದುರು ಹಾಕಿಕೊಂಡರೆ ಉಳಿಗಾಲವಿಲ್ಲೆಂದು, ದುಷ್ಟರಿಗೆ ಹೆದರಿ ಬದುಕುವ ಸ್ಥಿತಿ ಉಂಟಾಗಿದೆ. ಸಜ್ಜನರು ಹೇಗೂ ಕೆಡುಕು ಮಾಡುವುದಿಲ್ಲವೆಂದು ಅವರನ್ನು ಯಾರೂ ಲಕ್ಷ್ಯ ಮಾಡುವುದಿಲ್ಲ. ಹಾಗಾಗಿ, ಸಜ್ಜನರು ಮೂಲೆ ಗುಂಪಾಗುತ್ತಿದ್ದಾರೆ. ಈ ಸನ್ನಿವೇಶ ಗಮನಿಸಿದ ಯುವ ಪೀಳಿಗೆ, 'ಸಜ್ಜನಿಕೆಯಿಂದ ಸುಖವಿಲ್ಲ ದುಷ್ಟತನದಿಂದ ಆರಾಮವಾಗಿರಬಹುದಲ್ಲವೇ, ಎಲ್ಲರಿಂದ ಮನ್ನಣೆಯೂ ದೊರೆಯುವುದಲ್ಲವೇ' ಎಂದು ತಿಳಿಯುವಪರಿಸ್ಥಿತಿಯುಂಟಾಗಿದೆ. ಹಾಗಾಗಿ, ನಮ್ಮ ಯುವ ಪೀಳಿಗೆ ಮೌಲ್ಯಗಳನ್ನು ಗಾಳಿಗೆ ತೂರಿ, ಕಷ್ಟ ಪಡದೆ ಸುಖಪಡುವ, ಮಜಾ ಮಾಡುವತ್ತ ಹೋಗತೊಡಗಿದೆ. ಹೀಗಾಗಿ, ಒಟ್ಟು ಸಮಾಜವೇ ದುಷ್ಟತನದತ್ತ ಜಾರುವ ಭಯವಿದೆ. ಹಾಗಾದಾಗ ಜನ ನೆಮ್ಮದಿಯಿಂದ ಬದುಕಲು ಸಾಧ್ಯವಾಗುವುದಿಲ್ಲ. ಎಲ್ಲೆಡೆ ಹೊಡೆದಾಟ ಬಡಿದಾಟಗಳು, ಸಾವು ನೋವುಗಳು ಹಬ್ಬಿ, ಮನುಷ್ಯನ ಜೀವನವೇ ದುಸ್ತರವಾಗುತ್ತದೆ. ಯಾರಿಗೆ, ಯಾವಾಗ, ಏನು ಕೇಡೋ ಎಂಬ ಆತಂಕದಲ್ಲಿ ಬದುಕುವ ಸ್ಥಿತಿಯಿಂಟಾಗುತ್ತದೆ. ಅಂಥ, ಸಮಾಜ ಬಹು ಬೇಗ ನಾಶಹೊಂದುತ್ತದೆ.

ಆದುದರಿಂದ ಪುಟ್ಟೂ, ಜನರು ಮೌಲ್ಯಾಧಾರಿತ ಜೀವನ ಬದುಕುತ್ತಾ ಒಬ್ಬರಿಗೊಬ್ಬರು ಸ್ನೇಹ ಪ್ರೀತಿಯಿಂದ, ಅನ್ಯೋನ್ಯವಾಗಿ ಜೀವಿಸಬೇಕು. ಹಾಗಾದಾಗ, ಎಲ್ಲರೂ ನೆಮ್ಮದಿಯಿಂದ ಜೀವಿಸುತ್ತಾ ಪ್ರಗತಿಯತ್ತ ಧಾವಿಸಬಹುದು. ಇಂಥ ಸರ್ವಕ್ಷೇಮಕರ ಸಮಾಜ ರೂಪಿತವಾಗಲು, ಡಾ ॥ ಸಿ.ವಿ. ರಾಮನ್ ಇನ್‌ಸ್ಟಿಟ್ಯೂಟಿಗೆ ಬಂದ ಆ ಅಭ್ಯರ್ಥಿಯಂತೆ, ಪ್ರಾಮಾಣಿಕತೆ, ಸತ್ಯನಿಷ್ಠೆ, ಮುಂತಾದ ಮೌಲ್ಯಗಳನ್ನು ವ್ಯಕ್ತಿತ್ವದಲ್ಲಿ ಅಳವಡಿಸಿಕೊಳ್ಳಬೇಕು. ಅಷ್ಟೇ ಸಾಲದು. ಸಮಾಜವೂ ಸಹ ಸಿ.ವಿ. ರಾಮನ್ನರಂತೆ ಉತ್ತಮ ಗುಣಗಳನ್ನು ಪುರಸ್ಕರಿಸುವ, ಪ್ರೋತ್ಸಾಹಿಸುವ, ಮನೋಭಾವ ಪಡೆಯಬೇಕು. ಈ ವಿಷಯವನ್ನು ಈಗಲೇ ನೀನು ಮನದಟ್ಟು ಮಾಡಿಕೋ. ನೀನೂ ಹಾಗೇ ನಡೆದರೆ ಒಳ್ಳೆಯದು. ನಿನ್ನ ಪರಿಚಿತರಿಗೂ ಈ ವಿಷಯ ತಿಳಿಸಿ ಅನುಸರಿಸುವಂತೆ ಮಾಡು ಎಂದು ತಿಳಿಸುತ್ತಾ ಈ ಪತ್ರ ಇಲ್ಲಿಗೆ ಮುಗಿಸುವೆ.

ಇಂತಿ ನಿನ್ನ,

ಹಿತೈಷಿ.

■

## ೩೧. ಸ್ವಾಧ್ಯಾಯ

ಪ್ರೀತಿಯ ಪುಟ್ಟೂ,

ಈ ದಿನ 'ಸ್ವಾಧ್ಯಾಯ'ದ ಬಗ್ಗೆ 'ಹಂಸ' ಎಂಬ ಹೆಸರಿನಲ್ಲಿ ಬರೆದಿರುವ ಒಂದು ಪುಟ್ಟ ಲೇಖನ ಓದಿದೆ. ಅದು ಎಲ್ಲರಿಗೂ ಮಾರ್ಗದರ್ಶನ ನೀಡುವಂತಹುದಾಗಿದೆ. ವಿದ್ಯಾರ್ಥಿಗಳಂತೂ ತಿಳಿದುಕೊಳ್ಳಲೇ ಬೇಕಾದ ವಿಷಯ ಅದು. ಅದಕ್ಕಾಗಿಯೇ ಅದರ ಮುಖ್ಯಾಂಶಗಳು ನಿನಗೂ ತಿಳಿದಿರಲಿ ಎಂದು ಈ ಪತ್ರ ಬರೆಯುತ್ತಿರುವೆ.

ಓದುವುದು ತಿಳಿದುಕೊಳ್ಳಲಿಕ್ಕಾಗಿಯೇ ಅಲ್ಲವೆ? ಆದರೆ ಅನೇಕರು ಓದುತ್ತಾರೆ, ತಿಳಿದುಕೊಳ್ಳುವುದಿಲ್ಲ. ಹಾಗೆ ತಿಳಿದುಕೊಳ್ಳಲಾರದ ವಿದ್ಯಾರ್ಥಿಗಳೇ ತೊಳಲಾಡುವುದು. ವಿದ್ಯಾರ್ಥಿಗಳು ಶಾಲೆಯ ಪಾಠಗಳನ್ನು ಮನರಂಜನೆಗಾಗಿ ಓದುವುದಿಲ್ಲ; ಹವ್ಯಾಸಕ್ಕಾಗಿ ಓದುವುದಿಲ್ಲ; ಅರ್ಥಮಾಡಿಕೊಳ್ಳುವುದಕ್ಕಾಗಿ, ಮನನ ಮಾಡಿಕೊಳ್ಳುವುದಕ್ಕಾಗಿ ಓದುತ್ತಾರೆ ಅಲ್ಲವೆ? ಓದುವ ಉದ್ದೇಶವೇ ಅದು.

ಓದಿದ್ದನ್ನು ಚೆನ್ನಾಗಿ ತಿಳಿದುಕೊಳ್ಳಬೇಕು. ಅದನ್ನು ತನ್ನದನ್ನಾಗಿಸಿಕೊಳ್ಳಬೇಕು. ಇಲ್ಲದಿದ್ದಲ್ಲಿ ವಿದ್ಯಾರ್ಥಿಯ ಓದು ವ್ಯರ್ಥವಾಗುತ್ತದೆ. ಓದು ವ್ಯರ್ಥವಾಗದಿರ ಬೇಕಾದರೆ ಓದಿದ್ದನ್ನು ಚೆನ್ನಾಗಿ ತಿಳಿದುಕೊಂಡು ಮನನ ಮಾಡಿಕೊಳ್ಳಬೇಕು. ಇದಕ್ಕೆ 'ಸ್ವಾಧ್ಯಾಯ'ವೆಂದು ಹೇಳುತ್ತಾರೆ. ಸ್ವಾಧ್ಯಾಯದಲ್ಲಿ ಮೂರು ಬಗೆಗಳಿವೆ.

ಓದಿದುದನ್ನೇ ಮತ್ತೆ ಮತ್ತೆ ಓದಿ ಅರ್ಥ ಮಾಡಿಕೊಳ್ಳುವುದು. ಏಕೆಂದರೆ ಕೆಲವರಿಗೆ ಓದಿದಾಗ ಏನೂ ಅರ್ಥವಾಗುವುದೇ ಇಲ್ಲ. ಆಗ ಅರ್ಥವಾಗುವದಿಲ್ಲವೆಂದು ಬಿಡಬಾರದು. ಅರ್ಥಮಾಡಿಕೊಳ್ಳಬೇಕೆಂಬ ನಿರ್ಧಾರದಿಂದ ಮತ್ತೆ ಮತ್ತೆ ಓದಬೇಕು. ಅರ್ಥವಾಗುವವರೆಗೂ ಓದಬೇಕು. ಓದುತ್ತಾ ಓದುತ್ತಾ ಎಲ್ಲವೂ ಅರ್ಥವಾಗುತ್ತದೆ. ಹಾಗೆ ಓದಿದುದು ಎಂದಿಗೂ ಮರೆಯುವುದಿಲ್ಲ. ಓದಿದುದು ವ್ಯಕ್ತಿಯ ತಿಳಿವಳಿಕೆಯ ಒಂದು ಭಾಗವೇ ಆಗಿಬಿಡುತ್ತದೆ.

ಸ್ವಾಧ್ಯಾಯದ ಇನ್ನೊಂದು ರೀತಿ ಎಂದರೆ, ಓದಿದ್ದನ್ನು ಮತ್ತೆ ಮತ್ತೆ ಚಿಂತನ ಮಾಡುವುದು. ಅದರ ಬೇರೆ ಬೇರೆ ಮಗ್ಗುಲಗಳ ಬಗೆಗೆ ಯೋಚಿಸುವುದು. ಇಲ್ಲಿ ಓದಿದುದು ಅರ್ಥವಾಗುತ್ತದೆ. ಆದರೆ ಅದರ ಅರ್ಥವ್ಯಾಪ್ತಿ ವಿಚಾರಮಾಡಿದಂತೆ ವಿಶಾಲವಾಗುತ್ತಾ ಹೋಗುತ್ತದೆ. ಆ ಜ್ಞಾನ ನಮಗೆ ಅನೇಕ ಹೊಳಹುಗಳನ್ನು ತೋರಿಸುತ್ತದೆ. ಈ ರೀತಿ ವಿಚಾರಪರತೆಯಿಂದ ಓದಿದುದನ್ನು ನಾನಾ

ದೃಷ್ಟಿಕೋನದಿಂದ ಪರಿಷ್ಕರಿಸಿದಾಗ ಇನ್ನೂ ಅನೇಕ ಹೊಸವಿಚಾರಗಳು ಹೊಳೆಯುತ್ತವೆ. ಹೀಗೆ ವಿಚಾರಮಾಡಿ ತಿಳಿದುಕೊಂಡ ಓದು ಎಂದಿಗೂ ಮರೆಯುವುದಿಲ್ಲ. ಅದು ವ್ಯಕ್ತಿಯ ಶಾಶ್ವತ ಜ್ಞಾನವಾಗಿ ಉಳಿದುಬಿಡುತ್ತದೆ.

ಸ್ವಾಧ್ಯಾಯದ ಮತ್ತೊಂದು ಬಗೆಯೆಂದರೆ ಓದಿದ ವಿಷಯದ ಅರ್ಥದೊಂದಿಗೆ ಮನಸ್ಸಿನ ಅನುಸಂಧಾನ, ಓದಿದುದರ ಬಗ್ಗೆ ಆಳವಾಗಿ ವಿಚಾರಮಾಡುವುದು, ಓದಿದುದನ್ನು ಹೃದ್ಗತ ಮಾಡಿಕೊಳ್ಳುವುದು.

ಹೀಗೆ ಯಾವುದೇ ಒಂದು ರೀತಿಯಲ್ಲಿ 'ಸ್ವಾಧ್ಯಾಯ' ಮಾಡಿದರೂ ಓದಿದುದು ಸ್ಪಷ್ಟವಾಗಿ ತಿಳಿದುಬಿಡುತ್ತದೆ. ಒಮ್ಮೆ ಸ್ಪಷ್ಟವಾಗಿ ಬಿಟ್ಟರೆ ಅದು ಮನಸ್ಸಿನ ಭಾಗವೇ ಆಗಿಬಿಡುತ್ತದೆ. ಮತ್ತೆ ಮತ್ತೆ ಓದುವ ಅವಶ್ಯಕತೆ ಬೀಳುವುದಿಲ್ಲ. ಆದುದರಿಂದ ವಿದ್ಯಾರ್ಥಿ ತಾನು ಓದಬೇಕಾದ ವಿಷಯಗಳನ್ನು 'ಸ್ವಾಧ್ಯಾಯ' ಮಾಡುವುದು ಒಳ್ಳೆಯದು. ಇದರಿಂದ ಅವನು ಖಚಿತ ಜ್ಞಾನ ಪಡೆಯುತ್ತಾನೆ. ಪರೀಕ್ಷೆಯ ಭಯ ಅವನನ್ನು ಕಾಡಿಸುವುದಿಲ್ಲ. ಪರೀಕ್ಷೆಯ ಹಿಂದಿನ ರಾತ್ರಿಯೂ ಎಂದಿನಂತೆ ಸಮಾಧಾನವಾಗಿ ನಿದ್ದೆ ಮಾಡಬಹುದು.

ಪುಟ್ಟೂ, ನಿನ್ನ ಓದು ಫಲಪ್ರದವಾಗಬೇಕಾದರೆ ಓದಿದುದನ್ನು ಮತ್ತೆ ಶಾಂತವಾಗಿ, ಮೌನವಾಗಿ ಕುಳಿತು, ನಿನ್ನೊಳಗೇ ಮನನ ಮಾಡಿಕೊಳ್ಳುವ ಅಭ್ಯಾಸ ಬೆಳಸಿಕೋ.

ಸತತವಾಗಿ ಅಭ್ಯಾಸಮಾಡಿ, ಸ್ವಾಧ್ಯಾಯವನ್ನು ರೂಢಿಸಿಕೊಳ್ಳಬೇಕು. ಇದರಿಂದ ಏಕಾಗ್ರತೆಯು ಸಾಧಿಸಲ್ಪಡುತ್ತದೆ. ಮತ್ತು ಓದಿದ ವಿಷಯದ ಬಗೆಗೆ ಸಮಗ್ರವಾಗಿ ಯೋಚಿಸುವುದಕ್ಕೂ ಸಹಾಯಕವಾಗುತ್ತದೆ. ಸ್ವಾಧ್ಯಾಯವಿಲ್ಲದೆ ಪ್ರತಿಭೆಯು ಪ್ರಯೋಜನಕ್ಕೆ ಬರುವುದಿಲ್ಲ. ಒಬ್ಬ ವಿದ್ಯಾರ್ಥಿ ಪ್ರತಿಭಾವಂತನಿರಬಹುದು. ಆದರೆ ಅವನು ಸ್ವಾಧ್ಯಾಯ ಮಾಡದಿದ್ದರೆ, ಅವನ ಪ್ರತಿಭೆ ವ್ಯರ್ಥವಾಗಿ ಹೋಗುತ್ತದೆ. ಈಗಿನ ಬಹು ವಿದ್ಯಾರ್ಥಿಗಳು ಪರೀಕ್ಷೆ ಪಾಸು ಮಾಡಲಿಕ್ಕಾಗಿ, ವಿಷಯ ಸಂಗ್ರಹಣೆ ಮಾಡುತ್ತಾರೆ. ಅದು ಶುಷ್ಕ ಜ್ಞಾನ ಅಷ್ಟೆ. ಅಂತಹ ಜ್ಞಾನದಿಂದ ಯಾವ ಉಪಯೋಗವೂ ಇಲ್ಲ. ಆದರೆ ಸ್ವಾಧ್ಯಾಯ ಪರಿಪಕ್ವತೆಯ ಸಾಧನ. ಅದು ಮನಸ್ಸನ್ನು ವಿಕಸನಗೊಳಿಸುತ್ತದೆ. ವಿಕಸನಗೊಂಡ ಮನಸ್ಸಿಗೆ ಮಾತ್ರ ಲೋಕ ಕಲ್ಯಾಣ ಮಾಡುವುದು ಸಾಧ್ಯವಾಗುತ್ತದೆ. ಆದ್ದರಿಂದ ಪುಟ್ಟೂ, ನೀನು ಸ್ವಾಧ್ಯಾಯ ಮಾಡಿ ಮನಸ್ಸನ್ನು ವಿಕಸನಗೊಳಿಸಿಕೊ. ಆ ಮೂಲಕ ಸ್ವಂತಕಲ್ಯಾಣ, ಲೋಕಕಲ್ಯಾಣ ಎರಡನ್ನೂ ಸಾಧಿಸುವ ಶಕ್ತಿಯನ್ನು ಪಡೆಯುತ್ತೀಯೆ.

ಇನ್ನು ಮುಂದೆ ಶುಷ್ಕಜ್ಞಾನ ಪಡೆಯದೆ, ಶಾಶ್ವತಜ್ಞಾನ ಪಡೆಯುವ ರೀತಿಯಲ್ಲಿ ಓದುವೆಯೆಂದು ಆಶಿಸಿ ಪತ್ರ ಮುಗಿಸುವೆ.

ಇಂತಿ ನಿನ್ನ,
ಹಿತೈಷಿ.

■

## ೩೨. ಮಾತಿನ ಮಹತ್ವ

ಪ್ರೀತಿಯ ಪುಟ್ಟೂ,

ನಿನ್ನೆ ಪೇಟೆಯಿಂದ ಬರುತ್ತಿದ್ದೆ. ಒಂದು ಅಂಗಡಿಯ ಹತ್ತಿರ ಜನರ ಗುಂಪು ಕೂಡಿತ್ತು. ಏಕಿರಬಹುದೆಂದು ಕುತೂಹಲದಿಂದ ವಿಚಾರಿಸಲಾಗಿ, ಅಂಗಡಿಯವನು ಗ್ರಾಹಕನೊಡನೆ ತುಂಬಾ ಒರಟಾಗಿ ಮಾತನಾಡಲು, ಗ್ರಾಹಕನು ಸಿಟ್ಟಿಗೆದ್ದು ಜಗಳ ತೆಗೆದನಂತೆ. ಮಾತಿಗೆ ಮಾತು ಬೆಳೆದು ಹೊಡೆದಾಟಕ್ಕೆ ಕಾರಣವಾಯ್ತೆಂದು ತಿಳಿಯಿತು. ಅದನ್ನು ಕೇಳಿದಾಗ, ನಿನಗೆ 'ಮಾತಿನ ಮಹತ್ವ'ದ ಬಗ್ಗೆ ಒಂದು ಪತ್ರೆ ಬರೆಯಬೇಕೆನ್ನಿಸಿತು. ಅದಕ್ಕಾಗಿ ಈ ಪತ್ರ.

ನೋಡು ಮರಿ, ಒಂದು ಗಾದೆಯ ಮಾತಿದೆ. 'ಮಾತು ಬಲ್ಲವನಿಗೆ ಜಗಳವಿಲ್ಲ ಊಟ ಬಲ್ಲವನಿಗೆ ರೋಗವಿಲ್ಲ.' ವಿವೇಕದಿಂದ ಸಂದರ್ಭವರಿತು, ನಾವು ಯಾರೊಡನೆ ಮತನಾಡುತ್ತಿದ್ದೇವೆ; ಏಕೆ ಮಾತಾಡುತ್ತಿದ್ದೇವೆ, ಹೇಗೆ ಮಾತಾಡಬೇಕು ಎಂಬುದನ್ನು ಅರಿತು ಸಮಯೋಚಿತವಾಗಿ ಮಾತನಾಡಿದರೆ, ಯಾವ ಗೊಂದಲಕ್ಕೂ, ಘರ್ಷಣೆಗೂ ಅವಕಾಶವಿರುವುದಿಲ್ಲ. ಮೃದುವಚನ ಅಸಾಧ್ಯವಾದುದನ್ನು ಸಾಧ್ಯವಾಗಿಸುತ್ತದೆ. ಮಾತಿನ ಶಕ್ತಿ ಅದ್ಭುತ. 'ಮಾತು ಬಲ್ಲವ ಮಾಣಿಕ್ಯ ತಂದ; ಮಾತು ಬಾರದವ ಜಗಳ ತಂದ' ಎಂಬ ಅನುಭವದ ಮಾತು ನೂರಕ್ಕೆ ನೂರು ಸತ್ಯ.

ಮಾತು ಹೇಗಿರಬೇಕೆಂಬುದನ್ನು ಬಸವಣ್ಣನವರು ತುಂಬಾ ಸುಂದರವಾಗಿ ಕೆಳಗಿನ ವಚನದಲ್ಲಿ ಬಿಂಬಿಸಿದ್ದಾರೆ. ಓದಿ ನೋಡು.

ನುಡಿದರೆ ಮುತ್ತಿನ ಹಾರದಂತಿರಬೇಕು.
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು
ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು.
ನುಡಿದರೆ ಲಿಂಗಮೆಚ್ಚಿ ಅಹುದಹುದೆನಬೇಕು.
ನುಡಿಯೊಳಗಾಗಿ ನಡೆಯದಿದ್ದೊಡೆ
ಕೂಡಲ ಸಂಗಮನೆಂತೊಲಿವನಯ್ಯಾ? ಎಂದಿದ್ದಾರೆ.

ಹೀಗೆ ಬಸವಣ್ಣನವರು, ಮಾತಿನ ರೀತಿ ಹೇಗಿರಬೇಕೆಂಬುದನ್ನು ನಮಗೆ ಈ ವಚನದ ಮೂಲಕ ತಿಳಿಯ ಹೇಳಿದ್ದಾರೆ. ಏಕೆಂದರೆ ನಮ್ಮ ಮಾತುಗಳೇ ನಮ್ಮ ಸೋಲು-ಗೆಲುವುಗಳಿಗೆ, ಸುಖ-ದುಃಖಗಳಿಗೆ, ಮಿತ್ರತ್ವ-ಶತ್ರುತ್ವಗಳಿಗೆ ಕಾರಣ. ಆದುದರಿಂದ ಮಾತನಾಡುವಾಗ ಮೈಯೆಲ್ಲಾ ಕಣ್ಣಾಗಿ, ಬಹು ಎಚ್ಚರಿಕೆಯಿಂದ, ನಮ್ಮ ಮಾತುಗಳು ಆಡಿದವರ ಮೇಲೆ ಎಂತಹ ರೀತಿಯ ಪರಿಣಾಮ ಬೀರಬಲ್ಲವು ಎಂಬುದನ್ನು ಅರಿತು ದುಷ್ಪರಿಣಾಮವಾಗದ ರೀತಿಯಲ್ಲಿ ವಿವೇಚಿಸಿ ಮಾತನಾಡಬೇಕು. ಹೀಗೆ ಮಾತನಾಡುವ ರೂಢಿ ಮಾಡಿಕೊಂಡರೆ, ಸದಾಕಾಲವೂ, ಔಚಿತ್ಯ ಪೂರ್ಣವಾಗಿ, ಅಹಿತ ಉಂಟುಮಾಡದ ರೀತಿಯಲ್ಲಿ ಮಾತನಾಡುವುದೇ ರೂಢಿಯಾಗಿ ಬಿಡುತ್ತದೆ.

ಬಸವಣ್ಣನವರ ಮೇಲಿನ ವಚನದ ವಿಶ್ಲೇಷಣೆ ಹೀಗಿದೆ –

ಮುತ್ತಿನ ಹಾರದಲ್ಲಿ ಬಿಡಿ ಮುತ್ತುಗಳನ್ನು ಇಡಿಯಾಗಿ ಕೂಡಿಸಿ, ಅಂದವಾದ, ಆಕರ್ಷಕವಾದ ಸರವಾಗುವಂತೆ ಜೋಡಿಸಿರುತ್ತಾರೆ. ಹಾಗೆ ಆಡುವ ಬಿಡಿ ಬಿಡಿ ಮಾತುಗಳು ಅರ್ಥಪೂರ್ಣವಾಗಿ, ಹೊಂದಾಣಿಕೆಯಾಗುವಂತೆ ಎಲ್ಲರ ಮನಸ್ಸನ್ನು ಆಕರ್ಷಿಸುವಂತೆ, ಮುದನೀಡುವಂತೆ ಜೋಡಣೆಯಾಗಬೇಕು. ನುಡಿದ ಮಾತುಗಳು ಸ್ಫಟಿಕದಂತೆ ಶುಭ್ರವಾಗಿ, ಪ್ರಕಾಶಮಾನವಾಗಿ, ಕಪಟ-ಕಲ್ಮಷವಿಲ್ಲದೆ ಒಳ-ಹೊರಗೆ ಒಂದಾಗಿ ಪಾರದರ್ಶಕವಾಗಿರಬೇಕು. ಆಡಿದ ಮಾತುಗಳನ್ನು ಭಗವಂತನು ಕೇಳಿದರೂ, ಅವನೂ ಸಹ ಮೆಚ್ಚಿ, 'ಅಹುದು ಇದು ಸರಿ – ಇದು ನಿಜ' ಎಂದು ಒಪ್ಪುವಂತಿರಬೇಕು ! ಯಾರೂ ಅಲ್ಲಗಳೆಯುವಂತಿರಬಾರದು. ಹೀಗಿದ್ದಾಗ ಮಾತ್ರ ದೇವರು ಮೆಚ್ಚುತ್ತಾನೆ. ಒಲಿಯುತ್ತಾನೆ. ಇಲ್ಲದಿದ್ದಲ್ಲಿ ಒಂದಲ್ಲ ಒಂದು ದಿನ ಅದರ ಫಲ ಅನುಭವಿಸಿಯೇ ತೀರಬೇಕಾಗುತ್ತದೆ.

ದುರದೃಷ್ಟವಶಾತ್, ಈಗಿನ ಕಾಲದಲ್ಲಿ ಬಹಳಷ್ಟು ಜನರು 'ಮಾತಿನ ಜಾಣ' ರಾಗಿದ್ದಾರೆ. ಅವನ ಮಾತುಗಳನ್ನು ಕೇಳಿದವರು ಮಾರು ಹೋಗಬೇಕು. ಹಾಗೆ ಮಾತನಾಡುತ್ತಾರೆ. 'ಈ ವ್ಯಕ್ತಿ ಎಷ್ಟು ಯೋಗ್ಯ, ಎಷ್ಟು ಒಳ್ಳೆಯವನು' ಎಂದು ಕೊಳ್ಳಬೇಕು; ಹಾಗಿರುತ್ತದೆ ಅವರ ಮಾತಿನ ರೀತಿ. ಆದರೆ ಒಳಹೊಕ್ಕು ನೋಡಿದರೆ ಎಲ್ಲಾ ತಿರುವು ಮುರುವು. ಅವರ ನುಡಿಗೂ-ನಡೆಗೂ ಸಂಬಂಧವೇ ಇಲ್ಲ. ಆಡುವುದು ಒಂದಾದರೆ ಮಾಡುವುದು ಮತ್ತೊಂದು. ಅಂತಹ ಸುಳ್ಳುಗಾರರು ಬಹಳ ಅಪಾಯಕಾರಿಗಳು. ಅವರು ನಂಬಿಸಿ ತಲೆ ಹೊಡೆಯುವಂತಹ ಜನ. ಅಂತಹವರು ಕುಟುಂಬದಲ್ಲಿರಲಿ, ಸಮಾಜದಲ್ಲಿರಲಿ ಎಲ್ಲೇ ಇರಲಿ, ಅಲ್ಲಿ ಅಶಾಂತಿ, ಅವನತಿ, ಕಷ್ಟ-ನಷ್ಟಗಳು ತಪ್ಪುವುದಿಲ್ಲ, ಇಂತಹ ದುಷ್ಟಜನರಿಗೆ ದೇವರು ಒಲಿಯುವುದಿಲ್ಲವೆಂದು ಬಸವಣ್ಣನ ಹೇಳಿಕೆ. ಮತ್ತೊಂದು ಕಡೆ, 'ನುಡಿಯಲ್ಲಿ

ಎಚ್ಚತ್ತು ನಡೆಯಲ್ಲಿ ತಪ್ಪಿದಡೆ ಹಿಡಿದಿದ್ದ ಲಿಂಗವು ಘಟಸರ್ಪವಯ್ಯಾ,' ಎಂದು ನುಡಿದು ಅಂತಹವರಿಗೆ ಅವರು ಹಿಡಿದ ಲಿಂಗವೇ ಘಟಸರ್ಪವಾಗುವುದೆಂದು ಎಚ್ಚರಿಸಿದ್ದಾರೆ. ಎಂದರೆ ಒಂದಲ್ಲ ಒಂದು ದಿನ ಅಂತಹ ಜನಕ್ಕೆ ಕೇಡಾಗಿಯೇ ತೀರುತ್ತದೆ – ಇದರ ಅರ್ಥ.

ಪುಟ್ಟೂ, ಕೆಟ್ಟಮಾತು ಇಡೀ ವಾತಾವರಣವನ್ನೇ ಹಾಳು ಮಾಡಿಬಿಡುತ್ತದೆ. ಆದುದರಿಂದ ಒಳ್ಳೆಯ ಮಾತಿನ ಮಹತ್ತನ್ನು ಅರಿತು, ಯಾವಾಗಲೂ ಒಳಿತಾಗಿ, ಮೃದುವಾಗಿ ಸ್ನೇಹಪೂರ್ಣವಾಗಿ ಒಳಿತನ್ನು ಉಂಟುಮಾಡುವ, ಇತರರ ನೋವಿಗೆ ಕಾರಣವಾಗದ, ದ್ವೇಷಕ್ಕೆ, ವಿರಸಕ್ಕೆ, ಕೆಡುಕಿಗೆ ಆಸ್ಪದವಿಲ್ಲದ ರೀತಿಯಲ್ಲಿ ಮಾತನಾಡುವುದನ್ನು ರೂಢಿಸಿಕೊ. ಮಾತಿನಲ್ಲಿ ಪ್ರಾಮಾಣಿಕತೆ ಇರಬೇಕು, ಸಜ್ಜನಿಕೆ ಇರಬೇಕು. ನಾವಿರುವ ವಾತಾವರಣದಲ್ಲಿ ಸ್ನೇಹ, ಪ್ರೀತಿ, ವಿಶ್ವಾಸಗಳು ವೃದ್ಧಿಸುವಂತೆ ಇರಬೇಕು. ಇದರಿಂದ ಎಲ್ಲರೂ ಸುಖವಾಗಿರಲು ಸಾಧ್ಯ ಎಂಬುದನ್ನು ನೆನಪಿಟ್ಟುಕೊಂಡು ಬಾಳು ಮಗೂ ಮರೆಯಬೇಡ.

ಇಂತಿ ನಿನ್ನ,
ಹಿತೈಷಿ.

■

## ೩೩. ಸತ್ ಸಂಕಲ್ಪ

ಪ್ರೀತಿಯ ಪುಟ್ಟೂ,

ಈ ದಿನದ ಒಂದು ಘಟನೆ ನಿನಗೆ ಪತ್ರ ಬರೆಯಬೇಕೆಂದು ಪ್ರೇರೇಪಿಸಿದೆ. ಅದೆಂತಹ ಘಟನೆಯಪ್ಪಾ ಎಂದು ನೀನಾಗಲೇ ಕುತೂಹಲಗೊಂಡಿರಬೇಕು. ಹೇಳುತ್ತೇನೆ ಸ್ವಲ್ಪ ನಿಧಾನಿಸು. ನೋಡು ಮಗೂ, ನಮ್ಮ ಜೀವನದಲ್ಲಿ ನಡೆಯುವ ಘಟನೆಗಳಿಂದ ನಾವು ಮಾಡುವ ಕೆಲಸಗಳಲ್ಲಿ ಸರಿ ಯಾವುವು? ತಪ್ಪು ಯಾವುವು? ಎಂದು ತಿಳಿಯಬಹುದು. ಎಲ್ಲಿ ತಪ್ಪಿದೆ? ಏಕೆ ತಪ್ಪಿದೆ? ಎಂದು ಕಂಡು ಹಿಡಿದುಕೊಂಡು, ಆ ತಪ್ಪುಗಳು ಮತ್ತೆ ಮರುಕಳಿಸದಂತೆ ಉಪಾಯಗಳನ್ನು ಯೋಜಿಸಿಕೊಳ್ಳಬಹುದಾಗಿದೆ.

ನೋಡು ಪುಟ್ಟೂ, ನಮ್ಮ ಮನೆಯ ಹತ್ತಿರದ ಒಬ್ಬ ಹುಡುಗ ಆಗಾಗ್ಗೆ ತನಗೆ ತಿಳಿಯದ ವಿಷಯಗಳನ್ನು ಚರ್ಚಿಸಲು ನನ್ನ ಬಳಿ ಬರುತ್ತಿದ್ದ. ಅವನಿಗೆ ಸಿಗರೇಟ್ ಸೇದುವ ದುರಭ್ಯಾಸವಿತ್ತು. ಆ ದುಶ್ಚಟವನ್ನು ಬಿಡಿಸಲು ನಾನು ಅನೇಕ ರೀತಿಯಿಂದ ಪ್ರಯತ್ನಿಸಿದೆ. ನನ್ನ ಮಾತುಗಳನ್ನು ಕೇಳಿದ ಅವನಿಗೆ

'ಬಿಡಬೇಕು' ಎನ್ನಿಸುತ್ತಲೂ ಇತ್ತು. ಬಿಡಲು ನಿರ್ಧರಿಸುತ್ತಲೂ ಇದ್ದ. ಆದರೆ ಕೆಲವು ದಿನಗಳಲ್ಲಿ ಮತ್ತೆ ಪ್ರಾರಂಭಿಸುತ್ತಿದ್ದ. ಆಗ ನಾನು ಒಂದು ಗಡುವು ಕೊಟ್ಟು, ಇಷ್ಟು ಅವಧಿಯಲ್ಲಿ ನೀನು ಈ ಚಟವನ್ನು ಬಿಡಲೇಬೇಕೆಂದು ಕಡ್ಡಾಯ ಮಾಡಿದೆ, ಒಪ್ಪಿದ, ಆದರೆ ಮತ್ತೆ ಪ್ರಾರಂಭಿಸಿದ. ಅಲ್ಲದೆ, ಅದನ್ನು ಬಿಡಲು ತನಗಾಗದಿರುವ ಅಸಹಾಯಕತೆಗಳ ಬಗ್ಗೆ ವಿವರಿಸಿದಾಗ ನಾನು ಅವನಿಗೆ ಅನೇಕ ಮಾರ್ಗದರ್ಶನದ ಮಾತುಗಳನ್ನು ತಿಳಿಸಿದೆ. ಸತ್ಸಂಕಲ್ಪದ ಮಹತ್ವ ವಿವರಿಸಿದೆ. ಅದು ಅವನ ಮೇಲೆ ಹೇಗೆ ಪರಿಣಾಮ ಬೀರಿತು ಎಂದು ಅವನೇ ಬಂದು ಇಂದು ವಿವರಿಸಿದ. ಇದರಿಂದ ಉತ್ಸಾಹಿತಳಾದ ನನಗೆ, ನಿನಗೂ ಅವುಗಳನ್ನು ತಿಳಿಸಬೇಕೆಂದೆನ್ನಿಸಿತು. ಏಕೆಂದರೆ Prevention is better than cure. ಅಂತಹ ದುಶ್ಚಟಗಳಿಗೆ ಬಲಿಯಾಗುವ ಮೊದಲೇ, ಅವುಗಳ ಆಮಿಷಕ್ಕೆ ಒಳಗಾಗದೆ, ಹೇಗೆ ದೂರವಿರಬೇಕೆಂಬುದನ್ನು ತಿಳಿದಿದ್ದರೆ, ಅಡ್ಡದಾರಿ ಹಿಡಿಯುವ ಪ್ರಸಂಗ ಬಂದರೆ, ಆ ತಿಳಿವಳಿಕೆ ನಿನಗೆ ದಾರಿದೀವಿಗೆಯಾಗಿ ಮಾರ್ಗದರ್ಶನ ನೀಡಬಲ್ಲದು. ಆದುದರಿಂದ ಈ ಕೆಳಗಿನ ವಿಷಯಗಳನ್ನು ಚೆನ್ನಾಗಿ ಮನನ ಮಾಡಿಕೊ.

ನೋಡು ಪುಟ್ಟೂ, ನಾವು ಯಾವುದಾದರೂ ಒಳ್ಳೆಯ ಕೆಲಸ ಮಾಡಬೇಕೆಂದು ನಿರ್ಧರಿಸಿದಾಗ ಅಥವಾ ಕೆಟ್ಟ ಕೆಲಸ ಮಾಡಲೇಬಾರದೆಂದು ಸಂಕಲ್ಪ ಮಾಡುವಾಗ 'ದೃಢ ನಿರ್ಧಾರ' ಬೇಕೇ ಬೇಕು. ಕೇವಲ ಸಂಕಲ್ಪ ಸಾಕಾಗುವುದಿಲ್ಲ. ತಾತ್ಕಾಲಿಕವಾಗಿ ಸಂಕಲ್ಪ ಮಾಡುವುದು, ಯಾವುದೋ ಒಂದು ಕಾರಣಕ್ಕಾಗಿ ಅದನ್ನು ಕೈಬಿಡುವುದು ಸುಸಂಸ್ಕೃತರ ಲಕ್ಷಣವಲ್ಲ. ಒಳ್ಳೆಯದೆಂದು ನಿರ್ಧರಿಸಿ ಸಂಕಲ್ಪ ಮಾಡಿದ ಮೇಲೆ ಅದನ್ನು ಸಾಧಿಸಿಯೇ ತೀರಬೇಕು. ಕೆಟ್ಟದೆಂದು ಕಂಡುಕೊಂಡು ಅದನ್ನು ಬಿಡಬೇಕೆಂದು ಸಂಕಲ್ಪ ಮಾಡಿದರೆ ಅದನ್ನು ತಪ್ಪದೇ ತ್ಯಜಿಸಲೇಬೇಕು.

ಸಂಕಲ್ಪ ಯಾವಾಗಲೂ 'ದೃಢ ಸಂಕಲ್ಪ'ವಾಗಬೇಕು. ಕೇವಲ ಸಂಕಲ್ಪವಾದರೆ ಸಾಲದು. ಸಂಕಲ್ಪ ಸತ್ಸಂಕಲ್ಪವಾಗಬೇಕು. ಎಂದಿಗೂ ದುಷ್ಟ ಸಂಕಲ್ಪ ಮಾಡಬಾರದು. ಒಬ್ಬರ ಮೇಲೆ ಸೇಡು ತೀರಿಸಿಕೊಳ್ಳುತ್ತೇನೆ. ಅಥವಾ ಅವರನ್ನು ನಾಶ ಮಾಡುತ್ತೇನೆ ಎಂದು ಸಂಕಲ್ಪ ಮಾಡವುದು ಅನಾಗರಿಕತೆಯ ಲಕ್ಷಣ. ಅಂತಹ ದುಷ್ಟ ಸಂಕಲ್ಪಗಳಿಂದ ದೂರವಿರಬೇಕು. ಸತ್ಸಂಕಲ್ಪ ಮಾಡಿ ಅದನ್ನು ಸಾಧಿಸಿಯೇ ತೀರುವೆನೆಂಬ ದೃಢಸಂಕಲ್ಪದಿಂದ ಅದರಂತೆ ನಡೆಯುವ ಯೋಜನೆ ಹಾಕಿಕೊಳ್ಳಬೇಕು. ಆ ಸಂಕಲ್ಪವನ್ನು ನೆರವೇರಿಸುವ ದೃಢ ನಿಶ್ಚಯವು ಅದನ್ನು ಸಾಧಿಸುವ ಯೋಜನೆಯ ಬೆಂಬಲ ಪಡೆದಿರಬೇಕು.

ಹೀಗೆ ಯಾವುದೇ ಉತ್ತಮ ಗುರಿಯನ್ನು ಮುಟ್ಟೇ ತೀರುತ್ತೇನೆಂಬ ನಿರ್ಧಾರ, ಆ ಗುರಿ ಮುಟ್ಟಲು ಮಾಡುವ ಸತತ ಪ್ರಯತ್ನಗಳು ವ್ಯಕ್ತಿಯ ಮನೋಬಲವನ್ನು

ಹೆಚ್ಚಿಸುತ್ತವೆ. ದೃಢ ನಿರ್ಧಾರ ಪ್ರವೃತ್ತಿಯನ್ನು ಬೆಳೆಸುತ್ತವೆ. ಪರಿಸ್ಥಿತಿಗಳನ್ನು ಸಮರ್ಥವಾಗಿ ಎದುರಿಸುವ ಶಕ್ತಿಯನ್ನು ನೀಡುತ್ತವೆ. ಕೆಡುಕಿನ ಕಡೆಗೆ ಹೋಗದಂತೆ ಮನಸ್ಸನ್ನು ಹಿಡಿತದಲ್ಲಿ ಇಟ್ಟುಕೊಳ್ಳುವ ಶಕ್ತಿ ಕೊಡುತ್ತವೆ. ಎಷ್ಟೆಲ್ಲಾ ಹೋರಾಟದಿಂದ ಗುರಿಯನ್ನು ಮುಟ್ಟಿದಾಗ ವ್ಯಕ್ತಿಗೆ ಆನಂದ ದೊರೆಯುತ್ತದೆ ; ಆತ್ಮವಿಶ್ವಾಸ ಮೂಡುತ್ತದೆ. ಅವನಲ್ಲಿ ಅಡಗಿರುವ ಸುಪ್ತಶಕ್ತಿಗಳನ್ನು ಬಳಕೆ ಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಸತ್ಸಂಕಲ್ಪದಿಂದ ಒಳ್ಳೆಯ ಬದುಕನ್ನು ಬದುಕುವುದರಿಂದ, ನಾವೂ ಸುಖವಾಗಿರುವುದಲ್ಲದೆ, ಇತರರಿಗೂ ಯಾವ ಕೆಡುಕೂ ನಮ್ಮಿಂದ ಆಗುವುದಿಲ್ಲ. ಹೀಗೆ ಒಳ್ಳೆಯ ಕುಟುಂಬ ಜೀವನಕ್ಕೆ, ಸಾಮಾಜಿಕ ಜೀವನಕ್ಕೆ ರಾಷ್ಟ್ರೀಯ ಜೀವನಕ್ಕೆ ನಮ್ಮದು ಒಂದು ಅಳಿಲು ಸೇವೆ ಮಾಡಲು ಸಾಧ್ಯವಾಗಿ ತೃಪ್ತ ಜೀವನ ಬದುಕಬಹುದಾಗುತ್ತದೆ.

ಆದುದರಿಂದ ಪುಟ್ಟೂ, ಸತ್ಸಂಕಲ್ಪಗಳನ್ನು ಕೈಗೊಳ್ಳುವ, ಅವುಗಳನ್ನು ಸಾಧಿಸುವ, ಸಂಕಲ್ಪ ಸಾಧಿಸುವವರೆಗೆ ಬಿಡದಿರುವ ಪ್ರವೃತ್ತಿಯನ್ನು ಈಗಿನಿಂದಲೇ ಬೆಳೆಸಿಕೊಂಡು ಜೀವನದಲ್ಲಿ ನೀನೂ ಒಳಿತಾಗಿ ಬಾಳು. ಇತರರೂ ಒಳಿತಾಗಿ ಬಾಳಲು ನಿನ್ನ ಸಹಕಾರ ಕೊಡು ಎಂದು ಹೇಳುತ್ತಾ ಪತ್ರ ಮುಗಿಸುವೆ.

ಇಂತಿ ನಿನ್ನ,
ಹಿತೈಷಿ.

■

## ೩೪. ರಾಷ್ಟ್ರಪ್ರೇಮಿ : ಶ್ರೀ ಗುಲ್ಜಾರಿಲಾಲ್ ನಂದಾ

ಪ್ರೀತಿಯ ಪುಟ್ಟೂ,

ನಮಗೆ ಸ್ವತಂತ್ರ ದೊರೆತು, ಈ ವರ್ಷ (೧೯೯೭) ಕ್ಕೆ ಐವತ್ತು ವರ್ಷಗಳು ಮುಗಿದವು. ಪರತಂತ್ರದಿಂದ ಪಾರಾಗಿ, 'ನಮ್ಮ ದೇಶ ನಮ್ಮದು' ಎಂದು ಬದುಕಲು, ಭಾರತೀಯರು ಬ್ರಿಟಿಷರ ವಿರುದ್ಧ ಮಾಡಿದ ಹೋರಾಟವೆಷ್ಟು ! ಅನೇಕರು ಮನೆ–ಮಠ ಎಲ್ಲಾ ತೊರೆದು, ರಾಷ್ಟ್ರಕ್ಕಾಗಿ ತಮ್ಮ ಪ್ರಾಣ ತೆತ್ತರು. ತನು–ಮನ–ಧನಗಳನ್ನು ದೇಶಕ್ಕಾಗಿ ಅರ್ಪಿಸಿ, ರಾಷ್ಟ್ರಪ್ರೇಮವನ್ನು ಮೆರೆದ ಅವರ ನಿಸ್ವಾರ್ಥ ಬದುಕು ಹಾಗೂ ತ್ಯಾಗ ಜೀವನದಿಂದ ಇಂದು ಭಾರತೀಯರು ಗೌರವದಿಂದ ಜಗತ್ತಿನಲ್ಲಿ ಬದುಕಲು ಸಾಧ್ಯವಾಗಿದೆ. ಸ್ವತಂತ್ರ ಪಡೆದ ಭಾರತ, ಪ್ರಜಾಪ್ರಭುತ್ವ ಮಾದರಿಯ ಸರ್ಕಾರವನ್ನು ಹೊಂದಿದೆ.

ಪ್ರಜಾಪ್ರಭುತ್ವದಲ್ಲಿ ಪ್ರಜೆಗಳೇ ಪ್ರಭುಗಳು. ಆದುದರಿಂದ ಪ್ರಜೆಗಳ ಮನೋಭಾವ

ಎಂದರೆ, ಅವರ ರಾಷ್ಟ್ರಪ್ರೇಮ, ಸ್ವಾರ್ಥರಹಿತವಾದ ಬದುಕು, ವಿದ್ಯೆ, ದಕ್ಷತೆ ಮುಂತಾದವುಗಳು ರಾಷ್ಟ್ರದ ಜೀವಾಳ. ಆದರೆ ಇಂದಿನ ಭಾರತದ ಪರಿಸ್ಥಿತಿ ಏನಾಗಿದೆ? ಬೇಲಿಯೇ ಎದ್ದು ಹೊಲವನ್ನು ಮೇದಂತಾಗಿದೆ. ರಕ್ಷಿಸುವವರೇ ಭಕ್ಷಿಸುವವರಾಗಿದ್ದಾರೆ. ಅಂದು ದೇಶಕ್ಕಾಗಿ ಯಾವ ತ್ಯಾಗ ಮಾಡಲೂ ಸಿದ್ಧರಿದ್ದವರೂ ಸಹ ಇಂದು ರಾಷ್ಟ್ರವನ್ನು ಹರಿದು ತಿನ್ನುತ್ತಿದ್ದಾರೆ. ನಮ್ಮ ಸಂಸ್ಕೃತಿ, ಮೌಲ್ಯಗಳು ಮಹತ್ವವನ್ನು ಕಳೆದುಕೊಂಡು ಮೂಲೆಗುಂಪಾಗಿವೆ. ರಾಷ್ಟ್ರದ ನಾಯಕರು, ಅಧಿಕಾರಿಗಳು, ಸಾಮಾನ್ಯರು ಎಲ್ಲರೂ ಸ್ವಾರ್ಥಿಗಳಾಗಿದ್ದಾರೆ, ಭ್ರಷ್ಟಾಚಾರಿಗಳಾಗಿದ್ದಾರೆ, ದೇಶ ಮುಳುಗಿದರೆ ತಾವೂ ಉಳಿಯುವುದಿಲ್ಲ ಎಂಬ ಸಾಮಾನ್ಯ ತಿಳಿವಳಿಕೆ ಸಹ ಅವರಿಗಿಲ್ಲವಾಗಿದೆ. ಭ್ರಷ್ಟಾಚಾರಿಗಳ ಬದುಕು, 'ದುಷ್ಟರಾಗಿದ್ದರೇ ಈಗಿನ ಕಾಲದಲ್ಲಿ ಉಳಿಗಾಲ, ಇಲ್ಲದಿದ್ದಲ್ಲಿ ಕಷ್ಟ ಕಟ್ಟಿಟ್ಟದ್ದು' ಎಂಬ ಅನಿಸಿಕೆ ಮೂಡುವಂತೆ ಮಾಡಿದೆ. ಇಂತಹ ಅನಿಸಿಕೆ ರಾಷ್ಟ್ರವೇ ಅಧೋಗತಿಗೆ ಇಳಿಯುವಂತೆ ಎಸಗಿದೆ. ಕೆಲವು ಸಮೂಹ ಮಾಧ್ಯಮಗಳು ನಮ್ಮ ಸಂಸ್ಕೃತಿ ಮಣ್ಣು ಮುಕ್ಕುವಂತೆ ಮಾಡುತ್ತಿವೆ; ನಮ್ಮ ಪೀಳಿಗೆಯನ್ನು ದಿಕ್ಕುಗೆಡಿಸುತ್ತಿವೆ. ಭಾರತೀಯತೆ ಕಣ್ಮರೆಯಾಗುವಂತೆ ಮಾಡುವಲ್ಲಿ ಪ್ರತಿಯೊಬ್ಬರೂ ಒಂದಲ್ಲ ಒಂದು ರೀತಿಯಲ್ಲಿ ಕಾರಣರಾಗಿದ್ದಾರೆ. ಇದನ್ನೆಲ್ಲಾ ಗಮನಿಸಿದರೆ, ನಮ್ಮ ಭಾರತದ ಭವಿಷ್ಯ ಎಂತಹ ದುರಂತವನ್ನು ಎದುರಿಸಬೇಕಾಗುತ್ತದೋ ಎನ್ನಿಸಿ, ನಡುಗುವಂತಾಗುತ್ತದೆ.

ಪುಟ್ಟೂ, ನಮ್ಮ ದೇಶದಲ್ಲಿ ಎಂತೆಂತಹ ಮಹನೀಯರು ಇದ್ದರು ಗೊತ್ತೆ? ಗಾಂಧೀಜಿ, ಲೋಕಮಾನ್ಯ ತಿಲಕ್, ಸುಭಾಷ್‌ಚಂದ್ರ ಬೋಸ್, ಕಾರ್ನಾಡ್ ಸದಾಶಿವರಾಯರು, ಚಿತ್ತರಂಜನದಾಸ್, ಲಾಲ್‌ಬಹಾದ್ದೂರ ಶಾಸ್ತ್ರಿ, ನಿಜಲಿಂಗಪ್ಪ ಗುಲ್ಜಾರಿಲಾಲ್ ನಂದಾ ಮುಂತಾದವರ ಹೆಸರನ್ನು ಕೇಳಿದರೆ ಮನಸ್ಸು ಗೌರವದಿಂದ ಬಾಗುವಂತಾಗುತ್ತದೆ. ಅವರು ಅಂತಹ ನಿಷ್ಠಾವಂತ, ಪ್ರಾಮಾಣಿಕ, ಸರಳ, ಸುಂದರ ಬದುಕನ್ನು ಬದುಕಿದರು. ಅವರ ಜೀವನವೇ ಮುಂದಿನ ಪೀಳಿಗೆಗೆ ಒಂದು ನೀತಿ ಪಾಠವಾಗಿದೆ. ಸದ್ಯದಲ್ಲಿ ನಿಜಲಿಂಗಪ್ಪ ಹಾಗೂ ಗುಲ್ಜಾರಿಲಾಲ್ ನಂದಾ ಅವರು ಇನ್ನೂ ಬದುಕಿದ್ದಾರೆ. ತಮ್ಮ ತತ್ವದಲ್ಲಿ ಎಳ್ಳಷ್ಟೂ ಬದಲಾವಣೆ ಮಾಡಿಕೊಂಡಿಲ್ಲ. ಅವರ ನೀತಿ-ನಡೆಗಳು ಇನ್ನೂ ಗಟ್ಟಿಗೊಂಡಿವೆ.

ನಂದಾರವರ ರಾಷ್ಟ್ರಪ್ರೇಮ ಮತ್ತು ಪ್ರಾಮಾಣಿಕ ಜೀವನವನ್ನು ಎತ್ತಿತೋರಿಸುವ ಅನೇಕ ಘಟನೆಗಳನ್ನು ಅವರ ಬದುಕಿನುದ್ದಕ್ಕೂ ಕಾಣಬಹುದು. ಅವರು ಗೃಹ ಮಂತ್ರಿಯಾಗಿದ್ದಾಗ ಒಮ್ಮೆ ಅದರ ಪುಟ್ಟ ಮೊಮ್ಮಗ, ತನ್ನ ತಾತನನ್ನು ಕಾಣಲು ಅವರ ಕಛೇರಿಗೆ ಬಂದ. ಅವರು ಕೆಲಸದಲ್ಲಿ ತೊಡಗಿದ್ದುದರಿಂದ ಸ್ವಲ್ಪ ಕಾಯಬೇಕಾಯ್ತು. ಆಗ ಆ ಹುಡುಗ ಅಲ್ಲೇ ಇದ್ದ ಡ್ರಾಯಿಂಗ್ ಹಾಳೆಯೊಂದನ್ನು

ತೆಗೆದುಕೊಂಡು ಚಿತ್ರ ಬಿಡಿಸಿದನಂತೆ. ತಾತನ ಹತ್ತಿರ ಹೋದಾಗ ಖುಷಿಯಿಂದ ಆ ಚಿತ್ರವನ್ನು ಅವರಿಗೆ ತೋರಿಸಿದ. ಆಗ ನಂದಾರವರು, ಆ ಚಿತ್ರ ನೋಡಿ ಆನಂದಿಸುವ ಬದಲು, ಸರ್ಕಾರಿ ಹಾಳೆಯುನ್ನು ಸ್ವಂತಕ್ಕೆ ವೊಮ್ಮಗ ಉಪಯೋಗಿಸಿಕೊಂಡನಲ್ಲಾ ಎಂದು ಸಿಟ್ಟಿಗೆದ್ದರಂತೆ! ಅಲ್ಲದೆ, ತಮ್ಮ ಜೇಬಿನಿಂದ ಹಣಕೊಟ್ಟು ಅಂತಹ ಹಾಳೆಗಳನ್ನು ಕೊಂಡು ತಂದು ಆಫೀಸಿನಲ್ಲಿಡಲು ಜವಾನನಿಗೆ ಹೇಳಿದರಂತೆ, ತಾವು ರೈಲ್ವೆ ಮಂತ್ರಿಯಾಗಿದ್ದಾಗಲೂ ಅವರು ಕ್ಯೂನಲ್ಲಿ ನಿಂತು ಟಿಕೇಟ್ ಕೊಂಡು, ರೈಲಿನಲ್ಲಿ ಪ್ರಯಾಣಿಸುತ್ತಿದ್ದರಂತೆ. ಇಂತಹ ಪ್ರಾಮಾಣಿಕ ಜೀವನ ಬದುಕಿದ ನಂದಾರವರೆಲ್ಲಿ? ಇಂದು, ತಮ್ಮ ಹಾಗೂ ತಮ್ಮ ಕುಟುಂಬದವರ ಸುಖಕ್ಕಾಗಿ ರಾಷ್ಟ್ರವನ್ನೇ ಲೂಟಿ-ಮಾಡುತ್ತಿರುವ ರಾಜಕಾರಣಿಗಳೆಲ್ಲಿ?

ನಂದಾರವರ ಮಕ್ಕಳೂ ಇದ್ದಾರೆ. ಅವರಿಗೂ ನಂದಾರವರು ತಮ್ಮ ಗುಣಗಳನ್ನೇ ಬಿತ್ತಿ ಬೆಳೆಸಿದ್ದಾರೆ. ಅವರ ಮಗಳು ಡಾ ॥ ಪುಷ್ಪಾ ನಾಯಕ್ ತಂದೆಯ ಆರೈಕೆ ಮಾಡುತ್ತಿದ್ದಾರೆ. ಕೇಂದ್ರ ಮಂತ್ರಿಗಳಾಗಿ, ಕೆಲವು ಕಾಲ ತಾತ್ಕಾಲಿಕ ಪ್ರಧಾನಿಯಾಗಿ ಬಾಳಿದ ಅವರು, ಮಕ್ಕಳಿಗೆ ಕೊಟ್ಟ ಸಂಪತ್ತು ಏನು ಎಂದು ಕೇಳಿದರೆ, ತಂದೆಗೆ ತಕ್ಕ ಮಗಳಾದ ಪುಷ್ಪಾನಾಯಕ್, 'ಉತ್ತಮ ಸಂಸ್ಕೃತಿ, ಸರಳತೆ, ಪ್ರಾಮಾಣಿಕತೆ, ದಕ್ಷತೆ ಮತ್ತು ಆತ್ಮವಿಶ್ವಾಸ' ನಮ್ಮ ತಂದೆಯಿಂದ ನಮಗೆ ಬಂದ ಆಸ್ತಿ. ಅವರು ನಮಗೆ ಹಣ, ಬಂಗಲೆ, ಆಸ್ತಿ, ಉದ್ದಿಮೆಗಳನ್ನು ಕೊಡಲಿಲ್ಲ. ಆದರೆ ಅವಕ್ಕಿಂತಲೂ ಅಮೂಲ್ಯವಾದ ಕೊಡುಗೆಗಳನ್ನು ಕೊಟ್ಟಿದ್ದಾರೆ. ಅವರು ಕೊಟ್ಟಿರುವ ಕೊಡುಗೆಗಳ ಬೆಲೆ ಕಟ್ಟಲು ಸಾಧ್ಯವಿಲ್ಲ. ಅದನ್ನು ಯಾರೂ ಕಸಿದುಕೊಳ್ಳಲಾರರು. ಅವರ ಕಾಣಿಕೆಗಳ ಮುಂದೆ, ಉಳಿದ ಸಂಪತ್ತು ನಮಗೆ ತೃಣ ಸಮಾಣ!' ಎಂದು ಹೇಳುತ್ತಾರಂತೆ. ಇಷ್ಟು, ಉನ್ನತ ವ್ಯಕ್ತಿತ್ವದ ನಂದಾರವರಿಗೆ ಈ ಸ್ವರ್ಣ ಸ್ವಾತಂತ್ರ್ಯೋತ್ಸವದ ವರ್ಷ 'ಭಾರತರತ್ನ' ಪ್ರಶಸ್ತಿಯನ್ನು ಕೊಡುವುದರ ಮೂಲಕ ಭಾರತೀಯರು ಅವರಿಗೆ ತಮ್ಮ ಗೌರವವನ್ನು ಅರ್ಪಿಸಿದ್ದಾರೆ.

ನೋಡು ಪುಟ್ಟೂ, ನಮ್ಮ ದೇಶದಲ್ಲಿ ಎಂತೆಂತಹ ಮಹಾನುಭಾವರಿದ್ದರು! ಈಗ ಅಂತಹವರ ಸಂಖ್ಯೆ ದಿನ–ದಿನಕ್ಕೆ ಕಡಿಮೆಯಾಗಿ, ದೇಶ ಎಲ್ಲ ರೀತಿಯಿಂದ ಬಡವಾಗುತ್ತಿದೆ. ಸ್ವಾರ್ಥ ಮೂಲವಾದ ಆಸೆ–ಆಮಿಷಗಳಿಗೆ ಬಲಿಯಾಗಿ ದೇಶಕ್ಕೆ ದ್ರೋಹ ಬಗೆದದ್ದೇ ಆದರೆ ಎಲ್ಲರಿಗೂ ಕೇಡು. ಮಗೂ, ಭಾರತೀಯತ್ವವನ್ನು ಉಳಿಸಿಕೊಂಡು ನಾವು ಬಾಳಬೇಕು. ಇಂದಿನ ಮಕ್ಕಳಾದ ನೀವು ಮುಂದೆ, ರಾಷ್ಟ್ರದ ಜವಾಬ್ದಾರಿಯುತ ಪ್ರಜೆಗಳಾಗುತ್ತೀರಿ. ಇಂದಿನಿಂದಲೇ ಒಳಿತು ಕೆಡುಕುಗಳನ್ನು ಅರ್ಥ ಮಾಡಿಕೊಂಡು ರಾಷ್ಟ್ರ ಪ್ರೇಮಿಗಳಾಗಿ ಬೆಳೆಯಬೇಕು. ಗುಲ್ಜಾರಿಲಾಲ್ ನಂದಾರವರಂತಹ ವ್ಯಕ್ತಿತ್ವವನ್ನು ಎಲ್ಲಾ ಮಕ್ಕಳೂ ಪಡೆಯಲು ಪ್ರಯತ್ನಿಸಬೇಕು.

ಎಂದರೆ, ಗಾಂಧೀಜಿಯ ಹಾದಿಯಲ್ಲಿ ನಡೆದು ಅವರ ಸಿದ್ಧಾಂತಗಳಂತೆ ಬದುಕಬೇಕು. ಆಗ ಮಾತ್ರ ದೇಶಕ್ಕೆ ಉಳಿಗಾಲ. ಭಾರತ, ಜಗತ್ತಿನಲ್ಲಿ ತಲೆ ಎತ್ತಿ ನಿಲ್ಲಬಲ್ಲದು. ಹುಟ್ಟಿದವ ಸಾಯಲೇಬೇಕಲ್ಲವೆ? ಆದರೆ ಹುಟ್ಟು-ಸಾವಿನ ನಡುವಿನ ಬದುಕು ಪವಿತ್ರವಾಗಿರಬೇಕು. ಅದು ತನ್ನನ್ನು ಮುಳುಗಿಸಿ, ರಾಷ್ಟ್ರವನ್ನು ಕಬಳಿಸುವಂತಿರಬಾರದು. ನೀನೊಬ್ಬ ಭಾರತದ ಸತ್ಪ್ರಜೆಯಾಗಿ ಬದುಕುತ್ತೀಯೆ ಎಂದು ಆಶಿಸುತ್ತಾ ಈ ಪತ್ರ ಮುಗಿಸುವೆ.

ಇಂತಿ ನಿನ್ನ,
ಹಿತೈಷಿ.

■

## ೩೫. ದುಡುಕಿನಿಂದ ಅನಾಹುತ

ಪ್ರೀತಿಯ ಪುಟ್ಟೂ,

ಅನೇಕರು ದುಡುಕಿನ ಸ್ವಭಾವದವರಿರುತ್ತಾರೆ. ದುಡುಕಿನಿಂದ ನಾನಾ ರೀತಿಯ ಅನಾಹುತಗಳುಂಟಾಗುತ್ತವೆ. ಆದುದರಿಂದ ಯಾವಾಗಲೂ ಎಚ್ಚರದಿಂದಿರುವುದು ಒಳ್ಳೆಯದು. ನಾವು ಯಾರಿಗಾದರೂ ಕೆಡುಕು ಮಾಡಿದರೆ, ಅದರ ಫಲವನ್ನು ನಾವು ಉಣ್ಣಬೇಕಾಗುತ್ತದೆಯೆಂದು ಹಿರಿಯರು ಹೇಳುತ್ತಾರೆ. ದುಡುಕಿನ ಕೆಲಸದಿಂದ, ದುಡುಕಿನ ಮಾತಿನಿಂದ ಬೇರೆಯವರಿಗೆ ಕೆಡುಕಾಗಬಹುದು. ಆ ಕೆಡುಕಿನ ಫಲವನ್ನು ನಾವೂ ಅನುಭವಿಸಬೇಕಾಗುತ್ತದೆ. ಹೀಗೆ, 'ದುಡುಕು' ನಮಗೂ ತೊಂದರೆ ಉಂಟು ಮಾಡುತ್ತದೆ; ಬೇರೆಯವರ ಕೆಡುಕಿಗೂ ಕಾರಣವಾಗುತ್ತದೆ. ದುಡುಕಿನಿಂದಾದ ದುಷ್ಪರಿಣಾಮವನ್ನು ಅನೇಕ ಬಾರಿ ಸರಿಪಡಿಸಲು ಸಾಧ್ಯವಿಲ್ಲವಾಗುತ್ತದೆ. ಅನಂತರ ಪಶ್ಚಾತ್ತಾಪ ಪಟ್ಟರೂ ಪ್ರಯೋಜನವಿಲ್ಲವಾಗುತ್ತದೆ. ಯಾವ ಮನುಷ್ಯ, ಸದಾ ಸಮಾಧಾನದಿಂದ ತಾನು ಮಾಡುವ ಕೆಲಸದ ಪರಿಣಾಮವೇನಾದೀತೆಂದು ಎಚ್ಚರಿಕೆ ವಹಿಸುತ್ತಾನೋ ಅವನು, ಸಾಮಾನ್ಯವಾಗಿ ತಪ್ಪು ಮಾಡುವುದಿಲ್ಲ. ಯಾವ ಮನುಷ್ಯ ತಪ್ಪು ಮಾಡುವುದಿಲ್ಲವೋ ಅವನು ಸುಖಿಯಾಗಿ ಬಾಳುತ್ತಾನೆ. ಅವನ ಬಗ್ಗೆ ಜನರಿಗೆ ಗೌರವ ಇರುತ್ತದೆ. ಆದುದರಿಂದ ಜೀವನದಲ್ಲಿ ದುಡುಕಿಲ್ಲದಂತೆ ಬದುಕುವುದನ್ನು ಕಲಿಯಬೇಕು. ಇದಕ್ಕೊಂದು ನಿದರ್ಶನ ಹೇಳುತ್ತೇನೆ ಕೇಳು.

ಪುಟ್ಟೂ, ನೀನು ರಾಮಾಯಣ ಕೇಳಿರುವೆಯಲ್ಲವೆ? ರಾಮನ ತಂದೆಯಾದ ದಶರಥ ಚಿಕ್ಕಂದಿನಿಂದಲೂ ಬಾಣ ಬಿಡುವುದರಲ್ಲಿ ನಿಪುಣನಾಗಿದ್ದ. ಎಂದೂ ಗುರಿ ತಪ್ಪುತ್ತಿರಲಿಲ್ಲ. ಅವನು 'ಶಬ್ದವೇದಿ'ಯೂ ಆಗಿದ್ದನು. ಎಂದರೆ, ಎಷ್ಟೇ ದೂರದಿಂದ ಶಬ್ದ ಕೇಳಿಸಿದರೂ ಆ ಸ್ಥಳ ಅವನಿಗೆ ಕಾಣದಂತಿದ್ದರೂ, ಅವನು

ಶಬ್ದ ಬಂದ ಕಡೆಗೆ ಗುರಿ ಇಟ್ಟು ಬಾಣಬಿಟ್ಟರೆ ಗುರಿತಪ್ಪುತ್ತಿರಲಿಲ್ಲ. ಅಂತಹ ಪರಿಣತಿ ಪಡೆದವನಾಗಿದ್ದ ದಶರಥ.

ಒಂದು ದಿನ ದಶರಥ ಬೇಟೆಯಾಡಲು ಕಾಡಿಗೆ ಹೋದ. ಮರ ಹತ್ತಿ ಬೇಟೆಗಾಗಿ ಸುತ್ತಲೂ ನೋಡಿದ. ಯಾವ ಬೇಟೆಯೂ ಕಾಣಲಿಲ್ಲ. ಆದರೆ ದೂರದ ಎಲ್ಲಿಯೋ ನೀರಿನಲ್ಲಿ ಗುಡು-ಗುಡು ಶಬ್ದವಾದಂತೆ ಕೇಳಿಸಿತು. ನದಿಯಲ್ಲಿ ಕಾಡುಪ್ರಾಣಿ ನೀರು ಕುಡಿಯುತ್ತಿದೆ ಎನ್ನಿಸಿತು. ಎನ್ನಿಸಿದುದೇ ತಡ, ಶಬ್ದ ಬಂದ ಕಡೆಗೆ ಗುರಿ ಇಟ್ಟು ಬಾಣ ಬಿಟ್ಟ. ಆ ಬಾಣ ಒಂದೇ ಕ್ಷಣದಲ್ಲಿ ಗುರಿಮುಟ್ಟಿತು. ನದಿಯಲ್ಲಿ ಪ್ರಾಣಿ ನೀರು ಕುಡಿಯುತ್ತಿರಲಿಲ್ಲ. ಋಷಿಪುತ್ರನೊಬ್ಬ ನೀರಡಿಸಿದ ತನ್ನ ಮನಸ್ಸಿನ ತಂದೆ-ತಾಯಿಗಳಾಗಿ ಕಮಂಡಲಕ್ಕೆ ನದಿಯ ನೀರು ತುಂಬುತ್ತಿದ್ದ. ಆ ಋಷಿಪುತ್ರನ ಹೃದಯವನ್ನು ದಶರಥನ ಬಾಣ ಛೇದಿಸಿತು. ತಕ್ಷಣವೇ ಅವನು 'ಅಯ್ಯೋ ದೇವರೆ!' ಎಂದು ಚೀರಿದ. ಆ ಶಬ್ದ ದಶರಥನಿಗೆ ಕೇಳಿ, 'ಘಾತವಾಯಿತು.! ನನ್ನ ಬಾಣ, ನಿರಪರಾಧಿಯೊಬ್ಬನ ಪ್ರಾಣಹರಣ ಮಾಡಿತು' ಎನ್ನುತ್ತಾ ಶಬ್ದ ಬಂದ ಕಡೆಗೆ ಓಡಿದ; ತಾನು ಮಾಡಿದ ಪ್ರಮಾದದ ಅರಿವಾಯ್ತು. ಋಷಿಪುತ್ರನನ್ನು ತನ್ನ ತೊಡೆಯಮೇಲೆ ಮಲಗಿಸಿಕೊಂಡು ಉಪಚರಿಸಿದ. ಆಗ ಋಷಿಕುಮಾರನು, ತಾನು ಬಂದ ಕಾರಣವನ್ನು ವಿವರಿಸಿ, ನೀರಡಿಸಿದ ತನ್ನ ಮುದಿ ತಂದೆ ತಾಯಿಗಳಿಗೆ ನೀರು ಕೊಟ್ಟು ಸಂತೈಸಿ, ತನ್ನ ಮರಣ ವೃತ್ತಾಂತವನ್ನು ಅವರಿಗೆ ತಿಳಿಸಬೇಕೆಂದು ಕೇಳಿಕೊಂಡು ಪ್ರಾಣಬಿಟ್ಟ. ದಶರಥನಿಗೆ ಅತೀವವಾದ ದುಃಖವಾಯ್ತು. ತನ್ನ ದುಡುಕಿನ ಕೆಲಸದಿಂದ ಎಂತಹ ಅನ್ಯಾಯವಾಯಿತೆಂದು ಮರ-ಮರನೆ ಮರುಗಿದ. ಆದರೆ ನಡೆದ ತಪ್ಪನ್ನು ಸರಿಪಡಿಸಲು ಬರುವಂತಿರಲಿಲ್ಲ. ನೀರನ್ನು ತೆಗೆದುಕೊಂಡು ವೃದ್ಧ ದಂಪತಿಗಳಿದ್ದ ಕಡೆಗೆ ನಡೆದ. ಅವರು ಅಂಧರೂ ಆಗಿದ್ದರು. ನೀರಡಿಸಿದ್ದ ಅವರು, ಬರುತ್ತಿರುವವನು ತಮ್ಮ ಮಗನೇ ಇರಬೇಕೆಂದು 'ನಮಗೆಷ್ಟು ನೀರಡಿಕೆಯಾಗಿದೆ. ನೀನೇಕೆ ಇಷ್ಟು ತಡ ಮಾಡಿದೆ?' ಎಂದರು. ಆಗ ದಶರಥನು ದುಃಖತಪ್ತನಾಗಿ ಭಾರವಾದ ಹೃದಯದಿಂದ, ನಡೆದ ಘಟನೆಯನ್ನು ವಿವರಿಸಿದ; ತನ್ನ ತಪ್ಪಿಗೆ ಕ್ಷಮೆ ಯಾಚಿಸಿದ. ಈ ಘೋರ ಸಮಾಚಾರ ವೃದ್ಧ ದಂಪತಿಗಳ ಕಿವಿಗೆ ಕಾದ ಸೀಸೆಯನ್ನು ಸುರುವಿದಂತಾಯಿತು. ಮಗನ ಮರಣ ವಾರ್ತೆಯನ್ನು ಅವರು ಸಹಿಸದಾದರು. ವೃದ್ಧಾಪ್ಯದಲ್ಲಿ ತಮ್ಮ ಏಕಮಾತ್ರ ಪುತ್ರನನ್ನು ಕಳೆದುಕೊಂಡ ದುಃಖ ಅವರನ್ನು ದಿಕ್ಕುಕಾಣದಂತೆ ಮಾಡಿತು. ಇದಕ್ಕೆ ಕಾರಣನಾದವನ ಬಗ್ಗೆ ಅವರಿಗೆ ಕರುಣೆ ಬರಲಿಲ್ಲ; ಅವನನ್ನು ಕ್ಷಮಿಸಬೇಕೆನ್ನಿಸಲಿಲ್ಲ. ದುಡುಕಿನಿಂದ ತಮ್ಮ ಜೀವನಕ್ಕೆ ಘೋರ ಅನ್ಯಾಯ ಮಾಡಿದ ದಶರಥನಿಗೆ, 'ನೀನೂ ಸಹ ನಮ್ಮಂತೆ ವೃದ್ಧಾಪ್ಯದಲ್ಲಿ ಪುತ್ರವಿಯೋಗದ ದುಃಖದಿಂದ ನರಳಿ, ನರಳಿ ಸಾಯಿ'

ಎಂದು ಶಾಪ ಕೊಟ್ಟರು. ಅವರ ಶಾಪದ ಫಲವೇ ಎಂಬಂತೆ, ದಶರಥನು ತನ್ನ ವೃದ್ಧಾಪ್ಯದಲ್ಲಿ, ರಾಮನು ಕಾಡಿಗೆ ಹೋಗುವಂತಾಗಿ, ಆ ದುಃಖ ತಾಳಲಾರದೆ ಕೊನೆಯುಸಿರನ್ನೇ ಎಳೆದ ಕಥೆ, ನಿನಗೆ ಗೊತ್ತಿರಬೇಕಲ್ಲವೆ?

ನೋಡು ಮಗೂ, ದಶರಥನೇನು ಋಷಿಪುತ್ರನನ್ನು ಕೊಲ್ಲಬೇಕೆಂಬ ಉದ್ದೇಶದಿಂದ ಬಾಣ ಬಿಡಲಿಲ್ಲ. ಪಾತ್ರೆಯಲ್ಲಿ ನೀರು ತುಂಬುವ ಶಬ್ಧವನ್ನು ಪ್ರಾಣಿ ನೀರು ಕುಡಿಯುತ್ತಿರುವಾಗ ಉಂಟಾಗುತ್ತಿರುವ ಶಬ್ದವೆಂದು ಊಹಿಸಿ ಬಾಣ ಬಿಟ್ಟಿದ್ದ. ದಶರಥ ಸಹೃದಯಿ. ಗುರು ಹಿರಿಯರನ್ನೂ, ಋಷಿಗಳನ್ನೂ ಪೂಜ್ಯತೆಯಿಂದ ಕಾಣುತ್ತಿದ್ದಂತಹವನು. ಯಾರಿಗೂ ವೃಥಾ ತೊಂದರೆ ಕೊಡದವನು. ಆದರೂ, ಹಿಂದು ಮುಂದು ನೋಡದೆ, ದುಡುಕಿನಿಂದ ಮಾಡಿದ. ತಪ್ಪಿನಿಂದ ಸರಿಗೊಳಿಸಲಾಗದಂತಹ ತಪ್ಪಿಗೆ ಕಾರಣನಾದ. ನಿರಪರಾಧಿಯನ್ನು ಬಲಿತೆಗೆದುಕೊಂಡು ಅಂಧರಾದ ವೃದ್ಧ ದಂಪತಿಗಳು ಅನಾಥರಾಗಲು ಕಾರಣನಾದ. ಇಳಿ ವಯಸ್ಸಿನಲ್ಲಿ ಪುತ್ರಶೋಕವನ್ನು ಅನುಭವಿಸುವಂತೆ ಮಾಡಿದ. ಇದರಿಂದ ದಶರಥನಿಗೂ ಸಾಕಷ್ಟು ಪಶ್ಚಾತ್ತಾಪವಾಯ್ತು. ಆದರೂ ಅದರ ಫಲ ಅವನಿಗೆ ತಪ್ಪಲಿಲ್ಲ. ರಾಮನನ್ನು ಕಾಡಿಗೆ ಕಳಿಸಿದುದರಿಂದಾದ ನೋವನ್ನು ತಡೆಯಲಾರದೆ ವೃದ್ಧನಾದ ದಶರಥ ಕೊನೆಯುಸಿರೆಳೆದ ಎಂಬ ಕಥೆ ಓದಿರುವೆಯಲ್ಲವೆ?

ಹೀಗೆ ಪುಟ್ಟೂ, ದುಡುಕಿನಿಂದ ಅನಾಹುತಗಳು ಸಂಭವಿಸುತ್ತವೆ. ನಮಗೆ ದುರುದ್ದೇಶವಿಲ್ಲದಿದ್ದರೂ ಕೇಡಿಗೆ ಕಾರಣರಾದ ತಪ್ಪಿಗೆ, ಅದರ ಫಲ ಅನುಭವಿಸಲೇ ಬೇಕಾಗುತ್ತದೆ. ಆದುದರಿಂದ ಪುಟ್ಟೂ, ಜೀವನದಲ್ಲಿ ಬಹು ಎಚ್ಚರಿಕೆಯಿಂದ ಹೆಜ್ಜೆ ಮುಂದಿಡುವುದನ್ನು ಬಾಲ್ಯದಿಂದಲೇ ಬೆಳೆಸಿಕೊಳ್ಳಬೇಕು. ದುಡುಕುತನ ಬೆಳೆಯಗೊಡಬಾರದು. ತಿಳಿಯಿತೆ?

ಇಂತಿ ನಿನ್ನ,
ಹಿತೈಷಿ.

■

## ೩೬. ಶೀಲ ಸಂವರ್ಧನೆ

ಪ್ರೀತಿಯ ಪುಟ್ಟೂ,

ಹಿಂದಿನ ಪತ್ರಗಳಲ್ಲಿ ಅನೇಕ ಮೌಲ್ಯಗಳ ಬಗ್ಗೆ ನಿನಗೆ ತಿಳಿಸಿರುವೆನಲ್ಲವೆ? ಮೌಲ್ಯಗಳು ಉತ್ತಮ ವ್ಯಕ್ತಿತ್ವದ ಕೀಲಿಕೈಗಳು. ಆದ್ದರಿಂದ ಪ್ರತಿಯೊಬ್ಬರೂ ಅವುಗಳನ್ನು ತಮ್ಮಲ್ಲಿ ಅಳವಡಿಸಿಕೊಳ್ಳಲು ಪ್ರಯತ್ನಿಸಬೇಕು. ಹೀಗೆ

ಅಳವಡಿಸಿಕೊಳ್ಳಬೇಕಾದ ಮೌಲ್ಯಗಳಲ್ಲಿ 'ಶೀಲ'ವು ಒಂದು ಮಹತ್ವವಾದ ಮೌಲ್ಯ. ಅದರ ಬಗ್ಗೆ ಇಂದು ಪತ್ರಿಕೆಯೊಂದರಲ್ಲಿ ಓದಿದಾಗ ನನ್ನಲ್ಲಿ ಅನೇಕ ವಿಚಾರಗಳು ಹೊಳೆದವು. ಅವುಗಳು ನಿನಗೂ ತಿಳಿದಿರಲಿ ಎಂಬ ಅನಿಸಿಕೆಯಿಂದ ಈ ಪತ್ರ ಬರೆಯುತ್ತಿರುವೆ.

ಮಗೂ ನೀನೂ ತಿಳಿದಿರುವಂತೆ ಪ್ರಕೃತಿಯ ಸೃಷ್ಟಿಯಲ್ಲಿ ಲೆಕ್ಕವಿಲ್ಲದಷ್ಟು ಜೀವಿಗಳು ಉದಿಸಿವೆ. ಆ ಎಲ್ಲಾ ಜೀವಿಗಳಲ್ಲಿ ಮನುಷ್ಯನೇ ಬುದ್ಧಿವಂತ. ಅವನಲ್ಲಿ ಮಾತ್ರ ಬುದ್ಧಿ ಪೂರ್ಣವಾಗಿ ವಿಕಸನಗೊಂಡಿದೆ. ಈ ಮೇಧಾಶಕ್ತಿಯ ಬಲದಿಂದಲೇ ಅವನು ತನ್ನ ಉನ್ನತಿಯನ್ನು ಸಾಧಿಸಿಕೊಳ್ಳುತ್ತಲೇ ಇತರರ ಒಳಿತನ್ನೂ ಸಾಧಿಸಲು ಪ್ರಯತ್ನಿಸಬೇಕು. ಈ ಆತ್ಮೋನ್ನತಿಯ ಗುಣಗಳನ್ನೇ 'ಶೀಲ'ವೆಂದು ಕರೆಯುತ್ತಾರೆ. ಈ ಶೀಲವನ್ನು ತಮ್ಮಲ್ಲಿ ನಿರ್ಮಿಸಿಕೊಳ್ಳಬೇಕಾದರೆ, ಉತ್ತಮ ಧ್ಯೇಯ ಎಂದರೆ ಶ್ರೇಷ್ಠ ಆದರ್ಶಗಳನ್ನೂ ಇಟ್ಟುಕೊಳ್ಳಬೇಕಾದುದು ಅಗತ್ಯ.

ಒಬ್ಬ ವ್ಯಕ್ತಿಯ ಸ್ವಭಾವವನ್ನು ನಾವು ಅವನ ಗುಣಗಳಿಂದ ಅಳೆಯುತ್ತೇವೆ. ಅವನೆಷ್ಟೇ ಶ್ರೀಮಂತನಾದರೂ, ಅವನ ಸ್ಥಾನ–ಮಾನಗಳನ್ನು ಸಮಾಜದಲ್ಲಿ ಎಷ್ಟೇ ಎತ್ತರದಲ್ಲಿದ್ದರೂ, ಅವನಲ್ಲಿ ಸದ್ಗುಣಗಳಿಲ್ಲದಿದ್ದರೆ ಅವನನ್ನು ಯಾರೂ ಯೋಗ್ಯನೆಂದು ತಿಳಿಯುವುದಿಲ್ಲ. ಅವನ ಯೋಗ್ಯತೆ ಅವನಲ್ಲಿರುವ ಶೀಲ–ಸದ್ಗುಣ ನಡೆ–ನುಡಿ ಸಂಸ್ಕಾರಗಳನ್ನು ಅವಲಂಬಿಸಿರುತ್ತವೆ. ಆದುದರಿಂದ ಪ್ರತಿಯೊಬ್ಬರೂ ಉತ್ತಮ ನಡೆ–ನುಡಿಗಳನ್ನು ರೂಢಿಸಿಕೊಂಡು, ಸತ್ಸಂಗ ಸದ್ವಿಚಾರಗಳಿಂದ, ಉತ್ತಮ ಸಂಸ್ಕಾರಗಳನ್ನು ಪಡೆದು ಇತರರೊಡನೆ ಒಳ್ಳೆಯ ನಡತೆಯಿಂದ ಇರುತ್ತಾ, ಶೀಲವಂತರಾಗಿ ಬಾಳುವುದನ್ನು ಕಲಿಯಬೇಕು. ಹೀಗೆ ಮಾಡಿದ್ದೇ ಆದರೆ ವ್ಯಕ್ತಿ ಹಾಗೂ ಸಮಾಜ ಉನ್ನತಿ ಹೊಂದುವುದರಲ್ಲಿ ಸಂಶಯವಿಲ್ಲ.

ಪ್ರತಿಯೊಬ್ಬರಿಗೂ ತಾವು ಒಳ್ಳೆಯವರಾಗಿ ಬಾಳಬೇಕು. ಎಲ್ಲರಿಂದ ಒಳ್ಳೆಯವರೆನ್ನಿಸಿಕೊಳ್ಳಬೇಕು ಎಂಬ ಆಸೆ ಇರುವುದು ಸಹಜ. ಆದರೆ ಕೇವಲ ಆಸೆಯಿಂದ ಇಚ್ಛಾಪೂರ್ತಿಯಾಗುವುದಿಲ್ಲ. ಅದಕ್ಕೆ ಸತತ ಪ್ರಯತ್ನಬೇಕು. ಒಳಿತಾಗಿ ಬಾಳಬೇಕೆಂಬ ವ್ಯಕ್ತಿ. ಮೊದಲ ತನ್ನ ಜೀವನದ ಗುರಿಯನ್ನು ಕಂಡುಕೊಳ್ಳಬೇಕು. ಗುರಿಯನ್ನು ಸ್ಪಷ್ಟವಾಗಿ ಕಂಡುಕೊಂಡನಂತರ, ಆ ಗುರಿಯನ್ನು ಮುಟ್ಟುವ ಸನ್ಮಾರ್ಗವನ್ನು ರೂಪಿಸಿಕೊಳ್ಳಬೇಕು. ಗುರಿ ಸೇರುವ ಮಾರ್ಗವೂ ಉತ್ತಮ ಮಟ್ಟದ್ದಿರಬೇಕಾದುದು ಅಪೇಕ್ಷಣೀಯ. ದುಷ್ಟಮಾರ್ಗದಿಂದ ಗುರಿ ಮುಟ್ಟುವುದು ಸಾಧುವಲ್ಲ. ಆದುದರಿಂದ ನಾವಿಟ್ಟುಕೊಂಡ ಗುರಿಯನ್ನು ಬಹು ಎಚ್ಚರಿಕೆಯಿಂದ, ಸಾಧುವಾದ ಮಾರ್ಗದಲ್ಲಿ ಸಾಗಿ ಗುರಿಮುಟ್ಟುವ ಮಾರ್ಗ ರೂಪಿಸಿಕೊಳ್ಳಬೇಕು. ಹೀಗೆ ಜೀವನವಿಡೀ ಉತ್ತಮ ಮಾರ್ಗದಲ್ಲಿ ನಡೆಯುವುದು ಸುಲಭವಲ್ಲವಾಗಿ,

ತೀವ್ರವಾದ ಆಕಾಂಕ್ಷೆ ಹೊಂದಿರಬೇಕಾಗುತ್ತದೆ. ಆಕಾಂಕ್ಷೆಯ ಜೊತೆಗೆ, ಕೆಲಸವನ್ನು ಸಾಧಿಸಿಯೇ ತೀರುತ್ತೇನೆಂಬ ಛಲ, ಆ ಕೆಲಸದ ಬಗ್ಗೆ ನಿಷ್ಠೆ, ಬಹುಮುಖ್ಯ. ನಿಷ್ಠೆ ಎಂದರೆ, ಕೆಲಸವನ್ನು ಮಾಡಿಯೇ ತೀರುತ್ತೇನೆಂಬ ದೃಢ ನಿಶ್ಚಯ. ಇದರಿಂದ ಕೆಲಸದಲ್ಲಿ ಶ್ರದ್ಧೆ ಬರುತ್ತದೆ. ಹೀಗೆ ಗುರಿಸಾಧಿಸುವ ಪ್ರಯತ್ನ ಮಾಡುವಾಗ ಶ್ರದ್ಧೆ ತಾನೇ ತಾನಾಗಿ ಮೂಡುತ್ತದೆ. ಕಾರ್ಯಸಾಧನೆಗೆ ಪ್ರತಿಭೆ, ಬುದ್ಧಿವಂತಿಕೆ, ಉತ್ತಮ ಶಿಕ್ಷಣ ಹಾಗೂ ಮಾರ್ಗದರ್ಶನದ ಜೊತೆಗೆ ಸತತ ಶ್ರಮ ಅವಶ್ಯಕ. ಸಮರ್ಪಣಾ ಭಾವದಿಂದ ತನ್ನನ್ನು ಆ ಕೆಲಸಕ್ಕೆ ತೊಡಗಿಸಿಕೊಳ್ಳುವ ಮನೋಭಾವದಿಂದ ದಕ್ಷತೆ ಹೆಚ್ಚಿ ಕೆಲಸದ ಗುಣಮಟ್ಟ ಉತ್ತಮಗೊಳ್ಳುತ್ತದೆ. ಇವೆಲ್ಲಾ ಶೀಲದ ವಿವಿಧ ಹಂತಗಳು. ಈ ಹಂತಗಳನ್ನು ಕ್ರಮಿಸುವ ಮೂಲಕ ಶ್ರೇಷ್ಠ ವ್ಯಕ್ತಿತ್ವ ಉಳ್ಳ ಮನುಷ್ಯನು ತನ್ನನ್ನು ತಾನು ಸದಾ ಪರೀಕ್ಷಿಸಿಕೊಳ್ಳುತ್ತಲೇ ಇರುತ್ತಾನೆ. ತಾಳ್ಮೆಗೆಡುವುದೂ ಇಲ್ಲ. ತನ್ನ ವಿರೋಧಗಳ ಮನಸ್ಸನ್ನೂ ನೋಯಿಸುವುದಿಲ್ಲ. ಅಲ್ಲದೆ ಜನರ ಹೊಗಳಿಕೆಯಿಂದ ಹಿಗ್ಗದೆ, ತೆಗಳಿಕೆಯಿಂದ ಕುಗ್ಗದೆ, ಸದಾಕಾಲವೂ ಮನಸ್ಸನ್ನು ಸಮತೋಲನದಲ್ಲಿರಿಸಿಕೊಂಡು, ಭಾವೋದ್ವೇಗವಿಲ್ಲದೆ ಸಮಚಿತ್ತದಿಂದ ವರ್ತಿಸುತ್ತಾನೆಂದು ಲೇಖಕರು ಹೇಳಿರುವ ಮಾತು ತುಂಬಾ ಮೆಚ್ಚುವಂತಹುದು.

ಗುರಿಯನ್ನು ಸಾಧಿಸುವ ಸಂಕಲ್ಪವಿರುವ ಮನುಷ್ಯ, ನಿಷ್ಠೆಯೊಂದಿಗೆ ಸತತ-ಪ್ರಯತ್ನ ಶೀಲತೆಯನ್ನು ಮೈಗೂಡಿಸಿಕೊಳ್ಳಬೇಕು. ಇಲ್ಲದಿದ್ದಲ್ಲಿ ಕೆಲಸ ಗುರಿ ಮುಟ್ಟದೆ ಅರ್ಧದಲ್ಲಿಯೇ ನಿಲ್ಲುವ ಸಾಧ್ಯತೆ ಇದೆ. ಆದುದರಿಂದ ಸತತ ಪ್ರಯತ್ನ ಸನ್ಮಾರ್ಗಿಗೆ ಅವಶ್ಯಕ. ಈ ರೀತಿಯಾಗಿ ಶೀಲಸಂವರ್ಧನೆಯಿಂದ ಶ್ರೇಷ್ಠ ವ್ಯಕ್ತಿತ್ವ ರೂಪಿಸಿಕೊಂಡರೆ, ಅಂತಹ ವ್ಯಕ್ತಿಯನ್ನು ಎಲ್ಲರೂ ಗೌರವದಿಂದ ಕಾಣುತ್ತಾರೆ. ಅಂತಹವನಿಂದ ಸಮಾಜದ, ದೇಶದ ಅಭ್ಯುದಯ ಉಂಟಾಗುತ್ತದೆ. ಆದುದರಿಂದ ಮನುಷ್ಯನಿಗೆ ಉತ್ತಮ ಗುರಿ, ಅದನ್ನು ಉತ್ತಮ ಮಾರ್ಗದಿಂದ ಸಾಧಿಸುವ ಧ್ಯೇಯ, ಸಹನೆಯ ಸ್ವಭಾವ, ಸತತ ಪ್ರಯತ್ನ, ಸಮತೋಲನ ಮನೋಭಾವ ಅವಶ್ಯಕ.

ಇಂತಹ ಸುಶೀಲ ಗುಣಗಳನ್ನು ಅಳವಡಿಸಿಕೊಳ್ಳುವುದು ಪ್ರಾರಂಭಿಕ ದೆಶೆಯಲ್ಲಿ ಕಷ್ಟವೆನ್ನಿಸಬಹುದು. ಆದರೆ ಅದೇ ರೂಢಿಯಾದ ಮೇಲೆ ಎಲ್ಲವೂ ಸರಾಗ. ಜೀವನ ಗೌರವಾನ್ವಿತವಾಗುತ್ತದೆ. ಇಂತಹ ಗೌರವಾನ್ವಿತ ವ್ಯಕ್ತಿತ್ವ ಪಡೆದವರು, ಕುಟುಂಬದಲ್ಲಿ ಸಂಘ ಸಂಸ್ಥೆಗಳಲ್ಲಿ ಸಮಾಜದಲ್ಲಿ ಹೆಚ್ಚಿದಷ್ಟೂ ನೆಮ್ಮದಿಯ ಜೀವನ ಎಲ್ಲೆಲ್ಲೂ ಪಸರಿಸುತ್ತದೆ. ಈಗ ಎಲ್ಲೆಡೆ ಕಾಣುವ ವಿರಸ, ದ್ವೇಷ, ಘರ್ಷಣೆ, ಹಿಂಸೆಗೆ ಅವಕಾಶವಿರುವುದಿಲ್ಲ. ಎಲ್ಲರೂ ಪರಸ್ಪರ ಪ್ರೀತಿ-ವಿಶ್ವಾಸದಿಂದ ಬದುಕುತ್ತಾ ಸಹಕರಿಸಿ ನಡೆಯುತ್ತಾ ಬದುಕು ಸಾರ್ಥಕವೆನ್ನಿಸುವಂತಹ ಆತ್ಮತೃಪ್ತಿ ಪಡೆಯಲು

ಸಾಧ್ಯವಾಗುತ್ತದೆ. ಇತರರ ಮನಸ್ಸಿಗೆ ನೋವುಂಟು ಮಾಡಿ, ಅವರನ್ನು ಹಿಂಸಿಸಿ, ಆನಂದಪಡುವ ಅಮಾನವೀಯ ಗುಣದ ಜನರ ಸಂಖ್ಯೆ ಕಡಿಮೆಯಾಗುತ್ತದೆ. ಸುಖ–ಶಾಂತಿ–ನೆಮ್ಮದಿಗಳು ನೆಲೆಯೂರುತ್ತವೆ. ಈ ವಿಷಯಗಳ ಕಡೆ ನಿನ್ನ ಲಕ್ಷ್ಯವಿರಲಿ ಮಗೂ. ಗುಣಗ್ರಾಹಿಯಾಗಿ ಸದ್ಗುಣಗಳನ್ನು ರೂಪಿಸಿಕೊಂಡು, ಉತ್ತಮ ವ್ಯಕ್ತಿಯಾಗಿ ನೀನು ಬಾಳಬೇಕೆಂಬುದೇ ನನ್ನ ಆಸೆ. ನಿನ್ನದೂ ಆ ಆಸೆಯೇ ಆಗಲಿ ಪುಟ್ಟೂ.

ಇಂತಿ ನಿನ್ನ,
ಹಿತೈಷಿ.

## ೩೭. ತ್ಯಾಗ : ಕಾರ್ನಾಡ ಸದಾಶಿವರಾಯರು

ಪ್ರೀತಿಯ ಪುಟ್ಟೂ,

೧೯೯೭ನೇ ಆಗಸ್ಟ್ ೧೫ಕ್ಕೆ ನಮ್ಮ ದೇಶವು ಪರತಂತ್ರದಿಂದ ಬಿಡುಗಡೆ ಪಡೆದು ಐವತ್ತು ವರ್ಷಗಳಾಗುತ್ತವೆ. ಈ 'ಸುದಿನ' ವನ್ನು ಬಹು ಸಂಭ್ರಮದಿಂದ ಆಚರಿಸಲು ಭಾರತ ಬಹಳಷ್ಟು ಯೋಜನೆಗಳನ್ನು ಹಾಕಿಕೊಂಡಿದೆ. ಐವತ್ತು ವರ್ಷಗಳಾದುದರಿಂದ 'ಸುವರ್ಣ ಸ್ವಾತಂತ್ರ್ಯೋತ್ಸವ'ವೆಂದು ಈ ವರ್ಷದ ಸ್ವಾತಂತ್ರ್ಯ ದಿನಾಚರಣೆಯನ್ನು ಹೆಸರಿಸಲಾಗಿದೆ. ಈ ಉತ್ಸವನ್ನು ನಾವು ಬಹು ಸಡಗರದಿಂದ ಆಚರಿಸಲಿದ್ದೇವೆ. ಈ ಮಹತ್ವದ ದಿನವನ್ನು ನಾವು ಪಡೆಯುವಂತೆ ಮಾಡಲು, ಭಾರತಾಂಬೆಯ ಅನೇಕ ಸತ್ಪುತ್ರರು ತಮ್ಮದೆಲ್ಲವನ್ನು ದೇಶಕ್ಕಾಗಿ ಸಮರ್ಪಣೆ ಮಾಡಿದ್ದಾರೆ. ಎಷ್ಟು ಜನ ಪ್ರಾಣ ತೆತ್ತಿದ್ದಾರೋ, ಎಷ್ಟು ಜನ ತಮ್ಮ ಮನೆಮಠಗಳನ್ನು ಕಳೆದುಕೊಂಡಿದ್ದಾರೋ? ಎಷ್ಟು ಜನ ತಮ್ಮ ತನು–ಮನ–ಧನಗಳನ್ನು ದೇಶಕ್ಕಾಗಿ ಧಾರೆ ಎರೆದಿದ್ದಾರೋ? ಲೆಕ್ಕವಿಲ್ಲ. ಅಂತಹ ಹುತಾತ್ಮರ ಋಣವನ್ನು ನಾವು ತೀರಿಸಲು ಸಾಧ್ಯವೆ? ಈ 'ಸುದಿನ'ದಂದು ನಾವು ಆ ಪುಣ್ಯಾತ್ಮರನ್ನು ನೆನಪಿಸಿಕೊಂಡು, ಅವರು ನಮಗೆ ಗಳಿಸಿಕೊಟ್ಟಿರುವ ಭಾರತದ ಗೌರವ ಜಗತ್ತಿನಲ್ಲಿ ಮೆರೆಯುವಂತೆ ಮಾಡುವ ಮೂಲಕ, ಭಾರತೀಯ ಮೌಲ್ಯಗಳನ್ನು ನೀತಿಗಳನ್ನು ನಮ್ಮ ನಡೆ–ನುಡಿಯಲ್ಲಿ ಅಳವಡಿಸಿಕೊಳ್ಳುವ ಮೂಲಕ, ರಾಷ್ಟ್ರಪ್ರೇಮಿಗಳಾಗಿ ಬದುಕುವ ಮೂಲಕ, ನಮ್ಮ ಕೃತಜ್ಞತೆಯನ್ನು ಅವರಿಗೆ ಅರ್ಪಿಸಬೇಕು.

ದೇಶಕ್ಕಾಗಿ ತಮ್ಮ ಸರ್ವಸ್ವವನ್ನೂ ಅರ್ಪಿಸಿದ ಸತ್ಪುರುಷರಲ್ಲಿ ಕಾರ್ನಾಡ್ ಸದಾಶಿವರಾಯರೂ ಒಬ್ಬರು. ಇವರ ತಂದೆ ಶ್ರೀಮಂತ ರಾಮಚಂದ್ರರಾಯರು, ತಾಯಿ ರಾಧಾಬಾಯಿ. ಇವರದು ತುಂಬಾ ಪ್ರಖ್ಯಾತ, ಸುಸಂಸ್ಕೃತ ಸಿರಿವಂತ

ಮನೆತನ. ಇವರು ಕೇವಲ ಐಶ್ವರ್ಯವಂತರಾಗಿರಲಿಲ್ಲ, ತುಂಬಾ ಸದ್ಗುಣಿಗಳೂ ಆಗಿದ್ದರು. ಹಾಗಾಗಿ ಮಗನಲ್ಲಿ ಬಾಲ್ಯದಲ್ಲಿಯೇ ಸತ್ಯ, ಕರುಣೆ, ತ್ಯಾಗ ಮುಂತಾದ ಸದ್ಗುಣಗಳ ಬೀಜ ಬಿತ್ತಿದರು. ಅವು ಮೊಳಕೆಯೊಡೆದು ಸಸಿಯಾಗಿ ಸದಾಶಿವರಾಯರ ವ್ಯಕ್ತಿತ್ವದಲ್ಲಿ ಹೆಮ್ಮರವಾಗಿ ಬೆಳೆದವು. 'ಬೆಳೆಯ ಸಿರಿ ಮೊಳಕೆಯಲ್ಲಿಯೇ' ನೋಡು, ಎಂಬಂತೆ ಸದಾಶಿವರಾಯರು ಶಾಲೆಗೆ ಹೋಗುತ್ತಿದ್ದಾಗಲೇ ತಮ್ಮ ಸಹಪಾಠಿಗಳಾದ ದಲಿತ, ಬಡ ವಿದ್ಯಾರ್ಥಿಗಳಿಗೆ ಪುಸ್ತಕ, ಬಟ್ಟೆಗಳನ್ನು ಕೊಟ್ಟು ಸಹಾಯ ಮಾಡುತ್ತಿದ್ದರು. ಇವರು ಪರಮ ದೈವಭಕ್ತರಾಗಿದ್ದರೂ ವಿಚಾರವಾದಿಗಳಾಗಿದ್ದರು. ತಮ್ಮ ಔದಾರ್ಯ, ತ್ಯಾಗ, ನಿಷ್ಠೆ, ಸಜ್ಜನಿಕೆ, ದೇಶಪ್ರೇಮ, ಪ್ರಾಮಾಣಿಕತೆ ಮುಂತಾದ ಸದ್ಗುಣಗಳಿಂದ ಎಲ್ಲರ ಗೌರವಾದರಗಳಿಗೆ ಪಾತ್ರರಾಗಿದ್ದರು. ಮಂಗಳೂರಿನಲ್ಲಿದ್ದ ಅವರ ಮನೆ ದೀನ ದಲಿತರಿಗೆ ಧರ್ಮಛತ್ರದಂತಿತ್ತು.

ಮೊದಲಿನಿಂದಲೂ ಸದಾಶಿವರಾಯರಿಗೆ ದೀನ-ದಲಿತರನ್ನು ಕಂಡರೆ ತುಂಬಾ ಅನುಕಂಪ. ಹಾಗಾಗಿ, ಅವರು ದೊಡ್ಡವರಾದಂತೆ ದೀನ-ದಲಿತರ, ಹಿಂದುಳಿದವರ ಸೇವೆಗೆ, ಅಭಿವೃದ್ಧಿಗೆ ತಮ್ಮ ಜೀವನವನ್ನೇ ಧಾರೆ ಎರೆದರು. ಅತ್ಯಂತ ಶ್ರೀಮಂತ ಕುಟುಂಬದಲ್ಲಿ ಜನಿಸಿದ ಇವರು ಹರಿಜನರಿಗೆ, ಕೊರಗರಿಗೆ, ಮಾದಿಗರಿಗೆ ತಮ್ಮ ಜಮೀನಿನಲ್ಲಿ ಸ್ವಂತ ಖರ್ಚಿನಲ್ಲೇ ಕಾಲೊನಿ ಕಟ್ಟಿಸಿಕೊಟ್ಟರು. ಅವರ ಶಿಕ್ಷಣಕ್ಕಾಗಿ ರಾಷ್ಟ್ರೀಯ ವಿದ್ಯಾಲಯಗಳನ್ನು ಆರಂಭಿಸಿದರು. ಬಡತನದ ಕಾರಣ ತಿನ್ನಲು ಗತಿ ಇಲ್ಲದ ಮಕ್ಕಳನ್ನು ಕರೆತಂದು, ತಮ್ಮ ಮನೆಯಲ್ಲಿ ವಿಧ-ವಿಧವಾದ ತಿನಿಸುಗಳನ್ನು ಮಾಡಿಸಿ, ತಿನ್ನಿಸಿ ಕಳಿಸುತ್ತಿದ್ದರಂತೆ. ಇಷ್ಟೊಂದು ಅತಿಯಾದ ಮಾನವೀಯತೆ ಅವರಲ್ಲಿ ಮನೆ ಮಾಡಿತ್ತು. ಬಡಬಗ್ಗರಿಗೆ ಎಣ್ಣೆ-ಅಕ್ಕಿಯನ್ನು, ದಾನ ಮಾಡುತ್ತಿದ್ದರಂತೆ. ಹೀಗೆ ಅವರ ಔದಾರ್ಯ ಮಿತಿಮೀರಿದುದಾಗಿತ್ತು. ಆಗಿನ ಕಾಲದಲ್ಲಿ ಹಿಂದುಳಿದ ಜನಾಂಗದವರನ್ನು ಅಸ್ಪೃಶ್ಯರಂತೆ ಕಾಣುತ್ತಿದ್ದರು. ಅವರಿಗೆ ದೇವಸ್ಥಾನಗಳಲ್ಲಿ ಪ್ರವೇಶವಿರಲಿಲ್ಲ. ಮಾನವರಲ್ಲೇ ಈ ತಾರತಮ್ಯಗಳು ಅವರಿಗೆ ಸರಿಬೀಳುತ್ತಿರಲಿಲ್ಲ. ಹಾಗಾಗಿ, ಶಾಂತಯುತ ಹೋರಾಟ ನಡೆಸಿ, ಆಗಿನ ಕಾಲದಲ್ಲೇ ಗೋಕರ್ಣದಿಂದ ಕೇರಳದವರೆಗಿನ ದೇವಸ್ಥಾನಗಳಲ್ಲಿ ಹರಿಜನರು ಪ್ರವೇಶಿಸಲು ಪರವಾನಗಿ ದೊರೆಯುವಂತೆ ಮಾಡಿದರು. ವಿಧವಾ ವಿವಾಹ, ಅಂತರ್ಜಾತೀಯ ವಿವಾಹ. ಮಹಿಳಾ ಸಮಾಜಗಳಿಗೆ ಪ್ರೋತ್ಸಾಹವಿತ್ತರು. ಪ್ರಾಣಿಬಲಿ ನಿಷೇಧಕ್ಕೆ ಬೆಂಬಲ ನೀಡಿದರು. ಹೀಗೆ ಸಾಮಾಜಿಕ ಕ್ಷೇತ್ರದಲ್ಲೂ ಬಹುಮುಖ ಸೇವೆ ಮಾಡಿದ್ದಾರೆ.

ಸ್ವಾತಂತ್ರ್ಯ ಹೋರಾಟದಲ್ಲಿ ಸದಾಶಿವರಾಯರು ಗಾಂಧೀಜಿಯವರೊಡಗೂಡಿ ಪ್ರಮುಖ ಪಾತ್ರವಹಿಸಿದ್ದಾರೆ. ಈ ಹೋರಾಟಕ್ಕಾಗಿ ತಮ್ಮ ಸಂಪತ್ತೆಲ್ಲವನ್ನೂ ದೇಶಕ್ಕಾಗಿ ಅರ್ಪಿಸಿದರು. ಇದೇ ಸಂದರ್ಭದಲ್ಲಿ ಅವರ ಪತ್ನಿ, ಒಬ್ಬ ಮಗಳು

ಮತ್ತು ಅವರ ಏಕಮಾತ್ರ ಪುತ್ರ ತೀರಿಹೋದರು. ಮನೆಯಲ್ಲಿದ್ದ ವಜ್ರ, ವೈಢೂರ್ಯ, ಬಂಗಾರ ಎಲ್ಲವನ್ನೂ ರಾಷ್ಟ್ರಕ್ಕಾಗಿ ದಾನಮಾಡಿ, ತಾವೇ ನೇಯ್ದ ಖಾದಿಬಟ್ಟೆಯನ್ನು ಉಟ್ಟು ಸರಳಜೀವನ ಬದುಕಿದರು. ಹೀಗೆ ದೇಶಕ್ಕಾಗಿ ತಮ್ಮಲ್ಲಿದ್ದ ಎಲ್ಲವನ್ನೂ ಕೊಟ್ಟು ಬರಿಗೈಯ್ಯಾದರೂ ರಾಷ್ಟ್ರಪ್ರೇಮಿಯಾಗಿದ್ದರು. ಆದರೆ ಇಂದಿನ ಬಹುಮಂದಿ ರಾಜಕಾರಣಿಗಳು ಬರಿಗೈಯ್ಯಿಂದ ಬಂದು ರಾಷ್ಟ್ರವನ್ನೇ ದೋಚಿ ಬರಿದು ಮಾಡುವವರಾಗಿದ್ದಾರೆ! ಇದು, ಭಾರತೀಯರು ನಾಚಿಕೆಯಿಂದ ತಲೆತಗ್ಗಿಸಬೇಕಾದ ಅಂಶವಾಗಿದೆ.

ಈ ರೀತಿಯಾಗಿ ದೇಶದ ಸ್ವತಂತ್ರಕ್ಕಾಗಿ, ಏಳಿಗೆಗಾಗಿ, ನಾಡಿನ ಅಭಿವೃದ್ಧಿಗಾಗಿ, ಸಮಾಜದ ಸುಧಾರಣೆಗಾಗಿ ತಮ್ಮನ್ನು ಅರ್ಪಿಸಿಕೊಂಡ ಸದಾಶಿವರಾಯರು ೧೯೩೭ನೇ ಇಸವಿ ಜನವರಿ ಒಂಭತ್ತರಂದು ತಮ್ಮ ಐವತ್ತಾರನೆಯ ವಯಸ್ಸಿನಲ್ಲಿ ತೀರಿಕೊಂಡರು. ಆಗರ್ಭ ಶ್ರೀಮಂತ ಮನೆತನದಲ್ಲಿ ಜನಿಸಿದ ಅವರ ಅಂತ್ಯ ಸಂಸ್ಕಾರಕ್ಕೂ ಅವರ ಮನೆಯಲ್ಲಿ ಹಣವಿರಲಿಲ್ಲವಂತೆ! ಅನೇಕ ಸಾಮಾಜಿಕ, ರಾಜಕೀಯ ಮುಂದಾಳುಗಳು ಮುಂದೆ ಬಂದು ಅಪರೂಪದ ರಾಷ್ಟ್ರಪ್ರೇಮಿಗೆ ತಮ್ಮ ಗೌರವ ಅರ್ಪಿಸಿದರು.

ಪುಟ್ಟೂ, ಸದಾಶಿವರಾಯರು, ಧೀರೋದಾತ್ತವಾದ, ಮಾನವೀಯ ಅಂಶಗಳನ್ನೊಳಗೊಂಡ ರಾಷ್ಟ್ರಪ್ರೇಮಿಯಾಗಿದ್ದರು. ಅವರು ಇಂದಿನ ಪೀಳಿಗೆಗೆ ಮಾರ್ಗದರ್ಶಕರಾಗಿದ್ದಾರೆ. ಅವರ ಜೀವನ ನಮಗೆ ದಾರಿದೀಪವಾಗಿದೆ. ಅವರಂತೆ ಬದುಕಲು ಎಲ್ಲರಿಗೂ ಸಾಧ್ಯವಾಗದಿರಬಹುದು. ಆದರೆ ಅವರು ನಡೆದ ದಾರಿಯಲ್ಲಿ ನಡೆದು ದೇಶದ ಗೌರವ ಉಳಿಯುವಂತೆ ಭಾರತೀಯರು ಬದುಕಬೇಕು. ಕೇವಲ ಸ್ವರ್ಣ ಸ್ವಾತಂತ್ರ್ಯೋತ್ಸವ ಆಚರಿಸಿ ಮೆರೆಯುವುದರಿಂದ ಭಾರತದ ಗೌರವ ಹೆಚ್ಚುವುದಿಲ್ಲ. ಈ ದೇಶದ ಜನರು ಬದುಕುವ ರೀತಿ, ದೇಶಕ್ಕೆ ಗೌರವವನ್ನು ತಂದು ಕೊಡುವಂತಿರಬೇಕು. ಸಾರ್ಥಕವಾದ ಅವರ ಜೀವನ, ಮಾನವ ಕುಲಕ್ಕೆ ಸ್ಫೂರ್ತಿದಾಯಕ ಎಂದು ಪತ್ರಿಕೆಯೊಂದರ ಸಂಪಾದಕೀಯದಲ್ಲಿ ಬರೆಯಲಾಗಿದೆ. ಇವರ ಜೀವನದ ಬಗೆಗೆ ಡಾ ॥ ಸೂರ್ಯನಾಥ ಕಾಮತರು, 'ತ್ಯಾಗವೀರ ಕಾರ್ನಾಡ್ ಸದಾಶಿವರಾಯರು' ಎಂಬ ಪುಸ್ತಕ ಬರೆದಿದ್ದಾರೆ. ಅದರಲ್ಲಿ ಹೆಚ್ಚಿನ ವಿವರಗಳು ದೊರೆಯುತ್ತವೆ. ಆ ಪುಸ್ತಕವನ್ನು ತಪ್ಪದೇ ಓದು. ನಿಮ್ಮ ಶಾಲೆಯ ಲೈಬ್ರರಿಗೂ ತರಿಸಲು ನಿಮ್ಮ ಶಿಕ್ಷಕರಿಗೆ ಹೇಳು.

ಇಂತಿ ನಿನ್ನ,

ಹಿತೈಷಿ.

■

## ೩೮. ಸಮಯ ಪ್ರಜ್ಞೆ: ಚಾಚಾ ನೆಹರು

ಪ್ರೀತಿಯ ಪುಟ್ಟೂ,

ನವೆಂಬರ ತಿಂಗಳು ಮಕ್ಕಳಿಗೆ ಬಹಳ ಇಷ್ಟ. ಏಕೆ ಹೇಳು ನೋಡೋಣ. ಹದಿನಾಲ್ಕನೆಯ ತಾರೀಖಿನಂದು ಮಕ್ಕಳ ದಿನಾಚರಣೆ ಆಚರಿಸುತ್ತಾರೆ. ಅಂದು, ಶಾಲೆಗಳಲ್ಲಿ ಮಕ್ಕಳಿಗೆ ಸಿಹಿ ಹಂಚುತ್ತಾರೆ. ಮಕ್ಕಳ ಹಿತಚಿಂತನಾಪರವಾದ ಭಾಷಣಗಳನ್ನು ಮಾಡುತ್ತಾರೆ. ಮಕ್ಕಳಿಂದ ಆಟ ಆಡಿಸುತ್ತಾರೆ. ಭಾಷಣ, ಆಟ, ನಾಟಕ ಮುಂತಾದ ಚಟುವಟಿಕೆಗಳಲ್ಲಿ ಮಕ್ಕಳು ಭಾಗವಹಿಸುವಂತೆ ಮಾಡುವುದರ ಮೂಲಕ ಅವರು ಸಂತೋಷ ಹಾಗೂ ಚಟುವಟಿಕೆಯಿಂದ ದಿನಗಳೆಯುವಂತಹ ವ್ಯವಸ್ಥೆ ಮಾಡುತ್ತಾರೆ.

ನವೆಂಬರ್ ಹದಿನಾಲ್ಕರಂದೇ ಮಕ್ಕಳ ದಿನಾಚರಣೆ ಆಚರಿಸಲು ಕಾರಣವೇನೆಂದು ನಿನಗೆ ಗೊತ್ತೆ ಮಗೂ? ಆ ದಿನ ನಮ್ಮ ನೆಚ್ಚಿನ ಪ್ರಧಾನಿಯವರಾಗಿದ್ದ ದಿ॥ ಜವಾಹರಲಾಲ್ ನೆಹರೂರವರ ಹುಟ್ಟಿದ ದಿನ. ಅವರಿಗೆ ಮಕ್ಕಳೆಂದರೆ ಪಂಚಪ್ರಾಣ. ಮಕ್ಕಳೂ ಅಷ್ಟೆ, ಅವರನ್ನು ಬಹಳ ಪ್ರೀತಿಸುತ್ತಿದ್ದರು. ಅವರನ್ನು ಚಾಚಾ ಎಂದು ಪ್ರೀತಿಯಿಂದ ಕರೆಯುತ್ತಿದ್ದರು. ಅವರು ಹುಟ್ಟಿದ ದಿನದಂದು ಮಕ್ಕಳು ಅವರ ಮನೆಗೆ ಹೋಗಿ ತಮ್ಮ ಪ್ರೀತಿಯ ಚಾಚಾಗೆ ಶುಭಕೋರಿ ಬರುತ್ತಿದ್ದರು. ಹಾಗಾಗಿ ನೆಹರೂರವರು 'ಚಾಚ ನೆಹರೂ' ಎಂದೇ ಪ್ರಸಿದ್ಧರಾಗಿದ್ದಾರೆ. ಭಾರತೀಯರ ನೆಚ್ಚಿನ ನಾಯಕರಾದ ಅವರ ಹುಟ್ಟುಹಬ್ಬವನ್ನು ದೇಶವೆಲ್ಲಾ ಪ್ರೀತಿಯಿಂದ ಆಚರಿಸುತ್ತಿದ್ದಾಗ ನೆಹರೂರವರು ಆ ದಿನವನ್ನು 'ಮಕ್ಕಳ ದಿನ' ಎಂದು ಪರಿಗಣಿಸಿ ಮಕ್ಕಳ ಹಿತಕ್ಕೆ, ಸಂತೋಷಕ್ಕೆ, ಅಭ್ಯುದಯಕ್ಕೆ ಪೂರಕವಾದ ಚಟುವಟಿಕೆಗಳ ಮೂಲಕ ಆಚರಿಸಬೇಕೆಂದು ಇಚ್ಛಿಸಿದರು. ಅಂದಿನಿಂದ ನಮ್ಮ ದೇಶದಲ್ಲಿ ನವೆಂಬರ್ ಹದಿನಾಲ್ಕನ್ನು 'ಮಕ್ಕಳ ದಿನ' ವೆಂದು ಆಚರಿಸುತ್ತಾ ಬಂದಿದ್ದೇವೆ.

ಪುಟ್ಟೂ, ನೆಹರೂರವರು ನಮ್ಮ ದೇಶ ಹೆಮ್ಮೆ ಪಡತಕ್ಕಂತಹ ರಾಷ್ಟ್ರಪ್ರೇಮಿ. ದೇಶಕ್ಕಾಗಿ ತಮ್ಮ ಸುಖ-ಸಂತೋಷಗಳನ್ನೆಲ್ಲಾ ಕಡೆಗಣಿಸಿ, ರಾಷ್ಟ್ರಪಿತ ಮಹಾತ್ಮ ಗಾಂಧಿಯವರ ಸ್ವಾತಂತ್ರ್ಯ ಹೋರಾಟದಲ್ಲಿ ಸೇರಿದರು. ಆಗಿನ ಕಾಲದ ಪ್ರತಿಷ್ಠಿತ ಶ್ರೀಮಂತರೂ ಬ್ರಿಟಿಷ್ ಆಡಳಿತಗಾರರಿಂದ ಮನ್ನಣೆ ಪಡೆದಿದ್ದವರೂ, ಹೆಸರಾಂತ ವಕೀಲರೂ ಆಗಿದ್ದ ಮೋತೀಲಾಲ್ ನೆಹರೂರವರ ಏಕಮಾತ್ರ ಪುತ್ರರಾಗಿದ್ದರು. ಬಯಸಿದ್ದರೆ ಅವರು ಸುಖದ ಸುಪ್ಪತ್ತಿಗೆಯಲ್ಲಿ ಓಲಾಡಬಹುದಿತ್ತು. ಆದರೆ ಪರಕೀಯರಿಗೆ ಅಧೀನವಾಗಿದ್ದುಕೊಂಡು ಸ್ವರ್ಗಸುಖ ಅನುಭವಿಸುವುದಕ್ಕಿಂತ,

ಸ್ವತಂತ್ರ ರಾಷ್ಟ್ರದ ಪ್ರಜೆಯಾಗಿ ಬದುಕುವುದು ಗೌರವವೆಂದು ಬಗೆದು, ಬ್ರಿಟಿಷರ ವಿರುದ್ಧ ಭಾರತ ಸ್ವತಂತ್ರವಾಗುವವರೆಗೂ ಹೋರಾಡಿದರು. ಅವರು ಮಹಾತ್ಮಾ ಗಾಂಧಿಯವರ ಬಲಗೈ ಬಂಟರಾಗಿದ್ದರು.

ನೆಹರೂರವರು ಬಹಳ ಚಟುವಟಿಕೆಯುಳ್ಳ ವ್ಯಕ್ತಿಯಾಗಿದ್ದರು. ಜೀವನದ ಒಂದು ನಿಮಿಷವನ್ನೂ ಅವರು ವ್ಯರ್ಥವಾಗಿ ಕಳೆಯುತ್ತಿರಲಿಲ್ಲ. ಸಮಯಪ್ರಜ್ಞೆ ಯುಳ್ಳವರಾಗಿದ್ದರು. ಯಾವುದೇ ಕೆಲಸವನ್ನು ಅವರು ಸಮಯಕ್ಕೆ ಸರಿಯಾಗಿ ಮಾಡಿ ಮುಗಿಸುತ್ತಿದ್ದರು. ಅವರೊಬ್ಬ ದಕ್ಷ ಆಡಳಿಗಾರರೂ, ನಿಪುಣ ರಾಜಕಾರಣಿಯೂ ಆಗಿದ್ದರು. ಅವರು ಸ್ವತಂತ್ರ ಭಾರತದ ಮೊದಲ ಪ್ರಧಾನಿ ; ಅಪ್ರತಿಮ ರಾಷ್ಟ್ರಪ್ರೇಮಿ. ದೇಶಕ್ಕೆ, ಅವರ ಕೊಡುಗೆ ಅಪಾರ. ದೃಢ ನಿರ್ಧಾರದಿಂದ ನಮ್ಮ ವ್ಯಕ್ತಿತ್ವವನ್ನು ಚೆನ್ನಾಗಿ ರೂಪಿಸಿಕೊಂಡರೆ, ನೀನೂ ಸಹ ದೇಶಕ್ಕೆ ಅಪಾರ ಕೊಡುಗೆ ಕೊಡಬಲ್ಲೆ. ದೇಶದ ಭವಿಷ್ಯವನ್ನು ಚೆನ್ನಾಗಿ ರೂಪಿಸಬಲ್ಲೆ. ಅದಕ್ಕಾಗಿ ನೀನು ಈ ದಿನದಿಂದಲೇ ಒಳ್ಳೆಯ ಆದರ್ಶಗಳನ್ನು ರೂಪಿಸಿಕೊಳ್ಳಬೇಕು. ಪ್ರಯತ್ನಿಸುತ್ತೀಯಲ್ಲವೆ? ಮತ್ತೆ ಬರೆಯುವೆ.

ಇಂತಿ ನಿನ್ನ,
ಹಿತೈಷಿ.

■

## ೩೯. ಕಾರ್ಯಸಿದ್ಧಿ

ಪ್ರೀತಿಯ ಪುಟ್ಟೂ,

ಈ ದಿನ 'ಕಾರ್ಯಸಿದ್ಧಿ' ಯ ಬಗ್ಗೆ ಒಂದು ಲೇಖನ ಓದಿದೆ, 'ಹಂಸವಾಣಿ'ಯಲ್ಲಿ ಆ ಲೇಖನದಲ್ಲಿದ್ದ ಅಂಶಗಳನ್ನು ನೀನು ಅರ್ಥಮಾಡಿಕೊಂಡು ಮನವರಿಕೆ ಮಾಡಿಕೊಂಡರೆ, ಒಳ್ಳೆಯದೆನ್ನಿಸಿ, ಆ ಲೇಖನದ ಮುಖ್ಯಾಂಶವನ್ನು ನಿನಗೆ ಬರೆಯುತ್ತಿರುವೆ.

ನೋಡು ಮಗೂ, ನಾವು ಹುಟ್ಟಿದ ಮೇಲೆ ಜೀವನ ಸಾರ್ಥಕವಾಗುವಂತೆ ಬದುಕಬೇಕಲ್ಲವೆ? ಜೀವನದ ಸಾರ್ಥಕತೆ ಇರುವುದು ಕಾರ್ಯಸಿದ್ಧಿಯಲ್ಲಿ ಎನ್ನುತ್ತದೆ 'ಹಂಸ'. ಕಾರ್ಯಸಿದ್ಧಿ ಪಡೆಯಲು ಕಾರ್ಯಸಾಧನೆ ಬೇಕು. ಕಾರ್ಯಸಾಧನೆಗೆ ಸತ್ಸಂಕಲ್ಪ ಹಾಗೂ ಆತ್ಮವಿಶ್ವಾಸ ಅಗತ್ಯ. ಕಾರ್ಯ ಸಿದ್ಧಿಸುವವರೆಗ ಆ ಕೆಲಸವನ್ನು ಬಿಡದೆ ನಿರಂತರವಾಗಿ ಕೊನೆಯವರೆಗೂ ಪಟ್ಟು ಹಿಡಿದು ಮುಗಿಸಬೇಕು. ಕೆಲಸವನ್ನು ಮುಗಿಸಲು ಕೇವಲ ಪ್ರತಿಭೆಯಾಗಲೀ, ಬುದ್ಧಿವಂತಿಕೆಯಾಗಲೀ ಸಾಕಾಗುವುದಿಲ್ಲ. ಶಿಕ್ಷಣವೂ ಸಂಪೂರ್ಣ ಸಹಾಯಕ್ಕೆ ಬಾರದು. ಕಾರ್ಯಸಾಧಿಸುವ ಹಟ, ಜಿಗುಟುತನ

ಅತ್ಯಗತ್ಯ. ಕಾರ್ಯವನ್ನು ಸರಿಯಾಗಿ ಮಾಡಿ ಮುಗಿಸಬೇಕೆಂಬ ವ್ಯಕ್ತಿ ತನ್ನನ್ನು ಆ ಕೆಲಸದಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಳ್ಳುತ್ತಾನೆ. ಹಾಗೆ ತೊಡಗಿಸಿಕೊಂಡಾಗ ಅವನಲ್ಲಿ ಸಮರ್ಪಣಾಭಾವ ಉಂಟಾಗುತ್ತದೆ. ತಾನು ಮಾಡುವ ಕಾರ್ಯ ಶ್ರೇಷ್ಠವಾದುದು ಎಂಬ ನಂಬಿಕೆ ಮೂಡುತ್ತದೆ; ದಕ್ಷತೆ ಹೆಚ್ಚುತ್ತದೆ. ಆಗ ಕೆಲಸ ಸಮರ್ಪಕವಾಗಿ ಪೂರ್ಣಗೊಳ್ಳುತ್ತದೆ.

ಪುಟ್ಟೂ, ಒಂದು ಕೆಲಸವನ್ನು ಪ್ರಾರಂಭಿಸಿದರೆ ಅದನ್ನು ಯಶಸ್ವಿಯಾಗಿ ಪೂರ್ಣಗೊಳಿಸುವ ಸ್ವಭಾವ ಬೆಳೆಸಿಕೊ. ಅಂತಹ ಸ್ವಭಾವವಿಲ್ಲದ ವ್ಯಕ್ತಿ ಅವಿವೇಕಿಯೇ ಸರಿ. ಅವಿವೇಕಿಯಾದವನು ಉತ್ಸಾಹದಿಂದ ಕೆಲಸ ಪ್ರಾರಂಭಿಸುತ್ತಾನೆ. ಸ್ವಲ್ಪ ಕಾಲದಲ್ಲೇ ಅವನಿಗೆ ಆ ಕೆಲಸದಲ್ಲಿ ಆಸಕ್ತಿ ಕುಂದುತ್ತದೆ. ಆಲಸ್ಯ ಬರುತ್ತದೆ. ಕೆಲಸ ಕೆಡುತ್ತದೆ. ಕಾರ್ಯ ಅರ್ಧಕ್ಕೇ ನಿಲ್ಲುತ್ತದೆ. ನಂತರ ಆ ವ್ಯಕ್ತಿ ತಪ್ಪನ್ನು ಯಾರ್‍ಯಾರ ಮೇಲೆಯೋ ಹೊರಿಸುತ್ತಾನೆ ಅಥವಾ ಕುಂಟು ನೆಪಗಳನ್ನು ಮುಂದೊಡ್ಡುತ್ತಾನೆ. ಅವನು ತನ್ನ ಅಸಾಮರ್ಥ್ಯವನ್ನಾಗಲೀ, ಕೆಲಸ ಪೂರೈಸಬೇಕೆಂಬ ದೃಢ ಸಂಕಲ್ಪದ ಕೊರತೆಯನ್ನಾಗಲೀ, ಅರ್ಥಮಾಡಿಕೊಳ್ಳದೆ ಬೇರೆಯವರನ್ನು ದೂರುತ್ತಾನೆ ಅಥವಾ ತನ್ನ ಅದೃಷ್ಟವನ್ನು ಹಳಿಯುತ್ತಾನೆ. ಇಂಥವನು ಯಾವ ಕೆಲಸವನ್ನೂ ಸಾಧಿಸಲಾರ. ಯಾವ ಕೆಲಸವೂ ಅವನಿಗೆ ಸಿದ್ಧಿಯಾಗುವುದಿಲ್ಲ. ಅವನದು ಅಪೂರ್ಣ ವ್ಯಕ್ತಿತ್ವ, ಅವನು ನಿಷ್ಪ್ರಯೋಜಕನೆಂದೇ ಹೇಳಬೇಕು.

ಏನಾದರೂ ಕೆಲಸವನ್ನು ಸಾಧಿಸಬೇಕೆಂದು ನಿರ್ಧರಿಸಿದರೆ, ಅದರ ಸಾಧಕ ಬಾಧಕಗಳನ್ನು ಯೋಚಿಸಬೇಕು. ಅದರಿಂದಾಗುವ ಪ್ರಯೋಜನವನ್ನು ಅರ್ಥಮಾಡಿಕೊಳ್ಳಬೇಕು. ತಾನು ಅದನ್ನು ಪೂರೈಸಬಲ್ಲೆ, ಪೂರೈಸುವ ಸಾಮರ್ಥ್ಯ ತನ್ನಲ್ಲಿದೆ ಎನ್ನಿಸಿದರೆ ಮಾತ್ರ ಆ ಕೆಲಸಕ್ಕೆ ಕೈ ಹಾಕಬೇಕು. ಕೆಲಸ ಕೈಗೊಂಡಮೇಲೆ ಅದನ್ನು ಅರ್ಧಕ್ಕೆ ಎಂದೂ ಬಿಡಬಾರದು. ಎಲ್ಲಿ ಬೇಕೆಂದರೆ ಅಲ್ಲಿ ಕೆಲಸ ನಿಲ್ಲಿಸುವ ವ್ಯಕ್ತಿ ಬೇಜವಾಬ್ದಾರಿಯವನೆನಿಸಿಕೊಳ್ಳುತ್ತಾನೆ. ಅಂತಹವನಿಗೆ ಸೋಲು ಕಟ್ಟಿಟ್ಟದ್ದು. ಅವನು ದುರ್ಬಲ. ಅವಿವೇಕಿ. ಅವನಿಂದ ಯಶಸ್ಸು ಬಹುದೂರ ಸರಿಯುತ್ತದೆ. ಆದುದರಿಂದ ಪುಟ್ಟೂ, ನೀನೆಂದೂ ಇಂತಹ ಬೇಜವಾಬ್ದಾರಿತನದ ಮನೋಭಾವ ಬೆಳೆಸಿಕೊಳ್ಳಬೇಡ. ಕಾರ್ಯ ಸಿದ್ಧಿಯಾಗುವತನಕ ಪರಿಶ್ರಮ ಪಡಬೇಕು. ಕಾರ್ಯಸಿದ್ಧಿಗೆ ವ್ಯವಸ್ಥಿತ ಮನಸ್ಸು ಬೇಕು. ಚಂಚಲ ಮನಸ್ಸಿನ ವ್ಯಕ್ತಿಗೆ ಕಾರ್ಯಸಿದ್ಧಿಸುವುದು ಸಾಧ್ಯವಿಲ್ಲ. ಕಾರ್ಯ ಸಾಧಿಸುವವನಿಗೆ ಸಮಾಧಾನ ಚಿತ್ತವಿರಬೇಕು; ಬಿಗುಮಾನ ಬಿಡಬೇಕು; ದಾಕ್ಷಿಣ್ಯ ಪಟ್ಟುಕೊಳ್ಳಬಾರದು. ವಸ್ತುನಿಷ್ಠೆಯಿಂದ ಕೆಲಸಮಾಡುವ ಶಿಸ್ತಿನ ಮನೋಭಾವ ಅಗ್ಯತ. ಹಿಡಿದ ಕೆಲಸವನ್ನು ಮಾಡಿ ಮುಗಿಸಿ ಆನಂದ ಪಡುವ ವಿಶಿಷ್ಟ ಗುಣ ನಿನ್ನಲ್ಲಿ ಬೆಳೆಸಿಕೊ. ಅದರಿಂದ ನಿನ್ನ ಅಭಿವೃದ್ಧಿಯಾಗುವ ಜೊತೆಗೆ ದೇಶದ ಏಳಿಗೆಯೂ ಸಾಧಿಸಲ್ಪಡುತ್ತದೆ.

ಕೆಲವರು ಕೆಲಸ ಪ್ರಾರಂಭಿಸಿ ಕೊನೆಯವರೆಗೂ ಬಿಡದೆ ಸಾಧಿಸುತ್ತಾರೆ. ಅವರು ಉತ್ತಮರು. ಮತ್ತೆ ಕೆಲವರು ಕೆಲಸ ಪ್ರಾರಂಭಿಸಿ, ಅರ್ಧಕ್ಕೇ ಬಿಟ್ಟು ಬಿಡುತ್ತಾರೆ. ಅವರು ಮಧ್ಯಮರು. ಮತ್ತೆ ಕೆಲವರು ಏನನ್ನೂ ಯೋಚಿಸುವುದಿಲ್ಲ; ಏನನ್ನೂ ಮಾಡುವುದಿಲ್ಲ, ಕೇವಲ ಆಲಸಿಗಳು. ಅಂತಹವರು ಅಧಮರು. ಅವರು ಕುಟುಂಬಕ್ಕೂ ಭಾರತ ದೇಶಕ್ಕೂ ಹೊರೆ. ಪುಟ್ಟೂ, ನೀನು ಉತ್ತಮರ ಗುಂಪಿಗೆ ಸೇರಿ, ದೇಶದ ಸಂಪತ್ತಾಗಬೇಕೆಂಬುದೇ ನನ್ನ ಆಸೆ.

ಕೆಲವರು ಕೆಲಸಗಳನ್ನು ಪ್ರಸಿದ್ಧಿಗಾಗಿ, ಯಶಸ್ಸಿಗಾಗಿ ಮಾಡುತ್ತಾರೆ. ಹೀಗೆ ಪ್ರಸಿದ್ಧಿಯ ಬೆನ್ನು ಹತ್ತಿದವರಿಗೆ ಕಾರ್ಯದಕ್ಷತೆ ಇರುವುದಿಲ್ಲ. ಕಾರ್ಯದ ಗುಣ ಮಟ್ಟಕ್ಕಿಂತ, ಕೀರ್ತಿಯ ಕಡೆಯೇ ಅವರ ಗಮನವಿರುವುದರಿಂದ ಅದರ ಕಾರ್ಯಸಾಧನೆಯ, ಕಾರ್ಯದ ಗುಣಮಟ್ಟ ಕೆಳಮಟ್ಟದ್ದಿರುತ್ತದೆ. ಆದ್ದರಿಂದ ಕಾರ್ಯ ಮಾಡುವಾಗ ನಿನ್ನ ಗುರಿ, ಕಾರ್ಯವನ್ನು ಉತ್ತಮ ರೀತಿಯಿಂದ ಮಾಡಿ, ಅತ್ಯುತ್ತಮ ಫಲಿತಾಂಶ ಪಡೆಯುವ ಕಡೆಗಿರಬೇಕು. ಅದು ಚೆನ್ನಾಗಿ ಸಾಧಿತವಾದರೆ ಪ್ರಸಿದ್ಧಿ ಹಾಗೂ ಯಶಸ್ಸು ತಾನೇ ತಾನಾಗಿ ಬರುತ್ತವೆ. ಆಗ ಸಿಗುವ ಆನಂದ ವರ್ಣನಾತೀತ.

ಪುಟ್ಟೂ, ನಿನ್ನ ಅಭ್ಯಾಸ, ಪರೀಕ್ಷೆ ಪಾಸುಮಾಡುವುದರ ಜೊತೆಗೆ ಇಂತಹ ಅಂಶಗಳನ್ನು ನೀನು ತಿಳಿದುಕೊಂಡರೆ ನಿನ್ನ ಬುದ್ಧಿ, ನಿನ್ನ ಶಿಕ್ಷಣ, ಪದವಿಗಳಿಂದ ಹೆಚ್ಚಿನ ಪ್ರಯೋಜನ ಪಡೆಯಲು ಸಾಧ್ಯವಾಗುತ್ತದೆ. ಭಾರತದ ಸತ್ಪುತ್ರನಾಗಿ ಬಾಳುತ್ತೀಯೆ. ಇಂತಹ ವಿಷಯಗಳನ್ನು ಆಸಕ್ತಿಯಿಂದ ಅರಿತುಕೊಂಡು ಮುಂದುವರಿ.

ಇಂತಿ ನಿನ್ನ,
ಹಿತೈಷಿ.

■

## ೪೦. ದೀನಸೇವೆ : ಮದರ್ ಥೆರೇಸಾ

ಪ್ರೀತಿಯ ಪುಟ್ಟೂ,

೫–೯–೯೭ ಮಾನವೀಯ ಇತಿಹಾಸದಲ್ಲಿ ಒಂದು ಕರಾಳದಿನವೆಂದೇ ಹೇಳಬೇಕು. ಮಾನವೀಯತೆಯೇ ಮೂರ್ತಿವೆತ್ತಂತಿದ್ದ, ಮಮತಾಮಯಿ ಮದರ್ ಥೆರೇಸಾ ಇನ್ನಿಲ್ಲವಾದರು. ಬಡವರ, ದುಃಖಿಗಳ, ದೀನದಲಿತರ, ಏಕಾಂಗಿಗಳ ತಾಯಿ ಈ ಜಗತ್ತಿನಿಂದ ಕಣ್ಮರೆಯಾದರು. ಅಂತಹ ವ್ಯಕ್ತಿ ಹುಟ್ಟಿಬರುವುದು, ಗಾಂಧೀಜಿಯಂತೆ ಯುಗಕ್ಕೊಂದು ಬಾರಿ.

ಮದರ್ ಥೆರೇಸಾ ಎಂದ ತಕ್ಷಣ, ನಮ್ಮ ಕಣ್ಮುಂದೆ, ನೀಲಿ ಅಂಚಿನ ಶುಭ್ರ ಬಿಳಿಯ ಸೀರೆಯನ್ನುಟ್ಟು, ತಲೆಯನ್ನು ಸೆರಗಿನಿಂದ ಮುಚ್ಚಿಕೊಂಡ, ನೆರಿಗೆ ಕಟ್ಟಿದ ಚರ್ಮದ, ಗುಳಿಬಿದ್ದ ಕಣ್ಣಿನ, ದಯೆಯೇ ಮೂರ್ತಿವೆತ್ತಂತಿದ್ದ ಚಿತ್ರ ನಿಲ್ಲುತ್ತದೆ. ತಮ್ಮ ಎಂಭತ್ತೆಂಟನೆಯ ವಯಸ್ಸಿನವರೆಗೂ ಅಹೋರಾತ್ರಿ ದೀನರ, ದುಃಖಿಗಳ ಸೇವೆಮಾಡಿದ ಮಹಾಮಾತೆ ಈಕೆ. ಇಂತಹವರಿಂದಲೇ ದುಃಖಿತರ ದುಃಖ ಸಹನವಾಗಲು ಸಾಧ್ಯ. ಇವರಲ್ಲಿದ್ದ ಮಾನವೀಯತೆಯ ಕೆಲವು ಅಂಶಗಳಾದರು ಪ್ರತಿಯೊಬ್ಬರಲ್ಲೂ ಇದ್ದರೆ, ಜನರು ಎಷ್ಟೋ ನೆಮ್ಮದಿಯಿಂದ ಬದುಕಲು ಸಾಧ್ಯ.

ಪುಟ್ಟೂ, ಮದರ್ ಥೆರೀಸಾ, ಭಾರತೀಯ ಪ್ರಜೆಯಾಗಿದ್ದರಾದರೂ ಅವರು ಹುಟ್ಟಿದುದು ಯುಗೋಸ್ಲೇವಿಯಾದ ಸ್ಕ್ಯಾಪ್‌ಜಿ ಎಂಬಲ್ಲಿ. ಅವರು ಹತ್ತೊಂಬತ್ತನೂರಾ ಹತ್ತನೆಯ ಇಸವಿ, ಆಗಸ್ಟ್ ಇಪ್ಪತ್ತರಂದು, ನಿಕೋಲಾಸ್ ಬೊಜಕ್ಸಿಯಾ ಮತ್ತು ಡ್ರಾನಾ ದಂಪತಿಗೆ ಮಗಳಾಗಿ ಜನಿಸಿದರು. ಆಗ ತಂದೆ ತಾಯಿಗಳಿಟ್ಟ ಹೆಸರು ಆಗ್ನೆಸ್ ಗಾಂಕ್ಸಾ ಎಂದು. ಈಕೆ ಬೆಳೆದು ಶಿಕ್ಷಣ ಪಡೆದು ಕ್ಯಾಥೋಲಿಕ್ ಸಂಘದ ಸದಸ್ಯತ್ವವನ್ನು ಪಡೆದರು. ಚಿಕ್ಕ ವಯಸ್ಸಿನಲ್ಲೇ ಏಸುಕ್ರಿಸ್ತನ ಬೋಧನೆಗಳ, ಧಾರ್ಮಿಕ ವಿಚಾರಗಳ ಬೋಧನೆಯಾಯ್ತು. ಅವು ಮನಸ್ಸಿನ ಮೇಲೆ ಆಳವಾದ ಪ್ರಭಾವ ಬೀರಿದವು. ಯುಗೋಸ್ಲೇವಿಯಾದ ಏಸು ಸಂಘದ ಅನೇಕ ಕಾರ್ಯಕರ್ತರು, ಭಾರತಕ್ಕೆ ಧಾರ್ಮಿಕ ಕಾರ್ಯಗಳಿಗಾಗಿ ಬರುತ್ತಿದ್ದರು. ಅವರಿಂದ ಭಾರತದಲ್ಲಿಯ ದೀನರ, ದುರ್ಬಲರ, ರೋಗಿಗಳ ಸ್ಥಿತಿ ಗತಿಗಳನ್ನು ಕೇಳಿ, ಅವರ ಸೇವೆ ಮಾಡಬೇಕೆಂಬ ನಿರ್ಧಾರ ಹೊಂದಿ ಆಗ್ನೇಸ್ ಐರ್ಲೆಂಡಿನಲ್ಲಿ ಒಂದು ವರ್ಷದ ತರಬೇತಿ ಪಡೆದಳು. ನಂತರ ಸನ್ಯಾಸ ದೀಕ್ಷೆ ಪಡೆದು ಸಿಸ್ಟರ್ ಥೆರೇಸಾ ಆದರು. ತನ್ನ ಹುಟ್ಟೂರನ್ನು ಬಿಟ್ಟು ಭಾರತವನ್ನು ತನ್ನ ಸೇವಾಕ್ಷೇತ್ರವನ್ನಾಗಿ ಆರಿಸಿಕೊಂಡ ಥೆರೀಸಾ ೧೯೩೦ ರಲ್ಲಿ ಭಾರತಕ್ಕೆ ಬಂದರು. ಕಲ್ಕತ್ತಾದ ಸೇಂಟ್ ಮೇರೀಸ್ ಪ್ರೌಢಶಾಲೆಯಲ್ಲಿ ಶಿಕ್ಷಕಿಯಾಗಿ ಸೇರಿದ ಥೆರೇಸಾಗೆ, ಬೋಧನೆಗೆ ತಮ್ಮ ಕಾರ್ಯಕ್ಷೇತ್ರವನ್ನು ಸೀಮಿತವಾಗಿಸಿಕೊಳ್ಳುವುದು ಸಾಧ್ಯವಾಗಲಿಲ್ಲ. ಹಾಗಾಗಿ ತಮ್ಮ ಬಿಡುವಿನ ವೇಳೆಯಲ್ಲಿ, ರಜಾದಿನಗಳಲ್ಲಿ ರೋಗಿಗಳನ್ನೂ, ಬಡವರನ್ನೂ, ಕೊಳಚೆ ಪ್ರದೇಶದ ನಿವಾಸಿಗಳನ್ನು ಭೇಟ್ಟಿಯಾಗಿ, ಅವರ ಕಷ್ಟ-ಸುಖಗಳನ್ನು ವಿಚಾರಿಸಿ, ಅವರ ದುಃಖ ನಿವಾರಣೆಗೆ ಶ್ರಮಿಸುತ್ತಿದ್ದರು. ಥೆರೇಸಾ ದುಃಖಿಗಳ ದುಃಖ ನಿವಾರಿಸಿ ಅವರು ಸಂತೋಷವಾಗಿರುವುದನ್ನು ನೋಡಿ ಹಿಗ್ಗುತ್ತಿದ್ದರು. ಅವರ ಆನಂದ, ಅವರ ಮನಸ್ಸಿಗೆ ಸಂತೋಷ ನೀಡುತ್ತಿತ್ತು. ಬೇರೆಯವರ ದುಃಖವನ್ನು ನೋಡಿ ದುಃಖಿಸುವ, ಅವರು ಸುಖವಾಗಿರುವುದನ್ನು ನೋಡಿ ಸಂತೋಷಗೊಳ್ಳುವ ಹೃದಯವೆಷ್ಟು ದೊಡ್ಡದು! ಯೋಚಿಸು ಮಗೂ. ಬೇರೆಯವರ ಸುಖ ನೋಡಿ

ಹೊಟ್ಟೆಕಿಚ್ಚು ಪಡುವ, ಇತರರಿಗೆ ಕಷ್ಟಕೊಡುವ ಜನರೇ ಹೆಚ್ಚಿರುವ ಜಗತ್ತಿನಲ್ಲಿ ಇಂತಹ ಹೃದಯ ವೈಶಾಲ್ಯವಿರುವ ವ್ಯಕ್ತಿಗಳು ವಿರಳ. ಅದಕ್ಕಾಗಿಯೇ ಮದರ್ ಥೆರೇಸಾ ಜಗತ್ತಿನಾದ್ಯಂತ ಪ್ರಖ್ಯಾತರಾದರು. ಅವರು ನೋವು, ನರಳಿಕೆ, ಸಂಕಟವಿದ್ದಕಡೆ ಪ್ರತ್ಯಕ್ಷರಾಗುತ್ತಿದ್ದರು. ದುಃಖಿಗಳಿಗೆ ತಮ್ಮ ನಿರ್ಮಲ ಹೃದಯದಲ್ಲಿ ಇಂಬುಗೊಟ್ಟು ಅವರ ಕಣ್ಣೀರನ್ನು ಒರೆಸುತ್ತಿದ್ದರು. ನಿರ್ಗತಿಕರಿಗೆ ಮಾರ್ಗದರ್ಶನ ನೀಡಿ, ಅವರಿಗಾದ ಸಂತೋಷದಿಂದ ತಾವು ಆನಂದ ಪಡೆಯುತ್ತಿದ್ದರು.

ಬರುಬರುತ್ತಾ ಅವರಿಗೆ ಬಡವರ ಸೇವೆಗೆ ಇನ್ನೂ ಹೆಚ್ಚು ಸಮಯ ಬೇಕೆನ್ನಿಸಿ ಶಿಕ್ಷಕ ವೃತ್ತಿಯನ್ನು ಬಿಟ್ಟು ದಾದಿಯ ತರಬೇತಿಯನ್ನು ಪಡೆದು, ತಮ್ಮನ್ನು ಸಂಪೂರ್ಣವಾಗಿ ಸೇವೆಗೆ ೧೯೪೮ ರಲ್ಲಿ ಅರ್ಪಿಸಿಕೊಂಡರು. ಇತರರ ಸಹಕಾರದೊಡನೆ ೧೯೫೦ ರಲ್ಲಿ ಮಿಷನರೀಸ್ ಆಫ್ ಚಾರಿಟಿ ಸಂಸ್ಥೆಯನ್ನು ಸ್ಥಾಪಿಸಿದರು. ೧೯೫೨ ರಲ್ಲಿ 'ನಿರ್ಮಲ ಹೃದಯ'ವೆಂಬ ಆಶ್ರಯತಾಣವನ್ನು ಅನಾಥರಿಗಾಗಿ ಸ್ಥಾಪಿಸಿದರು. ಸಾಮಾಜಿಕವಾಗಿ ಬಹಿಷ್ಕಾರಗೊಂಡು, ಒಂಟಿಯಾಗಿ ನರಳುತ್ತಿದ್ದ ಕುಷ್ಠ ರೋಗಿಗಳಿಗಾಗಿ ಬಂಗಾಲದ ಅಸನ್‌ಸೋಲ್ ಎಂಬಲ್ಲಿ 'ಶಾಂತಿನಗರ' ಇವರಿಂದ ರೂಪುಗೊಂಡಿತು.

ಇವರು ತಮ್ಮ ನಿಸ್ವಾರ್ಥ ಸೇವೆಯಿಂದ ಜಗತ್ತಿನ ಗಮನ ಸೆಳೆದರು. ಜಗತ್ತೇ ಇವರ ಜೀವನದ ರೀತಿಯನ್ನು ಕೊಂಡಾಡಿತು; ಗೌರವಿಸಿತು; ಪ್ರಶಸ್ತಿಗಳನ್ನಿತ್ತು ಸನ್ಮಾನಿಸಿತು. ಜಗತ್ತಿನ ಅತ್ಯುನ್ನತ ನೋಬೆಲ್ ಪ್ರಶಸ್ತಿ ಇವರನ್ನು ಅರಸಿಕೊಂಡು ಬಂದಿತು. ಭಾರತ, ನಮ್ಮ ದೇಶದ ಅತ್ಯುನ್ನತ ಪ್ರಶಸ್ತಿಯಾದ 'ಭಾರತರತ್ನ' ಪ್ರಶಸ್ತಿಯನ್ನಿತ್ತು ಗೌರವಿಸಿತು. ಪೋಪ್ ಜಾನ್ ಶಾಂತಿ ಪ್ರಶಸ್ತಿ, ಮ್ಯಾಗ್ಸಸೆ ಪ್ರಶಸ್ತಿ, ರಾಣಿ ಎಲಿಜಬೆತ್ – II ನ ಆರ್ಡರ ಆಫ್ ಮೆರಿಟ್, ಸದ್ಭಾವನಾ ಪ್ರಶಸ್ತಿ ಮುಂತಾದವುಗಳು ಸಾಲು ಹಿಡಿದು ಈ ಕರುಣಾಮಯಿಯ ಬೆನ್ನಟ್ಟಿ ಬಂದವು. ಲೆಕ್ಕವಿಲ್ಲದಷ್ಟು, ಡಾಕ್ಟರೇಟ್ ಪದವಿಗಳು, ಸನ್ಮಾನ ಸಮಾರಂಭಗಳು ಗೌರವಗಳು ಕೊಡಮಾಡಲ್ಪಟ್ಟವು. ಭಾರತ ಮತ್ತು ಸ್ವೀಡನ್‌ಗಳು ಅವರ ಹೆಸರಿನಲ್ಲಿ ಅಂಚೆ ಚೀಟಿಗಳನ್ನು ಹೊರಡಿಸಿದವು. ಇಂತಹ ನಿಸ್ವಾರ್ಥ ಸೇವಾವ್ಯಕ್ತಿಗೆ ಸಲ್ಲಬೇಕಾದ ಗೌರವಗಳನ್ನು, ತೋರಬೇಕಾದ ಪ್ರೀತಿಯನ್ನು, ಜನತೆ ಮಹಾಪೂರವಾಗಿ ತಾಯಿಗೆ ಅರ್ಪಿಸಿತು.

ಎಷ್ಟೇ ದೊಡ್ಡ ವ್ಯಕ್ತಿಯಾದರೂ ಸಾವು ಅನಿವಾರ್ಯ. ಪ್ರಕೃತಿಯ ನಿಯಮವನ್ನು ಯಾರೂ ಮೀರಲಾರರು. ಅಂತೆಯೇ ಅವರು ಕಣ್ಮರೆಯಾದರು. ಆ ದೇಹ ಕಣ್ಮರೆಯಾದರೂ ಅವರ ಘನತೆವೆತ್ತ ವ್ಯಕ್ತಿತ್ವ ಜಗತ್ತಿನಲ್ಲಿ ಚಿರಸ್ಥಾಯಿಯಾಗಿ ಉಳಿದಿದೆ. ಈ ಜಗತ್ತು ಇರುವವರೆಗೂ, ಮದರ್ ಥೆರೇಸಾ ಹೆಸರು ಅಳಿಸುವುದಿಲ್ಲ. ಅಂತಹ

ಬದುಕನ್ನು ಬದುಕಿದ ಆ ತಾಯಿಗೆ ಎಲ್ಲರೂ ನಮಿಸಬೇಕಲ್ಲವೆ ಪುಟ್ಟೂ, ನಮಿಸಿದರಷ್ಟೇ ಸಾಲದು. ಪೂರ್ತಿ ಅವರಂತೆ ಬದುಕಲು ಎಲ್ಲರಿಗೂ ಸಾಧ್ಯವಿಲ್ಲವಾದರೂ, ಅವರ ಕೆಲವೊಂದು ಗುಣಗಳನ್ನಾದರೂ ನಾವು ಅಳವಡಿಸಿಕೊಳ್ಳಬೇಕು. ಅಂತಹ ಸದ್ಗುಣಗಳು ನಿನ್ನಲ್ಲೂ ಮೂಡಲಿ ಎಂದು ಹಾರೈಸಿ ಪತ್ರ ಮುಗಿಸುವೆ.

ಇಂತಿ ನಿನ್ನ,
ಹಿತೈಷಿ.

■

## ಹೃಷಿಕೇಶದ ಶ್ರೀಸ್ವಾಮಿಶಿವಾನಂದರ ಮಾರ್ಗದರ್ಶಿ ಸೂತ್ರಗಳು

### ನಂಬಿಕೆ – ವಿಶ್ವಾಸ

ದೇವರಲ್ಲಿ ಸಂಪೂರ್ಣ ವಿಶ್ವಾಸವಿಡು. ಪವಿತ್ರವಾದ ಉಲ್ಲೇಖನಗಳಲ್ಲಿ ಮತ್ತು ವಿಚಾರವಂತರ ಮಾತುಗಳಲ್ಲಿ ವಿಶ್ವಾಸವಿಡು. ನಿನ್ನಲ್ಲಿ ನಿನಗೆ ವಿಶ್ವಾಸವಿರಲಿ. ಆ ಭಗವಂತನ ಕೃಪೆಯ ಬಗ್ಗೆ ವಿಶ್ವಾಸವಿರಲಿ. ಹಾಗೆಯೇ ಪವಿತ್ರ ಹೆಸರಿನಲ್ಲಿ ನಂಬಿಕೆ ಇಡು. ಪರಿಶುದ್ಧವಾದ ನಂಬಿಕೆಯಿಂದ ಅದ್ಭುತಗಳು ನಡೆಯಲು ಸಾಧ್ಯ.

### ವಿಧೇಯತೆ

ನಿನ್ನ ತಂದೆ ತಾಯಿಗಳಿಗೆ, ನಿನ್ನ ಗುರುಗಳಿಗೆ ವಿಧೇಯನಾಗಿರು. ನಿನ್ನ ಸೋದರ ಸೋದರಿಯರಿಗೆ ವಿಧೇಯನಾಗಿರು. ವಿಧೇಯತೆಯು ಗೌರವಕ್ಕಿಂತ ಹೆಚ್ಚು. ನೀನು ದೊಡ್ಡ ವ್ಯಕ್ತಿಯಾಗಿ ಬೆಳಗುವೆ. ನೀನು ಮಾಡುವ ಪ್ರತಿಯೊಂದು ಕಾರ್ಯದಲ್ಲಿ ಯಶಸ್ಸನ್ನು ಪಡೆಯುವೆ; ಅಭಿವೃದ್ಧಿಯನ್ನೂ ಸುಖವನ್ನೂ ಹೊಂದುವೆ.

### ಸತ್ಸಂಗ – ಸದ್ವಿಚಾರ

ಉತ್ತಮ ಸಹವಾಸಮಾಡು. ಕೆಟ್ಟವರ ಸಹವಾಸ ಬಿಟ್ಟು ಬಿಡು. ಕೆಟ್ಟ ಮಕ್ಕಳ ಸಹವಾಸದಿಂದ ನಿನ್ನ ನಡತೆ ಕೆಡುತ್ತದೆ. ಸಿಗರೇಟು ಸೇದಬೇಡ, ಜೂಜಾಡಬೇಡ, ಇಸ್ಪೀಟಾಡಬೇಡ, ದುಶ್ಚಟಗಳಿಗೆ ಬೀಳಬೇಡ. ಯಾವಾಗಲೂ ಬುದ್ಧಿವಂತರ, ಗುಣವಂತರ, ಭಗವದ್ಭಕ್ತರ, ಸಹವಾಸವನ್ನು ಆಶಿಸು. ಮೌನವಾಗಿ ಕುಳಿತು ಸಜ್ಜನ ಭೋದನೆಯನ್ನು ಕೇಳು. ಅವುಗಳನ್ನು ಜೀವನದಲ್ಲಿ ಕಾರ್ಯಗತಗೊಳಿಸು.

### ಮಾತು ಸುಖಕ್ಕೆ ದಾರಿ

ಸತ್ಯವನ್ನು ಮಾತನಾಡು. ಹಿತವಾಗಿ ಮಾತನಾಡು. ಮೃದುವಾಗಿ ಮಾತನಾಡು. ಪ್ರೀತಿಯಿಂದ ಮಾತಾಡು, ಮೌನವನ್ನು ಆಚರಿಸು. ಯಾರ ಬಗೆಗೂ ಕೆಡುಕಾಗಿ ಮಾತನಾಡಬೇಡ. ಮಾತನಾಡುವ ಮೊದಲು ಎಚ್ಚರದಿಂದ ಯೋಚಿಸಿ ನಂತರ ಮಾತನಾಡು. ಆಗ ನೀನು ಶಾಂತಿ ಮತ್ತು ಸುಖಗಳನ್ನು ಪಡೆಯುವೆ.

## ತಾಳ್ಮೆ

ಬೇರೆಯವರ ಮಾತುಗಳು ಆಸಕ್ತಿ ಉಂಟುಮಾಡುವಂತಿಲ್ಲದಿದ್ದರೂ, ತಾಳ್ಮೆಯಿಂದ ಕೇಳು. ತಾಳ್ಮೆಯಿಂದ ಕೇಳುವಿಕೆಯು ದೃಢ ಮನಸ್ಸನ್ನು ಉಂಟು ಮಾಡುತ್ತದೆಯಲ್ಲದೆ ಬೇರೆಯವರ ಮನಸ್ಸನ್ನು ಗೆಲ್ಲುತ್ತದೆ. ಜನರ ಮನಸ್ಸನ್ನೂ, ಸ್ವಭಾವವನ್ನೂ ಸರಿಯಾಗಿ ತಿಳಿದುಕೊಳ್ಳಲು ಸಹಾಯವಾಗುತ್ತದೆ.

## ಸಹಕಾರ

ಹಟಮಾರಿಯಾಗಿರಬೇಡ. ಉತ್ತಮ ಬದಲಾವಣೆಗೆ ಸದಾ ಸಿದ್ಧವಾಗಿರುವಂತೆ ಮನಸ್ಸನ್ನು ಹದಗೊಳಿಸು. ಹಿತವಾಗುವಂತಹ ರೀತಿಯಲ್ಲಿ ಹೊಂದಾಣಿಕೆ ಮಾಡಿಕೊ. ಯಾವಾಗಲೂ ಹೊಂದಿಕೊಂಡು ಹೋಗುವ ರೀತಿಯಲ್ಲಿ ಪ್ರತಿಕ್ರಿಯಿಸು. ಎಲ್ಲರೊಡನೆ ಸಹಕರಿಸು. ಎಲ್ಲರನ್ನೂ ಪ್ರೀತಿಸು. ಯಾರನ್ನೂ ದ್ವೇಷಿಸಬೇಡ.

## ನಾಗರಿಕ ವ್ಯಕ್ತಿ

ಯಾವಾಗಲೂ ಶುದ್ಧವಾಗಿಯೂ, ನೀಟಾಗಿಯೂ ಇರು. ಪರಿಶುದ್ಧತೆಯು, ದೈವತ್ವಕ್ಕೆ ಸಮೀಪವಾದುದು. ನಿನ್ನ ಬಟ್ಟೆ ಬರೆಗಳು, ಪುಸ್ತಕಗಳು, ಎಲ್ಲೆಂದರಲ್ಲಿ ಬಿದ್ದಿರಲು ಬಿಡಬೇಡ. ಸ್ವಚ್ಛ ಜೀವನವು ದೃಢ ಮನಸ್ಸು ಹಾಗೂ ಶಿಸ್ತು ಜೀವನದ ಪ್ರತೀಕ. ಅದು ನೀನು ನಾಗರಿಕ ವ್ಯಕ್ತಿ ಎಂಬುದನ್ನು ಸೂಚಿಸುತ್ತದೆ.

## ಮಾತು ಕೃತಿಯ ಸಮನ್ವಯ

ನಿನ್ನ ವಿಚಾರ ಹಾಗೂ ಮಾತುಗಳು ಒಂದೇ ಆಗಿರಲಿ, ನಿನ್ನ ಮಾತುಗಳಿಗೂ, ಕೃತಿಗಳಿಗೂ ವ್ಯತ್ಯಾಸವಾಗದಂತೆ ನೋಡಿಕೊ. ಮಾತು, ಕೃತಿ ಹಾಗೂ ವಿಚಾರಗಳಲ್ಲಿ ಹೊಂದಾಣಿಕೆ ಇರಲಿ.

## ದಯೆ

ಪ್ರಾಣಿಗಳಿಗೂ, ಪಕ್ಷಿಗಳಿಗೂ ಮತ್ತು ಎಲ್ಲ ಕ್ರಿಮಿಕೀಟಾದಿಗಳಿಗೂ ಪ್ರೀತಿಯನ್ನು, ದಯೆಯನ್ನು ತೋರಿಸು. ಅದಕ್ಕೆ ದಯಾವಂತನಾಗಿರು. ಅನವಶ್ಯಕವಾಗಿ ಸುಂದರವಾದ ಹೂವುಗಳನ್ನು ಗಿಡಗಳನ್ನು ಹಾಳು ಮಾಡಬೇಡ. ಆಗ ನೀನು ಸಂಪದ್ಭರಿತವಾದ ಮತ್ತು ಪ್ರಯೋಜನಕಾರಿಯಾದ ಜೀವನವನ್ನು ಬದುಕುವೆ.

## ಸಂತೋಷ

ಒಂದು ದಿನದ ನಗು ವೈದ್ಯರನ್ನು ದೂರವಿಡುತ್ತದೆ. ಎಂತಹ ಕಷ್ಟದ ಪರಿಸ್ಥಿತಿಯಲ್ಲಿಯೂ ಸಂತೋಷವಾಗಿರು. ಸಂತೋಷವಿಲ್ಲದ ಮನಸ್ಸು

ರೋಗಗ್ರಸ್ಥವಾಗಿರುತ್ತದೆ. ಸಂತೋಷವು ನಿನ್ನಲ್ಲಿರುವ ಶಕ್ತಿಯು ಅಭಿವ್ಯಕ್ತಿಗೊಳ್ಳುವಂತೆ ಮಾಡುತ್ತದೆ. ಸಂತೋಷವು ಉತ್ಸಾಹವನ್ನುಂಟು ಮಾಡಿ ಅಪಯಶಸ್ಸು ಯಶಸ್ಸಾಗಿ ಪರಿವರ್ತನ ಗೊಳ್ಳುವಂತೆ ಮಾಡುತ್ತದೆ.

## ನಿರಂತರ ಕಾರ್ಯಶೀಲತೆ

ಯಾವಾಗಲೂ ದುಂಬಿಯಂತೆ ಬಿಡುವಿಲ್ಲದ ಕೆಲಸದಲ್ಲಿ ನಿರತನಾಗಿರು. ಮನಸ್ಸನ್ನು ಸದಾ ಉಪಯೋಗಕರವಾದ ಕೆಲಸದಲ್ಲಿ ತೊಡಗಿಸು. ಒಳ್ಳೆಯ ಸ್ನೇಹಿತರ ಸಹವಾಸ ಮಾಡು. ಕೆಲಸವಿಲ್ಲದವನ ತಲೆ ದೆವ್ವದ ಒಂದು ಕಾರ್ಯಾಗಾರ. ಸೋಮಾರಿಗಳ ಸಹವಾಸ ಮಾಡಬೇಡ. ದಿನನಿತ್ಯದ ಕೆಲಸಗಳನ್ನು ಎಂದಿಗೂ ಬಿಡಬೇಡ. ಎಲ್ಲವನ್ನೂ ಎಚ್ಚರದಿಂದ ಗಮನಿಸುವ ಸ್ವಭಾವ ಬೆಳೆಸಿಕೊ. ಹೀಗೆ ಮಾಡಿದಲ್ಲಿ ನಿನ್ನ ನೆನಪಿನಶಕ್ತಿ ಹಾಗೂ ದೃಢ ಸಂಕಲ್ಪ ಶಕ್ತಿ ಆಶ್ಚರ್ಯಕರ ರೀತಿಯಲ್ಲಿ ಹೆಚ್ಚುತ್ತವೆ.

## ಸಮಯ ಪ್ರಜ್ಞೆ

ಸಮಯ ಬಹಳ ಮಹತ್ವದ್ದು. ಅದು ಹಣಕ್ಕಿಂತ ಬೆಲೆಬಾಳುವಂತಹುದು. ಹಣ ಕಳೆದರೆ ಗಳಿಸಬಹುದು; ಆದರೆ ಸಮಯ ಗತಿಸಿ ಹೋದರೆ ಪುನಃ ಪಡೆಯಲಾಗುವುದಿಲ್ಲ. ಕಳೆದಂತಹ ಕ್ಷಣವನ್ನು ಹಿಂತಿರುಗಿ ತರಲು ಸಾಧ್ಯವೆ ಇಲ್ಲ. ಜೀವನವು ಅನೇಕ ಸಣ್ಣ ಸಮಯಗಳ ಮೊತ್ತ. ಸಮಯವನ್ನು ಉಪಯೋಗಕರವಾದ ರೀತಿಯಲ್ಲಿ ಉಪಯೋಗಿಸುತ್ತಿದ್ದರೆ ನೀನು ಒಬ್ಬ ದೊಡ್ಡ ವ್ಯಕ್ತಿಯಾಗುವೆ.

## ನೇರ ನಡೆ ನುಡಿ

ಆಳವಾಗಿ ಯೋಚಿಸು. ಸರಿಯಾದ ನಿರ್ಧಾರಕ್ಕೆ ಬಾ. ಎಚ್ಚರಿಕೆಯಿಂದ ವರ್ತಿಸು. ಪ್ರಾಮಾಣಿಕವಾಗಿ ಮಾತನಾಡು. ಮುಂದುವರಿ. ಚಟುವಟಿಕೆಯಾಗಿ ಕೆಲಸ ಮಾಡು. ಮೃದುವಾಗಿ ಮಾತನಾಡು. ಸರಿಯಾಗಿ ನಡೆ. ವಿಷಯಗಳನ್ನಾಗಲೀ ಮಾತುಗಳನ್ನಾಗಲೀ ತಿರುಚಬೇಡ. ಮೋಸಗಾರಿಕೆ ಹಾಗೂ ಕುತಂತ್ರದಿಂದ ದೂರವಿರು.

## ಕೊಡು–ಪಡೆ

ಕೊಡು, ಕೊಡು, ಕೊಡು, ಇದೇ ಸಮೃದ್ಧಿಯ ಗುಟ್ಟು. ಪೂರ್ಣ ಮನಸ್ಸಿನಿಂದ ದಾನ ಮಾಡು. ನಿನ್ನಲ್ಲಿರುವುದನ್ನು ಪರರೊಡನೆ ಹಂಚಿಕೊ. ಹೀಗೆ ಮಾಡುವುದರಿಂದ ನಿನ್ನ ಹೃದಯವು ಪರಿಶುದ್ಧವಾಗುತ್ತದೆ. ಮತ್ತು ದೇವರ

ಕಡೆಗೆ ದೃಷ್ಟಿಯನ್ನೂ ಹರಿಸುತ್ತದೆ. ನಂತರ ನೀನು ಶಾಶ್ವತವಾದ ಹೆಸರನ್ನೂ, ಕೀರ್ತಿಯನ್ನೂ ಗಳಿಸುವೆ.

## ಆರೋಗ್ಯದ ಗುಟ್ಟು

ಬೇಗ ಮಲಗು, ಬೇಗ ಏಳು. ಹೀಗೆ ಮಾಡುವುದರಿಂದ ನೀನು ಆರೋಗ್ಯವಂತನೂ, ಬಲಶಾಲಿಯೂ ಆಗುವೆ. ನಿನ್ನ ಆರೋಗ್ಯಕ್ಕೆ ಹಿತವಾದುದನ್ನು ಮಾತ್ರ ತಿನ್ನು. ಎಂದಿಗೂ ಅತಿಯಾಗಿ ತಿನ್ನಬೇಡ. ದಿನವೂ ವ್ಯಾಯಾಮ ಮಾಡು. ಪ್ರಕೃತಿಯು ನಿನ್ನ ಅನಾರೋಗ್ಯವನ್ನು ನಿವಾರಿಸಲಿ. ಎಲ್ಲಾ ರೋಗಗಳೂ ಮನಸ್ಸಿನಲ್ಲಿ ಹುಟ್ಟುತ್ತವೆ. ಯಾವಾಗಲೂ ಸಂತೋಷವಾಗಿರು. ಒಳ್ಳೆಯ ಆರೋಗ್ಯವು ಎಲ್ಲಾ ಐಶ್ವರ್ಯಕ್ಕಿಂತ ಹೆಚ್ಚು.

## ಸಹಕಾರ ಮನೋಭಾವ

ಸರಳವಾಗಿರು, ವಿನಯಶೀಲನಾಗಿರು. ಸೌಮ್ಯವಾಗಿರು, ಪ್ರಾಮಾಣಿಕನಾಗಿರು, ವಿಶ್ವಾಸಕ್ಕೆ ಅರ್ಹನಾಗಿರು. ಧೈರ್ಯಶಾಲಿಯಾಗು. ಸಂತೋಷವಾಗಿರು. ನಕಾರಾತ್ಮಕ ಮನೋಭಾವವು ಅಪಯಶಸ್ಸಿಗೆ ಗುರಿ ಮಾಡುತ್ತದೆ. ಒಬ್ಬ ಸಾಧುವಿನಂತೆ ಪ್ರಕಾಶಿಸು.

## ಆಧ್ಯಾತ್ಮ ಪ್ರಕಾಶ

ದಿನವೂ ನಿನ್ನ ಅಧ್ಯಯನದ ಜೊತೆಗೆ ಪವಿತ್ರ ಬರಹಗಳಾದ ಗೀತಾ, ಬೈಬಲ್, ಕುರಾನ್, ಉಪನಿಷತ್.ಮುಂತಾದವುಗಳನ್ನು ಓದಬೇಕು. ಕಲಿತುದನ್ನು ಆಚರಣೆಯಲ್ಲಿ ತಾ. ಆಗ ನೀನು ನಿನ್ನ ಆಧ್ಯಾತ್ಮಿಕ ಜೀವನದಲ್ಲಿ ಮುಂದುವರಿಯುವೆ ಮತ್ತು ಪ್ರಕಾಶಮಾನವಾಗಿ ಬೆಳಗುವೆ.

## ಭಗವನ್ನಾಮ ಸ್ಮರಣೆ

ಪರಮಾತ್ಮನ ಹೆಸರಿನ ಶಕ್ತಿಯು ಅದ್ಭುತವಾದುದು. ಅವನ ಹಸರನ್ನು ಯಾವಾಗಲೂ, ಅಭ್ಯಾಸಮಾಡುತ್ತಿರುವಾಗಲೂ, ಆಡುವಾಗಲೂ, ಕೆಲಸ ಮಾಡುವಾಗಲೂ ಊಟಮಾಡುವಾಗಲೂ, ವಿಶ್ರಾಂತಿ ತೆಗೆದುಕೊಳ್ಳುತ್ತಿರುವಾಗಲೂ ಉಚ್ಚರಿಸುತ್ತಿರು. ನಿನಗೆ ಬೇಕಾದ ಹೆಸರನ್ನು ಆರಿಸಿಕೊ. ಶ್ರೀರಾಮ ಆಗಿರಲಿ, ಓಂ ನಮಃ ಶಿವಾಯ ಆಗಿರಲಿ, ಜೀಸಸ್ ಆಗಿರಲಿ, ಅಲ್ಲಾ ಆಗಿರಲಿ ಅದನ್ನು ಸದಾ ಹೇಳುತ್ತಿರು. ಆ ಭಗವಂತನ ಹೆಸರು ಸ್ಫೂರ್ತಿ ಮತ್ತು ಬಲಕ್ಕೆ ಮೂಲ. ಆದ್ದರಿಂದ ಅದಕ್ಕೆ ಅಂಟಿಕೊಂಡಿರು. ಯಾವುದೇ ಕಾಯಿಲೆಗೂ ಅದು ಅತ್ಯುತ್ತಮ ಔಷಧಿ.

## ಅಸಹಾಯಕರಿಗೆ ಸೇವೆ

ಬಡವರನ್ನೂ, ರೋಗಗ್ರಸ್ತರನ್ನೂ ಸೇವಿಸು. ಯಾರಿಗೆ ಅವಶ್ಯಕತೆ ಇದೆಯೋ ಅವರನ್ನು ಸೇವಿಸು. ಯಾರು ದುಃಖದಲ್ಲಿದ್ದಾರೋ ಯಾರು ಅಸಹಾಯಕರೋ ಅವರಿಗೆ ಸಹಾಯ ಮಾಡು. ಪ್ರಾಣಿ ಮತ್ತು ಪಕ್ಷಿಗಳಿಗೆ ಸಹಾಯಕನಾಗಿರು. ದಯೆ, ಪ್ರೀತಿ, ಸಹಾನುಭೂತಿಯಿಂದ ಸೇವೆ ಮಾಡುವುದು ಭಗವಂತನಿಗೆ ಸೇವೆ ಮಾಡಿದಂತೆ, ಇದೆ ಅತ್ಯಂತ ಮಹತ್ವದ ಧರ್ಮ.

## ದೇವರೊಂದಿಗಿರು

ಪ್ರೀತಿಯೇ ದೇವರು. ಸತ್ಯವೇ ದೇವರು. ಶಾಂತಿಯೇ ದೇವರು. ಜ್ಞಾನವೇ ದೇವರು. ಶಕ್ತಿಯೇ ದೇವರು. ಆನಂದವೇ ದೇವರು. ದೇವರು ನಿನ್ನ ಹೃದಯದಲ್ಲಿ ವಾಸಿಸುತ್ತಾನೆ. ಅವನೇ ನಿನ್ನ ನಿಜವಾದ ಸ್ನೇಹಿತ. ಮತ್ತು ಮಾರ್ಗದರ್ಶಕ. ಅವನೇ ನಿಜವಾದ ತಂದೆ ಮತ್ತು ತಾಯಿ. ಅವನನ್ನು ಕುರಿತು ಸದಾಕಾಲವೂ ಸುಖದಿಂದಲೂ ಶಾಂತಿಯಿಂದಲೂ ಬಾಳು.

## ನಿತ್ಯ ಧ್ಯಾನ

ಪ್ರತಿದಿನವೂ ದೇವರನ್ನು ಭಜಿಸು, ಧ್ಯಾನಿಸು, ಮತ್ತು ಪ್ರಾರ್ಥಿಸು. ಶ್ರದ್ಧೆ ಪ್ರೀತಿಯಿಂದ ತುಂಬಿದ ಹೃದಯದಿಂದ ಅವನನ್ನು ಪ್ರಾರ್ಥಿಸು. ಒಳ್ಳೆಯ ಮಾನವನಾಗಲು ಅವನನ್ನು ಧ್ಯಾನಿಸು. ಅವನಲ್ಲೇ ಸಂಪೂರ್ಣ ನೆರವನ್ನು ಪಡೆ.

## ಒಳಿತಿಗೆ ಸ್ಪಂದಿಸು

ಪ್ರೀತಿಯ ಮತ್ತು ಒಳಿತಾದ ಎಲ್ಲಾ ವಿಚಾರಗಳಿಗೆ ಸ್ಪಂದಿಸು. ಬೇರೆಯವರ ತಪ್ಪು ಮತ್ತು ದೋಷಗಳ ಕಡೆ ನೋಡಬೇಡ. ಯಾವಾಗಲೂ ಬೇರೆಯವರಲ್ಲಿರುವ ಒಳಿತನ್ನು ಗಮನಿಸಿ ಪ್ರಶಂಸೆ ಮಾಡು. ಅವರ ದೌರ್ಬಲ್ಯಗಳನ್ನು ನಿರ್ಲಕ್ಷಿಸು. ನಿನಗೆ ಕೆಡುಕು ಮಾಡಬೇಕೆನ್ನುವವರಿಗಾಗಿ ಪ್ರಾರ್ಥಿಸು. ಅವಮಾನವನ್ನು, ಪೆಟ್ಟನ್ನೂ ಸಹಿಸು. ಒಳ್ಳೆಯ ವ್ಯಕ್ತಿಯಾಗಿ ಬಾಳು. ಒಳ್ಳೆಯದನ್ನೇ ಮಾಡು.

## ಧೈರ್ಯ

ಅಂಜುಬುರುಕನಾಗಿರಬೇಡ, ಧೈರ್ಯವಂತನಾಗಿರು, ಶಕ್ತಿವಂತನಾಗಿರು, ಹಸನ್ಮುಖಿಯಾಗಿರು. ಸಿಂಹದಂತೆ ನಡೆ, ಧೈರ್ಯವಾಗಿ ಮಾತನಾಡು. ಸಂಕೋಚ ಅಥವಾ ನಾಚಿಕೆ ಪಡಬೇಡ. ಸದಾಕಾಲ ಚಟುವಟಿಕೆಯಿಂದ ಇರು. ದೇವರಲ್ಲಿ ನಂಬಿಕೆ ಮತ್ತು ವಿಶ್ವಾಸವನ್ನಿಡು.

## ಮಾಡಬೇಕಾದುದು

ಕಡಿಮೆ ಆಟವಾಡು, ಹೆಚ್ಚು ಓದು. ಕಡಿಮೆ ನಿದ್ದೆ ಮಾಡು, ಹೆಚ್ಚು ಪ್ರಾರ್ಥನೆ ಮಾಡು. ಕಡಿಮೆ ಬೋಧಿಸು, ಹೆಚ್ಚು ಆಚರಿಸು. ಕಡಿಮೆ ಸಂಗ್ರಹಿಸಿ, ಹೆಚ್ಚು ಕೊಡು. ಹೆಚ್ಚು ಕೇಳು, ಕಡಿಮೆ ಮಾತನಾಡು. ಕಡಿಮೆ ಕುಳಿತುಕೊ, ಹೆಚ್ಚು ಓಡಾಡಿ ಸೇವೆ ಮಾಡು.

## ನೆರವಾಗು

ರಸ್ತೆಯಲ್ಲಿ ಬಿದ್ದಿರುವ ಮುಳ್ಳುಗಳನ್ನು, ಗಾಜಿನ ಚೂರುಗಳನ್ನು ತೆಗೆದುಹಾಕು. ಪ್ರಥಮ ಚಿಕಿತ್ಸೆಯನ್ನು ಕಲಿತುಕೊ. ಸ್ಕೌಟ್ ಅಥವಾ ಗೈಡಾಗು. ತಾಯಿಗೆ ಅಡಿಗೆ ಮನೆಯಲ್ಲಿ ಸಹಾಯ ಮಾಡು, ಮನೆಯನ್ನು ಸ್ವಚ್ಛಗೊಳಿಸು. ನಿನ್ನ ಬಟ್ಟೆಗಳನ್ನು ನೀನೇ ಒಗೆದುಕೊ. ಕುರುಡರಿಗೆ, ಮೂಕರಿಗೆ ಸಹಾಯ ಮಾಡು. ನಿನ್ನ ಸಹಪಾಠಿಗಳಿಗೆ ಸಹಾಯಮಾಡು. ನೀನು ಕಲಿತುದನ್ನು ಅವರಿಗೂ ತಿಳಿಸು.

## ಸರ್ವಧರ್ಮದ ಸಾರ

ಎಲ್ಲಾ ಧರ್ಮಗಳನ್ನು ಗೌರವಿಸು. ಏಕೆಂದರೆ ಎಲ್ಲ ಧರ್ಮಗಳೂ ಆ ಒಬ್ಬನೇ ಒಬ್ಬನಾದ ಭಗವಂತನ ಕಡೆಗೇ ಮಾರ್ಗದರ್ಶನ ಮಾಡುತ್ತವೆ. ಎಲ್ಲಾ ಸಾಧು ಸತ್ಪುರುಷರನ್ನು ಗೌರವಿಸು. ಅವರೆಲ್ಲರೂ ಭಗವಂತನ ದೇವದೂತರು. ಎಲ್ಲಾ ಧರ್ಮಗಳ ಸಾರವೂ ಒಂದೇ. ಈ ಅಂಶವನ್ನು ಚೆನ್ನಾಗಿ ನೆನಪಿನಲ್ಲಿಡು.

## ದೃಢ ವ್ಯಕ್ತಿತ್ವ

ಎಲ್ಲಾ ಪರಿಸ್ಥಿತಿಗಳಲ್ಲಿ ಸಮಾಧಾನವಾಗಿಯೂ, ಶಾಂತವಾಗಿಯೂ ಇರು. ಈ ಸದ್ಗುಣಗಳನ್ನು ಮೇಲಿಂದ ಮೇಲೆ ರೂಢಿಸಿಕೊ. ಸಮಾಧಾನತ್ವವೂ ಒಂದು ಬಂಡೆ ಇದ್ದಂತೆ. ಕಿರಿಕಿರಿ ಮಾಡುವ ಅಲೆಗಳು ಬಂದು ಅಪ್ಪಳಿಸಿದರೆ, ಏನೂ ಪರಿಣಾಮವಾಗುವುದಿಲ್ಲ.

## ದೇವರು

ದೇವರು ಒಬ್ಬನೇ. ಆದರೆ ಅವನ ಹೆಸರು ಮತ್ತು ರೂಪಗಳು ಲೆಕ್ಕವಿಲ್ಲದಷ್ಟು. ಅವನನ್ನು ನಿನಗಿಷ್ಟ ಬಂದ ಯಾವುದೇ ಹೆಸರಿನಿಂದ ಕರೆ. ಯಾವುದೇ ಆಕಾರದಲ್ಲಿ ಪೂಜಿಸು. ನೀನು ಖಂಡಿತವಾಗಿಯೂ ಅವನನ್ನು ನೋಡಬಲ್ಲೆ ಮತ್ತು ಅವನ ಕೃಪೆಗೆ ಪಾತ್ರನಾಗಬಲ್ಲೆ.

## ದೇವರ ಪ್ರತೀಕ

ನಿನ್ನ ತಂದೆ ತಾಯಿ, ಶಿಕ್ಷಕರು, ಅತಿಥಿ, ಬಡವರು, ನಿನಗೆ ಕಾಣಿಸುವಂಥ ದೇವರುಗಳು. ಜಗತ್ತಿನಲ್ಲಿಯ ಎಲ್ಲಾ ಕ್ರಿಮಿಕೀಟಗಳೂ, ಪ್ರಾಣಿಗಳೂ ಚರಾಚರ ವಸ್ತುವೂ, ಏಕೆ ಇಡೀ ಜಗತ್ತೇ ದೇವರ ರೂಪಗಳು. ಆದುದರಿಂದ ಎಲ್ಲವನ್ನೂ, ಎಲ್ಲರನ್ನೂ ಪ್ರೀತಿಸು, ಸೇವಿಸು, ಗೌರವಿಸು.

## ದೈವ ನಿಷ್ಠೆ

ದೇವರಿಗೆ ಅರ್ಪಿಸಿಕೊಳ್ಳುವುದು ಎಲ್ಲಕ್ಕಿಂತ ಹೆಚ್ಚಿನ ಪ್ರಾರ್ಥನೆ. ಏನು ನಡೆದಿದೆಯೋ ಅದೆಲ್ಲಾ ದೇವರ ಇಚ್ಛೆಯಿಂದಲೇ ನಡೆಯುತ್ತದೆ. ಏನು ಮುಂದೆ ನಡೆಯುತ್ತದೆಯೋ ಅದೆಲ್ಲವೂ ದೇವರ ಇಚ್ಛೆಯಿಂದಲೇ ನಡೆಯುತ್ತದೆ. ಆದ್ದರಿಂದ ಚಿಂತಿಸಬೇಡ, ಹೆದರಬೇಡ, ಅಂತಕಗೊಳ್ಳಬೇಡ. ದೇವರಲ್ಲಿ ನಂಬಿಕೆ ಇಟ್ಟು ಸಂತೋಷದಿಂದಲೂ ಶಾಂತಿಯಿಂದಲೂ ಇರು.

■

# ಕೃತಜ್ಞತೆ

## ["UNIVERSAL COMPANION - By Swami Shivananda" ಈ ಕಿರುಹೊತ್ತಿಗೆಯ ಸರಳಾನುವಾದ]

ಲೇಖಕಿಯ ಕೃತಿಗಳನ್ನು ಕುರಿತು.........

ಪ್ರೀತಿಯ ಲಲಿತಕ್ಕ,

ನೀವು ಬರೆದ 'ವಚನಾಂಜಲಿ'ಗೆ ಕಾವ್ಯಾನಂದ ಪ್ರಶಸ್ತಿ ದೊರೆತದ್ದು ತಿಳಿದು ಸಂತಸವಾಯಿತು. ಅದಕ್ಕೆ ಪ್ರಶಸ್ತಿ ದೊರೆತುದು ಆಶ್ಚರ್ಯವೇನೂ ಅಲ್ಲ. ವಚನಾಂಜಲಿಯನ್ನು ನಾನು ಓದಿ ಮೆಚ್ಚಿರುವೆ. ಅದರಲ್ಲಿ ಕೆಲವು ಜನಬಳಕೆಯಲ್ಲಿಲ್ಲದ ವಚನಗಳು ಇರುವುದು ವಿಶೇಷ. ಸರಳವಾದ ಭಾಷೆಯಲ್ಲಿ ಎಲ್ಲರಿಗೂ ತಿಳಿಯುವಂತೆ ವಿವರಿಸಿರುವಿರಿ. ನಿಮ್ಮ ಪಕ್ವವಾದ ಹೃದಯ, ವಚನಗಳ ಅಂತರಾಳವನ್ನು, ಅರ್ಥವನ್ನು ಸರಳ-ಸುಂದರವಾದ ಭಾಷೆಯಲ್ಲಿ ಜನಸಾಮಾನ್ಯರಿಗೆಲ್ಲ ತಿಳಿಸುವಂತೆ ಸ್ತುತ್ಯ ಕಾರ್ಯ ಮಾಡಿದ್ದೀರಿ.

'ಮನದ ಮಲ್ಲಿಗೆ' ನಿಮ್ಮ ಹೃದಯದಲ್ಲಿನ ಪರಿಮಳವನ್ನು ಹೊರಸೂಸುತ್ತಿದೆ. ಅದರಲ್ಲಿಯ ನಿಮ್ಮ ವಿಚಾರಧಾರೆ ಮೆಚ್ಚುವಂತಿದೆ. ಎಲ್ಲರೂ ಅದನ್ನು ಓದಿ ಜೀವನದ ಮೌಲ್ಯಗಳನ್ನು ಅರಿಯಬಹುದಾಗಿದೆ. ಅದು ಪಠ್ಯ ಪುಸ್ತಕವಾದರೆ ಮಕ್ಕಳೆಲ್ಲರೂ ಓದಲು ಸಾಧ್ಯವಾಗುತ್ತದೆ.

ಶ್ರೀಮತಿ ಪ್ರೇಮಾದೇವಿ ಮಳೀಮಠ

■

ಕನ್ನಡ ಮಹಿಳಾ ಸಾಹಿತಿಗಳ ಸೇವೆ ಬಹು ಕಾಲದವರೆಗೆ ಸೃಜನ ಸಾಹಿತ್ಯಕ್ಕೇ ಮೀಸಲಾಗಿತ್ತು. ಅತಹ ಕಾಲದಲ್ಲಿ ಶ್ರೀಮತಿ ಲಲಿತಾಂಬ ಅವರು ವೈಚಾರಿಕ ಲೇಖನಗಳನ್ನು ಬರೆಯುತ್ತಿದ್ದುದು ಒಂದು ವೈಶಿಷ್ಟ್ಯ. ಇವರ ವೈಚಾರಿಕ ಬರಹಗಳ ವಿಚಾರಗಳ ಆಳ, ಅಗಲ, ಔನ್ನತ್ಯಗಳು ಗಂಭೀರ, ವಿಶಾಲ, ಪ್ರೋನ್ನತವಾಗಿರುವುದು ಇನ್ನೂ ಒಂದು ವೈಶಿಷ್ಟ್ಯ.

ವಿಷಯ ನಿರೂಪಣೆಗೆ ಹಲವಾರು ತಂತ್ರಗಳನ್ನು ಬಳಸಿ ಓದುಗರ ಚಿತ್ತವನ್ನು ತಮ್ಮತ್ತ ಸೆಳೆದುಕೊಳ್ಳುವ ಶಕ್ತಿ ಇವರ ಲೇಖನಗಳಿಗಿದೆ. ಮಕ್ಕಳ ಶಿಕ್ಷಣ : ಚಿಂತನೆಗಳು ಎಂಬ ಪುಸ್ತಕದಲ್ಲಿ ಸೃಜನ ಸಾಹಿತ್ಯದ ಲಾಲಿತ್ಯ, ವಿಚಾರ ಸಾಹಿತ್ಯದ ವಿವೇಚನೆ, ಎರಡೂ ಸೇರಿಕೊಂಡು ಈ ಕೃತಿಯಲ್ಲಿ ಹೊಸದೊಂದು ಮೆರಗು ಮೈದೋರಿದೆ. ಒಟ್ಟಿನಲ್ಲಿ ಈ ಪುಸ್ತಕ ಉತ್ತಮ ವಿಚಾರಗಳನ್ನು ಒಳ್ಳೆಯ ಶೈಲಿಯಲ್ಲಿ ಬರೆದ, ಸಾಹಿತ್ಯಿಕ ಗುಣಗಳಿಂದ ಕೂಡಿದ ವೈಚಾರಿಕ ಗ್ರಂಥ.

ಡಾ. ಆರ್.ಸಿ. ಹಿರೇಮಠ,
ನಿವೃತ್ತ ಕುಲಪತಿಗಳು, ಕ.ವಿ.ವಿ.

■

ಮಾತಿನ ಸರಳತೆ ಸಾಮಾನ್ಯವಾಗಿ ಬರಹದಲ್ಲಿ ವಿರಳ; ಈ ಸರಳತೆಯಲ್ಲಿ ಗಹನತೆ ಇನ್ನೂ ಶ್ರೇಷ್ಠ. ಆದರೆ ಇದು ಅತಿ ವಿರಳ. ಪ್ರೊಫೆಸರ್ ಲಲಿತಾಂಬರವರ ಲೇಖನಗಳಲ್ಲಿ ಇವೆಲ್ಲವೂ ಮೇಳೈಸಿವೆ ಎಂಬುದು ಗಮನಾರ್ಹ. ಕಥೆ, ಕಥಾನಕ, ನವಿರಾದ ಜೀವನ ಸನ್ನಿವೇಶಗಳ ಹೆಣೆಯುವಿಕೆಯಿಂದ ಈ ಲೇಖನಗಳು ತಾನೇ ತಾನಾಗಿ ಅರಳಿದ ಹೂಗಳೋ ಎಂಬಂತೆ ಆಕರ್ಷಿಸಿ ಓದಲು ಪ್ರಾರಂಭಿಸಿದಾಗ ಬಿಡಲು ಮನಸ್ಸು ಬಾರದು. ಹೇಳಿದ ನೀತಿಯನ್ನು ತನ್ನದನ್ನಾಗಿಸಿಕೊಳ್ಳುವ ಅಭಿಲಾಷೆ ಮೂಡುತ್ತದೆ. ಅನೇಕ ಮುಖ್ಯ ವಿಚಾರಗಳ ಸರಳ ಮಂಡನೆ ಈ ಕಿರುಹೊತ್ತಿಗೆ. ಇದು, ಶಿಕ್ಷಕರು, ಮಾತಾಪಿತೃಗಳು ಹಿರಿಯರು ಹಾಗೂ ಮಕ್ಕಳ ನಿಕಟವರ್ತಿಗಳು ಓದಲೇಬೇಕಾದ ಹೊತ್ತಿಗೆ, ಅನುಸರಿಸಬೇಕಾದ ಸಲಹೆಗಳ ಸರಳ ಸಂಪುಟ.

(ಮಕ್ಕಳ ಶಿಕ್ಷಣ : ಚಿಂತನೆಗಳು) ಪುಸ್ತಕವನ್ನು ಕುರಿತು

ಡಾ. ಕೆ. ರಾಮಚಂದ್ರಾಚಾರ್ಯ
ಮುಖ್ಯಸ್ಥರು, ಶಿಕ್ಷಣ ವಿಭಾಗ ಕ.ವಿ.ವಿ., ಧಾರವಾಡ

■

'ಮನದ ಮಲ್ಲಿಗೆ' ಹೆಸರೇ ಸೂಚಿಸುವಂತೆ ವೈವಿಧ್ಯಮಯವಾದ ಲೇಖನಗಳನ್ನೊಳಗೊಂಡು, ಮಲ್ಲಿಗೆಯ ಪರಿಮಳ ಸೂಸುತ್ತಿದೆ. ಲೇಖಕಿಯರ ಪ್ರತಿಭೆ, ಪಾಂಡಿತ್ಯಕ್ಕೆ, ಮಾಗಿದ ಅನುಭವಕ್ಕೆ ಸಾಕ್ಷಿಯಾಗಿದೆ.

ಗದ್ಯ ರಚಿಸುವವರು ಪದ್ಯ ರಚನೆಯತ್ತ ಗಮನ ಹರಿಸುವುದು ಅಪರೂಪ. ಶ್ರೀಮತಿ ಲಲಿತಾಂಬ ಕಾವ್ಯ ರಚನೆಗೈದು ಗದ್ಯ-ಪದ್ಯ ರಚನೆಯಲ್ಲಿ ಸಮನ್ವಯ

ಸಾಧಿಸಿದ್ದಾರೆ. ಅವರ ಕವನ ಸಂಕಲನ 'ಮುಗಿದೆ ಏಕಮ್ಮಾ ನೆಲದಾಯಿ'ಯಲ್ಲಿ ವಿವಿಧ ವಿಷಯಗಳನ್ನೊಳಗೊಂಡ ೨೮ ಕವನಗಳಿವೆ. ಈ ಪ್ರಾಸಬದ್ಧವಾದ ಗೀತೆಗಳಿಗೆ ಸಂಗೀತವನ್ನಳವಡಿಸಿದರೆ, ಕೇಳುಗರಿಗೆ ಆಕರ್ಷಕವೆನ್ನಿಸುತ್ತವೆ.

ಸೋದರಿ ಲಲಿತಾಂಬ ಅವರ 'ವಚನಾಂಜಲಿ' ಬಹಳ ಉಪಯುಕ್ತ ಗ್ರಂಥವಾಗಿದೆ. ವಚನಗಳ ಅಂತರಾರ್ಥವನ್ನು ಜನಸಾಮಾನ್ಯರು ಸುಲಭವಾಗಿ ಅರ್ಥ ಮಾಡಿಕೊಳ್ಳುವಂತೆ ಲಲಿತ ಶೈಲಿಯಲ್ಲಿ ನಿರೂಪಿಸಿದ್ದಾರೆ. ಅವರ ಸಾಹಿತ್ಯ ವ್ಯಾಸಂಗ, ಚಿಂತನಪರ ಮನೋಭಾವಗಳ ಜೊತೆಗೆ, ಮಾಗಿದ ಅನುಭವ ಒಂದುಗೂಡಿ, ವಚನಾಂಜಲಿ ಅಪರೂಪದ ಗ್ರಂಥವಾಗಿದೆ. ವಚನಗಳ ಭಾವಾನುವಾದಕ್ಕಿಂತ ಹೊಸ ರೀತಿಯಲ್ಲಿ ವಿವರವಾದ ವಚನವನ್ನು ಹೃದಯಂಗಮವಾಗಿ ವಿವರಿಸಿದ್ದಾರೆ. ವಚನಗಳನ್ನು ಓದಬೇಕು, ತಿಳಿದುಕೊಳ್ಳಬೇಕು ಎನ್ನುವವರಿಗೆ ಈ ಗ್ರಂಥ ಮಾರ್ಗದರ್ಶಿಯಾಗಿದೆ. ಓದುಗರಿಗೆ ಉತ್ಸುಕತೆಯನ್ನುಂಟು ಮಾಡುತ್ತದೆ. ವೈಚಾರಿಕ ಲೇಖನ ಕಾವ್ಯ ರಚನೆಯ ಜೊತೆಗೆ ಆಧ್ಯಾತ್ಮಿಕ ಚಿಂತನ-ಮಂಥನದ ಸಾಹಿತ್ಯ ರಚನೆಯಲ್ಲೂ ಸೋದರಿ ಲಲಿತಾಂಬ ಯಶಸ್ವಿಯಾಗಿದ್ದಾರೆ. ಅವರಿಂದ ಸತ್ವಯುತ ಸಾಹಿತ್ಯ ರಚನೆ ಬೆಳೆಯಲಿ, ಜನಮನ ತಿದ್ದುವಲ್ಲಿ ನೆರವಾಗಲಿ, ಶುಭವಾಗಲಿ.

ಶ್ರೀಮತಿ ಶಾಂತಾದೇವಿ ಮಾಳವಾಡ,

ಹಿರಿಯ ಸಾಹಿತಿ

■

# ಕಿವಿಗೊಟ್ಟು ಕೇಳಿ, ಮನಸ್ಸಿಟ್ಟು ಮಾಡು ಮಗುವೇ

(ಮಕ್ಕಳಿಗೆ ಜೀವನ ಮೌಲ್ಯ ಬೋಧಿಸುವ ಸರಳ ನುಡಿಗಳು)

ಪ್ರೊ. ಲಲಿತಾಂಬಾ ವೃಷಭೇಂದ್ರ ಸ್ವಾಮಿ
ನಿವೃತ್ತಪ್ರವಾಚಕರು
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪ್ರಕಾಶನ

ಪ್ರಸಾದ ಪ್ರಕಾಶನ
'ಶಿವಪ್ರಸಾದ' ಲನೇ ಕ್ರಾಸ್, ಕಲ್ಯಾಣನಗರ,
ಧಾರವಾಡ - ೫೮೦ ೦೦೭
ಫೋ : ೨೪೪೪ ೮೫೭೦

**KIVIGOTTU KELI MANASSITU MADU MAGUVE-**
A Collection of Poems, by Prof. Lalithamba Vrishabhendra Swamy,
Shivaprasad, Kalyanagar, Dharawad-580 007. Phone : 2448570
Published by Prasad Prakashana, Shivaprasad, Kalyananagar, Dharwad - 580 007. Phone : 2448570

Authour

ಪುಟಗಳು : ೫೪ + ೪ ರೇಖಾಚಿತ್ರಗಳು

ಪ್ರಥಮ ಮುದ್ರಣ : ಆಗಸ್ಟ್ ೨೦೦೫

ಮುಖಪುಟ ಮತ್ತು ರೇಖಾಚಿತ್ರ : ಮೋನಪ್ಪ

ಬೆಲೆ : ರೂ.೩೦/-

ಅಕ್ಷರ ಜೋಡಣೆ:
ಸ್ನೇಹ ಗ್ರಾಫಿಕ್ಸ್
ನಂ.೯/೧, ೧೯ನೇ ಅಡ್ಡರಸ್ತೆ
ಭುವನೇಶ್ವರಿನಗರ, ಬೆಂಗಳೂರು-೨೩
ದೂರವಾಣಿ : ೨೩೩೦೮೪೪೮

ಮುದ್ರಣ :
ಶ್ರೀ ವಿಶ್ವಾಸ್ ಪ್ರಿಂಟ್ಸ್
೨೩, ೩ನೇ ಅಡ್ಡ ರಸ್ತೆ
ನಂಜಾಂಬ ಅಗ್ರಹಾರ, ಚಾಮರಾಜಪೇಟೆ
ಬೆಂಗಳೂರು - ೫೬೦ ೦೧೮

ಸಂಪುಟ - ೨ : ಜೀವನ ಚರಿತ್ರೆ - ಶಿಕ್ಷಣಾಂಜಲಿ / ೩೬೭

## ಗದ್ಯ ಕವನಗಳನ್ನು ಓದುವ ಮೊದಲು....

ಹರಿಶ್ಚಂದ್ರ ತಾನು ಕೊಟ್ಟ ಮಾತಿನಂತೆ ನಡೆಯುವುದಕ್ಕಾಗಿ ರಾಜ್ಯ, ಕೋಶಗಳನ್ನು ಕಳೆದುಕೊಂಡು, ಪತ್ನಿ–ಪುತ್ರರಿಂದ ದೂರಾಗಿ, ಶ್ಮಶಾನ ಕಾಯುವ ಕೆಲಸ ಮಾಡಿದ; ಭಗೀರಥ ತನ್ನ ಪಿತೃಗಳಿಗೆ ಸದ್ಗತಿ ಉಂಟುಮಾಡುವುದಕ್ಕಾಗಿ ಘನಘೋರ ತಪಸ್ಸು ಮಾಡಿ ಭಾಗೀರಥಿ (ಗಂಗಾನದಿ)ಯನ್ನು ಭೂಮಿಗೆ ಇಳಿಯುವಂತೆ ಮಾಡಿದ; ರಾಮ ತನ್ನ ತಂದೆ ಕೊಟ್ಟ ಭಾಷೆಯನ್ನು ಉಳಿಸಿಕೊಳ್ಳುವಂತೆ ಮಾಡಲು, ರಾಜನಾಗುವುದನ್ನು ಬಿಟ್ಟು ವನವಾಸಕ್ಕೆ ಹೋದ; ಭೀಷ್ಮ ತನ್ನ ತಂದೆ ಇಚ್ಛಿಸಿದ ಕನ್ಯೆಯ್ನನು ಮದುವೆಯಾಗಿ ಸುಖದಿಂದಿರಲೆಂದು, ತಾನು ಆಜನ್ಮ ಬ್ರಹ್ಮಚಾರಿಯಾಗಿ ಉಳಿದ, ಗಾಂಧೀಜಿ, ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬರುವಂತೆ ಮಾಡಲು ಪಡಬಾರದ ಕಷ್ಟ ಪಟ್ಟರು. ಶ್ರವಣ ಮುನಿಯು ಕುರುಡರಾದ ತಂದೆ–ತಾಯ್ಗಳನ್ನು ಡೋಲಿಯಲ್ಲಿಟ್ಟು ಹೆಗಲ ಮೇಲೆ ಹೊತ್ತುಕೊಂಡು ಹೋಗಿ ತೀರ್ಥಯಾತ್ರೆ ಮಾಡಿಸಿದ. ಅಶೋಕ ಚಕ್ರವರ್ತಿ ತನ್ನ ಯುದ್ಧ ದಾಹದಿಂದಾಗಿ ಸಾವಿರಾರು ಪ್ರಜೆಗಳು ಪ್ರಾಣತೆತ್ತು ದುಃಖಕ್ಕೆ ಗುರಿಯಾದುದನ್ನು ನೋಡಿ, ಮುಂದೆ ಯುದ್ಧವಾದ ಬಳಿಕ ಬೌದ್ಧಧರ್ಮಿಯಾದ. ಪುರೂರವ ಚಕ್ರವರ್ತಿಯು ಧೀರನಾದ ಅಲೆಗ್ಸಾಂಡರ್ ಸೋತು ತನ್ನ ಮುಂದೆ ನಿಂತಿದ್ದರೂ, ಅವನ ಧೈರ್ಯಕ್ಕೆ, ಸ್ವಾಭಿಮಾನಕ್ಕೆ ಮೆಚ್ಚಿ ಆಲಂಗಿಸಿಕೊಂಡ! ಹೀಗೆ ಒಂದೇ ಎರಡೇ, ನೂರಾರು, ಸಾವಿರಾರು, ಲಕ್ಷಾಂತರ ಉದಾಹರಣೆಗಳು, ಭಾರತೀಯರ ಜೀವನ ಮೌಲ್ಯವಂತಹುದೆಂಬುದನ್ನು ಎತ್ತಿ ತೋರಿಸುತ್ತವೆ.

ಆದರೆ ಇಂದಿನ ಪೀಳಿಗೆಯಲ್ಲಿ ಮೌಲ್ಯಧಾರಿತ ಜೀವನ ನಡೆಸುವವನು ಮೂರ್ಖ ಎಂದು ಟೀಕೆಗೆ ಒಳಪಡುವ ಜೀವನ ಮೌಲ್ಯದ ಬೆಲೆ ಇಳಿದಿದೆ. ಜನರು ಒಬ್ಬರಿಗೊಬ್ಬರು ಮೋಸಮಾಡುತ್ತಾ, ಸ್ವಂತ ಲಾಭಕ್ಕಾಗಿ ಯಾವ ಕೆಳಮಟ್ಟಕ್ಕೆ ಬೇಕಾದರೂ ಇಳಿವ ದುಸ್ಥಿತಿಗೆ ಇಳಿದಿದ್ದಾರೆ. ನಂಬಿಸಿ ಮೋಸಮಾಡಬಲ್ಲರು; ಸುಳ್ಳು ಹೇಳಿ ಲಾಭಮಾಡಿಕೊಳ್ಳಬಲ್ಲರು; ಸ್ನೇಹಿತರಂತೆ ನಟಿಸಿ, ಶತ್ರುಗಳಾಗಿ ಕೊಲೆಯನ್ನೂ ಮಾಡಬಲ್ಲರು. ಮಹಿಳೆ, ಮಕ್ಕಳು ಎನ್ನದೆ ಅತ್ಯಾಚಾರ,

ಅನಾಚಾರಗಳನ್ನು ಎಸಗುವವರು. ಇದಕ್ಕೆಲ್ಲಾ ಯುವ ಪೀಳಿಗೆಯಲ್ಲಿ ಮೌಲ್ಯಗಳು ಬೆಳೆಯುವಂತೆ ಮಾಡುವ ಪ್ರಯತ್ನ ಇಲ್ಲವಾಗಿರುವುದೇ ಕಾರಣವಾಗಿದೆ. ಈಗಿನವರಿಗೆ, ಹೀಗಿರಬೇಕು, ಹಾಗಿರಬೇಕು, ಹೀಗೆ ಮಾಡಬೇಕು ಹಾಗೆ ಮಾಡಬಾರದು ಎಂದು ಹೇಳುವ ಬೋಧನೆ ಹಿಡಿಸುವುದಿಲ್ಲ ; ಅದು ಕೂಡದು ಎನ್ನುತ್ತಾರೆ. ಹಾಗಾಗಿ ಇಂದಿನ ಜೀವನದಲ್ಲಿ ಯುವ ಪೀಳಿಗೆ, ಹೆಚ್ಚಾಗಿ ಮನಬಂದಂತೆ ನಡೆಯುವುದನ್ನು ಕಾಣುತ್ತಿದ್ದೇವೆ. ಯಾರ ಮನೆಯಲ್ಲಿ ಡಿಸಿಪ್ಲಿನ್‌ನ ವಾತಾವರಣವಿದೆಯೋ, ಮೌಲ್ಯಾಧಾರಿತ ಬದುಕನ್ನು ಬದುಕುತ್ತಿದ್ದಾರೆಯೋ ಅಂತಹವರ ಮನೆಯ ಮಕ್ಕಳಲ್ಲಿ ಉತ್ತಮ ನಡೆ–ನುಡಿಗಳನ್ನು ಕಾಣಬಹುದಾಗಿದೆ. ಉಳಿದವರು ವೈಮನಸ್ಸುಗಳನ್ನುಂಟು ಮಾಡುತ್ತಾ ಜಗಳ–ದೊಂಬಿಗಳಿಗೆ ಸಮಸ್ಯೆಗಳಿಗೆ ಕಾರಣರಾಗಿದ್ದಾರೆ. ಅಂತಹ ವಾತಾವರಣದಲ್ಲಿ ಯಾರೂ ಶಾಂತಿಯಿಂದಾಗಲೀ ನೆಮ್ಮದಿಯಿಂದಾಗಲೀ ಇರಲು ಸಾಧ್ಯವಿಲ್ಲ. ಅವರ ದುಶ್ಚಟಗಳಿಗೆ, ಐಷರಾಮೀ ಜೀವನಕ್ಕೆ ಹಣ ಬೇಕಾಗಿ, ಎಲ್ಲೆಡೆ ಕೊಲೆ–ಸುಲಿಗೆ, ದರೋಡೆಗಳು ಐಷರಾಮಿ ಜೀವನಕ್ಕೆ ಹಣಬೇಕಾಗಿ, ಎಲ್ಲೆಡೆ ಕೊಲೆ – ಸುಲಿಗೆ ದರೋಡೆಗಳು ಸರ್ವೇಸಾಮಾನ್ಯವಾಗಿಬಿಟ್ಟಿವೆ. ಈ ಸ್ಥಿತಿ ಇಲ್ಲವಾಗಲು ಪೀಳಿಗೆಯಲ್ಲಿ ಬಾಲ್ಯದಿಂದಲೇ ಮೌಲ್ಯಗಳನ್ನು ಬದುಕುವಂತೆ, ಜೀವನದಲ್ಲಿ ಅಳವಡಿಸಿ ಕೊಳ್ಳುವಂತೆ, ಮನೆಯಲ್ಲಿ, ಶಾಲೆಯಲ್ಲಿ ಅವಕಾಶ ಮಾಡಿಕೊಡಬೇಕು. ಏಕೆಂದರೆ, 'ಗಿಡ'ವಾಗಿ ಬಗ್ಗದ್ದು ಮರವಾಗಿ ಬಗ್ಗುವುದಿಲ್ಲ.

ರಾಷ್ಟ್ರಕ್ಕೆ ಸ್ವಾತಂತ್ರ್ಯ ಬರುವುದಕ್ಕಿಂತ ಮೊದಲಿನ ಪ್ರೈಮರಿ ಹಾಗೂ ಲೋಯರ್ ಸೆಕೆಂಡರಿ ಶಾಲೆಯ ಪಠ್ಯಪುಸ್ತಕಗಳನ್ನು ಗಮನಿಸಿದರೆ, ಭಾಷಾ ಪಠ್ಯ ಪುಸ್ತಕಗಳಲ್ಲಿ ಭಾಷೆ ಕಲಿಯಲು ಸಹಾಯಕವಾಗುವ ಪಾಠಗಳಿದ್ದರೂ ಪ್ರತಿಯೊಂದು ಪಾಠದಲ್ಲೂ ಒಂದಲ್ಲ ಒಂದು ಮೌಲ್ಯ ಅಡಗಿರುತ್ತಿತ್ತು. ಹಾಗಾಗಿ ಭಾಷೆ ಕಲಿಯುತ್ತಲೇ ಮಕ್ಕಳು ಮೌಲ್ಯಗಳ ಬಗ್ಗೆ ತಿಳಿವಳಿಕೆ ಹಾಗೂ ಅವುಗಳ ಮಹತ್ವವನ್ನು ಅರಿತುಕೊಳ್ಳಲು ಅವಕಾಶವಾಗುತ್ತಿತ್ತು. ಆ ಮೌಲ್ಯಗಳನ್ನು ತಮ್ಮದಾಗಿಸಿಕೊಳ್ಳುವ ಉತ್ಕಟೇಚ್ಛೆ ಅವರಲ್ಲಿ ಉಂಟಾಗುತ್ತಿತ್ತು. ಅಲ್ಲದೇ, ಹೆಚ್ಚಾಗಿ ಶಿಕ್ಷಕರೂ ಅನುಕರಣೀಯವಾದ ನಡೆ–ನುಡಿ ಉಳ್ಳವರಾಗಿರುತ್ತಿದ್ದರು.

ಪ್ರೈಮರಿಯಲ್ಲಿ ಇದ್ದಂತಹ 'ಗೋವಿನ ಹಾಡಿ'ನಲ್ಲಿ ಕೃತಜ್ಞತೆ, ಪ್ರಾಮಾಣಿಕತೆ, ಸ್ನೇಹ, ಸಹಕಾರ, ಪ್ರೀತಿ, ಒಳ್ಳೆಯ ಗುಣವನ್ನು ಮೆಚ್ಚುವಿಕೆ ಕನಿಕರ ಮುಂತಾದ ಅನೇಕ ಮೌಲ್ಯಗಳನ್ನು ಮೆಚ್ಚಿ, ತಮ್ಮದನ್ನಾಗಿಸಿಕೊಳ್ಳುವ ಉತ್ಕಟೇಚ್ಛೆ ಮಕ್ಕಳಲ್ಲಿ ಉಂಟಾಗುವಂತೆ ಮಾಡಲವಕಾಶವಿತ್ತು. ರಾಮಾನುಜಾಚಾರ್ಯರ ಪಾಠದಲ್ಲಿ 'ಜಾತಿಯಲ್ಲ, ಗುಣ ಮುಖ್ಯ' ಎಂಬುದನ್ನು ಅರಿಯಲು ಅವಕಾಶವಿತ್ತು. 'ತಿರುಕನ ಕನಸು' ಎಂಬ ಪದ್ಯ ರಂಜನೀಯವಾಗಿ ಇರುವುದರ ಜೊತೆ, ಸಂಪತ್ತು ಬಂದರೂ

ಅಹಂಕಾರ ಪಡಬಾರದೆಂಬ ಪಾಠ ಕಲಿಸುತ್ತಿತ್ತು. ಪುರಂದರದಾಸರ ಪಾಠ ದೈವಭಕ್ತಿ, ದಾನ, ದಯೆ, ಉಪಕಾರ, ಸಹನೆ ಮುಂತಾದ ಗುಣಗಳ ಮಹತ್ವ ವಿವರಿಸುತ್ತಿತ್ತು. ಹಾಗಾಗಿ ಆಗಿನ ಮಕ್ಕಳು ತಮಗರಿಯದಂತೆಯೇ ಉತ್ತಮ ಗುಣಗಳನ್ನು ತಮ್ಮ ವ್ಯಕ್ತಿತ್ವದಲ್ಲಿ ಅಳವಡಿಸಿಕೊಳ್ಳುತ್ತಿದ್ದರು.

ನೀತಿ–ಶಿಕ್ಷಣ ಅವಶ್ಯಕವೆಂದು ರಾಷ್ಟ್ರಮಟ್ಟದಲ್ಲಿ ಶಿಕ್ಷಣ ಆಯೋಗಗಳ ಮೂಲಕ ಚರ್ಚಿಸಿ, ನಿರ್ಧಾರಕ್ಕೆ ಬಂದಿದ್ದಾರೆ. ನೀತಿ ಶಿಕ್ಷಣ ಜಾರಿಯಲ್ಲಿ ಇದೆ. ಆದರೆ ಅದನ್ನು ಕಾರ್ಯಗತ ಮಾಡುವಿಕೆ ಸಮರ್ಪಕವಾಗಿಲ್ಲವಾಗಿ, ಅದರ ಪ್ರಯೋಜನ ಪೀಳಿಗೆಗೆ ದೊರೆಯುತ್ತಿಲ್ಲ. ನೀತಿ ಶಿಕ್ಷಣಕ್ಕಾಗಿ ಒಂದು ಪೀರಿಯಡ್ (ಅವಧಿ) ಕೊಟ್ಟರೆ ಸಾಲದೆಂಬುದು ಸತ್ಯ. ಅದು ಎಲ್ಲ ವಿಷಯ ಬೋಧಿಸುವಾಗ, ಸಂದರ್ಭಕ್ಕನುಸಾರವಾಗಿ ಮೌಲ್ಯಗಳನ್ನು ಮಕ್ಕಳಿಗೆ ಮನದಟ್ಟು ಮಾಡಿದರೆ ಪರಿಣಾಮಕಾರಿಯಾಗುತ್ತದೆ. ಅಲ್ಲಿ ಆಯಾ ವಿಷಯಗಳನ್ನು ಬೋಧಿಸುವುದು ಮುಖ್ಯವಾದರೂ, ಮೌಲ್ಯವನ್ನು ಬೋಧಿಸಲು ಅವಕಾಶ ದೊರೆತರೆ ಶಿಕ್ಷಕನಾದವನು ಅದರ ಉಪಯೋಗವನ್ನು ಮಾಡಿಕೊಂಡು ಮಕ್ಕಳ ಮೌಲ್ಯವರ್ಧನೆಗೆ ಸಹಾಯಕನಾಗಬೇಕು. ಇದರಿಂದ ಕರಾರುವಕ್ಕಾಗಿ ಮೌಲ್ಯಗಳನ್ನು ಬೋಧಿಸುವುದು ಸಾಧ್ಯವಾಗುವುದಿಲ್ಲ. ಅದಕ್ಕಾಗಿ, ನೈತಿಕ ಶಿಕ್ಷಣಕ್ಕಾಗಿಯೇ ಪ್ರತ್ಯೇಕ ಅವಧಿಯನ್ನು ಶಾಲಾ ಹಂತದಲ್ಲಿ ಇಡುವುದರ ಅವಶ್ಯಕತೆ ಇದೆ. ಅದರಿಂದಲೇ ನೈತಿಕ, ಶಿಕ್ಷಣಕ್ಕಾಗಿ ಒಂದು ಪೀರಿಯಡ್‌ನ್ನು ವೇಳಾಪಟ್ಟಿಯಲ್ಲಿ ಸೇರಿಸಬೇಕೆಂಬ ನಿಯಮವಿದೆ.

ನೈತಿಕ ಶಿಕ್ಷಣದ ಅವಧಿಯುನ್ನು ಬೇರೆಯು ಕಾರ್ಯಗಳಿಗೆ ಉಪಯೋಗಿಸಿಕೊಳ್ಳಬಾರದೆಂಬ ನಿರ್ಬಂಧದ ಅವಶ್ಯಕತೆ ಇದೆ. ಹಾಗೆ ಮಾಡುವುದರ ಮೂಲಕ ಮಕ್ಕಳಿಗೆ ನೀತಿಬೋಧಕವಾದ ಕಥೆಗಳನ್ನಾಗಲೀ, ಕವನಗಳನ್ನಾಗಲಿ ಕಲಿಸುವುದು ಅಗತ್ಯ.

ಪ್ರೈಮರಿ ಹಂತದಲ್ಲಿ ಸರಳವಾದ ನೀತಿಬೋಧಕ ಕವನಗಳನ್ನು ಬಾಯಿಪಾಠ ಮಾಡಿಸಿ, ಅವರು ಅದರ ಅರ್ಥ, ಪ್ರಯೋಜನಗಳನ್ನು ತಿಳಿಯುವಂತೆ ಮಾಡಬೇಕು. ಮೌಲ್ಯಗಳಿಗೆ ಸೂಕ್ತವಾದ, ಮಕ್ಕಳ ಅನುಭವಕ್ಕೆ ಬರುವ, ಅವರ ತಿಳಿವಳಿಕೆಗೆ ಎಟಕುವ ಉದಾಹರಣೆಗಳ ಮೂಲಕ ಕವನದ ಮೌಲ್ಯ ಸರಿಯಾಗಿ ಅರ್ಥವಾಗುವಂತೆ ಮಾಡಬೇಕು. ಈ ರೀತಿಯಾಗಿ ಮಕ್ಕಳು ತಮ್ಮಲ್ಲಿ ಅಳವಡಿಸಿಕೊಳ್ಳಬೇಕಾದ ಮೌಲ್ಯಗಳನ್ನು ಬೋಧಿಸಲು ಸಹಾಯಕವಾಗಲೆಂದು ಬಯಸಿ, 'ಕಿವಿಗೊಟ್ಟುಕೇಳಿ, ಮನಸ್ಸಿಟ್ಟು ಮಾಡು, ಮಗುವೆ' ಎಂಬ ಮಕ್ಕಳ ನೀತಿನುಡಿ ಸಂಗ್ರಹವನ್ನು ಹೊರತಂದಿದ್ದೇನೆ. ಪಾಲಕರು, ಶಿಕ್ಷಕರು, ಇದರ ಪ್ರಯೋಜನವನ್ನು ಮನಗಂಡು, ಈ ಗದ್ಯ ಕವನಗಳ ಪ್ರಯೋಜನ ಮಕ್ಕಳಿಗೆ

ದೊರೆಯುವಂತೆ ಮಾಡುವರೆಂದು ಆಶಿಸುತ್ತೇನೆ. ಶಿಕ್ಷಣ ಇಲಾಖೆಯೂ ಈ ಪುಸ್ತಕದ ಮಹತ್ವದ ಕಡೆ ಲಕ್ಷ್ಯಕೊಡಲಿ ಎಂಬುದು ನನ್ನ ಅಪೇಕ್ಷೆ.

ಪ್ರೈಮರಿ ಹಂತದ ಮಕ್ಕಳಿಗೆ ಮೌಲ್ಯಗಳೂ ಅರ್ಥವಾಗುವುದಿಲ್ಲ. ಆ ಹಂತದಲ್ಲಿ ಇದು ಅವಶ್ಯವೆ ಎಂಬುದು ಕೆಲವರ ಪ್ರಶ್ನೆ. ಇಲ್ಲಿಯ ವಿಚಾರಗಳು ತುಂಬಾ ಸರಳವಾದವುಗಳು. ಅವರ ದಿನನಿತ್ಯದಲ್ಲಿ ಕಾಣುವಂತಹವುಗಳು. ಅರ್ಥವಾಗದಿದ್ದರೂ, ಅವುಗಳನ್ನು ಬಾಯಿಪಾಠಮಾಡಿಸಿದರೆ ಮುಂದೆ, ದೊಡ್ಡವರಾದಾಗ ಅವುಗಳು ಅವರ ಮನಸ್ಸಿನಲ್ಲಿ ವಿಕಾಸಗೊಳ್ಳುತ್ತವೆ. ಇದು ಸ್ವಾನುಭವದ ಮಾತು. ಆದ್ದರಿಂದ ಈ ಪುಸ್ತಕದ ಉದ್ದೇಶವನ್ನು ಎಲ್ಲರೂ ತಿಳಿಸು, ಉಪಯೋಗಪಡೆಯಲೆಂಬುದು ನನ್ನಾಸೆ.

ಕುಮಾರಿಯಾಗಿ, ಗೃಹಿಣಿಯಾಗಿ, ಶಿಕ್ಷಕಿಯಾಗಿ, ಲೇಖಕಿಯಾಗಿ ಬಾಳಿದ ನನ್ನ ಎಪ್ಪತ್ತೈದನೆಯ ಜನ್ಮದಿನದ ನೆನಪಿಗಾಗಿ ಈ 'ಕಿರು-ಹೊತ್ತಿಗೆ' ಪ್ರಕಟಿಸಲು ನನಗೆ ತುಂಬ ಆನಂದವಾಗಿದೆ. ಇದನ್ನು ಮಕ್ಕಳು 'ಕಿವಿಗೊಟ್ಟು ಕೇಳುವಂತೆ' ಎಲ್ಲ ತಂದೆ ತಾಯಿಗಳ ಶಿಕ್ಷಕ-ಶಿಕ್ಷಕಿಯರು, ಅಜ್ಜ-ಅಜ್ಜಿಯರು ಮಾಡಲಿ; ಇದನ್ನು ಆಲಿಸಿದ ಎಲ್ಲ ಮಕ್ಕಳು 'ಮನಸ್ಸಿಟ್ಟು ಮಾಡುವ' ಭಾಗ್ಯಶಾಲಿಗಳಾಗಲಿ, ಆ ಮಕ್ಕಳ ಪ್ರೀತಿ ನನ್ನ ಪಾಲಿಗಿರಲೆಂದು ಹಾರೈಸುವೆ.

ಕಡೆಯದಾಗಿ ಒಂದು ಮಾತು: ಹಿನ್ನುಡಿಯನ್ನು ಬರೆದುಕೊಟ್ಟ ನಾಡಿನ ಖ್ಯಾತ ಕವಿ ಪ್ರೊ. ಜಿ.ಎಸ್.ಸಿದ್ಧಲಿಂಗಯ್ಯ ಹಾಗೂ ಈ ಪುಸ್ತಕ ಹೊರಬರಲು ಸಹಕರಿಸಿದ ಎ.ಎಸ್.ಭಟ್ ಮತ್ತು ಲೇಖಕಿ ಶ್ರೀಮತಿ ಪ್ರೇಮಾಭಟ್ ದಂಪತಿಗಳಿಗೆ ಮತ್ತು ಸೋದರ ಡಾ.ಸಾ.ಶಿ.ಮರುಳಯ್ಯ ಅವರಿಗೆ ಕೃತಜ್ಞತೆಗಳು.

ಅಕ್ಷರ ಜೋಡೆಯನ್ನು ಮಾಡಿದ ಸ್ನೇಹಗ್ರಾಫಿಕ್ಸ್ ಹಾಗೂ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಮುದ್ರಕರಿಗೂ ಮುಖಪುಟ ವಿನ್ಯಾಸ ಮಾಡಿದ ಕಲಾವಿದ ಮೋನಪ್ಪ ಅವರಿಗೆ ವಂದನೆಗಳು.

೨೧-೦೮-೨೦೦೬ — ಪ್ರೊ. ಲಲಿತಾಂಬ ವೃಷಭೇಂದ್ರಸ್ವಾಮಿ

ಧಾರವಾಡ

■

## ಲೇಖಕಿಯ ಪ್ರಕಟಿತ ಕೃತಿಗಳು

೧. ಸಜ್ಜಲ ಗುಡ್ಡದ ಶರಣಮ್ಮನವರು (ಜೀವನ ಚರಿತ್ರೆ)

೨. ಪತ್ರೆ ಚನ್ನವೀರಪ್ಪಯ್ಯನವರು-ಸಾಧನೆ-ಕೊಡುಗೆ (ಪುಸ್ತಿಕೆ)

೩. ಮನದ ಮಲ್ಲಿಗೆ- (ವೈಚಾರಿಕ ಲೇಖನಗಳು)

೪. ವಚನಾಂಜಲಿ- ಆಯ್ದ ಶಿವಶರಣ ವಚನಗಳ ವಿಶ್ಲೇಷಣೆ- (ಕಾವ್ಯಾನಂದ ಪ್ರಶಸ್ತಿ ಬಂದಿದೆ).

೫. ಮುನಿದೆ ಏಕಮ್ಮ ನೆಲದಾಯಿ (ಕವನ ಸಂಗ್ರಹ)

೬ ಮಕ್ಕಳ ಶಿಕ್ಷಣ-ಚಿಂತನೆಗಳು- (ಪ್ರಬಂಧಗಳು)

೭ ಪುಟ್ಟನಿಗೆ ಹಿತೈಷಿಯ ಪತ್ರಗಳು- ಮಕ್ಕಳಿಗೆ ಜೀವನ ಮೌಲ್ಯಗಳನ್ನು ಪರಿಚಯಿಸುವ ಕೃತಿ

೮. ಶಿವ ಶರಣೆಯರು-ಜೀವನ, ಸಾಧನೆ, ವಚನ (ಸಂಶೋಧನಾತ್ಮಕ ಗ್ರಂಥ)

೯. ರಚನಾತ್ಮಕ ಚಿಂತನೆಗಳು-(ಪ್ರಸ್ತುತ ಸಮಾಜಕ್ಕೆ ಸಂಬಂಧಿಸಿದ ವೈಚಾರಿಕ ಲೇಖನಗಳು)

೧೦. ಬೇರೊಂದು ಮರವೆರಡು (ಸಣ್ಣಕಥೆಗಳು)

೧೧. ಹಣತೆ ಹಚ್ಚಿ ಹುಡುಕುತಿರುವೆ (ಕವನ ಸಂಗ್ರಹ)

■

## ಪರಿವಿಡಿ

೨೨. ನೋಡಿ ತಿಳಿ–ಮಾಡಿ ಕಲಿ
೨೩. ಮಾಡಿದ್ದುಣ್ಣೋ ಮಹಾರಾಯ
೨೪. ಯಾರು ಹೇಗಿರಬೇಕು?
೨೫. ಜೀವನ
೨೬. ಗುಟ್ಟು
೨೭. ಹಣ
೨೮. ದುಶ್ಚಟ
೨೯. ಚಂದ
೩೦. ಶಿಸ್ತು
೩೧. ದುಷ್ಟರು
೩೨. ಆಸೆ–ಬದುಕು
೩೩. ಮಾತು
೩೪. ಧೈರ್ಯ
೩೫. ಹಾರೈಕೆ

## ಜನನೀ ಜನ್ಮಭೂಮಿ

ತಾಯಿ ಜನ್ಮ ಇತ್ತವಳು
ತಂದೆ ಜನ್ಮ ಕೊಟ್ಟವನು
ಇವರೀರ್ವರೂ ನಿನ್ನ
ಸಾಕಿ ಸಲಹಿದವರು;
ವಿದ್ಯೆ ಬುದ್ಧಿ ಕಲಿಸಿ,
ದೊಡ್ಡವನ ಮಾಡಿದವರು
ಇದ ಎಂದೂ ಮರೀಬೇಡ ಮಗುವೆ॥

ಭೂಮಿ ನಮ್ಮ ತಾಯಿ
ಆಕೆ ಉಪಕಾರ ಬಹಳ
ನಿನ್ನ ವಸನಕ್ಕೆ, ವಾಸಕ್ಕೆ
ಅವಳೇ ಆಧಾರ.
ಆಹಾರ ಬೆಳೆದು ಕೊಡತಾಳ
ನೀನು ಆಕೆ ಮೇಲೆ
ಹೊಲಸ ಮಾಡಿದರೂ ಸಿಟ್ಟಾಗದೆ
ನಿನ್ನ ಮುದ್ದಾಡಿ, ಬೆಳಸತಾಳ
ಅಂತಾಕಿಯ ರಕ್ಷಣೆ
ನೀನು ಮಾಡಬೇಕು ಮಗುವೆ.॥

■

## ಗುರು

ಶಾಲೆಯ ಗುರುಗಳು
ನಿನಗೆ ಅಕ್ಷರ ಕಲಿಸಿ
ಜ್ಞಾನದ ಬೀಜ ಬಿತ್ತುವರು,
ಅಜ್ಞಾನವೆಂಬ ಕಳೆ ಕಿತ್ತು
ನಿನ್ನ ಮನಸ ಹಸನು ಮಾಡುವರು
ಒಳ್ಳೆಯದ ಕಲಿಸಿ
ಕೆಟ್ಟದ ಬಿಡಿಸುತಾರೆ
ಇವರ ಸ್ಮರಣೆ ಸದಾ
ಮಾಡಬೇಕು ಮಗುವೆ॥

## ಉಪದೇಶ

ಸುಖದುಃಖ ಬಾಳಿನಲಿ
ಹಗಲು ರಾತ್ರಿ ಇದ್ದಂತೆ
ಒಂದಾದ ಮೇಲೊಂದು ಬರುವುದು
ಖಚಿತವೆ ಆಗಿರುವಾಗ,
ದುಃಖ ಬಂತೆಂದು ಕುಗ್ಗಬೇಡ
ಸುಖ ಬಂತೆಂದು ಹಿಗ್ಗಬೇಡ
ಮನೆಗೆ ಬಂದ ಅತಿಥಿಗಳಂತೆ
ಸತ್ಕರಿಸಿ ಕಳುಹಿಸಿ ಕೊಡು ಮಗುವೆ॥

## ಗುರಿ

ಸತ್ಸಂಗ ಮಾಡಿ
ದುಸ್ಸಂಗ ದೂಡಿ
ಒಪ್ಪುಳ್ಳ ಮಾತ ಕೇಳಿ
ದುಸ್ಸಂಗ ಕಂಡಲ್ಲಿ ದೂರ ಸರಿಯುತ್ತಾ
ಒಳ್ಳೆಯ ನಡೆ ನುಡಿ ಕಲಿಯುತ್ತಾ
ಸತ್ಕಾರ್ಯ ಮಾಡುತ್ತಾ
ದೊಡ್ಡವನಾಗಿ ಬೆಳೆದು
ರಾಷ್ಟ್ರಕ್ಕೆ ಕೀರ್ತಿತರಬೇಕು ಮಗುವೆ॥

■

## ರಾಜಕಾರಣಿ

ಶುದ್ಧ ರಾಜಕಾರಣಿ ಇಂದು
ಬಿದ್ದು ಹೋಗಿ, ದುಷ್ಟರಾಜಕಾರಣಿ
ಮೇಲೆದ್ದು ನಿಂದು, ರಾಷ್ಟ್ರವನೆ
ಪಾಳುಗೆಡುಹುತಿಹನು ಇಂದು,
ಅವನ ಅವಗುಣಗಳನ್ನೆಲ್ಲಾ
ಕಂಡುಕೊಂಡು, ಈಗಿನಿಂದಲೇ
ಅವುಗಳ ದೂರವಿಟ್ಟು,
ಮುಂದೆ ನೀನಾಗಬೇಕು
ಶಿಷ್ಟರಾಜಕಾರಣಿ ಮಗುವೆ॥

■

## ಹೀಗಿರಬೇಕು ನೋಡು

ನುಡಿಯಲ್ಲಿ ನಯ, ನಡೆಯಲ್ಲಿ
ವಿನಯವಿರಬೇಕು, ಮಗುವೆ.
ಸುಳ್ಳು ಹೇಳಲು ಬೇಡ,
ಸತ್ಯವೆಂದಿಗೂ ಬಿಡಬೇಡ.
ಸುಳ್ಳಿಗೆಂದಿಗೂ ಸೋಲು
ಸತ್ಯಕೆ ಜಯವು.
ನಿಶ್ಚಯವು ಮಗುವೆ॥

ಪರರ ವಸ್ತು ಹಿಡಿಯಲು ಬೇಡ
ನಿನ್ನದಾದುದ ಕಳೆದುಕೊಳ್ಳಲು ಬೇಡ
ತಂದ ವಸ್ತುವಿನುಪಯೋಗ
ಪೂರ್ಣ ಪಡೆವಂತೆ
ಜತನದಿ ನೋಡಿಕೋ ಮಗುವೆ.॥

ಕಷ್ಟದಲ್ಲಿದ್ದವರಿಗೆ ನೆರವು ನೀಡಿದರೆ
ನಿನ್ನಡಚಣೆಯಲಿ ಅನ್ಯರ
ಸಹಾಯ ಹಸ್ತ ದೊರೆಯುವುದು ಮಗುವೆ
ಒಬ್ಬರಿಗೊಬ್ಬರು ನೆರವು ನೀಡುತ್ತ
ಬದುಕುವುದೆ ಮಾನವಧರ್ಮ ಮಗುವೆ.॥

## ನಿಯಮ – ನಂಬುಗೆ

ಕಷ್ಟಪಟ್ಟರೆ ಫಲವುಂಟು
ಎಂಬುದ ಮರೆಯಬೇಡ
ಆಲಸ್ಯವ ಬದಿಗೊತ್ತಿ
ಬದುಕಿದೆಯಾದೊಡೆ, ಎಲ್ಲೆಲ್ಲೂ
ಬಹುಮಾನ; ಸನ್ಮಾನ ಮಗುವೆ.॥

ರಾಷ್ಟ್ರಕೆ ನಿಷ್ಠೆಯಿಂದಿರುವವರ
ತಂದೆ–ತಾಯ್ಗಳ ಸುಖವ ಬಯಸುವವರ
ದುಡಿದುಣ್ಣಬೇಕೆನ್ನುವವರ
ವ್ಯರ್ಥವಾಗಿ ಕಾಲ ಕಳೆಯದವರ
ಮಾತು–ಮನ ಒಂದಾಗಿ ಇರುವವರ
ನೀತಿಯ ನಡೆ ಉಳ್ಳವರ
ಪಾಪಕಾರ್ಯಕೆ ಭೀತಿ ಪಡುವವರ
ಒಳಿತಿಗೆ ತಲೆಬಾಗಿ ನಡೆಯುವವರ
ಬಾಳಿಗೆ, ಕತ್ತಲೆ ಬಾರದೆ
ಎಲ್ಲೆಲ್ಲೂ ಬೆಳಕೇ ಬರುವುದು ಮಗುವೆ.॥

■

## ಗಾದೆ-ನೀತಿ

ಹಣವು ಎಲ್ಲದಕ್ಕೂ ಬೇಕು
ಆದರದರ ಬೆಂಬತ್ತಬೇಡ;
ಹಣದ ಬೆನ್ನು ಹತ್ತಿ ಹೋದವಗೆ
ಗುಣವು ಬೆನ್ನು ತಿರುಗಿಸಿ ಹೋಗುವುದು.
ಇದ್ದುದರಲಿ ತೃಪ್ತಿಯಿಂದಿದ್ದು
ಋಣಕ್ಕಾಗಿ ಕೈ ಒಡ್ಡದಂತೆ
ಬಾಳಬೇಕು ಮಗುವೆ.॥

ಮಾತುಬಲ್ಲವಗೆ ಜಗಳವಿಲ್ಲ
ಊಟಬಲ್ಲವಗೆ ರೋಗವಿಲ್ಲ
ಅದಕ್ಕಾಗಿ, ಮಾತಿನಲಿ ಹಿತವಿರಲಿ
ಊಟದಲಿ ಮಿತಿ ಇರಲಿ
ಹಿತಿ-ಮಿತಿಯರಿತು ಬಾಳಿದರೆ
ಬಾಳು ಗೋಳಾಗದು; ಇದನು ತಿಳಿ ಮಗುವೆ.॥

'ಸಂಸಾರಗುಟ್ಟು, ವ್ಯಾಧಿ ರಟ್ಟು'
ಎನ್ನುವುದು ಹಿರಿಯರ
ಅನುಭವಾಮೃತವಾಣಿ.
ಅದರಂತೆ ಮನೆಗುಟ್ಟು
ಜನರೊಡನೆ ಹೇಳದಿರು.
ರೋಗಬಂದಾಗ ವೈದ್ಯನಿಗೆ
ವಿವರ ತಿಳಿಸದಿರಬೇಡ
ಇದ ತಿಳಿದು ನಡೆದರೆ
ನಿನಗೊಳ್ಳೆಯದು ಮಗುವೆ.॥

■

## ನಿನ್ನದು–ಅನ್ಯರದು

'ಕೊಟ್ಟದ್ದು ತನಗೆ
ಬೈಚಿಟ್ಟಿದ್ದು ಪರರಿಗೆ' ಎಂಬ
ಮಾತು, ನೂರಕ್ಕೆ ನೂರು ಸತ್ಯ,
ಬೇರೆಯವರ ಕಷ್ಟದಲಿ
ನೀನಿತ್ತು ನೆರವಾದೊಡೆ
ನಿನ್ನ ಕಷ್ಟಕೆ ಅನ್ಯರ ನೆರವು
ದೊರೆತಾಗ, ನೀ ಕೊಟ್ಟದ್ದು
ಹಿಂದಿರುಗಿ ಬಂದಂತೆ ಮಗುವೆ.
ಮುಚ್ಚಿಟ್ಟ, ಸಂಪತ್ತು, ಕಳ್ಳರು
ಬಂದು ಅಪಹರಿಸಿದಾಗ,
ನಿನ್ನದೆಂಬುವ ವಸ್ತು
ಅನ್ಯರ ಪಾಲಾಗುವುದಲ್ಲ ಮಗುವೆ.॥

■

## ಪರಸ್ಪರ

ನಿನ್ನ ತಾಯ್ತಂದೆಗಳು
ಮುಪ್ಪಡರಿ ಅಸಹಾಯಕರಾದಾಗ
ಸಂತಸದಿ ಅವರ ಸೇವೆ ಮಾಡಬೇಕು ಮಗುವೆ।
ನೀ ಮಗುವಾಗಿ ಅಸಹಾಯಕನಿದ್ದಾಗ
ಅವರು ನಿನ್ನ ಕೈಹಿಡಿದೆತ್ತಿ
ಉಣಲಿಟ್ಟು, ಬುದ್ಧಿಗಲಿಸಿ
ವಿದ್ಯೆಕೊಡಿಸಿ, ನಿನ್ನ ಸುಖಕೆ
ಸುಗಮ ಹಾದಿ ಮಾಡಿದಂತೆ
ನೀನು ಮುಪ್ಪಿನಲಿ ಅವರ
ಊರುಗೋಲಾಗಿ ಮನಕೆ
ಮುದವ ನೀಡು ಮಗುವೆ.॥

## ಹಿತವಚನ

ಸ್ವಚ್ಛವಾಗಿಟ್ಟುಕೋ ನಿನ್ನ ಪರಿಸರವ
ಶುದ್ಧ ಪರಿಸರ, ನಿನ್ನ ಆರೋಗ್ಯಕ್ಕೆ ಆಸರ,
ನಿನ್ನ ತನುವು ಶುದ್ಧವಿರಲಿ
ತನು–ಮನ ಶುದ್ಧವಿದ್ದಾಗ
ಬುದ್ಧಿ ಹದ್ದು ಮೀರಿ ಹೋಗದು ಮಗುವೆ.॥

'ಮಾತು ಮನೆ ಕೆಡಿಸಿತು
ತೂತು ಒಲೆ ಕೆಡಿಸಿತು'
ಎಂಬ ನಾಣ್ಣುಡಿಯ ಮಾತೊಂದುಂಟು
ಕಾಡು ಹರಟೆಯಲಿ
ಕಾಲಕಳೆಯುತ್ತ ಕೂತವ
ಕೆಲಸವನೆಲ್ಲಾ ಕಡೆಗಣಿಸಿ
ಮನೆ ಹಾಳಾಗಲು ದಾರಿ
ಮಾಡುವನು ಮಗುವೆ.
ಅಡಿಗೆಗಿಟ್ಟ ಮಡಕೆಯಲ್ಲಿ
ತೂತಿರಲು, ಅದು ಸೋರಿ,
ಒಲೆಯೆಲ್ಲ ಆರಿ, ಅಡಿಗೆ
ಆಗದೆ, ಊಟಕ್ಕೆ ಸೊನ್ನೆ ಆಗುವಂತೆ
ಮಾತಿನಲ್ಲಿ ಮೈಮರೆತವ
ತನಗರಿವಿಲ್ಲದೆಯೆ, ಮನೆಯ
ಹಾಳುಗೆಡಹುವನು ಮಗುವೆ.॥

■

## ಭವ್ಯ ಭವಿಷ್ಯ

ಬೆಳಗಾಗೆದ್ದು ಮೊದಲು
ನಿತ್ಯಕರ್ಮವ ಮುಗಿಸಿ
ಅಂದಂದಿನ ಪಾಠ ಅಂದೇ ಓದಿ
ಹಿಂದಿನದ ಮರು ಚಿಂತನೆ ಮಾಡಿ
ಜ್ಞಾನಾರ್ಜನೆಗೆ ಮಾರ್ಗ ಮಾಡಿಕೊ ಮಗುವೆ,
ಜ್ಞಾನಾರ್ಜನೆ ಉನ್ನತಿಗೆ ಹಾದಿ,
ಭವ್ಯ ಭವಿಷ್ಯಕ್ಕೆ ಬುನಾದಿ, ಮನಗಾಣು ಮಗುವೆ.॥

■

## ಒಳಿತು– ಕೆಡಕು

ಮೋಸ ದ್ವೇಷ, ವಿರಸಗಳು
ತುಂಬಿಕೊಂಡ ಮನಸು,
ಕೊಳೆತುದನು, ತಂಗಳನು
ಮಿತಿಮೀರಿ, ತುಂಬಿಕೊಂಡ ಹೊಟ್ಟೆ,
ಧೂಳು, ಕಸ–ಕಡ್ಡಿ ತುಂಬಿದ ಮನೆ,
ಗಬ್ಬಿಟ್ಟು ನಾರುವ ಗಟಾರದಂತೆ ಮಗುವೆ.
ಅದಕಾಗಿ ಇವನೆಲ್ಲಾ ಸ್ವಚ್ಛವಿರಿಸಿ, ದೇಹವನು
ದೇವಮಂದಿರ ಮಾಡಿಕೊಂಡರೆ ಒಳಿತು ಮಗುವೆ.॥

■

## ಎಚ್ಚರಿಕೆ

ಸಜ್ಜನರ ಸಂಗದಲಿ ಸಿಕ್ಕುವುದು ಆನಂದ
ದುರ್ಜನರ ಒಡನಾಟ ತರುವುದು ತಿಕ್ಕಾಟ
ಸಜ್ಜನರೊಡನೆ ಜಗಳಬಂದರೂ ಪರವಾಗಿಲ್ಲ
ದುರ್ಜನರೊಡನಾಟದಿ, ಲಾಭ ಕಂಡರೂ ಬೇಡ,
ಒಂದಲ್ಲ ಒಂದು ದಿನ, ಅವರ ಸಹವಾಸ
ಒಯ್ಯುವುದು ಪಾಪಕುಂಡಕೆ,
ತಳ್ಳುವುದು ರಸಾತಳಕೆ, ಅದಕಾಗಿ
ಹೇಳುವರು 'ಸಗಣಿಯವರೊಡನೆ
ಸರಸಕ್ಕಿಂತ, ಗಂಧದವರೊಡನೆ
ಗುದ್ದಾಟ ಲೇಸು' ಎಂದು ಮಗುವೆ.॥

## ದೇವರು

ಮಳೆ-ಗಾಳಿಯನು,
ಬಿಸಿಲು-ಬೆಳದಿಂಗಳನು
ಹಗಲು-ರಾತ್ರಿಯನು
ಕೊಡುವ ದೇವರಾರು ಹೇಳು, ಮಗುವೆ,
ಇವನೆಲ್ಲಾ ನೀಡುವ ದೇವರಿಗೆ
ಹೆಸರನಿಟ್ಟವರಾರು, ಪುಟ್ಟಾ,
ಇವನೆಲ್ಲಾ ಕೊಡುವ
ದೇವರುಗಳೆಷ್ಟು ಮಂದಿ ಇರುವರು ಮಗುವೆ॥

ನೂರೆಂಟು ದೇವರುಗಳಿದ್ದಿದ್ದರೆ
ಅವರವರ ದೇವರುಗಳು
ಅವರವರ ಭಕ್ತರಿಗೆ,
ಅವರವರಿಗೆ ತಕ್ಕಂತೆ, ಅವರಿಗೆ ಮಾತ್ರ
ಕೊಡುತ್ತಿದ್ದನಲ್ಲವೆ ಮಗುವೆ?
ದೇವರೊಬ್ಬನೆ ಇರುವನಾಗಿ
ಅವನೆಲ್ಲರಿಗೂ ಒಂದೆ ಸಮವಾಗಿ
ಹಂಚುತಿಹನು, ಅದನೆಲ್ಲಾ ಮಗುವೆ.

ಒಬ್ಬ ದೇವರ ನಾವು, ನೂರೆಂಟು ಹೆಸರಿಂದ
ಕರೆಯುತ್ತಾ, ನಮ್ಮ ದೇವರು ಹೆಚ್ಚು
ನಿಮ್ಮ ದೇವರು ಕಡಿಮೆ ಎಂದು
ಬಡಿದಾಡುವುದ ಕಂಡು,
ಸರ್ವಾಂತರ್ಯಾಮಿ, ಸರ್ವಶಕ್ತ
ಸರ್ವಜ್ಞನಾದ ಆ ಭಗವಂತ,
ಒಂದೊಂದು ಸಾರಿ ನಕ್ಕು,
ಬೇಡಿದುದನ್ನೆಲ್ಲ ನೀಡುವನು,

ಮತ್ತೊಮ್ಮೆ, ನಮ್ಮಮೂರ್ಖತನವ ನೋಡಿ
ಸಿಟ್ಟಿಗೆದ್ದು, ಬರಗಾಲ ಬರಿಸುವನು
ಎಲ್ಲಾ ಕೊಚ್ಚಿಹೋಗುವಂತಹ ಮಳೆಯ
ಸುರಿಸಿ, ಇಳೆಯ ತೊಳೆಯುವವನು
ಭೂಮಿಯನೆ ಕಂಪಿಸುವಂತಾಗಿಸಿ
ಜನರನೆಲ್ಲಾ ನಡುಗಿಸುವನು;
ಭೂಮಿ, ಬೆಂಕಿ ಉಗುಳುವಂತೆ ಮಾಡಿ
ಅವಿವೇಕಿ ಜನರ ಸುಟ್ಟು ಭಸ್ಮ ಮಾಡುವನು ಮಗುವೆ.
ನಿನ್ನ ದೇವರು ಬೇರೆಯಲ್ಲ, ನನ್ನ ದೇವರು ಬೇರೆಯಲ್ಲ
ನಾವೇ ಒಬ್ಬನೇ ದೇವರಿಗೆ, ಬೇರೆ–ಬೇರೆ ಹೆಸರಿಟ್ಟು
ದ್ವೇಷದಿ ಬೇಯುತಿಹೆವು ಮಗುವೆ.
ಹಲವು ದೇವರ ಹಲುಬಾಟ ಬಿಟ್ಟು
ಸೃಷ್ಟಿಗೆಲ್ಲಾ ಒಬ್ಬನೇ ಒಡೆಯನೆಂದು
ತಿಳಿದು, ಒಳಿತಾಗಿ ನಡೆ ಮಗುವೆ

'ನಮ್ಮ ದೇವರು' 'ನಿಮ್ಮ ದೇವರು'
ಎಂಬ ಭೇದಭಾವ ಬೇಡ,
ಜಗದೊಡೆಯ ಒಬ್ಬನೆ ಎಂಬ
ಸತ್ಯವರಿತು ನಡೆದಾಗ,
ಆ ದೇವನೊಲಿವನು ಮಗುವೆ.॥

■

## ನೆನಪಿಡು

ಮಾಡಿದುಪಕಾರ ಮರೆಯದಿರು
ಇತರರ ಸುಖ-ದುಃಖದಲಿ ಪಾಲ್ಗೊಂಡು
ಸುಖ ಹೆಚ್ಚಿಸಿ, ದುಃಖ ಕಡಿಮೆಗೊಳಿಸು ಮಗುವೆ.॥

ಇಂದು ನಾಳೆಗಳು ನಿನ್ನ ಮುಂದಿನ
ಬಾಳಿಗೆ ಮೆಟ್ಟಲುಗಳೆಂದರಿದು
ಭವ್ಯ ಭವಿಷ್ಯಕೆ ಇಂದು-ನಾಳೆಗಳ
ಚಂದಾಗಿ ಬಳಸಿಕೊಂಡು
ಒಂದೊಂದೇ ಮೆಟ್ಟಲ ಏರುತ್ತಾ
ಎತ್ತರದ ಗುರಿ ಎಡೆಗೆ ಸಾಗು;
ಸಾಗುತ್ತಲೇ ನಿನ್ನ ಎಡ-ಬಲದಲಿ
ಇರುವವರನೂ ಹಿಡಿದೆತ್ತಿ
ಅವರ ಉತ್ಕರ್ಷಕೆ ನೆರವಾಗು ಮಗುವೆ.
ಒಡಹುಟ್ಟಿದವರೊಡನೆ ದಾಯಾದಿ
ಮತ್ಸರ ಬೇಡ, ನೆರೆ-ಹೊರೆ
ಯವರೊಡನೆ ಹಗರಣಬೇಡ
ಸ್ನೇಹದಲಿ ವಿರಸಬೇಡ
ಯಾರೊಡನೆಯೂ ಅನುಚಿತ
ವರ್ತನೆ ಬೇಡ ಮಗುವೆ. ॥

ಒಳಿತಾದುದ ಹಚ್ಚಿಕೊಂಡು
ಕೆಡುಕಾದುದ ಬಿಡಿಸಿಕೊಂಡು
ನಡೆದೆಯಾದೊಡೆ,
ಬಾಳಲ್ಲಿ ಗೋಳಿಲ್ಲ, ನೋವಿಲ್ಲ
ಕೆಡುಕಿಲ್ಲ, ಕೇಳು ಮಗುವೆ॥

ಬುದ್ಧಿ ಶುದ್ಧವಾಗಿರಬೇಕು
ಮನಸು ಪರಿಶುದ್ಧವಾಗಿರಬೇಕು
ಬಾಯಿ ಹೊಲಸಿರಬಾರದು
ಕಾಲು ಹೋಗಬಾರದ ಕಡೆ
ಹೋಗದಿರಬೇಕು, ಅಗ
ತಪ್ಪಿನ ಅಪವಾದ ತಪ್ಪುವುದು ಮಗುವೆ ॥

ಹೆರವರಿಗೆ ಕೇಡ ಬಯಸದಿರು
ರಾಷ್ಟ್ರಕ್ಕೆ ದ್ರೋಹ ಬಗೆಯದಿರು
ಭ್ರಷ್ಟಾಚಾರದಿಂದ ದೂರವಿರು
ಶಿಷ್ಟಾಚಾರಕೆ ತಲೆಬಾಗು
ಆಗ ನೀನಿದ್ದಲ್ಲೆ ದೊರೆವುದು
ಮಾನ-ಸನ್ಮಾನ ಮಗುವೆ.॥

## ಗಾದೆಯ ಹಿಂದೆ

ಮಳೆ ಬಂದ್ರೆ ಕೇಡಲ್ಲ
ಮಗ ಉಂಡ್ರೆ ನಷ್ಟಲ್ಲ
ಎಂಬ ಗಾದೆ ಕೇಳಿರುವೆಯಲ್ಲ ಪುಟ್ಟಾ?
ಹೆಚ್ಚು ಮಳೆ, ಬೆಳೆಗೆ ಕೇಡಾದ್ರೂ
ಕೆರೆ-ಕಟ್ಟೆ ತುಂಬಿ
ಎಲ್ಲರಿಗೆ ನೀರು
ದನಗಳಿಗೆ ಮೇವು ದೊರೆತು
ಹಾಲು-ಹೈನ ಹೆಚ್ಚಿ
ಜನಜೀವನ ಸೊಂಪಾಗುವುದು ಮಗುವೆ॥
ಮಗ ದುಡಿಯುವುದು ಬಿಟ್ಟು
ಮಿತಿ ಮೀರಿ ತಿನ್ತಾಹೋದ್ರೆ
ಹೊಟ್ಟೆಕೆಟ್ಟು, ಅಜೀರ್ಣವಾಗಿ
ಮಾಡ್ಬೇಕಾದ ಕೆಲ್ಸ ಹಂಗೇ ಉಳಿದಾಗ
ಕೇಡಾಗಬಹುದಾದ್ರೂ
ಉಂಡ್ರೂ, ಒಳ್ಳೆಯದಾಗಿದ್ರೆ
ಅವನು ದಷ್ಟ-ಪುಷ್ಟ ಬೆಳೆದು
ದುಡಿಯೋಕೆ ಗಟ್ಟಿ-ಮುಟ್ಟಾಗಿ
ಮನೆತನ ಮುಂದೆ ತರುವವನಾಗಿ
ಮಗ ಉಂಡ್ರೇ ಕೇಡಲ್ಲ
ಎಂಬ ಗಾದೆ ಹುಟ್ಟಿಹುದು ಮಗುವೆ.॥

■

## ಬೇಕು–ಬೇಡಗಳು

ಚಾಡಿ ಮಾತು ಕೇಳಲು ಬೇಡ,
ಹೇಳಲೂ ಬೇಡ.
ವಿಶ್ವಾಸಘಾತುಕರ ಸನಿಹ
ಸಹ ಸುಳಿಯಬೇಡ, ಮಗುವೆ.
ಗುರು–ಹಿರಿಯರ
ಗೌರವಿಸದಿರಬೇಡ
ಸತ್ಸಂಪ್ರದಾಯವ
ಬಿಡಬೇಡ,
ಗೊಡ್ಡು ಸಂಪ್ರದಾಯವ
ಆಚರಿಸಬೇಡ
ಆಪತ್ತಿನಲಿ ಹಿತೈಷಿಗಳ
ಸಲಹೆ ಕಡೆಗಣಿಸಬೇಡ, ಮಗುವೆ
ಊಟದಲಿ ಮಿತಿಮೀರಬೇಡ
ಮಾತಿನಲಿ ಹಿತ–ಮಿತವಿರಲಿ
ಸ್ನೇಹದಲಿ ಸತ್ಸಂಗವಿರಲಿ
ಎಲ್ಲದರಲೂ ಒಳಿತಾದುದ ಹಿಡಿದು
ಕೆಡುಕಾದುದ ಬಿಸುಡುವ
ಜಾಣ್ಮೆ ಇರಲಿ ಮಗುವೆ.

■

## ಕರ್ತವ್ಯ

ಸೂರ್ಯ ಹುಟ್ಟುವ ಮೊದಲೆದ್ದು
ನಿತ್ಯಕರ್ಮಗಳ ಮುಗಿಸಿಕೊಂಡು
ದೇವರಿಗೆ ಕೈ ಮುಗಿದೆ
ವ್ಯಾಯಾಮ ಮಾಡಿ ಮುಗಿಸು ಮಗುವೆ॥
ಆನಂತರದಿ ನಿನ್ನಭ್ಯಾಸವನು ಮಾಡಿ
ಶಾಲೆಯ ಪಾಠಕ್ಕೆ ಅಣಿಯಾಗು
ನಿನ್ನದಷ್ಟಕೆ ನಿನ್ನ ಸಮಯ
ಸೀಮಿತವಾಗದೆ, ನಿನಗನ್ನ ಇಕ್ಕುವ
ನಿನ್ನೇಳ್ಗೆಗೆ ನೆರವನಿತ್ತು
ಸಂತಸಕೊಟ್ಟು, ಅವರ
ಪ್ರೀತಿಯಲಿ ಮಿಂದು
ಆನಂದವ ಅನುಭವಿಸು ಮಗುವೆ.॥
ಶಾಲೆಗೆ ಹೋಗಿ ಕಲಿತು,
ನಿನ್ನ ಜ್ಞಾನ ಬೆಳೆಸಿಕೊಂಡು
ಗುರುಗಳಿಗೆ ವಿಧೇಯನಾಗಿ
ಎಲ್ಲರ ಕಣ್ಮಣಿಯಾಗಿ
ನಿನ್ನ ಸ್ಥಾನವ ಬೆಳೆಸಿಕೋ ಮಗುವೆ.॥

## ಅರಿತಿರು

ಸಜ್ಜನರ ಸಂಗದಲಿ
ದೊರೆಯುವುದು ಆನಂದ
ದುರ್ಜನರ ಒಡನಾಟ
ತರುವುದು ಹೊಡೆದಾಟ.
ಸಜ್ಜನರೊಡನೆ ವಿರಸ ಬಂದರೂ ಪರವಾಯಿಲ್ಲ
ದುರ್ಜನರೊಡನಾಟದಲಿ ಲಾಭ
ಕಂಡರೂ, ಅದು ಬೇಡ;
ಒಂದಲ್ಲ ಒಂದು ದಿನ ಅವರ ಸಹವಾಸ
ಒಯ್ಯುವುದು ಪಾಪಕುಂಡಕೆ,
ತಳ್ಳುವುದು ರಸಾತಳಕೆ,
ನೀ ಎಂದೂ ಮೇಲೇಳದಂತೆ, ಮಗುವೆ.॥

■

## ತಿಳಿದಿರಬೇಕು

ಕಳೆದ ಕಾಲ ಮತ್ತೆ ಬರುವುದಿಲ್ಲ
ಹೋದ ಮಾನ ಮತ್ತೆ ದೊರೆಯುವುದಿಲ್ಲ
ಮುಪ್ಪಡರಿದ ಮೇಲೆ ಯೌವ್ವನ ತಿರುಗಿಬಾರದಲ್ಲ
ಉಂಡಮೇಲೆ ಹಸಿವು ಇಂಗುವುದಲ್ಲ
ಉಪ್ಪು ತಿಂದವನು ನೀರು ಕುಡಿಯಲೇ ಬೇಕಲ್ಲ
ತಪ್ಪು ಮಾಡಿದವ ಅದರ ಫಲ
ಅನುಭವಿಸಲೇಬೇಕು, ಮಗುವೆ.॥

■

## ನೋಡಿ ತಿಳಿ–ಮಾಡಿ ಕಲಿ

ಇಂದಿನ ಬಹುಮಂದಿ ಯುವಕರು
ಏನ ಮಾಡುತಿಹರು ನೋಡು
ಭ್ರಷ್ಟಾಚಾರದಲಿ ಅವರ ಕೈ ಮೇಲಿಹುದು
ದರೋಡೆಗಳಲ್ಲಿ ಅವರ ಕೈವಾಡ ಕಾಣುವುದು
ದುಡಿಯಲಾರದ ಅವರು
ಸುಖಭೋಗ ಅನುಭವಿಸ ಬಯಸಿಹರು
ಸುಖದ ಲಾಲಸೆಗಾಗಿ,
ಮಾಡಬಾರದನ್ನು ಮಾಡುತಿಹರು
ಸಮಾಜದಲಿ ಅಶಾಂತಿಯ ಹರಡಿಹರು
ಸಜ್ಜನರ ನಿದ್ದೆಗೆಡಿಸುತಿಹರು
ರಾಷ್ಟ್ರಕೆ ಕುತ್ತ ತರುತಿಹರು, ಮಗುವೆ.
ನೀನು ಇಂದಿನಿಂದಲೇ
ದುಡಿದುಣ್ಣುವ ಪಣತೊಟ್ಟು
ದುಡಿಮೆಯ ಮಾರ್ಗವ
ಕಂಡುಕೊಳ್ಳುವುದು ಜಾಣತನ, ಮಗುವೆ.॥

## ಮಾಡಿದ್ದುಣ್ಣೋ ಮಾಹಾರಾಯ

'ಮಾಡಿದ್ದುಣ್ಣೋ ಮಹಾರ್‍ರಾಯ'
ಎಂಬ ಗಾದೆಯ ಮಾತೊಂದುಂಟು
ಮನೆಯಲಿ ಯಾವ ಅಡಿಗೆ ಮಾಡುವರೋ
ಅದನೇ ನಾವುಣಬೇಕು;
ರುಚಿಕಟ್ಟಾದ ಅಡಿಗೆ ಮಾಡಿದರೆ,
ಖುಷಿಯಿಂದ ಚಪ್ಪರಿಸಿ ಹೊಡೆಯಬಹುದು.
ಉಪ್ಪಿಲ್ಲದ, ಹುಳಿಹಾಕದ,
ಸಕ್ಕರೆ ಇಲ್ಲದೆ, ಸವಿ ಇರದ
ಅಡಿಗೆ ಮಾಡಿದರೆ,
ಬೇಡಾದರೂ ಅದನೆ ಉಣಬೇಕು, ಮಗುವೆ.
ಮಾಡಿದುದ ತಿನ್ನದಿದ್ದರೆ
ಬೇರೆ ಗತಿ ಇಲ್ಲವಾಗುವಂತೆ,
ಸತ್ಕಾರ್ಯ ಮಾಡಿದರೆ,
ಸತ್ಫಲವ ಪಡೆಯಬಹುದು
ದುಷ್ಕಾರ್ಯ ಮಾಡಿದರೆ
ದುಷ್ಫಲ ಅನುಭವಿಸದೆ, ವಿಧಿ ಇಲ್ಲ ಮಗುವೆ॥
ಅದಕಾಗಿ ಸತ್ಕಾರ್ಯ ಮಾಡಿ
ಬೆಳೆಸಿಕೋ ಮಗುವೆ.॥

■

## ಯಾರು ಹೇಗಿರಬೇಕು?

ಸಿರಿತನವಿದ್ದವರೆಲ್ಲಾ ದೊಡ್ಡವರಲ್ಲ
ವಯಸ್ಸಾದವರೆಲ್ಲಾ ಹಿರಿಯರಲ್ಲ
ಜಡೆ ಬಿಟ್ಟವರೆಲ್ಲಾ ಋಷಿಗಳಲ್ಲ
ಕಾವಿ ಹಾಕಿದವರೆಲ್ಲಾ ಸಂನ್ಯಾಸಿಗಳಲ್ಲ
ಪಾಠಕಲಿಸುವವರೆಲ್ಲಾ ಗುರುಗಳಲ್ಲ
ಊಟವಿಟ್ಟವರೆಲ್ಲಾ ದಾನಿಗಳಲ್ಲ
ಬೋಧೆ ಮಾಡುವವರೆಲ್ಲಾ ಜ್ಞಾನಿಗಳಲ್ಲ ಮಗುವೆ.॥

ಸಿರಿತನವಿದ್ದವರು ದುಃಖಿಗಳ
ಕಣ್ಣೀರು ಒರೆಸಿದರೆ, ಅವರಿಗೆ ಬಂದೀತು ಹಿರಿತನ.
ಕೈಯ್ಯಲ್ಲಿ ಕಾಸಿಲ್ಲದೆ, ಜಡೆಯನು ಬಿಟ್ಟವರು
ಋಷಿಗಳು ಆಗಲಾರರು, ಮಗುವೆ॥
ಕಾವಿ ಹಾಕಿ, ಕಾಮದೋಕುಳಿಯಾಡುತ್ತಾ
ಸಮಾಜದಲಿ ಗುಂಪುಗಾರಿಕೆಗೆ ಪ್ರಚೋದಿಸುವ
ಕಾವಿಧಾರಿಗಳೆಂತು ಸಂನ್ಯಾಸಿಗಳಾಗಬಲ್ಲರು, ಮಗುವೆ?

ಮಾಸ್ತರಾಗಿ ನೇಮಕಗೊಂಡುದಕಾಗಿ
ಪಾಠಹೇಳುವ ಪಾತ್ರಧಾರಿಗಳು,
ಮಗುವಿಗೆ ಉತ್ತಮ ಭವಿಷ್ಯ
ರೂಪಿಸುವ ಗುರುಗಳಾಗಲಾರರು ಮಗುವೆ॥

ತನ್ನ ಶಿಷ್ಯರ ಒಳಿತಿಗಾಗಿ
ಚಿಂತಿಸುತ, ಸತತ ಅವರ
ಹಿತವನೆ ಬಯಸುತ್ತ
ಇರುವವರು ಗುರುವೆನ್ನಿಸುವರು ಮಗುವೆ॥

ತಾವು ತಿಂದು ಉಳಿದ
ತಂಗುಳೂಟವ ನೀಡುವವರು
ದಾನಿಗಳಾಗರು ಮಗುವೆ।
ತನ್ನ ಸುಖದ ಪಾಲನ್ನು
ಹೆರವರ ಸುಖಕಾಗಿ ಕೊಟ್ಟು
ಅವರ ಸುಖನೋಡಿ ಹಿಗ್ಗುವ ಉದಾರಿ,
ದಾನಿ ಎನಿಸುವವನು ಮಗುವೆ।

ಒಳಗೆ ಭ್ರಷ್ಟಾಚಾರದಿ ಗಳಿಸುತ್ತಾ
ಹೊರಗೆ ಉಪದೇಶ ನೀಡುತ್ತಾ
ಅದರಲಿನಿತನೂ ತಾನು ಪಾಲಿಸದಿರುವ
ಬೋಧಕನೆಂತು ಜ್ಞಾನಿ.........
ಎನ್ನಿಸಿಕೊಳ್ಳಬಲ್ಲನು ಮಗುವೆ।

ಬೋಧೆ ಮಾಡುವವನು
ತಾ ಮೊದಲು ಅದರಂತೆ
ಬದುಕಿ ತೋರಿಸಿದೊಡೆ
ಅವನ ಬೋಧನೆಗೆ ಬೆಲೆ ಬರುವುದು ಮಗುವೆ.।

## ಜೀವನ

ಸಾಲ ಕೊಡಬೇಡ, ಕೊಟ್ಟರದು
ಹಣವನ್ನು, ಸ್ನೇಹವನ್ನು
ಒಟ್ಟಿಗೆ ಹರಣ ಮಾಡುವುದು, ಮಗುವೆ!

ಸಾಲ ಬೇಡಲೂ ಬೇಡ
ಬೇಡಿಯಾದೊಡದು ನಿನ್ನ
ಗೌರವವ ಕುಂದಿಸಿ, ನೀನು
ತಲೆಬಾಗಿ ನಿಲ್ಲುವಂತೆ
ಮಾಡುವುದು, ತಿಳಿ, ಮಗುವೆ!

ಹೆರವರನು ಕಡ ಕೇಳಬೇಡ
ಕೇಳಲೇಬೇಕಾಗಿ ಬಂದರೂ,
ಕೂಡಲೇ ಮರಳಿಸುವುದ ಮರೆಯಬೇಡ।
ಹಿಂತಿರುಗಿಸುವಾಗ, ತಂದ
ಸ್ಥಿತಿಯಲೇ ಹಿಂತಿರುಗಿಸಬೇಕು ಮಗುವೆ.।

ಅದಾಗದಿದ್ದರೆ, ಹೊಸದೊಂದು
ತಂದುಕೊಟ್ಟು ವಿರಸ ಬರದಂತೆ
ಸ್ನೇಹ ಉಳಿವಂತೆ ನೋಡಿಕೊ ಮಗುವೆ.।

ಪರರವಸ್ತುವ ಆಶಿಸಬೇಡ
ಆಶಿಸಿದರದು ನಿನ್ನತನವನ್ನೇ ಕೊಂದು
ನಿನ್ನ ಗೌರವಕೆ ತರುವುದು ಕುಂದು.
ನಿನ್ನದು ನಿನ್ನದಾಗುವುದೇ ಹೊರತು,
ಅನ್ಯರದು ನಿನ್ನದಾಗದು, ಮಗುವೆ.।

# ಗುಟ್ಟು

ಮುಚ್ಚು-ಮರೆ ಬೇಡ,
ಮುಚ್ಚುಮರೆ ಇದ್ದಲ್ಲಿ
ದ್ವೇಷ-ಮೋಸ ತುಂಬಿಹುದು
ಅದಕಾಗಿ ತೆರೆದ ಪುಸ್ತಕದಂತಿದ್ದು
ಯಾರು ಬೇಕಾದರೂ
ನಿನ್ನ ನಡೆ-ನುಡಿ
ಓದಿಕೊಳ್ಳುವಂತಿರಲಿ, ಮಗುವೆ।

ಗುಟ್ಟು ಮಾಡದಿರೆ ಕೆಡುಕಾಗುವಂತಿದ್ದಲ್ಲಿ
ಮುಚ್ಚು-ಮರೆ ಮಾಡಿದರೆ ತಪ್ಪಲ್ಲ
ಒಳಿತಿಗಾಗಿ ಮಾಡುವ ಗುಟ್ಟು
ಸತ್ಫಲವ ಕೊಡುವಲ್ಲಿ ಸಂಶಯವಿಲ್ಲ, ಮಗುವೆ

ರಾಜತಂತ್ರದಲ್ಲಿ ಗುಟ್ಟು ಇರಲೇಬೇಕು
ದೇಶ ರಕ್ಷಿಸುವ ಸೈನಿಕರಲ್ಲಿ ಗುಟ್ಟಿರಬೇಕು
ಆದರೆ ನಮ್ಮನಮ್ಮಲ್ಲಿ ಭೇದಹುಟ್ಟಿಸುವ,
ದ್ವೇಷ ಬೆಳೆಸುವ,
ಸರ್ವನಾಶಕೆ ದಾರಿಮಾಡುವ
ಗುಟ್ಟು ಒಳಿತಲ್ಲ ಮಗುವೆ।

ಒಳಿತ ಸಾಧಿಸಲು
ಮಾಡುವ ಒಳ್ಳೆಯದು ಮಗುವೆ.॥

■

## ಹಣ

ಹಣ ಇದ್ದಲ್ಲಿ
ಬಂಧು–ಬಾಂಧವರು,
ಸ್ನೇಹಿತರು, ಸುತ್ತೆಲ್ಲ
ಬಂದು ಕೂಡುವರು;

ಸುತ್ತುಗಟ್ಟಿ, ಪ್ರೀತಿಯ
ಮಳೆಯನ್ನೆ ಸುರಿಸುವರು
ಕಪಟ ಪ್ರೀತಿಯ ತೋರಿ
ನಿನ್ನ ಕೈ ಬರಿದಾಗುವವರೆಗೆ
ಸುತ್ತ–ಮುತ್ತ ಸುಳಿಯುವರು
ಕೈ ಬರಿದಾಗುತ್ತಿದ್ದಂತೆಯೇ
ಮೆಲ್ಲನೆಲ್ಲರೂ ಒಬ್ಬೊಬ್ಬರಾಗಿ
ದೂರ ಸರಿಯುವರು ಮಗುವೆ.।

ಹಣವಿದ್ದಾಗ ಬರುವವರೆಲ್ಲ
ಹಿತೈಷಿಗಳೆಂದು ಬಗೆಯದಿರು.
ನಿನ್ನವರೆಂದು ತಿಳಿದು,
ಇದ್ದುದನೆಲ್ಲ ಹಂಚದಿರು ಮಗುವೆ.॥

■

## ದುಶ್ಚಟ

ಸ್ವಚ್ಛವಾದ ಪರಿಸರದಲಿ
ಸಮತೋಲನ ಆಹಾರ ಉಣ್ಣುತ್ತಾ,
ಮದ್ಯಪಾನವ ಮಾಡದೆ
ಧೂಮ ಪಾನದಿಂದ ದೂರವಿದ್ದಲ್ಲಿ,
ಗುಟಕಾ ಗುಟಕರಿಸದೆ,
ನೀತಿ–ನಿಯಮದಿ ಬದುಕುತ್ತಾ
ತುಚ್ಛ ನಡತೆಗಳಿಂದ ದೂರವಿದ್ದರೆ
ಉಚ್ಛ ಸ್ಥಾನ.... ಏರಿ,
ಎಲ್ಲರ ಮೆಚ್ಚುಗೆ ಪಡೆವೆ ಮಗುವೆ।

ಆಳುಗಳೊಡನೆ ಸರಸ ಸಲ್ಲ,
ಮನೆಯವರೊಡನೆ ವಿರಸ ಸಲ್ಲ,
ಸ್ನೇಹದಲಿ ಮೋಸ ತರವಲ್ಲ, ಮಗುವೆ।

ಸೇವಕರಲ್ಲಿ ದಯೆ ಇರಲಿ
ಮನೆಯವರೊಡನಾಟ ಸಂತಸ ತರಲಿ
ಸ್ನೇಹದಲಿ ವಿಶ್ವಾಸವಿರಲಿ
ವಿಶ್ವಾಸ ಘಾತುಕ ತನಕೆ ಎಡೆ ಇಲ್ಲದಿರಲಿ ಮಗುವೆ.॥

■

## ಚಂದ

ಬೆಳಗೆ ಮಳೆ ಚಂದ
ಮನೆಗೆ ಮಕ್ಕಳು ಚಂದ
ಹೂವಿಗೆ ಪರಿಮಳ ಚಂದ
ದೇವರ ಮನೆಗೆ ಉರಿವ ಹಣತೆ
ಚಂದ ಮಗುವೆ।

ಮಾನವಗೆ ಗುಣ ಚಂದ
ತಾಯಿ ಇದ್ದರೆ ತವರು ಚಂದ
ಮನೆಯೊಡೆಯನಿಗೆ
ಕುಟುಂಬದೇಳಿಗೆ ಚಂದ
ವಿದ್ಯಾರ್ಥಿಗೆ ಜ್ಞಾನಾರ್ಜನೆ ಚಂದ
ಪೂಜಾರಿಗೆ ಅರ್ಚನೆ ಚಂದ
ತಾತನಿಗೆ ಮೊಮ್ಮಕ್ಕಳು ಚಂದ
ವೃದ್ಧಾಪ್ಯಕೆ ಮನೆಯವರೆಲ್ಲರ
ಪ್ರೀತಿ ಚಂದ ಮಗುವೆ।

ಹಣವಿದ್ದಲ್ಲಿ ಉದಾರತೆ ಚಂದ
ಬಡವಗೆ ಹಣ ಚಂದ
ಸತ್ಪಾತ್ರಕೆ ದಾನ ಚಂದ

ಕೀರ್ತಿಗೊಬ್ಬ ಮಗ ಚಂದ
ಆರತಿಗೊಬ್ಬಳು ಮಗಳು ಚಂದ
ಮನೆತನಕೆ ಸದ್ಗೃಹಿಣಿ ಚಂದ
ಇಷ್ಟೆಲ್ಲಾ ಇದ್ದರೆ ಜೀವನವೆಲ್ಲಾ
ಚಂದ, ಚಂದ ಮಗುವೆ.॥

■

## ಶಿಸ್ತು

ಶಿಸ್ತಿನ ಜೀವನ,
ಬಾಳಿನ ನಂದನ
ನಡೆ–ನುಡಿಯಲ್ಲಿ
ಕೆಲಸ–ಕಾರ್ಯಗಳಲ್ಲಿ
ಎಲ್ಲೆಡೆಯಲ್ಲಿ ಶಿಸ್ತಿರಬೇಕು ಮಗುವೆ।

ಶಿಸ್ತಿಲ್ಲದ ಜೀವನ
ನೀರಿನಲ್ಲೆಸೆದ ಹುಲ್ಗರಿಯಂತೆ
ಇಲ್ಲಿಂದಲ್ಲಿಗೆ ತೇಲುತ್ತಾ
ಗಾಳಿಬೀಸಿದಲ್ಲಿ ಸುತ್ತುತ್ತಾ
ಗುರಿ ಇಲ್ಲದೆ, ದಡ ಸೇರದೆ
ಒಂದು ಸಾರಿ ಇಲ್ಲಿಗೆ, ಮತ್ತೊಂದು
ಸಾರಿ ಅಲ್ಲಿಗೆ ಅಲೆಯುತ್ತಾ
ನೆಲೆಯು ಸಿಗದೆ ಸುತ್ತುತ್ತಾ
ಗೊತ್ತುಗುರಿ ಇಲ್ಲದೆ ಅಲೆದಾಡುತ್ತಾ
ಎಲ್ಲರ ಅಲಕ್ಷ್ಯಕ್ಕೆ ಗುರಿಯಾಗಿ
ಕಾಲಹಾಕಬೇಕಾಗುವುದು ಮಗುವೆ।

ಮಗುವಾದಾಗಿನಿಂದಲೂ
ಆಡಾಡುತ್ತಲೆ ಶಿಸ್ತಿಗೊಳಗಾಗುತ್ತಾ
ಶಿಸ್ತಿನ ನಡೆ ಕಲಿಯಬೇಕು ಮಗುವೆ।
ನಡೆ–ನುಡಿಯಲಿ
ಉಡುಗೆ–ತೊಡುಗೆಯಲಿ
ಶಿಸ್ತಿನ ಛಾಪು ಕಾಣಬೇಕು ಮಗುವೆ।

ಸಮಯಕ್ಕೆ ಸರಿಯಾಗಿ
ಕೆಲಸ ಮುಗಿಸುವುದು ಶಿಸ್ತು,

ಮಾಡುವ ಕೆಲಸವ
ಮುಂದೂಡದಿರುವುದು ಶಿಸ್ತು,
ರಾತ್ರಿ ಬೇಗ ಮಲಗಿ
ಮುಂಜಾನೆ ಬೇಗ ಏಳುವುದು ಶಿಸ್ತು,
ಕತ್ತಲಾಗುವ ಮೊದಲೆ
ಮನೆ ಸೇರುವುದು ಶಿಸ್ತು,

ಮನೆಯ, ಒಪ್ಪ- ಓರಣದಿ
ಇಡುವುದೆ ಶಿಸ್ತು,
ಹಿರಿಯರ ಗೌರವದಿ
ಕಾಣುವುದು ಶಿಸ್ತು,
ಎಲ್ಲರೊಡನೆ ಸ್ನೇಹದಿಂದ
ಇರುವುದೆ ಶಿಸ್ತು ಮಗುವೆ.॥

ಮನ ಬಂದಂತೆ ನಡೆಯುವುದು,
ಹೊತ್ತುಮೀರಿ ಮನೆಗೆ ಬರುವುದು,
ಯಾರ ಕಾಳಜಿಯೂ ಇಲ್ಲದೆ
ಇಚ್ಛೆ ಬಂದಂತೆ ನಡೆಯುವುದು,
ತನಗೆ ಬೇಕಾದಂತೆ ವರ್ತಿಸುವುದು,
ಅಶಿಸ್ತಿನ ಉದಾಹರಣೆಗಳು ಮಗುವೆ।

ಶಿಸ್ತಿನ ನಡೆಯಿಂದ
ನಿನಗೂ ಒಳಿತಾಗುವುದಲ್ಲದೆ
ಅನ್ಯರಿಗೂ ಹಿತವಹುದು
ಎಲ್ಲರಿಗೂ ಹಿತವಹುದು
ಎಲ್ಲರೂ ಒಳಿತಾಗಿ ನಡೆಯಲು
ದಾರಿಯಾಗುವುದು ಮಗುವೆ।

ಒಬ್ಬರು ಮನೆಯಲ್ಲಿ
ಶಿಸ್ತಿನಿಂದ ನಡೆದಾಗ,
ಅದರ ಒಳಿತಾದ ಪರಿಣಾಮದಿಂದ
ಉಳಿದವರೂ ಶಿಸ್ತಿನಿಂದ
ನಡೆಯುವರಾಗ, ಎಲ್ಲರ

ಏಳ್ಗೆಯಾಗಿ ಸುಖಕೆ
ಹಾದಿಯಾಗುವುದು ಮಗುವೆ॥

ಶಿಸ್ತಿನಿಂದಿರುವವನ
ಎಲ್ಲರೂ ಮೆಚ್ಚುವರಾಗಿ,
ಅವನ ಜೀವನ
ಅಚ್ಚುಕಟ್ಟಾದಾಗ
ಅವನಿಚ್ಛೆಗೆ ತಲೆಬಾಗಿ
ನಡೆಯುವರೆಲ್ಲರೂ ಮಗುವೆ.॥

## ದುಷ್ಟರು

ದುಷ್ಟರಿಹರು ಎಲ್ಲೆಲ್ಲೂ
ಅವರ ಸದೆಬಡಿಯಬೇಕು ಮಗುವೆ।

ದುಷ್ಟತನವನು ಸಹಿಸದೆ,
ಕಷ್ಟವಾದರೂ ಸರಿಯೆ
ದಿಟ್ಟತನದಿ ಎದುರಿಸಿ ಯಶಪಡೆಯಬೇಕು ಮಗುವೆ.।

ಮಾನವಂತರು ಮಾನಕಾಗಿ
ನಡೆದರೆ, ದುಷ್ಟರು
ತನಗೇ ಅಂಜುವರೆಂದು ಬಗೆದು,
ಮತ್ತಷ್ಟು ಅಟ್ಟಹಾಸದಿ ಮೆರೆವರು,
ಅದಕಾಗಿ ಕೆಟ್ಟಬುದ್ಧಿಯ
ಕಂಡೊಡೆ, ಜುಟ್ಟು ಹಿಡಿದು
ಬುದ್ಧಿ ಕಲಿಸು, ಮಗುವೆ.॥

## ಆಸೆ ಬದುಕು

ಆಸೆ ಮಾಡುವುದು ತಪ್ಪಲ್ಲ;
ಆಸೆ ಇಲ್ಲದಿದ್ದರೆ, ಮುಂದೆ ಹೋಗಲಾರೆ;
ಆದರೆ ಆ ಆಸೆ ನಿನ್ನಳವಿಗೆ
ಮೀರದಿರಬೇಕು; ಮತ್ತದು
ದುರಾಸೆಯಾಗಬಾರದು ಮಗುವೆ

ನಿನ್ನಳವಿನಾಸೆಯೆ ಗುರಿಯಾಗಿ,
ಅದ ಸೇರಲು, ಕಷ್ಟಪಟ್ಟು ದುಡಿಯಬೇಕು;
ಉಂಡಾಡಿ ಗುಂಡನಾಗದೆ
ಉತ್ಸಾಹದ ಚಿಲುಮೆಯಾಗಬೇಕು;
ಶ್ರಮವಹಿಸಿ ಕಾರ್ಯನಿರ್ವಹಿಸಬೇಕು; ಮಗುವೆ.
ನಿನಗೊಬ್ಬನಿಗೇ ನೀಗದ
ಕೆಲಸವಿದ್ದಲ್ಲಿ, ಬೇರೊಬ್ಬರ
ನೆರವು ಬಯಸುವುದು ತಪ್ಪಲ್ಲ;
ಆದರೆ ನೆರವನೇ ನಂಬಿ
ಬದುಕುವುದು ತರವಲ್ಲ
ತತ್ಕಾಲದಿ ನೆರವು ಪಡೆದು
ಆಪತ್ಕಾಲವ ದಾಟಿಕೊಂಡು
ಪರಾವಲಂಬಿಯಾಗದಂತೆ
ಬಹುಕಾಲ ಬದುಕಲು ಕಲಿ, ಮಗುವೆ.॥

■

## ಮಾತು

‘ಮಾತು ಬಲ್ಲವ ಮಾಣಿಕ್ಯ ತಂದ
ಮಾತು ಬರದವ ಜಗಳ ತಂದ’
ಎನ್ನುವ ಗಾದೆ ಮಾತು ಸುಳ್ಳಲ್ಲ
ಮಾತು ಮುತ್ತಿನಂತರಬೇಕು
ಮಾಣಿಕ್ಯ ತರುವಂತಿರಬೇಕು, ಮಗುವೆ॥

ಮಾತು ಮಿತಿಮೀರಿದರೆ
ಎಲ್ಲವೂ ಎಲ್ಲೆಮೀರಿ ಹೋಗುವುದು
ಏರಿ ಒಡೆದು ನೀರು ಹರಿದಾಗ
ಅದ ಹಿಡಿತದಲಿಡಲು ಯಾರಿಗೆ ಸಾಧ್ಯ ಮಗುವೆ?

ದೊಡ್ಡ ಸಂಗ್ರಹದಲಿ ಹಿಡಿದಿಟ್ಟ ನೀರ
ಬೇಕಾದಷ್ಟನ್ನು ಕಾಲುವೆಯಲಿ
ಹರಿಸಿ ಪಡೆದಂತೆ
ಜ್ಞಾನಾರ್ಜನೆಯಿಂದ ಸಂಗ್ರಹಿಸಿದ
ಮಾತಿನಲ್ಲಿ ಅಗತ್ಯವಿದ್ದಷ್ಟೇ ಆಡಿ
ಕೆಲಸ ಮುಗಿಸಬೇಕು ಮಗುವೆ।

ಹಿಡಿತವಿಲ್ಲದ ಮಾತು,
ಭಕುತಿ ಇಲ್ಲದ ಪೂಜೆಯಂತೆ
ವ್ಯರ್ಥವಾಗುವುದು, ಮಗುವೆ॥

# ಧೈರ್ಯ

'ಧೈರ್ಯಂ ಸರ್ವತ್ರ ಸಾಧನಂ'
ಎಂಬ ಹೇಳಿಕೆಯಂತೆ
ಏನು ಮಾಡಬೇಕಾದರೂ
ಧೈರ್ಯವಿರಬೇಕು, ಧೈರ್ಯದಿಂದಲೇ
ಬರುವುದು ಆತ್ಮವಿಶ್ವಾಸ.
ಗುರಿ ಸಾಧನೆಗೆ ಆಗುವುದು ಬೆಂಬಲವು
ಅದ ನೀನು ಸಾಧಿಸಿಕೋ ಮಗುವೆ.।

ಬಾಲ್ಯದಿಂದಲೇ ಹಿಂಜರಿಕೆಯ ತೊರೆದು
ಧೈರ್ಯದಿ ಮುನ್ನುಗ್ಗುತ್ತಾ
ಧೈರ್ಯವನಳವಡಿಸಿಕೊಳ್ಳಬೇಕು ಮಗುವೆ.।

ಧೈರ್ಯವಿದ್ದಲ್ಲಿ ಸೋಲಿಲ್ಲ,
ಹಿಂಜರಿಕೆಯಿಲ್ಲ; ಆತ್ಮ ವಿಶ್ವಾಸದಲಿ
ದುಡಿಯುತ್ತಾ ಯಶಸ್ಸಿನ ಹಾದಿಯಲಿ
ಹೋಗಬಹುದು ಮಗುವೆ।

ಧೈರ್ಯವಿಲ್ಲದವನು
'ಹೇಡಿ' ಎನ್ನಿಸಿಕೊಳ್ಳುತ್ತಾ
ಕೆಲಸಗೇಡಿಯಾಗುವನು, ಮಗುವೆ.
ಧೈರ್ಯವಂತನ ಮುಖದಿ
ತೇಜಸ್ಸು ತುಂಬಿ ಓಜಸ್ಸು ತೋರುವುದು
ಎಲ್ಲರ ಮೆಚ್ಚುಗೆಯಿಂದ ಮುಖ
ಕಳೆಗೂಡಿ ಹೊಳೆಯುವುದು, ಮಗುವೆ.॥

■

## ಹಾರೈಕೆ

ಸಹಪಾಠಿಗಳೊಡನೆ ಇರಲಿ ಸ್ನೇಹ-ಸಹಕಾರ
ಆಟ ಪಾಠಗಳಲಿ, ನ್ಯಾಯ-ನೀತಿಗಳಿರಲಿ
ನೆರೆಹೊರೆಯವರೊಡನೆ ಕಲಹವಿರದ ಒಲವಿರಲಿ
ಗುರುಹಿರಿಯರೊಡನೆ ಗೌರವದ ನಡೆ ಇರಲಿ
ಇಂತಾದೊಡೆ ಸುಗಮ ನಿನ್ನ ಬಾಳ್ವೆ, ಮಗುವೆ॥

ನೌಕರಿ ಮಾಡುವಲ್ಲಿ ಹೊಂದಿಕೊಂಡು ಇರಬಲ್ಲೆ
ನೆಂಟರಿಷ್ಟರೊಡನೆ ಸರಸದಿಂದರಬಲ್ಲೆ
ಸಂಘ-ಸಂಸ್ಥೆಗಳಲಿ ಕೂಡಿ, ಕೆಲಸ ಮಾಡಬಲ್ಲೆ
ವಿರಸ ತರಬಲ್ಲವರೊಡನೆ ಸರಸವಾಡಿ
ವಿರಸಕ್ಕೆ ಅವಕಾಶವಿಲ್ಲದಂತೆ ಮಾಡಬಲ್ಲೆ
ಬೆಲ್ಲದಂತಹ ಮಾತನಾಡಿ, ಬೆನ್ನಲಿರಿಯಬಲ್ಲವರ
ಸೊಲ್ಲಡಗುವಂತೆ, ಸ್ನೇಹದಿಂದಲೆ ಮಾಡಬಲ್ಲೆ, ಮಗುವೆ.॥

ನಿನ್ನ ನೀತಿ-ಪ್ರೀತಿಯ ನಡತೆ
ನೀಡುವುದೆಲ್ಲರಿಗೆ ಶಾಂತಿ-ಸಮಾಧಾನ,
ಅಶಾಂತಿಯ ಭ್ರಾಂತಿಯ ಭಯ ತೊರೆದು ಬಾಳಲು ಸಾಧ್ಯ ಮಗುವೆ॥

ನಿನ್ನ ಸದ್ಗುಣದ ಕೀರ್ತಿ ಎಲ್ಲೆಡೆ ಹಬ್ಬಿ
ನಿನ್ನ ಮಾದರಿಯಾಗಿಟ್ಟುಕೊಂಡು
ಉಳಿದೆಲ್ಲರೂ ಮುಂದೆ ಬರಲಿ ಮಗುವೆ॥

■

## ಅನುಬಂಧ - ೧

## ಕರ್ನಾಟಕದ ಹೆಮ್ಮೆಯ ಸುಪುತ್ರ: ಜಸ್ಟಿಸ್ ವ್ಹಿ. ಎಸ್. ಮಳೀಮಠ -

ಲಲಿತಾಂಬ ವೃಷಭೇಂದ್ರಸ್ವಾಮಿ

ನನ್ನ ಹಾಗೂ ನಮ್ಮ ಯಜಮಾನರಿಗೆ ನಿವೃತ್ತಿಯಾದ ನಂತರ ಒಮ್ಮೆ ದಕ್ಷಿಣ ಭಾರತದ ಪ್ರವಾಸಕ್ಕೆ ಹೊರಟೆವು. ಪಶ್ಚಿಮ ತೀರದ ಕರಾವಳಿ ಪ್ರದೇಶದಲ್ಲಿ ಪ್ರಯಾಣ ಮಾಡುತ್ತಾ ರೈಲಿನ ಕಿಟಕಿಯಿಂದ ಪ್ರಕೃತಿ ಸೌಂದರ್ಯವನ್ನು ಅವಲೋಕಿಸುವುದು, ಕಣ್ಣುಗಳಿಗೆ ಒಂದು ಹಬ್ಬ, ಎಲ್ಲೆಲ್ಲಿ ನೋಡಿದರೂ ನೀರು. ಹಸುರಿನಿಂದ ಕೂಡಿದ ಪೈರು-ಪಚ್ಚೆ, ಗಿಡ-ಮರಗಳಿಂದ ತುಂಬಿದ ಪ್ರಕೃತಿ ಸೌಂದರ್ಯ ಇದನ್ನೆಲ್ಲಾ ಆಸ್ವಾದಿಸುತ್ತಾ ಒಂದು ದಿನ, ಸಂಜೆ ತ್ರಿವೇಂದ್ರಂ ತಲುಪಿ ಅಲ್ಲಿಯ ಹೊಟೆಲೊಂದರಲ್ಲಿ ಬೀಡು ಬಿಟ್ಟೆವು, ಆ ಸಮಯದಲ್ಲಿ ವ್ಹಿ. ಎಸ್. ಮಳಿಮಠರು ಕೇರಳ ಹೈಕೋರ್ಟಿನ ಛೀಫ್ ಜಸ್ಟಿಸ್ ಆಗಿದ್ದರು. ಅವರಿಗೂ ನಮ್ಮ ಮನೆಯವರಿಗೂ ಪರಿಚಯವಿತ್ತು. ಗಾಢವಾದ ಪರಿಚಯವಲ್ಲದಿದ್ದರೂ ನಿಕಟವೆನ್ನಿಸುವಷ್ಟು ಗೊತ್ತಿತ್ತು. ಮೇಲಾಗಿ ಅವರು ನಮ್ಮ ಯೂನಿವರ್ಸಿಟಿಯ ಎಂದರೆ ಕರ್ನಾಟಕ ವಿಶ್ವವಿದ್ಯಾಲಯದ ರಿಜಿಸ್ಟ್ರಾರ್ ಮತ್ತು ಕುಲಪತಿಗಳಾಗಿದ್ದ ಶ್ರೀ ಎಸ್. ಎಸ್. ಒಡೆಯರ್‌ರವರ ಸೋದರ ಮಾವನ ಮಗನಾದುದರಿಂದ ಅನೇಕ ಸಂದರ್ಭಗಳಲ್ಲಿ ಅವರ ವಿಚಾರವಾಗಿ ನಮ್ಮ ಮನೆಯಲ್ಲಿ ಮೇಲಿಂದ ಮೇಲೆ ಮಾತನಾಡುತ್ತಿದ್ದರು. ಮೇಲಾಗಿ ಅವರ ಪತ್ನಿ ಶ್ರೀಮತಿ ಪ್ರೇಮಾದೇವಿಯವರ ತಂದೆ ಉತ್ತರ ಕರ್ನಾಟಕದ ಶಿಕ್ಷಣದ ಪ್ರಗತಿಯ ರೂವಾರಿಗಳಲ್ಲೊಬ್ಬರಾಗಿದ್ದ, ವಿಶ್ವವಿದ್ಯಾಲಯಕ್ಕೆ ನಿಕಟವರ್ತಿಗಳಾಗಿದ್ದ ಡಾ. ಸಿ. ಜೆ. ನಂದಿಮಠರಾಗಿದ್ದರು. ಹಾಗಾಗಿ ಜಸ್ಟಿಸ್ ಮಳಿಮಠರ ಹೆಸರು ನನಗೆ ಚಿರಪರಿಚಿತವಾಗಿತ್ತು. ಅವರ ವಿಷಯವಾಗಿ ತಿಳಿದುಕೊಂಡಿದ್ದೆನಾದರೂ ನೋಡಿರಲಿಲ್ಲ. ನಮ್ಮ ಮಗನ ಮದುವೆಗೆ ಮಳಿಮಠ ದಂಪತಿಗಳು ಬಂದಿದ್ದರು. ಆಗಷ್ಟೇ ನೋಡಿದ್ದೆ. ಆಗ ಕೇರಳಕ್ಕೆ ಬಂದಾಗ ನಮ್ಮವರೊಬ್ಬರು ಛೀಫ್ ಜಸ್ಟಿಸರಾಗಿ ಅಲ್ಲಿದ್ದಾರೆಂಬುದು ನಮಗೊಂದು ಕೋಡಲ್ಲವೆ? ಹಾಗಾಗಿ ನಮ್ಮ ಮನೆಯವರು ಅವರೂರಿಗೆ ಬರುವ ವಿಷಯ ಅವರಿಗೆ ತಿಳಿಸಿದರು. ಹೋದ ಮೇಲೆ ಆ ರಾತ್ರಿಯೇ ಹೋಟೆಲಿನಿಂದ ಫೋನು ಮಾಡಿದೆವು. ಮರುದಿನ

ಅವರಲ್ಲಿಗೇ ಊಟಕ್ಕೆ ಬರಬೇಕೆಂಬ ಆತ್ಮೀಯ ಕರೆ ಬಂದಿತು. ಸರಿ, ಬೆಳಿಗ್ಗೆ ಅವರು ಕಾರು ಕಳಿಸಿದ್ದರು. ಮನೆಗೆ ಹೋದೆವು. ಅವರನ್ನು ನಮ್ಮ ಮಗನ ಮದುವೆಯಲ್ಲಿ ನೋಡಿದ್ದೆ. ಗಡಿಬಿಡಿಯಲ್ಲಿ ಮಾತನಾಡಿದ್ದೆ. ಅದು ವ್ಯಾವಹಾರಿಕವಾಗಿತ್ತು. ಆತ್ಮೀಯವಾಗಿ ನಡೆದುಕೊಳ್ಳಲು ಸಮಯವಿರಲಿಲ್ಲ. ಅವರನ್ನು ಅರ್ಥಮಾಡಿಕೊಳ್ಳಲೂ ಆಗಿರಲಿಲ್ಲ. ಸಂಕೋಚದಿಂದಲೇ ಅವರ ಮನೆಯೊಳಗೆ ಅಡಿ ಇರಿಸಿದೆ. ಛೀಫ್ ಜಸ್ಟಿಸ್ ಎಂದ ಮೇಲೆ ತುಂಬಾ ದೊಡ್ಡ ಮಂದಿ, ಹೇಗೆ ವರ್ತಿಸುತ್ತಾರೋ ಏನೋ, ಅವರ ನಡೆ-ನುಡಿ ದರ್ಪದಿಂದ ಕೂಡಿದ್ದರೆ? ಮಾತುಕತೆಯಲ್ಲಿ ಬಿಗಿ ಇದ್ದರೆ? ಹೇಗೆ ಮಾಡುವುದು ಎಂಬ ಅಳುಕು ನನ್ನೊಳಗೆ ಸುಳಿದಾಡುತ್ತಿತ್ತು. ನಾವು ಹೋಗುತ್ತಿದ್ದಂತೆಯೇ ನಮ್ಮನ್ನು ಕಾಯಿಸದೆ, ಎಷ್ಟೋ ಹೊತ್ತಿನ ಮೇಲೆ ನಿಧಾನವಾಗಿ ಬಿಗಿ ಮುಖದಿಂದ ಕಾಣಿಸಿಕೊಳ್ಳುವ ಅನೇಕ 'ದೊಡ್ಡ' ಮನುಷ್ಯರಂತಿರದೆ, ಸ್ವಾಭಾವಿಕವಾದ, ಸರಳವಾದ ನಗುಮೊಗದ ಸ್ನೇಹದ ಸ್ವಾಗತ, ದಂಪತಿಗಳಿಂದ ನಮಗೆ ದೊರೆಯಿತು. ನಾವು ಅಲ್ಲಿಗೆ ಹೋದುದರ ಸಂತೋಷ, ಹಿಗ್ಗು ಅವರಿಬ್ಬರ ಮುಖದ ಮೇಲೆ ಲಾಸ್ಯವಾಡುತ್ತಿತ್ತು. ನಮ್ಮ ಅತೀ ಸಮೀಪದ, ಆಪ್ತರಾದ ಬಂಧುಗಳೊಬ್ಬರ ಮನೆಗೆ ಹೋದಂತಹ ಆತ್ಮೀಯತೆಯ ಹೊನಲು ನಮ್ಮ ಮನಸ್ಸಿನ ತುಂಬಾ ಹರಿದಾಡಿತು. ಅವರೀರ್ವರ ಆದರೋಪಚಾರಗಳನ್ನು ಯಾವ ಶಬ್ದಗಳೂ ಸಮರ್ಪಕವಾಗಿ ವರ್ಣಿಸಲಾರವು. ಅವರ ಸರಳವಾದ, ಸಜ್ಜನಿಕೆಯಿಂದ ಕೂಡಿದ ನಡೆನುಡಿ, ನನ್ನನ್ನು ಮಂತ್ರಮುಗ್ಧಳನ್ನಾಗಿಸಿತು. ಪತಿ-ಪತ್ನಿಯರಿಬ್ಬರೂ Made for each other ಎಂಬಂತೆ, ಒಂದೇ ಮನೋಭಾವ, ಒಂದೇ ರೀತಿಯ ಆಸಕ್ತಿ, ಒಬ್ಬರಿಗೊಬ್ಬರಲ್ಲಿ ಆತ್ಮೀಯವಾದ, ಮೆಚ್ಚುಗೆಯಿಂದ ಕೂಡಿದ ಸಹಕಾರ ಮುಂತಾದ ಸದ್ಗುಣಗಳನ್ನು ನೋಡಿ, ಗಂಡ-ಹೆಂಡಿರೆಂದರೆ ಹೀಗಿರಬೇಕು ಎನ್ನಿಸಿತು.

ಜಸ್ಟಿಸ್ ಮಳಿಮಠರು ಕಾಯಿದೆಯ ಕ್ಷೇತ್ರದಲ್ಲಿ ತಮ್ಮ ಇಡೀ ಜೀವನವನ್ನು ಕಳೆದಿದ್ದರೂ, ಅದರಲ್ಲಿ ಬಹುಮುಖದ ಆಸಕ್ತಿಯನ್ನು ಒಂದೆರಡು ದಿನಗಳ ಒಡನಾಟದಲ್ಲಿ, ಮಾತುಕಥೆಗಳಲ್ಲಿ ಕಂಡು ಕೊಂಡೆ. ಸಾಹಿತ್ಯ, ಧರ್ಮ ಸಮಾಜ, ಶಿಕ್ಷಣ, ರಾಷ್ಟ್ರ, ರಾಜಕೀಯ ಮುಂತಾದ ಎಲ್ಲ ವಿಚಾರಗಳಲ್ಲೂ ಆಸಕ್ತಿ, ಮಾತಿನಲ್ಲಿ ಸಿದ್ಧಾಂತ ಹಂತದ ಅಭಿಪ್ರಾಯಗಳು. ಧರ್ಮದ ಬಗ್ಗೆ ಅಭಿಮಾನ, ರಾಜಕೀಯದ ವಿಮರ್ಶೆಗಳನ್ನು ಅವರೊಡನೆಯ ನಮ್ಮ ಮಾತುಕತೆಯಲ್ಲಿ ಕಂಡುಕೊಂಡೆವು. ಆ ದಿನ ನ್ಯಾಯಾಧೀಶರಿಗೆ ರಜೆ ಇದ್ದುದರಿಂದ ಬಹಳಷ್ಟು ವೇಳೆಯನ್ನು ಜೊತೆಗೂಡಿ ಕಳೆಯಲು ಸಾಧ್ಯವಾಯಿತು. ಅನೇಕ ರೀತಿಯ ಅನುಭವಗಳನ್ನು ಜ್ಞಾನವನ್ನು ಹೊಂದಿದ್ದ ಅವರೊಡನೆ ಮಾತನಾಡುವುದು ಅನೇಕ ಪುಸ್ತಕಗಳನ್ನು ಓದಿದಷ್ಟು ಲಾಭದಾಯಕವಾಗಿತ್ತು.

ಧರ್ಮದ ಬಗ್ಗೆ ಮಾತನಾಡುತ್ತಾ ಆಡುತ್ತಾ ಮಾತು ವೀರಶೈವ ಧರ್ಮದ ಕಡೆಗೆ ಬಂದಿತು. ಆಗ ಕೇರಳದಲ್ಲಿರುವ ವೀರ ಶೈವರ ಬಗೆಗೆ, ಅವರ ಜೀವನ, ಶಿಕ್ಷಣ, ಆರ್ಥಿಕ ಸ್ಥಿತಿ ಮುಂತಾದ ವಿಷಯಗಳ ಬಗೆಗೆ ವಿವರ ನೀಡಿದರು. ಲಕ್ಷದ್ವೀಪಕ್ಕೆ ಅವರು ಕೊಟ್ಟ ಸಂದರ್ಶನದ ಬಗ್ಗೆ ವಿವರಿಸಿದರು. ಅಲ್ಲಿಗೆ ಭೇಟಿಕೊಟ್ಟ ಮೊದಲ ನ್ಯಾಯಾಧೀಶರು ಇವರಾಗಿದ್ದುದರಿಂದ ಆ ಗುಡ್ಡ ಗಾಡಿನ ಜನಾಂಗಕ್ಕಾದ ಹಿಗ್ಗನ್ನು ವರ್ಣಿಸಿದರು.

ಪ್ರೇಮಾದೇವಿ ಮಳಿಮಠರು ಒಬ್ಬ ಪ್ರಕಾಂಡ ಪಂಡಿತರೂ ವಿದ್ವಾಂಸರೂ, ಶಿಕ್ಷಣತಜ್ಞರೂ ಸಾಹಿತಿಗಳು ಆಗಿದ್ದ ಡಾ॥ ಸಿ.ಜೆ. ನಂದೀಮಠರ ಮಗಳಾಗಿದ್ದುದರಿಂದ ಸಹಜವಾಗಿಯೇ ಅವರಲ್ಲಿ ಸಾಹಿತ್ಯ, ಧರ್ಮ ಮುಂತಾದ ವಿಷಯಗಳಲ್ಲಿ ಸಾಕಷ್ಟು ಜ್ಞಾನ, ಸಾಹಿತ್ಯದಲ್ಲಿ ಆಸಕ್ತಿ ಇದ್ದು, ಅವರ ಸಾಹಿತ್ಯ ಚಟುವಟಿಕೆಗಳ ಬಗ್ಗೆ ಪರಿಚಯವಾಯಿತು. ತಾವು ಮಾಡಿದ ತಮ್ಮ ತಂದೆಯವರ ಥೀಸಿಸ್‌ನ ಅನುವಾದವನ್ನು ತೋರಿಸಿದರು. ಡಾ॥ ಗೋಕಾಕರು ಅದಕ್ಕೆ ಮುನ್ನುಡಿ ಬರೆದು ಮೆಚ್ಚುಗೆ ವ್ಯಕ್ತ ಪಡಿಸಿದ್ದರು. ಮರು ದಿನ ಅಲ್ಲಿಯ ಪ್ರೇಕ್ಷಣೀಯ ಸ್ಥಳಗಳನ್ನು ನೋಡಲು, ನಾವಿರುವವರೆಗೆ ಉಪಯೋಗಿಸಿಕೊಳ್ಳಲು ಅವರ ಕಾರನ್ನು ಕಳಿಸಿಕೊಟ್ಟರು. ನಾವು ಕಾಲಟಿಗೂ ಹೋಗಿ ಶಂಕರಾಚಾರ್ಯರ ಹುಟ್ಟೂರನ್ನೂ ಅಲ್ಲಿದ್ದ ಅವರ ಸ್ಮಾರಕಗಳನ್ನೂ, ರಾಮಕೃಷ್ಣಾಶ್ರಮವನ್ನೂ ನೋಡಿಕೊಂಡು ಬಂದೆವು. ತ್ರಿವೇಂದ್ರಂನ ಬಂದರಿನಲ್ಲಿ ಹಡಗನ್ನು ಒಳಗೆಲ್ಲಾ ನೋಡಿಬರಲು ವ್ಯವಸ್ಥೆ ಮಾಡಿಸಿದ್ದರು. ಇಷ್ಟೇ ಅಲ್ಲದೆ, ನಾವು ಮುಂದೆ ಹೋಗಲಿದ್ದ ಕನ್ಯಾಕುಮಾರಿಯಲ್ಲಿ ನಮಗಾಗಿ ಗೆಸ್ಟ್‌ಹೌಸ್‌ನಲ್ಲಿ ರೂಮನ್ನು ಕಾದಿರಿಸಲು ಮುಂಗಡವಾಗಿಯೇ ಸೂಚನೆ ಇತ್ತರು. ಎರಡು ದಿನ ಅಲ್ಲಿಯೇ ಇದ್ದು ಮರುದಿನ ಅವರುಗಳಿಂದ ಬೀಳ್ಕೊಂಡು ಕನ್ಯಾಕುಮಾರಿಯ ಕಡೆ ಪ್ರಯಾಣ ಬೆಳೆಸಿದೆವು. ಹೀಗೆ ನಮ್ಮ ದಕ್ಷಿಣ ಭಾರತದ ಪ್ರವಾಸಕ್ಕೆ ಮಳಿಮಠ ದಂಪತಿಗಳು ತೋರಿದ ಸ್ನೇಹ, ಪ್ರೀತಿ, ವಿಶ್ವಾಸ ಆದರಾತಿಥ್ಯಗಳು ಗರಿ ಮೂಡಿಸಿದವು. ಪ್ರವಾಸವು ಸುಖಕರವಾಗಿರಲು ಸಹಾಯಕವಾದವು. ಪ್ರವಾಸದ ನೆನಪು ಮತ್ತಷ್ಟು ಸಂತೋಷಕರವಾಗಲು ನೆರವಾದವು. ಜಸ್ಟೀಸ್ ವ್ಹಿ. ಎಸ್. ಮಳಿಮಠರ ಸ್ನೇಹ, ಸಜ್ಜನಿಕೆಗಳು ಅವರ ಪತ್ನಿಯ ನಗುಮುಖದ ಆದಾರತಿಥ್ಯಗಳು ಇಂದಿಗೂ ನನ್ನ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದಿವೆ. ಇಂದು ಅನೇಕ 'ದೊಡ್ಡ'ವರೆನಿಸಿಕೊಂಡವರು ಕೃತಕ ರೀತಿಯ ಸಜ್ಜನಿಕೆಯನ್ನು ಬಾಹ್ಯಾಡಂಬರದ ನಡೆ–ನುಡಿಯನ್ನು ಒಳಗೊಂಡ ಹೊರಗೆ ಇನ್ನೊಂದಾಗಿ ಬಾಳುವವರನ್ನು ನೋಡಿದಾಗ, ತಮ್ಮ ಮನಸ್ಸು ಅಂತಹವರನ್ನು ಡಾ॥ ಮಳೀಮಠರೊಡನೆ ಹೋಲಿಸಿಬಿಡುತ್ತದೆ.

ನಿವೃತ್ತರಾದ ಮೇಲೆ ಆಡಳಿತಾತ್ಮಕ ಮಂಡಳಿ ಅಧ್ಯಕ್ಷರಾಗಿ ದೆಹಲಿಯಲ್ಲಿ ವಾಸಿಸುತ್ತಿದ್ದರು. ಒಮ್ಮೆ ನಾವು ದೆಹಲಿಗೆ ಹೋದಾಗ ಮತ್ತೊಮ್ಮೆ ಅನಾವರಣಗೊಂಡವು. ನಾವು ದೆಹಲಿಯಲ್ಲಿ ನಮ್ಮ ಮಗನ ಮನೆಗೆ ಹೋದಾಗ ನಾವು ದೆಹಲಿಗೆ ಬಂದಿರುವ ವಿಚಾರ ತಿಳಿದು ಸಂಜೆಯ ಚಹಾಕ್ಕೆ ನಮ್ಮನ್ನು ಆಹ್ವಾನಿಸಿದರು. ಆರು ಗಂಟೆ ಹೊರಡಬೇಕಾದರೆ, ಕಾರ್ ಡ್ರೈವ್ ಮಾಡಲು ಅವನು ಬರಲೇ ಬೇಕಾಗಿತ್ತು. ಅವನು ಬಂದ ನಂತರ ನಾವು ಹೊರಡಲು ಏಳೂವರೆಯ ಮೇಲಾಯಿತು. ತುಂಬಾ ಅಳುಕುತ್ತಲೇ ಹೋದೆವು. ಒಳಗೆ ಕಾಲಿಡುತ್ತಲೇ ಬಾಗಿಲೆದುರಿಗೆ ಕಂಡದ್ದು ಅವರ ತಂದೆ–ತಾಯಿಗಳ ಫೋಟೋ. ಸುಂದರವಾದ ಹೂಗಳನ್ನು ಫೋಟೋದ ಸುತ್ತಲೂ ಇಟ್ಟು ಅಲಂಕರಿಸಿದ್ದರು. ಆ ನಂತರದ ಮಾತುಕತೆಗಳಲ್ಲಿ ಮಳಿಮಠರಿಗೆ ತಂದೆತಾಯಿಗಳ ಬಗ್ಗೆ ಇದ್ದ ಗೌರವಾದರಗಳು ತುಂಬಿ ತುಳುಕುತ್ತಿದ್ದವು. ನಾವು ತಡವಾಗಿ ಹೋದುದಕ್ಕೆ ಅವರಿಗೆ ತೊಂದರೆಯಾಗಿರಬಹುದು. ಬೇಸರವಾಗಿರಬಹುದು ಎಂಬ ಅಳುಕಿನಿಂದ ಒಳಹೋದ ನನಗೆ ದಂಪತಿಗಳ ನಗುಮುಖದ ಸ್ವಾಗತ, ಮನಸ್ಸಿನ ಆತಂಕವನ್ನು ಕಡಿಮೆಗೊಳಿಸಿತು. ಅನಂತರ ಎಲ್ಲರೂ ಜೊತೆಗೂಡಿ ಉಪಹಾರ ಸೇವಿಸುತ್ತಿದ್ದಾಗಿನ ಮಾತಿನ ಸಂದರ್ಭದಲ್ಲಿ ಆ ದಿನ ಕೋರ್ಟಿನಿಂದ ಬಂದ ಮಳಿಮಠರು ನಮ್ಮೊಡನೆ ಗಾರ್ಡನ್‌ನಲ್ಲಿ ಉಪಹಾರ ಸೇವಿಸಬೇಕೆಂದು, ಅಲ್ಲಿಯೇ ಕುರ್ಚಿ ಟೇಬಲ್‌ಗಳ ವ್ಯವಸ್ಥೆ ಮಾಡಿಸಿದ್ದರಂತೆ. ನಾವು ಕತ್ತಲಾದರೂ ಬಾರದಿರಲು ಒಳಗೆ ಕಳಿಸಿದರಂತೆ. ನಾವು ಹೋಗುವವರೆಗೂ ಇನ್ನೂ ಅವರು ಸಂಜೆಯ ಉಪಹಾರವನ್ನೇ ತೆಗೆದುಕೊಂಡಿರಲಿಲ್ಲ. ಇದನ್ನು ಕೇಳಿದ ನಮಗೆ ನಾಚಿಕೆಯಿಂದ ಮನಸ್ಸು ಒಂದು ಹಿಡಿಯಾಗಿಯೋಯಿತು. ಇಷ್ಟಾದರೂ ಪ್ರತ್ಯಕ್ಷವಾಗಿಯಾಗಲೀ ಪರೋಕ್ಷವಾಗಿರಲೀ ನಮಗೆ ಆ ಬಗ್ಗೆ ಮುಜುಗರವಾಗುವಂತಹ ಒಂದು ಮಾತನ್ನೂ ಆಡದ ದೊಡ್ಡಸ್ತಿಕೆಯನ್ನು ಅವರಲ್ಲಿ ಕಂಡು ಮನಸ್ಸು ಗೌರವದಿಂದ ಬಾಗಿತು.

ಈಗಿನ ಕಾಲದಲ್ಲಿ ಹಿರಿಯರ ಬಗ್ಗೆ ಗೌರವಾದರಗಳು ಕಡಿಮೆ. ಪಿತೃವಾಕ್ಯಪರಿಪಾಲನೆಗಾಗಿ, ತನ್ನ ತಪ್ಪೇನೂ ಇರದಿದ್ದರೂ ರಾಮನು ಹನ್ನೆರಡು ವರ್ಷ ವನವಾಸ ಅನುಭವಿಸಿದ. ಅಂತಹ ಆದರ್ಶಗಳನ್ನು ಗರ್ಭೀಕರಿಸಿಕೊಂಡಿರುವುದು ನಮ್ಮ ದೇಶವಾದರೂ ಈಗಿನ ಅಂತಹ ಆದರ್ಶಗಳೆಲ್ಲಾ ಮೂರ್ಖತನದ ಪರಮಾವಧಿ ಎಂದು ಟೀಕಿಸುವ ಜನರೇ ಹೆಚ್ಚಾಗಿದ್ದಾರೆ. ಗುರುಗಳೊಬ್ಬರು ಹೇಳಿದಂತೆ ತಾಯಿ ಹತ್ತು ಮಕ್ಕಳನ್ನು ಹೆತ್ತು, ಬಾಯಲ್ಲಿ ತುತ್ತನಿಟ್ಟು ಸಲಹಿ ಮಕ್ಕಳನ್ನು ದೊಡ್ಡವರನ್ನಾಗಿ ಮಾಡಿದರೆ, ಆ ಹತ್ತು ಮಕ್ಕಳು ಸೇರಿ, ಒಬ್ಬ ಮುದಿತಾಯಿಯನ್ನು ರಕ್ಷಿಸದಂತಹ ಕಾಲಬಂದಿರುವುದು ದುರ್ದೈವವೇ ಸರಿ.

ಆದರೆ ಮಳಿಮಠರೊಡನೆ ಮಾತನಾಡುತ್ತಿದ್ದಾಗ ಅವರು ಮಾತು- ಮಾತಿಗೂ ತಮ್ಮ ತಂದೆ-ತಾಯಿಗಳ ಗುಣವನ್ನು ಎತ್ತಿಹಿಡುಯುವ ಉದಾಹರಣೆಗಳನ್ನು ಹೇಳಿ ಹಿಗ್ಗುತ್ತಿದ್ದರು. ಹೆಮ್ಮೆಪಡುತ್ತಿದ್ದರು. ಅವರ ಬಗ್ಗೆ ಮಳಿಮಠರು ತೋರಿಸುತ್ತಿದ್ದ ಗೌರವ, ಮಮತೆ ಅವರ್ಣನೀಯವಾಗಿತ್ತು. ತಮ್ಮ ತಾಯಿಯ ಉದಾರತೆ, ಸದ್ಗುಣ, ದಕ್ಷತೆಗಳ ಬಗ್ಗೆ ಎಷ್ಟು ವರ್ಣಿಸಿದರೂ ಅವರಿಗೆ ತೃಪ್ತಿಯಿಲ್ಲ. ಇಂದಿನ ಯುವಪೀಳಿಗೆಗೆ ಇವರೊಂದು ಆದರ್ಶವೆಂದೇ ಹೇಳಬಹುದು.

ಪತ್ನಿ ಪ್ರೇಮಾದೇವಿಯವರ ಬಗೆಗೂ ಇನ್ನಿಲ್ಲದ ಕಾಳಜಿ. ಅವರಲ್ಲಿರುವ ಸುಪ್ತ ಪ್ರತಿಭೆಗಳಿಗೆ ಸಾಕಷ್ಟು ಪ್ರೋತ್ಸಾಹವಿತ್ತು ಅವು ಹೊರಹೊಮ್ಮಲು ಅವಕಾಶಮಾಡಿಕೊಡುವುದನ್ನು ನಾವು ಗುರುತಿಸಿದೆವು. ಹಾಗಾಗಿಯೇ ಸಾಹಿತ್ಯ ಸಂಗೀತ, ಕಲೆ, ಸಂಸ್ಕೃತಿ ಎಲ್ಲವೂ ಅವರ ಕುಟುಂಬದಲ್ಲಿ ಮೇಳೈಸಿರುವುದನ್ನು ನಾವು ಕಾಣಬಹುದಾಗಿದೆ. ಅಷ್ಟು ದೊಡ್ಡ ಅಧಿಕಾರಿಯ ಮಕ್ಕಳಾದರೂ ಅವರ ಹೆಣ್ಣು ಮಕ್ಕಳು (ಪುತ್ರನ ನಿಕಟ ಪರಿಚಯವಿಲ್ಲ) ತುಂಬಾ ಸರಳ, ಮೃದು, ನಿಗರ್ವಿಗಳು, ಎಲ್ಲರೂ ವಿದ್ಯಾವಂತರು. ಸಂಗೀತ-ಕಲೆಗಳಲ್ಲಿ ಆಸಕ್ತರು. ಪ್ರಾವೀಣ್ಯತೆ ಪಡೆದವರು. ಒಟ್ಟಿನಲ್ಲಿ ತುಂಬಿದ ಕುಟುಂಬ. ಈ ಕುಟುಂಬದಲ್ಲಿ ಅನುಕರಣೀಯವಾದುದು ಲೆಕ್ಕವಿಲ್ಲದಷ್ಟು.

ಜಸ್ಟಿಸ್ ಮಳಿಮಠರಲ್ಲಿ ಒಳಿತು ಒಳಗೊಂಡಿರುವುದಷ್ಟೇ ಅಲ್ಲದೆ ಒಳಿತೆಲ್ಲಿಕಂಡರೂ ಅದನ್ನೂ ಮೆಚ್ಚುವ ದೊಡ್ಡಗುಣವೂ ಅವರಲ್ಲಿದೆ. ದೊಡ್ಡ ಸ್ಥಾನದಲ್ಲಿರುವವರು, ಬೇರೆಯವರಲ್ಲಿರುವ ಒಳಿತನ್ನು ನೋಡಿ ಮೆಚ್ಚುಗೆಯನ್ನು ವ್ಯಕ್ತಪಡಿಸುವುದು ಕಡಿಮೆ. ಏಕೆಂದರೆ, ಇವರ ಮಾತಿಗೆ ಬೆಲೆ ಸಿಕ್ಕಿ ಬೇರೆಯವರೂ ಎಲ್ಲಿ ದೊಡ್ಡವರಾಗಿಬಿಡುತ್ತಾರೋ ಎಂದು ಕೆಲವರಿಗೆ ಆತಂಕ. ಆದರೆ ಮಳಿಮಠರು ಒಳಿತು ಎಲ್ಲೇ ಇದ್ದರು, ತಮಗೆ ಒಳಿತು ಎನ್ನಿಸಿದುದನ್ನು ಮುಕ್ತವಾಗಿ ಮೆಚ್ಚುವ ಸದ್ಗುಣ ಪಡೆದಿದ್ದಾರೆ. ಮೌಲ್ಯಗಳ ಬಗ್ಗೆ ತುಂಬಾ ಕಳಕಳಿ. ಇದನ್ನು ಅವರ ಮಾತುಗಳಿಂದ ಅರಿತಿದ್ದ ನಾನು, ಪುಟ್ಟನಿಗೆ ಹಿತೈಷಿಯ ಪತ್ರಗಳು ಎಂಬ ನನ್ನ ಪುಸ್ತಕಕ್ಕೆ (ಮಕ್ಕಳಲ್ಲಿ ಮೌಲ್ಯಗಳನ್ನು ಬೆಳೆಸಲು ಸಹಾಯಕವಾಗುವ ಪುಸ್ತಕ) ಮುನ್ನುಡಿ ಬರೆಯಲು ಕೇಳಿದಾಗ ತಮ್ಮ ಬಿಡುವಿಲ್ಲದ ಕೆಲಸಗಳಲ್ಲಿಯೂ ಬಿಡುವು ಮಾಡಿಕೊಂಡು ಅತ್ಯಂತ ಮೌಲಿಕವಾದ ಮುನ್ನುಡಿ ಬರೆದುಕೊಟ್ಟರು.

ಹೀಗೆ ಜಸ್ಟಿಸ್ ಮಳಿಮಠರದ್ದು ಅತ್ಯಂತ ಪ್ರತಿಭೆಯಿಂದ ಕೂಡಿದ ಬಹುಮುಖ ವ್ಯಕ್ತಿತ್ವ. ಜನರಲ್ಲಿ ಸದ್ಗುಣಗಳನ್ನು ಅರಸಿಕೊಂಡು ಹೋದರೂ ಸಿಕ್ಕದ ಈ ಕಾಲದಲ್ಲಿ ಮೌಲ್ಯಾಧಾರಿತ ದಾಂಪತ್ಯ ಜೀವನವನ್ನು, ವೃತ್ತಿ ಜೀವನವನ್ನು, ರಾಷ್ಟ್ರೀಯ ಜೀವನವನ್ನು ಬದುಕುತ್ತಿರುವ ಕೆಲವೇ ಕೆಲವು ಭಾರತೀಯರಲ್ಲಿ ಜಸ್ಟಿಸ್ ಮಳಿಮಠರು ಪ್ರಮುಖರು.

ಅವರು ಕರ್ನಾಟಕದವರು ಎಂದು ಹೇಳಿಕೊಂಡು ಕನ್ನಡಿಗರು ಹೆಮ್ಮೆ ಪಡಬಹುದಾದಂಥವರು ಎಂದು ನಿಸ್ಸಂದೇಹವಾಗಿ ಹೇಳಬಹುದು.

(ಸತ್ಯಂ ಶಿವಂ ಸುಂದರಂ- ನೆನಪಿನ ಸಂಚಿಕೆಯಲ್ಲಿ ಪ್ರಕಟ)

ನ್ಯಾಯಮೂರ್ತಿ ಡಾ॥ ವಿ. ಎಸ್. ಮಳಿಮಠ ಅವರ ಅಮೃತಮಹೋತ್ಸವದ ರಾಷ್ಟ್ರೀಯ ಅಭಿನಂದನಾ ಗ್ರಂಥ ೧೨.೬.೨೦೦೪

ಸತ್ಯಂ ಶಿವಂ ಸುಂದರಂ.

ಸಂಪಾದಕ ಮಂಡಳಿ
ಮಹದೇವ ಹೊರಟ್ಟಿ
ಡಾ ॥ ಸಿ. ಸೋಮಶೇಖರ್
ಎಂ. ರುದ್ರಮ್ಮ

■

## ಅನುಬಂಧ – ೨

## ಮಕ್ಕಳ ಸಮ್ಮೇಳನ – ಗದಗ ಜನವರಿ ೧೦, ೨೦೦೪

ಸರ್ವಾಧ್ಯಕ್ಷರಾದ ಶಂ. ಗು. ಬಿರಾದಾರ ಅವರೇ,

ಅಧ್ಯಕ್ಷರೇ, ವೇದಿಕೆಯ ಮೇಲಿನ ಶಿಶು ಸಾಹಿತಿಗಳೇ ಮಕ್ಕಳ ಹಿತಚಿಂತಕರಾದ ಸಭಿಕರೇ, ಹಾಗೂ ಪ್ರೀತಿಯ ಮಕ್ಕಳೇ,

ಮಕ್ಕಳೇ ಮನೆಗೆ ಮಾಣಿಕ್ಯ' ಎಂಬ ಹೇಳಿ, ತುಂಟು ಮಕ್ಕಳಿಂದಲೇ ಮನೆ, ಮಕ್ಕಳಿಂದಲೇ ರಾಷ್ಟ್ರ ಇಂದಿನ ಮಕ್ಕಳು ನಾಳಿನ ಜವಾಬ್ದಾರಯುತ ನಾಗರೀಕರು ಬಾಲ್ಯಾವಸ್ಥೆ ಬಹಳ ಮಹತ್ವದ್ದು. ಹುಟ್ಟಿನಿಂದ ಹಿಡಿದು ಹದಿ ವಯಸ್ಸು ಮುಗಿಯುವ ವರೆಗಿನ 'ಕಾಲ, ಅವ್ಯಕ್ತಿಯ ವ್ಯಕ್ತಿತ್ವ ರೂಪುಗೊಳ್ಳುವಲ್ಲಿ ಬಹಳ ಮಹತ್ವದ್ದು ಈ ಸಮಯದಲ್ಲಿ ಎಲ್ಲಾ ರೀತಿಯಿಂದ ಲಕ್ಷ್ಯಕೊಟ್ಟು ಬೆಳೆಸಿದ ಮಗುವಿನ ವ್ಯಕ್ತಿತ್ವ ಮಹತ್ತರವಾಗಿರುತ್ತದೆ.

ಪ್ರಜಾಪ್ರಭುತ್ವದಲ್ಲಿ ಎಲ್ಲರಿಗೂ ಮುಕ್ತ ಅವಕಾಶಗಳಿರುತ್ತದೆ. ಯೋಗ್ಯತೆ ಇರುವ -----ಬೇಕಾದರೂ ಯಾವುದೇ ಸ್ಥಾನಕ್ಕೆ ಏರಬಹುದು ಪ್ರಧಾನಿಯಾಗಬಹುದು; ರಾಷ್ಟ್ರಾಧ್ಯಕ್ಷನಾಗಬಹುದು, ವಿಜ್ಞಾನಿಯಾಗಬಹುದು, ಸಮಾಜ ಕಾರ್ಯಕರ್ತನಾಗಬಹುದು. ಯೋಧನಾಗಬಹುದು, ಸ್ವಾಮಿಯಾಗಬಹುದು, ಸಾಹಿತಿಯಾಗಬಹುದು, ಶಿಕ್ಷಣ ತಜ್ಞನಾಗಬಹುದು. ಮಕ್ಕಳೇ ನೀವೇನಾಗಬೇಕೆಂಬುದನ್ನು ಈಗಿನಿಂದಲೇ ಯೋಚಿಸಿರಿ. ನಿಮಗೆ ಯಾವ ಕ್ಷೇತ್ರದಲ್ಲಿ ಆಸಕ್ತಿ ಇದೆ ಎಂಬುದನ್ನು ಕಂಡುಕೊಳ್ಳಿರಿ, ನೀವೇನಾಗಬೇಕೆಂಬುದನ್ನು ನಿರ್ಧರಿಸಿಕೊಂಡು, ಆದಿಶೆಯಲ್ಲಿ ಮುಂದುವರಿಯಿರಿ, ಹಾಗಾಗಬೇಕಾರೆ, ಬೇಕಾದ ಜ್ಞಾನವನ್ನು ಈಗಿನಿಂದಲೇ ಪಡೆಯಲು ಪ್ರಯತ್ನಶೀಲರಾಗಿರಿ. ಒಬ್ಬ ಪರಿಪೂರ್ಣ ವ್ಯಕ್ತಿಗೆ ಕೇವಲ ಜ್ಞಾನ ಸಾಲದು. ಆರೋಗ್ಯವಂತ ಧೃಡಕಾಯಬೇಕು. ಸಮಾಜದಲ್ಲಿ ಎಲ್ಲರೊಡನೆ ಹೊಂದಿಕೊಂಡು ಬಾಳುವ ಸಹಕಾರ ಮನೋಭಾವ ಬೇಕು. ಕಾರ್ಯವನ್ನು ನಿರ್ವಹಿಸುವುದು ಜಾಣ್ಮೆಬೇಕು. ಇದಕ್ಕೆಲ್ಲ ಬುನಾದಿಯಾಗಿ ನೀತಿಯುತ ನಡವಳಿಕೆಬೇಕು. ಎಷ್ಟೇ ಜ್ಞಾನವಿದ್ದರೂ ವ್ಯಕ್ತಿ ನೀತಿವಂತನಲ್ಲದಿದ್ದರೆ, ಅದು ನಾಯಿಯ

ಮೊಲೆಗಳಲ್ಲಿ ಹಾಲಿದ್ದಂತೆ. ಆದ್ದರಿಂದ ಏನೇ ಕನಸು ನಮ್ಮದಾಗಿದ್ದರೂ, ಅದು ನನಸಾಗುವುದಕ್ಕೆ ನೀವು ಈಗಿನಿಂದಲೇ ಜ್ಞಾನ, ಆರೋಗ್ಯ ನೈತಿಕತೆ ಇವುಗಳನ್ನು ಈಗಿನಿಂದಲೇ ಮೈಗೂಡಿಸಿಕೊಳ್ಳಬೇಕು.

ನಿಮ್ಮ ಜಾತಿ, ಬಡತನ, ಸಾಮಾಜಿಕ ಸ್ಥಾನ ಮಾನಗಳು, ನಿಮ್ಮ ಕನಸು ನನಸಾಗುವುದಕ್ಕೆ ಅಡ್ಡಿಯಾಗುವುದಿಲ್ಲ. ನಿಮ್ಮ ಮುಂದೆ ಅನೇಕ ಆದರ್ಶವ್ಯಕ್ತಿಗಳಿದ್ದಾರೆ. ಬಡಕುಟುಂಬದಿಂದ ಬಂದ ಮೀನುಗಾರನ ಮಗ ಇಂದು ರಾಷ್ಟ್ರಧ್ಯಕ್ಷರಾಗಿದ್ದಾರೆ. ಒಬ್ಬ ಶಿಕ್ಷಕರಾಗಿದ್ದವರು ಇಂದು ಪ್ರಧಾನಿಯಾಗಿದ್ದಾರೆ. ಒಬ್ಬ ಮಹಿಳೆ, ಜಗದ್ವಿಖ್ಯಾತ, ಪೊಲೀಸ್ ಆಫೀಸರ್ ಆಗಿದ್ದಾಳೆ. ಚಿಕ್ಕ ವಯಸ್ಸಿನಲ್ಲೇ ಅದ್ಭುತ ಶೌರ್ಯವನ್ನು ಮೆರೆದ ಕಲ್ಪನಾ ಚಾವ್ಲಾ ಬಾಹ್ಯಾಕಾಶ ವಿಜ್ಞಾನಿ ಇದ್ದಾಳೆ. ಸಮಾಜ ಸೇವೆಗಾಗಿ ಜೀವನವನ್ನು ಮುಡುಪಿಟ್ಟ ಮಕರ್ ತೆರೇಸಾ ಇದಾರೆ. ಹೀಗೆ ಇನ್ನೂ ಅನೇಕ ಶ್ರೇಷ್ಠ ವ್ಯಕ್ತಿಗಳು ಆಗಿಹೋಗಿದ್ದಾರೆ. ಅವರನ್ನು ಆದರ್ಶವಾಗಿಟ್ಟುಕೊಂಡು ನೀವೇನಾಗಬೇಕೆಂಬ ಕನಸನ್ನು ಕಟ್ಟಿಕೊಳ್ಳಿರಿ. ಆ ಕನಸ್ಸು ನನಸಾಗಲು, ಅದಕ್ಕೆ ತಕ್ಕ ವ್ಯಕ್ತಿತ್ವ ರೂಪಿಸಿಕೊಳ್ಳಿರಿ.

ಭಾರತದಲ್ಲಿ ಪ್ರಕೃತಿ ಸಂಪತ್ತು ಹೇರಳವಾಗಿದೆ. ಆದರೆ, ಅದನ್ನು ಸದುಪಯೋಗ ಪಡಿಸಿಕೊಂಡು, ದೇಶದ ಸಾಮರ್ಥ್ಯವನ್ನು, ಸಂಪತ್ತನ್ನು ಹೆಚ್ಚಿಸಿ, ಜಗತ್ತಿನಲ್ಲಿ ಭಾರತ ಉನ್ನತ ಸ್ಥಾನದಲ್ಲಿ ನಿಲ್ಲುವಂತೆ ಮಾಡಬೇಕಾದ, ಸಮರ್ಥ ವ್ಯಕ್ತಿಗಳು ವಿವಿಧಕ್ಷೇತ್ರಾಗಳಲ್ಲಿ ಬೇಕಾಗಿದ್ದಾರೆ. ದೇಶವೆಂದರೆ ಬರೀ ಭೂಮಿಯಲ್ಲ. ಅದರಲ್ಲಿ ವಾಸಿಸುವ ಜನರಿಂದೊಡಗೂಡಿದ ನಾಡು ಅದು. ದೇಶದ ಸ್ಥಾನಮಾನ, ಅಲ್ಲಿಯ ಜನರ ಯೋಗ್ಯತೆಯನ್ನು ದಕ್ಷತೆಯನ್ನು ಅವಲಂಬಿಸಿರುತ್ತದೆ. ಪ್ರಜೆಗಳಿದ್ದಂತೆ ರಾಷ್ಟ್ರ, ರಾಷ್ಟ್ರದ ಆಗುಹೋಗುಗಳಿಗೆ, ಸೋಲು ಗೆಲುವುಗಳಿಗೆ, ಆ ರಾಷ್ಟ್ರದ ಪ್ರಜೆಗಳ ಯೋಗ್ಯತೆಯೇ ಕಾರಣ. ನೀವು the battle of waterloo, won on the play fround of eaten ಎಂಬ ಹೇಳಿಕೆಯನ್ನು ಕೇಳಿರಬೇಕು. ಬ್ರಿಟಿಷರ ವಾಟರಲೂ ಯುದ್ಧದಲ್ಲಿ ಸೈನ್ಯ ಸಣ್ಣದಿದ್ದರೂ, ಅವರು ಗೆಲ್ಲಲು ಕಾರಣ, ಬ್ರಿಟಿಷ್ ಸೈನಿಕರು. ಈಟನ್ನಿನ ಪಬ್ಲಿಕ್ ಸ್ಕೂಲಿನ ಮಕ್ಕಳು ಆಟದ ಬಯಲಲ್ಲಿ ಕಲಿತ ಗರಣಗಳು, ಕರ್ತವ್ಯ ನಿಷ್ಠೆ, ದೇಶಾಭಿಮಾನ, ಧೈರ್ಯ ಸಾಹಸ ಗುಣಗಳು, ನಾಯಕನಿಗೆ ವಿಧೇಯರಾಗಿ ನಡೆಯುವುದು ಮುಂತಾದ ಗುಣಗಳು, ಅವರನ್ನು ಮಾಡುವುದು ಇಲ್ಲವೆ ಮಡಿ ಎಂಬ ನಿರ್ಧಾರಕ್ಕೆ ಬರುವಂತೆ ಮಾಡಿದವು. ಹಾಗಾಗಿ ಅವರ ಜೀವದ ಹಂಗುತೊರೆದು ಹೋರಾಡಿ ಜಯ ಸಾಧಿಸಿದರು. ಆದ್ದರಿಂದ ಇಂದು ದೇಶದ ಒಳಿತಿಗಾಗಿ ಏನು ಬೇಕಾದರೂ ಮಾಡುತ್ತೇವೆ ಎಂಬ ಧೀರ ಪ್ರಜೆಗಳ ಅವಶ್ಯಕತೆ ಎಲ್ಲ ಕ್ಷೇತ್ರಗಳಲ್ಲಿಯೂ ಇದೆ. ಆದ್ದರಿಂದ ಮಕ್ಕಳೇ ನೀವು ಈಗಲೇ, ಹದಿ ವಯಸ್ಸು

ಮುಗಿಯುವುದರೊಳಗೆ ನಿಮ್ಮ ಇಚ್ಛೆಯ ಕ್ಷೇತ್ರವನ್ನು ಗುರುತಿಸಿಕೊಂಡು, ಅದಕ್ಕೆ ತಕ್ಕ ವ್ಯಕ್ತಿತ್ವನ್ನು ಹದಿವಯಸ್ಸು ಮುಗಿಯುವುದರಲ್ಲಿ ರೂಪಿಸಿಕೊಳ್ಳಬೇಕು.

ಕಳೆದುಹೋದ ಸಮಯ ಹಿಂತಿರುಗುವುದಿಲ್ಲ. ಈ ವಯಸ್ಸಿನ ಪ್ರತಿಯೊಂದು ಕ್ಷಣವನ್ನೂ ಸದುಪಯೋಗಮಾಡಿಕೊಳ್ಳಿ, ಸಮಯ ವ್ಯರ್ಥಮಾಡಿಕೊಂಡರೆ, ಜೀವನ ವ್ಯರ್ಥವಾಗುತ್ತದೆ. ಅಂತಹ ವ್ಯಕ್ತಿಗಳು ದೇಶಕ್ಕೆ ಹೊರೆ, ಅಷ್ಟೇ ಅಲ್ಲ ಅವರೇ ದೇಶಕ್ಕೆ ಶತ್ರುಗಳು. ಬೇಜವಾಬ್ದಾರಿತನ, ಆಲಸ್ಯತನ, ಮೋಸಗಾರತನ, ಕ್ಷುಲ್ಲಕತನಗಳು, ನಿಮ್ಮ ಶತ್ರುಗಳು. ಅವುಗಳನ್ನು ನಿಮ್ಮ ಸಮೀಪ ಬರಗೊಡಬೇಡಿ, ಬರಗೊಟ್ಟಿದ್ದೇ ಆದರೆ ಅವು ನಿಮ್ಮನ್ನು ನಾಶಗೊಳಿಸುತ್ತವೆ. ನೀವು ನಾಶವಾದರೆ ದೇಶ ವಿನಾಶ. ಇಂದಿನ ಮಕ್ಕಳು ರಾಷ್ಟ್ರದ ನಾಳೆಯ ಪ್ರಜೆಗಳು. ಆ ಪ್ರಜೆಗಳು ಪ್ರಬಲ ರಾಷ್ಟ್ರದ ಬಲಿಷ್ಠ ಬಾಹುಗಳು are the pillars of the nation ಎಂಬುದನ್ನು ಮರೆಯಬೇಡಿ.

ನಾವು ರಾಷ್ಟ್ರವನ್ನೂ ಕಟ್ಟುತ್ತೇವೆ. ಕೆಡವುದಿಲ್ಲ ಎಂಬ ದೃಢ ನಿರ್ಧಾರಕೈಗೊಂಡು ಸತ್ಪ್ರಜೆಗಳಾಗಲು ಕಾರ್ಯತತ್ಪರರಾಗಿರಿ. ಗಾಂಧೀಜಿ, ವಾಜಪೇಯಿ, ಸುಭಾಷ್‌ಚಂದ್ರಬೋಸ್, ರಾಜೇಂದ್ರಪ್ರಸಾದ್ ಅವರುಗಳಂತೆ ರಾಷ್ಟ್ರಪ್ರೇಮಿಗಳಾಗಿ ರೂಪುಗೊಳ್ಳಿರಿ. ನೀವೂ ಚನ್ನಾಗಿ ಬಾಳಿ, ದೇಶವೂ ಚನ್ನಾಗಿ ಬಾಳಿ ಬೆಳಗುವಂತೆ ಮಾಡಿರಿ.

■

ಅನುಬಂಧ – ೩

# ಸ್ತ್ರೀವಾದಿ ಚಳುವಳಿ ಮತ್ತು ಸುಖೀ ಕುಟುಂಬ ಜೀವನ

–ಶ್ರೀಮತಿ ಲಲಿತಾಂಬ ವೃಷಭೇಂದ್ರಸ್ವಾಮಿ

ಸೃಜನಾತ್ಮಕ ಸಾಹಿತ್ಯವನ್ನು, ಜೀವನದ ಬಗ್ಗೆ ಕಳಕಳಿ ಇರುವ, ಓದುವ ಹವ್ಯಾಸವಿರುವ, ಪರಿಣಾಮಕಾರಿಯಾಗಿ ಅಭಿವ್ಯಕ್ತಿಸುವ ಶಕ್ತಿ ಇರುವ ಯಾರಾದರೂ ಬರೆಯಬಹುದು. ಅವರು ಹೆಚ್ಚು ವಿದ್ಯಾವಂತರೇನೂ ಆಗಬೇಕಿಲ್ಲ. ಅಲ್ಲದೆ ಯಾವುದೇ ವೃತ್ತಿಯವರು ತಮ್ಮ ಜೀವನಾನುಭವಗಳನ್ನು ಅನಿಸಿಕೆಗಳನ್ನು ಸೃಜನಾತ್ಮಕ ಬರವಣಿಗೆಗಳಲ್ಲಿ ವ್ಯಕ್ತಪಡಿಸಬಹುದು. ಹಾಗಾಗಿಯೇ, ವಿವಿಧ ವೃತ್ತಿಗಳಲ್ಲಿರುವವರೂ, ಹೆಚ್ಚು ವಿದ್ಯಾವಂತರಿಲ್ಲದವರು ಸೃಜನಾತ್ಮಕ ಪ್ರಕಾರಗಳಲ್ಲಿ ಸಾಕಷ್ಟು ಕೃತಿ ರಚಿಸಿ ಪ್ರಖ್ಯಾತರಾಗಿದ್ದಾರೆ, ಆದರೆ ಉಳಿದ ಪ್ರಕಾರಗಳಿಗೆ ವಿಶಿಷ್ಟವಾದ ಜ್ಞಾನ, ಅಭ್ಯಾಸ, ಅನುಭವಗಳ ಅವಶ್ಯಕತೆ ಇರುವುದರಿಂದ ಕೆಲವರು ಮಾತ್ರ ಆ ರೀತಿಯ ಸಾಹಿತ್ಯ ರಚಿಸಲು ಸಾಧ್ಯವಾಗಿದೆ ಎಂಬುದು ನನ್ನ ಅನಿಸಿಕೆ.

ಈಗ ನಾನು ಇತ್ತೀಚಿನ ಹಾಗೂ ಬಹು ಜನಜನಿತವಾಗಿರುವ, ಜನರ ಆಸಕ್ತಿಗೆ ವಿಮರ್ಶೆಗೆ, ಟೀಕೆಗೆ ಕಾರಣವಾಗಿರುವ ಸ್ತ್ರೀವಾದೀ ಸಾಹಿತ್ಯದ ಬಗೆಗೆ ಕೆಲವು ಮಾತುಗಳನ್ನು ಹೇಳಲಿಚ್ಚಿಸುತ್ತೇನೆ. ಈ ಸ್ತ್ರೀವಾದೀ ಸಾಹಿತ್ಯವು ಇಷ್ಟು ದಿನ ರಚಿಸಿದ, ಅದರಲ್ಲೂ ಹೆಚ್ಚಾಗಿ ಸ್ತ್ರೀಯರು ರಚಿಸಿದ ಸಾಹಿತ್ಯದ ಫಲವೇ ಆಗಿದೆ. ಮಹಿಳಾ ಚಳುವಳಿ, ಮಹಿಳೆಯ ಸ್ಥಿತಿಗತಿಗಳನ್ನು ತಿಳಿಸುವ ಸಾಹಿತ್ಯ ರಚನೆ, ಸ್ತ್ರೀವಾದೀ ಸಾಹಿತ್ಯ ರಚನೆಗೆ ಮುಖ್ಯ ಕಾರಣವೆನ್ನಬಹುದು.

ಮಹಿಳೆಯು ಜಗತ್ತಿನಾದ್ಯಂತ ಶತ – ಶತಮಾನಗಳಿಂದ ತುಳಿತಕ್ಕೆ ಶೋಷಣೆಗೆ ಒಳಗಾಗಿದ್ದಾಳೆ. ಪುರುಷ ಪ್ರಧಾನ ಸಮಾಜವು ಸ್ತ್ರೀಗೆ ಯಾವ ಸ್ಥಾನವನ್ನೂ, ಅವಕಾಶವನ್ನೂ ಕೊಡದೆ, ಅವಳನ್ನು ಹಿಂದುಳಿಯುವಂತೆ ಮಡಿದುದು ಸತ್ಯಸ್ಯಸತ್ಯ. ಅವಳ ಹಿಂದುಳಿಕೆ, ಶಾಶ್ವತವಾಗಿ ಉಳಿಯುವಂತಹ, ಅನೇಕ ದುಷ್ಟ ಸಂಪ್ರದಾಯಗಳನ್ನು ಅನಿಷ್ಟ ರೂಢಿಗಳನ್ನು ಬೆಳೆಸಿಕೊಂಡು ಮಹಿಳೆಯನ್ನು ನಾಲ್ಕು ಕೋಣೆಯೊಳಗಿನ ಬಂಧಿಯನ್ನಾಗಿಸಿತು. ಆಕೆಯ ವಿಚಾರ ಶಕ್ತಿ

ಬೆಳೆಯಲಾಗಲೀ, ಪ್ರತಿಭೆಯ ಉಪಯೋಗಕ್ಕಾಗಲೀ ಆಸ್ಪದವಿಲ್ಲದೆ, ಆಕೆ ಸತ್ವಹೀನಳಂತೆ, ಯಾವುದೇ ರೀತಿಯ ತಿಳಿವಳಿಕೆಯಾಗಲೀ, ಶಕ್ತಿ – ಸಾಮರ್ಥ್ಯಗಳಾಗಲೀ ಇಲ್ಲವೆಂಬಂತೆ, ಮೊನ್ನೆ, ಮೊನ್ನಿನವರೆಗೆ ಆಕೆ ಬದುಕ ಬೇಕಾಗಿತ್ತು. ಪುರುಷ ಯೋಜನಾಬದ್ಧವಾಗಿ ಮಹಿಳೆ ಮುಂದೆ ಬರದಂತೆ ತಡೆಗಟ್ಟುತ್ತಾ ಬಂದ. ಮಹಿಳೆಯನ್ನು ಪುರುಷನ ಹಿಡಿತದಲ್ಲಿಟ್ಟುಕೊಳ್ಳುವ ಸಲುವಾಗಿ ಮದುವೆಯಾಗುವಾಗ ಮಹಿಳೆ ಪುರುಷನಿಗಿಂತ ವಯಸ್ಸಿನಲ್ಲಿ ಕಡಿಮೆ, ಎತ್ತರದಲ್ಲಿ ಕಡಿಮೆ (ಈಗಿನ ಕಾಲದಲ್ಲಿ ವಿದ್ಯೆಯಲ್ಲೂ ಕಡಿಮೆ) ಇರಬೇಕೆಂಬ ರೂಢಿ ಬೆಳೆಸಿದೆ. ಇತ್ತೀಚಿನವರೆಗೆ ಮಹಿಳೆಯನ್ನು ವಿದ್ಯಾಭ್ಯಾಸಕ್ಕೆ ಕಳಿಸುತ್ತಿರಲಿಲ್ಲ. ನೌಕರಿಗೆ ಹೋಗುವುದಂತೂ ದೂರವೇ ಉಳಿಯಿತು. ಆರ್ಥಿಕವಾಗಿ ಅವಳು ಪುರುಷನನ್ನೇ ಅವಲಂಬಿಸಿರಬೇಕಾದಂತಹ ಪರಿಸ್ಥಿತಿ ನಿರ್ಮಾಣವಾಗಿತ್ತು. ಇವೆಲ್ಲವನ್ನು ಸಾಧಿಸಲು, ಮಹಿಳೆ ವಿದ್ಯೆ ಕಲಿತರೆ, ಗಂಡ ಸತ್ತು ಹೋಗುತ್ತಾನೆಂಬ ಮೂಢ ನಂಬಿಕೆಯನ್ನು ಪೋಷಿಸಿ ರೂಢಿಸಿದರು. ಜೀವನಕ್ಕೆ ಗಂಡನನ್ನೇ ಅವಲಂಬಿಸಬೇಕಾದ ಪರಿಸ್ಥಿತಿಯ ಮಹಿಳೆ, ಈ ನಂಬಿಕೆಯನ್ನು ಒರಗೆ ಹಚ್ಚಿ ಪರೀಕ್ಷಿಸುವಷ್ಟು ಧೈರ್ಯ ಮಾಡಲು ಸಾಧ್ಯವಿರಲಿಲ್ಲ.

ಹನ್ನೆರಡನೆಯ ಶತಮಾನದಲ್ಲಿ ಬಸವಣ್ಣನವರ ಹೋರಾಟದ ಫಲವಾಗಿ ಮಹಿಳೆ ಮನೆಯಿಂದ ಹೊರಗೆ ಬಂದು ತನ್ನ ವಿಚಾರಗಳನ್ನು ಸಾರ್ವಜನಿಕವಾಗಿ ಅಭಿವ್ಯಕ್ತಿಸಲು ಸಾಧ್ಯವಾದರೂ ಅದು ಕೆಲಕಾಲ ಮಾತ್ರ ಇತ್ತು. ನಂತರ ಬಹಳ ಕಾಲದವರೆಗೆ ಮಹಿಳೆ ಮನೆಯಿಂದ ಹೊರಗೆ ಬಂದ ಉದಾಹರಣೆಗಳಿಲ್ಲ. ಭಾರತದ ಮೇಲೆ ಮುಸ್ಲಿಂ ದಾಳಿಯಾದ ನಂತರವಂತೂ ಮಹಿಳೆಯನ್ನೂ ಹೊರಗೆ ಕಾಣುವುದು ದುಸ್ತರವಾಯ್ತು. ಬ್ರಿಟಿಷರ ಕಾಲದಲ್ಲಿ ಕೆಲವು ಬ್ರಿಟಿಷ ಅಧಿಕಾರಿಗಳು, ರಾಜಾರಾಂ ಮೋಹನ್ ರಾಯ್, ಈಶ್ವರಚಂದ್ರ ವಿದ್ಯಾಸಾಗರ, ಮಹಾತ್ಮಾ ಗಾಂಧೀಜಿ ಮುಂತಾದ ಮಾನವೀಯ ಮೌಲ್ಯಗಳ ಮಹನೀಯರಿಂದ ಜನತೆ ಎಚ್ಚತ್ತಿತ್ತು. ಅಸಹಾಯಕರಾಗಿ, ನಾಲ್ಕು ಗೋಡೆಗಳ ಒಳಗೆ ಬದುಕಬೇಕಾದುದೆ ಸರಿ ಎಂದು ತಿಳಿದಿದ್ದ ಸ್ತ್ರೀಯರೂ ಜಾಗೃತರಾದರು. 'ನಮ್ಮಲ್ಲೂ ಶಕ್ತಿ ಇದೆ. ಪ್ರತಿಭೆ ಇದೆ, ನಮಗೆ ಅವಕಾಶವಿಲ್ಲದೆ ನಾವು ಹಿಂದುಳಿದಿದ್ದೇವೆ. ನಾವು ಅಸಹಾಯಕರಾಗಿ ಶೋಷಣೆಗೆ ಒಳಗಾಗಿದ್ದೇವೆ ಎಂದು ಅರಿತು ಯೋಚಿಸಹತ್ತಿದರು. ಕೆಲವು ವಿಚಾರವಂತ ಮಹಿಳೆಯರು, ಅಲ್ಪಸ್ವಲ್ಪ ವಿದ್ಯೆ ಕಲಿತ ಮಹಿಳೆಯರು ಕಥೆ ಕಾದಂಬರಿಗಳನ್ನು ಬರೆದು ಅದರ ಪಾತ್ರಗಳ ಮೂಲಕ ಮಹಿಳೆಯ ದಾರುಣ ಸ್ಥಿತಿ – ಗತಿಗಳನ್ನು, ಅಸಹಾಯಕತೆಯನ್ನು ತಿರುಮಲಾಂಬ, ಶ್ಯಾಮಲಾದೇವಿ, ಕಲ್ಯಾಣಮ್ಮ, ಕೊಡಗಿನ ಗೌರಮ್ಮ ಮುಂತಾದವರು. ಇವರುಗಳು ಮಹಿಳೆಗೆ ಶಿಕ್ಷಣ ಕೊಡಬೇಕು, ಆರ್ಥಿಕವಾಗಿ ಸ್ವಾವಲಂಬಿಯಾಗಬೇಕು

ಎಂಬ ಅಂಶಗಳನ್ನು ವ್ಯಕ್ತಪಡಿಸಿ ಸಮಾಜವು ಈ ದಿಶೆಯಲ್ಲಿ ಚಿಂತಿಸುವಂತೆ ಮಾಡಿದರು. ಮಹಿಳೆಯರು ತಮ್ಮ ಸಥಿತಿ ಹೀಗಾದುದರ ಬಗಹ್ಗೆ ಅದರ ಪರಿಹಾರದ ಬಗೆಗೆ, ಶೋಷಣೆಯಿಂದ ಹೊರಬರುವ ಬಗ್ಗೆ ಯೋಚಿಸತೊಡಗಿದರು. ನಂತರದ ಸಾಹಿತ್ಯದಲ್ಲಿ ಕೇವಲ ಮಹಿಳೆಯ ಅಸಹನೀಯ ಸ್ಥಿತಿಯೇ ಅಲ್ಲದೆ, ಆಕೆಗಾಗುತ್ತಿರುವ ಅನ್ಯಾಯದ ಬಗೆಗೆ ಪ್ರತಿಭಟನೆ ವ್ಯಕ್ತವಾಗಹತ್ತಿತು. ಆ ಪ್ರತಿಭಟನೆ ಹೆಚ್ಚಾಗಿ ಅನುಪಮ ನಿರಂಜನರ ಸಾಹಿತ್ಯದ ಪಾತ್ರಗಳಲ್ಲಿ ನಾವು ಕಾಣಬಹುದಾಗಿದೆ. ಅಲ್ಲಿ ಅವರು ನೇರವಾಗಿ, ದಿಟ್ಟವಾಗಿ ಪ್ರತಿಭಟನೆಯನ್ನು ವ್ಯಕ್ತಪಡಿಸಿದ್ದಾರೆ. ನಂತರ ಇದರೊಂದಿಗೆ ಪಾಶ್ಚಾತ್ಯ ದೇಶದಲ್ಲಿ ಪ್ರಾರಂಭವಾಗಿದ್ದ ಸ್ತ್ರೀವಾದಿ ಚಳುವಳಿಯ ಪ್ರಭಾವವೂ ಕನ್ನಡದ ಲೇಖಕಿಯರ ಸಾಹಿತ್ಯದ ಮೇಲೆ ಉಂಟಾಯಿತು.

ಅಂತೂ ಈ ಸ್ತ್ರೀವಾದಿ ಚಳುವಳಿ ಹಾಗೂ ಸಾಹಿತ್ಯದ ಕಾರಣ ಸಮಾಜದಲ್ಲಿ ಅಲ್ಪ-ಸ್ವಲ್ಪ ಬದಲಾವಣೆಗಳಾಗ ತೊಡಗಿದವು. ಕೆಲವು ವಿಚಾರವಂತ ಪುರುಷರೂ, ತಮ್ಮ ಮಕ್ಕಳ ತಾಯಿಯು ವಿದ್ಯಾವಂತಳಾಗಿರಬೇಕಾದ ಅವಶ್ಯಕತೆಯನ್ನು ಅರಿಯತೊಡಗಿದರು. ತಮ್ಮ ಸೋದರಿ, ತಾಯಿ, ಮಡದಿ, ಮಗಳು ಶೋಷಣೆಗೆ ಒಳಗಾಗುತ್ತಿರುವ ಬಗೆಗೆ, ಅದನ್ನು ಖಂಡಿಸುವ ಬಗೆಗೆ ವಿಚಾರಮಾಡತೊಡಗಿದರು. ಮಹಿಳೆಯರು ಪುರುಷ ಪ್ರಧಾನ ಸಮಾಜವನ್ನು ಪ್ರತಿಭಟಿಸಹತ್ತಿದರು.

ಸ್ತ್ರೀವಾದಿ ಚಳುವಳಿಕಾರರೂ, ಸಾಹಿತಿಗಳೂ, ಸ್ತ್ರೀ ಹಾಗೂ ಪುರುಷರಲ್ಲಿ ತಓರುವ ತಾರತಮ್ಯಗಳ ಬಗೆಗೆ, ತಮ್ಮ ವಿರೋಧ ವ್ಯಕ್ತಪಡಿಸಿದರು. ಸಮಾಜದಲ್ಲಿರುವ ಪುರಷನಿಗೊಂದು ನೀತಿ, ಸ್ತ್ರೀಗೊಂದು ನೀತಿ ಇರುವುದನ್ನು ಎತ್ತಿ ತಓರಿ ಖಂಡಿಸಿದರು. ಅವಳಿಗೆ ಕಲಿಯುವ, ಹಾಗೂ ದುಡಿಯುವ ಅವಕಾಶಗಳನ್ನು ಒದಗಿಸಲು ಹೋರಾಡಿದರು. ದುಷ್ಟ ಸಂಪ್ರದಾಯಗಳನ್ನು ನಿರಾಕರಿಸಿದರು. ಕೆಲವರು ಅವುಗಳನ್ನು ಮುರಿದು ಮುಂದೆ ಬಂದರು. ಇತ್ತೀಚಿನ ಹದಿನೈದು ವರ್ಷಗಳಲ್ಲಿ ಇದು ತೀವ್ರ ರೂಪ ತಾಳಿದೆ. ಮಹಿಳೆಯ ಉದ್ಧಾರಕ್ಕೆ, ಆಕೆಯ ಶೋಷಣೆಯ ನಿಲ್ಲುವಿಕೆಗೆ, ಒಂದು ಸ್ವಂತ ವ್ಯಕ್ತಿತ್ವದಿಂದ ಬದುಕುವುದಕ್ಕೆ ಇಂತಹ ಒಂದು ಚಳುವಳಿಯ ಅಗತ್ಯವಿತ್ತು. ಇಲ್ಲದಿದ್ದಲ್ಲಿ ಆಕೆಯ ಪಾತ್ರ, ಜೀವನ ಕ್ಷೇತ್ರಗಳ್ಲಿ ಮಹತ್ವದಿದ್ದರೂ, ಆಕೆ, ಪುರುಷ ಪ್ರಧಾನ ಸಮಾಜದಲ್ಲಿ ಅತೀ ದಯನೀಯ ಸ್ಥಿತಿಯಲ್ಲಿ ಬದುಕಬೇಕಾಗಿತ್ತು.

ಈಗ ಸ್ತ್ರೀವಾದೀ ಸಾಹಿತ್ಯ ವಿಪುಲವಾಗಿ ಬೆಳೆದಿದೆ. ಆ ಸಾಹಿತ್ಯಕಾರರರು ಸತ್ರೀವಾದಿ ಚಳುವಳಿಕಾರರೂ ಆಗಿದ್ದಾರೆ. ಮೊದ, ಮೊದಲು ಸೌಮ್ಯವಾಗಿ ಪ್ರಾರಂಭವಾದ ಈ ಚಳುವಳಿ ಹಾಗೂ ಸಾಹಿತ್ಯ, ಈಗ ಉಗ್ರರೂಪ ತಾಳಿಹತ್ತಿದೆ. ಪ್ರಾರಂಭದಲ್ಲಿ ಸ್ತ್ರೀವಾದಿ ಸಾಹಿತ್ಯ ಸಮಾದಲ್ಲಿಯ ಸ್ತ್ರೀಯ ಬಗೆಗಿನ ದೋಷಗಳನ್ನು ನಿವಾರಿಸಲು, ಅಸಮಾನತೆಯನ್ನು ನೀಗಿಸಲು, ಮಹಿಳೆಗೂ ಪುರುಷನಂತೆ ಕಲಿಯುವ

ಹಾಗೂ ದುಡಿಯುವ ಅವಕಾಶಗಲು ತೆರೆಯುವಂತೆ ಮಾಡಲು ಈ ಮೂಲಕ ಸ್ವಾಸ್ಥ್ಯ ಸಮಾಜ, ನೆಮ್ಮದಿಯ ಕುಟುಂಬ ಜೀವನವನ್ನು ಉಂಟು ಮಾಡಲು ಉದ್ದೇಶಿಸಿತ್ತು. ಬರುಬರುತ್ತಾ ಎಲ್ಲಾ ವ್ಯವಸ್ಥೆಯಲ್ಲಿ ಉಂಟಾಗುವಂತೆ ಕೆಲವೊಂದು ದೋಷಗಳು ಈ ಚಳುವಳಿಯಲ್ಲೂ ನುಸುಳಿಕೊಂಡಿವೆ. ಅಂತಹ ಕಾರಣಗಳಿಂದ ಉಗ್ರವಾದಿಗಳು ಪುರುಷನ ಸ್ವಚ್ಛಂದ ಲೈಂಗಿಕ ಜೀವನವನ್ನು ಪ್ರಶ್ನಿಸುವುದರ ಜೊತೆಗೆ ಅವನಂತೆ ಮಹಿಳೆಗೂ ಸ್ವತಂತ್ರವಿರಬೇಕೆಂದು ವಾದಿಸಹತ್ತಿದ್ದಾರೆ. ತಮ್ಮದಾದ ಈ ದೇಹದ ಮೇಲೆ ಬೇರೆಯವರ ನಿಯಂತ್ರಣವಿರಬಾರದು. ವಿವಾಹ ಪೂರ್ವ ಲೈಂಗಿಕ ಜೀವನವಿರಬಾರದು, ವೈವಾಹಿಕ ಜೀವನದಲ್ಲಿ ವಿವಾಹೇತರ ಲೈಂಗಿಕ ಜೀವನವಿರಬಾರದು ಎಂದು ತನ್ನ ಸ್ವಾತಂತ್ರ್ಯವನ್ನು ಹತ್ತಿಕ್ಕುವ ಅವಳ ಇಷ್ಟದಂತೆ ಅವಳು ಬಳಸಬಹುದೇ ಹೊರತು ಬೇರೆಯವರ ನಿಯಂತ್ರಣದಿಂದ ಅಲ್ಲ ಎಂಬುದು ಆಕೆಯ ವಾದ. ಮಕ್ಕಳನ್ನು ಪಡೆಯುವ, ಹೊರುವ, ಹೆರುವ ಹಕ್ಕು ಆಕೆಯದು. ಆದುದರಿಂದ ಮಕ್ಕಳನ್ನು ಪಡೆಯಲು, ಯಾರದೇ ಅಪೇಕ್ಷೆ ಮುಖ್ಯವಾಗಬಾರದು. ಬೇಕಾದರೆ ಮಕ್ಕಳನ್ನು ಹಡೆಯುವ, ಬೇಡಾದರೆ ಬಿಡುವ ಹಕ್ಕು ಅವಳದು. ಮದುವೆಯಾದ ಮೇಲೆ ಅವಳ ಮಗುವಿಗೆ ಶೈಕ್ಷಣಿಕ, ಸಾಮಾಜಿಕ ಮುಂತಾದ ಸಂದರ್ಭಗಳಲ್ಲಿ ತಂದೆಯ ಹೆಸರು, ತಂದೆಯ ಮನೆತನದ ಹೆಸರನ್ನು ಮಾತ್ರ ಗಣನೆಗೆ ತೆಗೆದುಕೊಳ್ಳುವುದನ್ನು ಪ್ರಶ್ನಿಸತೊಡಗಿದ್ದಾಳೆ. ಹೊರುವ ಹೆರುವ ಸಾಕುವ ತಾಯಿಯಾದ ತನಗೆ ಯಾವ ಸ್ಥಾನ ಎಂದು ವಿಚಾರಿಸತೊಡಗಿದ್ದಾಳೆ. ವಿವಾಹದ ಸಂಕೇತಗಳಾದ ಮಾಂಗಲ್ಯ, ಕಾಲುಂಗರ ಮುಂತಾದ ನಿಯಮಗಳು ಪುರುಷನಿಗೇಕಿಲ್ಲ ಎನ್ನುತ್ತಾಳೆ. ವಿಧವೆಯ ಸಂಕೇತಗಳು ವಿದುರನಿಗೇಕಿಲ್ಲ ಎಂದು ಕೇಳುತ್ತಿದ್ದಾಳೆ. ಮನೆ ಕೆಲಸಗಳಲ್ಲಿ ಮಹಿಳೆಯೇ ಮಾಡಬೇಕಾದ ಕೆಲಸಗಳೆಂದು ವಿಂಗಡಣೆ ಏಕೆ? ಆ ಕೆಲಸಗಳನ್ನು ಪುರುಷನೂ ಏಕೆ ಮಾಡಬಾರದು ಎಂಬುದವಳ ಪ್ರಶ್ನೆ. ಹೀಗೆ ಸ್ತ್ರೀ ಪುರುಷ ಜೀವನದಲ್ಲಿಯ ಪ್ರತಿಯೊಂದು ವಿಷಯದಲ್ಲೂ ವಿವಾದ ಎದ್ದಿದೆ ಇಷ್ಟು ದಿನ ಹತ್ತಿಕ್ಕಿದ್ದ ಮಹಿಳೆಯ ಬಾಯಿ ತೆರೆದಿದೆ ತನ್ನೆಲ್ಲಾ ಅನಿಸಿಕೆಗಳನ್ನು ಅಭಿವ್ಯಕ್ತಿಸುತ್ತಿದ್ದಾಳೆ. ಇದು ಎಲ್ಲಾ ಮಹಿಳಾವಾದಿಗಳ ಬೇಡಿಕೆಯಲ್ಲ. ಕೆಲವರು ಸೌಮ್ಯವಾದಿಗಳೂ ಇದ್ದಾರೆ. ಅವರು ಓದಲು, ನೌಕರಿ ಮಾಡಲು ಅವಕಾಶ ಬೇಕೆನ್ನುತ್ತಾರೆ. ವಿದುರ ವಿವಾಹ ಜಾರಿಯಲ್ಲಿದ್ದಂತೆ ವಿಧವಾ ವಿವಾಹಕ್ಕೆ ಮನ್ನಣೆ ಸಿಗಬೇಕೆಂದು ಅವರ ವಾದ. ಮನೆಯಲ್ಲಿ ಸಮಾಜದಲ್ಲಿ ಸ್ತ್ರೀ ಪುರುಷರಿಗೆ ಸಮಾನ ಗೌರವವಿರಬೇಕು. ಸ್ತ್ರೀಯ ಅಸ್ತಿತ್ವವನ್ನು, ಮಹತ್ವವನ್ನು ಪುರುಷ ಗುರುತಿಸಬೇಕು. ನೀತಿ ನಿಯಮಗಳು ಇಬ್ಬರಿಗೂ ಒಂದೇ ತೆರನಾಗಿರಬೇಕು. ವಿವಾಹದ ಬಗೆಗೆ ಲೈಂಗಿಕ ಜೀವನದ ಬಗ್ಗೆ, ಮೌಲ್ಯಗಳ ಬಗೆಗೆ ಪ್ರಶ್ನಿಸುವ ಸ್ತ್ರೀವಾದಿಗಳೂ ಇದ್ದಾರೆ. ಅವರು ಕೆಲವೊಂದು ಬದಲಾವಣೆಗಳು ಬೇಕೆಂದು ವಾದಿಸಿದರೂ, ಕೆಲವು

ವಿಚಾರಗಳಲ್ಲಿ ಅವರು ಪುರುಷಪರ ಪ್ರಧಾನತೆಯನ್ನು ಒಪ್ಪುತ್ತಾರೆ. ಹೀಗೆ ಸ್ತ್ರೀವಾದಿಗಳಲ್ಲೂ ತಾರ-ತಮ್ಯಗಳು ಕಾಣಸಿಗುತ್ತವೆ.

ಈ ಸ್ತ್ರೀವಾದಿ ಚಳುವಳಿಯು ಅದರ ಪ್ರಭಾವದಿಂದಾದ ಸಾಹಿತ್ಯವು ಹುಟ್ಟಿಕೊಳ್ಳಲು ಕಾರಣಗಳು ಅನೇಕ. ಲೈಂಗಿಕ ಸ್ವಾತಂತ್ರ ಮೊದಲ್ಗೊಂಡು ಎಲ್ಲಾ ರೀತಿಯಲ್ಲಿ ಸ್ವೇಚ್ಛಾಚಾರಿಯಾಗಿ ಪ್ರಶ್ನಾತೀತನಾಗಿ ಬದುಕುತ್ತಾ ಬಂದಿರುವ ಪುರುಷನನ್ನು ನಿಯಂತ್ರಣಕ್ಕೆ ತರುವುದೇ ಹೊರತು, ಅವನಂತೆ ತಾನೂ ಸ್ವೇಚ್ಛಾಚಾರಿಯಾಗಬೇಕೆಂದೇನಲ್ಲ. ಇದರ ಮುಖ್ಯ ಉದ್ದೇಶ ಕೌಟುಂಬಿಕ ಹಿತ ಹಾಗೂ ಸಮಾಜಸ್ವಾಸ್ಥ್ಯವನ್ನು ಉಂಟುಮಾಡಬೇಕೆಂಬುದು. ಸ್ತ್ರೀ ಪುರುಷರು ಪರಸ್ಪರ ಹಿತಾಸಕ್ತಿಗಳಿಂದ ಆದರ ಗೌರವಗಳಿಂದ ಸಮಾನತೆಯ ಆಧಾರದ ಮೇಲೆ ಬದುಕುವಂತಾಗಬೇಕೆಂಬುದು ಇದರ ಗುರಿ. ಸ್ತ್ರೀಯು ಆರ್ಥಿಕವಾಗಿ, ಸ್ವಾವಲಂಬಿಯಾಗಿರಬೇಕು. ಆಕೆಯನ್ನು ಪುರುಷ ಶೋಷಿಸಲು ಸಾಧ್ಯವಾಗದಂತಿರಬೇಕು. ಮನೆಯ ಜವಾಬ್ದಾರಿಗಳನ್ನು ಪುರುಷ ಕೆಲಸ' ಸ್ತ್ರೀಕೆಲಸ' ಎಂಬ ವಿಂಗಡಣೆ ಇಲ್ಲದೆ ಇಬ್ಬರೂ ಪರಿಸ್ಥಿತಿಗನುಸಾರವಾಗಿ ಮಾಡಿಕೊಂಡುಹೋಗಬೇಕು. ವ್ಯವಸ್ಥೆಯಲ್ಲಿ ಒಬ್ಬರು ಹೆಚ್ಚು- ಇನ್ನೊಬ್ಬರು ಕಡಿಮೆ ಎಂಬ ಅನಿಸಿಕೆಗೆ ಅವಕಾಶವಿರಬಾರದು ಎಂಬುದಾಗಿತ್ತು. ಆದರೆ ಬರುಬರುತ್ತಾ ಇವುಗಳಲ್ಲದೆ ಮತ್ತೇನೇನೋ ಸೇರಿಕೊಂಡು ಅನೇಕ ಅನಿರ್ದಿಷ್ಟ ಹಾಗೂ ಅನಪೇಕ್ಷಣೀಯ ಸಣ್ಣ-ಸಣ್ಣ ವಿಚಾರಗಳೂ ಸೇರಿ ಗೊಂದಲ ಉಂಟಾಗಿದೆ. ಈ ಕಾರಣವಾಗಿ ಅಪಕ್ವ ಮನೋಭಾವದ, ಅತಿಶಯೋಕ್ತಿಯಲ್ಲ. ಈ ಕಾರಣದಿಂದ ಅನೇಕ ಕುಟುಂಬಲ್ಲಲಿ ಘರ್ಷಣೆ, ದ್ವೇಷ ವಿರಸ ಹೆಚ್ಚಿ ಕೌಟುಂಬಿಕ ಸಾಮರಸ್ಯ ಇಳಿಮುಖವಾಗುತ್ತಿದೆ. ವಿವಾಹವಿಚ್ಛೇದನಗಳು ಪಾಶ್ಚಾತ್ಯರಲ್ಲಿರುವಂತೆ ನಮ್ಮಲ್ಲೂ ಸರ್ವೇ ಸಾಧಾರಣವಾಗುವಂತಹ ಪರಿಸ್ಥಿತಿ ಉಂಟಾಗಿದೆ. ಮಹಿಳೆಯರಿಂದ ಶೋಷಿತವಾದ ಪುರುಷ ಸಂಘಗಳ ಉದಯವಾಗಿವೆಯೆಂಬ ಅಂಶ ಕೆಲವು ಯುವತಿಯರು ಎಂತಹ ಮಾಘ ಹಿಡಿದಿದ್ದಾರೆ ಎಂಬ ಕಡೆ ನಮ್ಮ ಗಮನ ಸೆಳೆಯುತ್ತಧೆ.

ಸಾಹಿತ್ಯ ತಾತ್ಕಾಲಿಕವಾದುದಲ್ಲ. ನಿರುಪಯೋಗಿಯೂ ಅಲ್ಲ. ಅದು ಓದುಗರ ಮೇಲೆ ಆಳವಾದ ಪ್ರಭಾವವನ್ನು ಬೀರುತ್ತದೆ. ಇದು ನಂತರದ ಪೀಳಿಗೆಯ ಮೇಲೂ ಸದಾ ಕಾಲಕ್ಕೂ ಪ್ರಭಾವ ಬೀರುವಂತಹುದು. ಆದುದರಿಂದ ಸಾಹಿತಿ ಬಹುಎಚ್ಚರಿಕೆಯಿಂದ ಹೆಜ್ಜೆ ಮುಂದಿಡಬೇಕಾಗುತ್ತದೆ. ಸಾಹಿತ್ಯದ ಪ್ರಭಾವ ಸ್ತ್ರೀ ಪುರುಷರಲ್ಲಿ ಸಾಮರಸ್ಯ ಉಂಟಾಗುವಂತೆ ಮಾಡಿ, ಒಳ್ಳೆಯದನ್ನು ಸಾಧಿಸಬೇಕೆ ಹೊರತು, ಒಂದು ದೋಷವನ್ನು ಹೊಡೆದು ಹಾಕಿ ಮತ್ತೊಂದು ದೋಷವನ್ನು

ಹುಟ್ಟುಹಾಕುವಂತಿರಬಾರದು. ವಿಕೃತರೂಪ ತಾಳವಾರದು. ವ್ಯವಸ್ಥೆಯ ಕೆಡುಕಿಗೆ ಆಸ್ಪದವೀಯಬಾರದು. ಓದುಗನನ್ನು ಅಡ್ಡದಾರಿಗೆಳೆಯುವ ಹಾಗೂ ಇರಬಾರದು. ಸುಖೀ ಕೌಟುಂಬಿಕ ಜೀವನಕ್ಕೆ ಮಾರ್ಗದರ್ಶಿಯಾಗಿರಬೇಕು. ಸುಖೀ ಕೌಟುಂಬಿಕ ಜೀವನದಲ್ಲಿ ಬೆಳೆದ ಮಕ್ಕಳು ಸಮತೋಲನ ವ್ಯಕ್ತಿತ್ವ ಉಳ್ಳವರಾಗಿ ಸಮರ್ಥ ವ್ಯಕ್ತಿಗಳಾಗಿ ರೂಪುಗೊಳ್ಳುತ್ತಾತರೆ. ಸ್ವಾಸ್ಥ್ಯ ಸಮಾಜದ ಬೆಳವಣಿಗೆಗೆ ಕಾರಣವಾಗುತ್ತಾರೆ. ಅದರಿಂದ ಬಲಿಷ್ಠವಾದ, ಸಮಸ್ಯಾರಹಿತವಾದ ರಾಷ್ಟ್ರೋದಯವಾಗುತ್ತದೆ. ಆದುದರಿಂದ ಸಾಹಿತಿಗಳು ಸ್ತ್ರೀವಾದಿ ಸಾಹಿತ್ಯ ರಚನೆಯ ಉದ್ದೇಶವೇನು ಎನ್ನುವುದನ್ನು ಸ್ಪಷ್ಟವಾಗಿ ಯೋಚಿಸಿಕೊಳ್ಳಬೇಕು. ಆ ಉದ್ದೇಶಗಳನ್ನು ಸಾಧಿಸಲಿಕ್ಕೆ ಎಂದರೆ ಈಗಿನ ವ್ಯವಸ್ಥೆಯಲ್ಲಿರುವ ನೋವುಗಳನ್ನು, ದೋಷಗಳನ್ನು ನಿವಾರಿಸಲಿಕ್ಕೆ ಸ್ತ್ರೀಗೆ ಯಾವ ಯಾವ ವಿಷಯಗಳಲ್ಲಿ ಸಮಾನತೆ ಅವಶ್ಯಕ, ಯಾವ ದೋಷಗಳನ್ನು ಹೋಗಲಾಡಿಸಬೇಕು, ಅವುಗಳ ಗೊತ್ತು ಗುರಿಗಳಾವುವು, ಇವೆಲ್ಲವುಗಳಿಂದ, ದುಷ್ಪರಿಣಾಮವಿಲ್ಲದೆ, ಪರಸ್ಪರ ಅರಿವಿನ ತಳಹದಿಯ ಮೇಲೆ ತರಲು ಹೇಗೆ ಸಾಧ್ಯ ಎಂಬುದನ್ನು ಸಮರ್ಪಕವಾಗಿ ಯೋಚಿಸಿ, ಹೆಜ್ಜೆ ಮುಂದಿಡುವುದು ಯೋಗ್ಯ ಹಾಗೂ ಅಪೇಕ್ಷಣೀಯ. ಇಲ್ಲದಿದ್ದಲ್ಲಿ ಕುಟುಂಬ ಜೀವನವೇ ಅಸ್ತವ್ಯಸ್ತವಾಗುವ ಸಾಧ್ಯತೆ ಇದೆ. ಎಷ್ಟೋ ವರ್ಷಗಳ ಕೂಡು ಜೀವನದಿಂದ ಉಂಟಾದ ಕುಟುಂಬ ಜೀವನ ನಾಶವಾಗುವಂತಾಗಬಾರದು. ಅದರ ದೋಷಗಳು, ಇಲ್ಲದಂತಾಗಬೇಕು ಅಷ್ಟೆ. ಉಗ್ರವಾದಿಗಳ ಪ್ರಭಾವದಿಂದ ಪಾಶ್ಚಾತ್ಯರು ಮುಕ್ತ ಲೈಂಗಿಕ ಜೀವನ ಹಾಗೂ ಅತಿಯಾದ ಸ್ವೇಚ್ಛಾಚಾರದಿಂದ ಅನೇಕ ಸಮಸ್ಯೆಗಳಿಗೆ ಒಳಗಾಗಿದ್ದಾರೆ. 'ಏಡ್ಸ್' ರೋಗವು ಮುಕ್ತ ಲೈಂಗಿಕ ಜೀವನದ ಕೊಡುಗೆಯಾಗಿದೆ. ಸ್ವಚ್ಛಂದ ಜೀವನವು ಹಿಪ್ಪಿಗಳ, ಸಮಸ್ಯಾಮಯ ಮಕ್ಕಳ ಪಾಲಕರಹಿತ ಪೀಳಿಗೆಯ, ವಿಚ್ಛೇದನ ವಿರಸ ದಾಂಪತ್ಯ ಜೀವನಕ್ಕೆ ಹಾದಿ ಮಾಡಿಕೊಟ್ಟಿದೆ. ಈಗ ಪಾಶ್ಚಾತ್ಯರು 'ಅತೀಯತೆಯ' ಫಲವನ್ನು ಅನುಭವಿಸಿ, ಎಲ್ಲದಕ್ಕೂ ಇತಿ-ಮಿತಿ ಇರಬೇಕೆಂದು ತಿಳಿವಳಿಕೆಗ ಬಂದಿದ್ದಾರೆ. ಸುಖೀ ಜೀವನಕ್ಕೆ ಒಂದು ರಈತಿಯ ನಿಯಂತ್ರಣ ಅವಶ್ಯಕವೆಂದು ಅರಿತಿದ್ದಾಋಎ. ಎಲ್ಲರಿಗೂ ನಿರ್ದಿಷ್ಟವಾದ ನೀತಿ-ನಿಯಮಗಳು ಅಲ್ಲಿಂದ ಮುಂದೆ ಹೋಗಬೇಕೆ ಹೊತು; ಅವರು ಪ್ರಾರಂಭವಾಡಿದಲ್ಲಿಂದಲೇ ಹೊಡುವುದು ಜಾಣತನವಲ್ಲ.

ಖಗಾಗಲೇ ನಮ್ಮ ಸಮಾಜದಲ್ಲೂ ಉಗ್ರವಾದಿ ಸಾಹಿತ್ಯದ ಚಳುವಳಿಯ ಬಿಸಿತಾಗಿ, ಅನೇಕ ಕುಟುಂಬಳು ಒಡೆದು ಹೋಳಾಗುತ್ತಿವೆ ಅಥವಾ ನೆಮ್ಮದಿರಹಿತ ತಾಣಗಳಾಗುತ್ತಿವೆ. ಈ ನಡುವೆ ಆ ಬೇಗೆಯಲ್ಲಿ ಬೆಳೆದ ಮಕ್ಕಳ ಸ್ಥಿತಿ ಶೋಷಿತ ಮಹಿಳೆಯ ಪಾಡಿಗಿಂತ ದಯನೀಯ. ಆದುದರಿಂದ ಸ್ತ್ರೀವಾದಿ ಸಾಹಿತಿಗಳು

ಇದನ್ನೆಲ್ಲ ಗಮನದಲ್ಲಿಟ್ಟುಕೊಂಡು ಸಾಹಿತ್ಯ ರಚಿಸುವುದು ಅವಶ್ಯಕ. ಇದು ಸಾಮಾಜಿಕ ಹೊಣೆಗಾರಿಕೆ, ಕೇವಲ ವ್ಯಕ್ತಿಯ ಅಭಿವ್ಯಕ್ತಿಯಲ್ಲ ವಿಕೃತ ಸಾಹಿತ್ಯ, ವಿಕೃತ ಸಮಾಜ ನಿರ್ಮಾಣಕ್ಕೆ ಎಡೆಮಾಡುವುದೆಂಬುದನ್ನು ಸಾಹಿತಿ ಮರೆಯಬಾರದು. ಯಾವುದೂ ಅತಿಯಾಗದೆ ಮಿತಿಯಲ್ಲಿದ್ದರೆ ಒಳ್ಳೆಯದು. ಅಭಿವ್ಯಕ್ತಿಗೂ ಶಿಸ್ತು - ಸಂಯಮ ಅಗತ್ಯ ಹಾಗಿಲ್ಲದೆ ಲಂಗು - ಲಗಾಮಿಲ್ಲವಾದರೆ ಹಾನಿ ಹಾಗೂ ಕಷ್ಟನಷ್ಟಗಳಿಗೆ ಕಾರಣವಾಗುತ್ತದೆ.

ಹತ್ತೊಂಬತ್ತನೂರಾ ತೊಂಬತ್ತನಾಲ್ಕನೆಯ ವರ್ಷವನ್ನು ಅಂತರರಾಷ್ಟ್ರೀಯ ಕುಟುಂಬ ವರ್ಷವನ್ನಾಗಿ ಘೋಷಿಸಿದ್ದಾರೆ. ಕಾರಣ ಈಗಿನ ಕುಟುಂಬ ಜೀವನದಲ್ಲಿ ಸಮಸ್ಯಾತ್ಮಕವಾಗಿದೆ. ಅತೃಪ್ತಿ, ಅಸಮಾದಾನದಿಂದ ತುಂಬಿದೆ. ಆದುದರಿಂದ ಯೋಗ್ಯ ಪೀಳಿಗೆಗೆ ಕಾರಣವಾಗುವ ಸುಖೀ ಕುಟುಂಬ ಜೀವನದ ಕಡೆ ಜನತ ಗಮನಸೆಳೆಯುವುದು ಇದರ ಉದ್ದೇಶ. ಈ ಉದ್ದೇಶ ಸಾಧನೆಗೆ ಸಾಹಿತಿಗಳು ತಮ್ಮ ವಿಪುಲವಾದ ಸೇವೆ ಸಲ್ಲಿಸುವಂತಾಗಲಿ.

(ಸಂವೇದನೆ: ಸಂ. ಶಶಿಕಲಾ ವೀರಯ್ಯ ಸ್ವಾಮಿ ಪ್ರ. ಕ.ಸಾ.ಪ.- ೩೦-೩-೯೯೪- ಅತ್ತಿಮಬ್ಬೆ ಉತ್ಸವ + ಮಹಿಳಾ ಸಾಹಿತ್ಯ ಸಮ್ಮೇಳನ ಲಕ್ಕುಂಡಿ-ಧಾರವಾಡ)

■

## ಅನುಬಂಧ – ೪

# ಮಕ್ಕಳ ಶಿಕ್ಷಣ–ಚಿಂತನಗಳು ಕೃತಿ ಬಿಡುಗಡೆ

ಧಾರವಾಡ, ಮಾ. ೨೭– ಕರ್ನಾಟಕ ವಿಶ್ವವಿದ್ಯಾಲನಿಲಯದ ಶಿಕ್ಷಣ ವೇದಿಕೆಯ ಆಶ್ರಯದಲ್ಲಿ ನಿನ್ನೆ ನಡೆದ ಸಮಾರಂಭದಲ್ಲಿ ಶಿಕ್ಷಣ ತಜ್ಞೆ ಪ್ರೊ. ಲಲಿತಾಂಬ ವೃಷಭೇಂದ್ರಸ್ವಾಮಿ ಅವರು ಬರೆದಿರುವ 'ಮಕ್ಕಳ ಶಿಕ್ಷಣ – ಚಿಂತನೆಗಳು' ಕೃತಿಯನ್ನು ಹಿರಿಯ ಪತ್ರಕರ್ತ ಪಾಟೀಲ ಪುಟ್ಟಪ್ಪ ಅವರು ಬಿಡುಗಡೆ ಮಾಡಿದರು.

ಅವರು ತಮ್ಮ ಭಾಷಣದಲ್ಲಿ ಸಮಾಜ ನಿರ್ಮಾಣ ಕಾರ್ಯದಲ್ಲಿ ಶಿಕ್ಷಣ ವಹಿಸುವ ಪಾತ್ರ ಅತ್ಯಂತ ಮಹತ್ವದ್ದು. ಮನೆ, ಶಾಲೆ ಮತ್ತು ಸಮಾಜವನ್ನು ತಿದ್ದುವ ಕಾರ್ಯದಲ್ಲಿ ಮಹಿಳೆ ವಹಿಸುವ ಪಾತ್ರ ಕುರಿತು ತಮ್ಮ ಕೃತಿಯಲ್ಲಿ ಹಲವಾರು ಗಂಭೀರ ಸ್ವರೂಪದ ಚಿಂತನೆಗಳನ್ನು ನೀಡಿದ್ದಾರೆ. ಕುಸಿಯುತ್ತಿರುವ ಶಿಕ್ಷಣ ಮತ್ತು ಸಮಾಜ ವ್ಯವಸ್ಥೆಯ ಪುನರ್ ನಿರ್ಮಾಣ ಕಾರ್ಯದಲ್ಲಿ ಈ ಕೃತಿ ಉತ್ತಮ ಮಾರ್ಗದರ್ಶನ ನೀಡುತ್ತದೆ ಎಂದು ಅವರು ಅಭಿಪ್ರಾಯಪಟ್ಟರು.

ಮುಖ್ಯ ಅತಿಥಿಯಾಗಿದ್ದ ಶಿಕ್ಷಣಾಡಳಿತ ತಜ್ಞ ಶಿವಶಂಕರ ಹಿರೇಮಠ ಅವರು ಮಾತನಾಡಿ ಶಿಕ್ಷಣ ಕುರಿತು ಮೂಲಭೂತವಾಗಿ ವಿಚಾರ ಮಾಡುವ ಪ್ರೊ. ಲಲಿತಾಂಬ ಅವರ ಚಿಂತನೆಗಳು ಉತ್ತಮ ಶೈಕ್ಷಣಿಕ ಸಮಾಜ ನಿರ್ಮಾಣಕ್ಕೆ ಪ್ರೇರಣೆ ನೀಡುತ್ತವೆ ಎಂದು ಅಭಿಪ್ರಾಯಪಟ್ಟರು.

'ಮಕ್ಕಳ ಶಿಕ್ಷಣ ಮತ್ತು ಚಿಂತನೆ' ಕೃತಿಯನ್ನು ಕುರಿತು ಪ್ರೊ. ಹಸನಬಿ ಬೀಳಗಿ ಅವರು ವಿವರಣಾತ್ಮಕ ಪರಿಚಯ ಮಾಡಿಕೊಟ್ಟರು. ಪ್ರೊ. ಲಲಿತಾಂಬ ಅವರು ಮಾತನಾಡಿ ತಾಯಿಯಾಗಿ, ಮಹಿಳೆಯಾಗಿ ಮತ್ತು ಶಿಕ್ಷಕಿಯಾಗಿ ಕಳೆದ ೪೦ ವರ್ಷಗಳ ಅವಧಿಯಲ್ಲಿ ಶಿಕ್ಷಣದ ಅಗತ್ಯ ಕುರಿತು ತಮ್ಮ ಚಿಂತನೆಗಳನ್ನು ಇಲ್ಲಿನ ಲೇಖನಗಳಲ್ಲಿ ವಿವರಿಸಿದ್ದೇನೆ. ಮೌಲ್ಯಾಧಾರಿತ ಸಮಾಜ ನಿರ್ಮಾಣಕ್ಕೆ ಮನೆಯೇ ಮೊದಲ ಪಾಠಶಾಲೆ. ಶಿಕ್ಷಣ ಕ್ರಾಂತಿಯ ಪ್ರಯತ್ನಗಳು ಮನೆಯಿಂದಲೇ ಆರಂಭವಾಗಬೇಕು. ಅಲ್ಲಿಯೇ ಉತ್ತಮ ಸಮಜ ನಿರ್ಮಾಣದ ಪರಿಕಲ್ಪನೆ ಮಕ್ಕಳಿಗೆ ಆಗಬೇಕು ಎನ್ನುವುದು ತಮ್ಮ ಅಭಿಪ್ರಾಯ ಅದನ್ನು ತಮ್ಮ ಕೃತಿಯಲ್ಲಿಯೂ ಹೇಳಿದ್ದೇನೆ ಎಂದರು.

ಶಿಕ್ಷಣ ವೇದಿಕೆಯ ಸಂಚಾಲಕ ಕೃಷ್ಣಜೋಷಿ ಅವರ ಸ್ವಾಗತಿಸಿದರು. ಚನ್ನಪ್ಪ ಬಂಡಿ ವಂದಿಸಿದರು. ಇದೇ ಸಂದರ್ಭದಲ್ಲಿ ಪ್ರೊ. ಲಲಿತಾಂಬ ವೃಷಭೇಂದ್ರಸ್ವಾಮಿ ಅವರ ಕೃತಿಗಳ ಪ್ರದರ್ಶನ ನಡೆಯಿತು.

ಶಿಕ್ಷಣ ತಜ್ಞೆ ಪ್ರೊ. ಲಲಿತಾಂಬ ವೃಷಭೇಂದ್ರಸ್ವಾಮಿ ಅವರು 'ಮಕ್ಕಳ ಶಿಕ್ಷಣ – ಚಿಂತನೆಗಳು' ಪುಸ್ತಕವನ್ನು ಬುಧವಾರ ಧಾರವಾಡದಲ್ಲಿ ನಡೆದ ಸಮಾರಂಭದಲ್ಲಿ ಹಿರಿಯ ಪತ್ರಕರ್ತ ಪಾಟೀಲ ಪುಟ್ಟಪ್ಪ ಅವರು ಬಿಡುಗಡೆ ಮಾಡಿದರು ಚಿತ್ರದಲ್ಲಿ ಶಿವಶಂಕರ ಹಿರೇಮಠ ಮತ್ತಿತರರನ್ನು ಕಾಣಬಹುದು.

ಪ್ರಜಾವಾಣಿ – ೨೭–೩–೧೯೯೭

■



ಸುವರ್ಣ ಮಹೋತ್ಸವ – ಶ್ರೀ ಸದಾಶಿವ ಹಿರೇಮಠ ಮತ್ತು
ಶ್ರೀಮತಿ ಸುಕನ್ಯಾ ಸದಾಶಿವ ಅವರೊಂದಿಗೆ




ವಜ್ರಮಹೋತ್ಸವ ಡಾ. ಎಸ್.ಎಂ. ಶಿವಾನಂದಸ್ವಾಮಿ ಮತ್ತು
ಶ್ರೀಮತಿ ಗೌರಾಂಬ ಅವರೊಂದಿಗೆ



ಪೂಜೆಯಲ್ಲಿ ನಿರತರಾಗಿರುವ ಶ್ರೀಮತಿ ಲಲಿತಾಂಬ ಅವರು



ಗಂಗಾ ಪೂಜೆಯಲ್ಲಿ ಭಾಗವಹಿಸಿದ ಮಹಿಳೆಯರೊಂದಿಗೆ



ವಜ್ರಮಹೋತ್ಸವದಲ್ಲಿ ಡಾ. ಉಮಾಕಾಂತ ಮತ್ತು ಶ್ರೀ ಎಂ. ಪಂಚಪ್ಪ
ಮುಂತಾದವರಿಂದ ಶುಭಕೋರಿಕೆ



ವಜ್ರಮಹೋತ್ಸವದಲ್ಲಿ ಭಾಗವಹಿಸಿದ ಶ್ರೀ ಪತ್ರೆ ರಾಜಶೇಖರ್
ಶ್ರೀ ರವೀಂದ್ರನಾಥ್ ಶ್ರೀಮತಿ ಸುಮಿತ್ರಮ್ಮ ರಾಜಣ್ಣ ಮತ್ತು
ಶ್ರೀಮತಿ ಪತ್ರೆ ಶೈಲಜಾ ಸದಾಶಿವ ಅವರೊಂದಿಗೆ




ವಿದೇಶ ಪ್ರವಾಸದಲ್ಲಿ ದಂಪತಿ – ನ್ಯೂಯಾರ್ಕ್ ವಿಮಾನ ನಿಲ್ದಾಣದಲ್ಲಿ



ಹುಬ್ಬಳ್ಳಿ ಶ್ರೀ ಮೂರುಸಾವಿರ ಮಠದ ಜಗದ್ಗುರಗಳ ಸಾನಿಧ್ಯದಲ್ಲಿ
ಶಿವಶರಣೆಯರ ಅವಮಾನ ಪ್ರಸಂಗದ ಪ್ರತಿಭಟನಾ ಸಭೆಯಲ್ಲಿ ಭಾಷಣ



ಮಗನೊದಿಗೆ ತಾಜಮಹಲ್ ದರ್ಶನ



ಮೊಮ್ಮಗಳು ಕು॥ ಶರ್ವಾಣಿಯ ಜನ್ಮದಿನೋತ್ಸವ ಸಮಾರಂಭದಲ್ಲಿ



ಸುವರ್ಣಮಹೋತ್ಸವದಲ್ಲಿ ಬೀರೂರಿನ ಶ್ರೀ ಯು.ಎಸ್. ವಸಂತಕುಮಾರ್
ಮತ್ತು ಶ್ರೀಮತಿ ಸುವರ್ಣಲತಾ ಅವರೊಂದಿಗೆ



ಮುದ್ದಿನ ಮೊಮ್ಮಗಳು ಕಿಶೋರಿ ಶರ್ವಾಣಿ



ವಿವಾಹ ಸುವರ್ಣ ಮಹೋತ್ಸವದಲ್ಲಿ ಆತ್ಮೀಯ ಬಂಧು ಬಳಗದೊಂದಿಗೆ

# ಪ್ರೊ. (ಶ್ರೀಮತಿ) ಲಲಿತಾಂಬ ವೃಷಭೇಂದ್ರಸ್ವಾಮಿ
## ಇವರ
## ವ್ಯಕ್ತಿ–ಸೇವೆ–ಸಾಧನೆಯ ಮಾಹಿತಿ

ಹೆಸರು : ಪ್ರೊ. (ಶ್ರೀಮತಿ) ಲಲಿತಾಂಬ ವೃಷಭೇಂದ್ರಸ್ವಾಮಿ ಬಿ. ಎಡ್., ಎಂ.ಎಡ್., ಡಿ.ಟಿ.ಇ.

'ಶಿವಪ್ರಸಾದ' ಕಲ್ಯಾಣನಗರ; ೮ನೇ ಕ್ರಾಸ್, ಧಾರವಾಡ–೫೮೦ ೦೦೭. ದೂರವಾಣಿ – ೦೮೩೬–೨೪೪೪೮೫೭೦

ಹುಟ್ಟಿದ ದಿನ : ೨೩–೦೮–೧೯೩೦ ಲಿಂಗೈಕ್ಯ : ೧೩–೦೮–೨೦೦೭

ಜನ್ಮಸ್ಥಳ : ಬೀರೂರು – ಚಿಕ್ಕಮಗಳೂರು ಜಿಲ್ಲೆ

ತಂದೆ–ತಾಯಿ : ಲಿಂ॥ ಶ್ರೀ ಶ್ರೀಕಂಠಶರ್ಮ ಉಬ್ರಾಣಿಮಠ – ಲಿಂ॥ ಶ್ರೀಮತಿ ಗಿರಿಜಾಂಬ.

ಶಿಕ್ಷಣ : ಬಿ.ಎ. (ಮಹಾರಾಜ ಕಾಲೇಜು, ಮೈಸೂರು)
ಬಿ.ಎಡ್., ಎಂ.ಎಡ್. (ಕ. ವಿಶ್ವವಿದ್ಯಾಲಯ, ಧಾರವಾಡ)
ಡಿ.ಟಿ.ಇ; (ಸೆಂಟ್ರಲ್ ಇನ್ಸ್ಟಿಟ್ಯೂಟ್ ಆಫ್ ಇಂಗ್ಲಿಷ್, ಹೈದರಾಬಾದ)

ಉದ್ಯೋಗ : ನಿವೃತ್ತ ಪ್ರವಾಚಕರು, ಕರ್ನಾಟಕ ವಿಶ್ವವಿದ್ಯಾಲಯ ಶಿಕ್ಷಣ ಮಹಾವಿದ್ಯಾಲಯ, ಧಾರವಾಡ (ಶಿಕ್ಷಣ ಕ್ಷೇತ್ರದ ವಿವಿಧ ಹಂತಗಳಲ್ಲಿ (೧೯೫೩–೧೯೯೦) ೩೭ ವರ್ಷಗಳ ಸೇವೆ.

ಪತಿ : ಡಾ. ಎಸ್. ಎಂ. ವೃಷಭೇಂದ್ರಸ್ವಾಮಿ ಎಂ.ಎ. ಪಿ.ಎಚ್‌ಡಿ

(ನಿವೃತ್ತ) ಮುಖ್ಯಸ್ಥರು, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ – ೫೮೦ ೦೦೩.

ಮಕ್ಕಳು : ಡಾ. ಎಸ್. ಎಂ. ಶಿವಪ್ರಸಾದ ಎಂ.ಎಸ್.ಸಿ. ಪಿ.ಎಚ್‌ಡಿ

ವಿಜ್ಞಾನಿ – National Physical Laboratory
(N.P.L New Delhi)

Present : Scientist at Dr. C.N.R. Rao Guidence
J.N.C.A.S.R Science Institute, Jakkur Post Office,
B'lore - 560 064.

ಸೊಸೆ : ಶ್ರೀಮತಿ ಅನುಪಮಾ ಪ್ರಸಾದ – ಮೊಮ್ಮಗಳು ಕು। ಶರ್ವಾಣಿ

ಶ್ರೀಮತಿ ಲಲಿತಾಂಬಾ ಅವರ ಗೌರವ ಸೇವೆಗಳು:–

* ಸಂಸ್ಥಾಪಕ ಸದಸ್ಯೆ, ಉತ್ತರ ಕರ್ನಾಟಕ ಲೇಖಕಿಯರ ಸಂಘ – ಹುಬ್ಬಳ್ಳಿ-ಧಾರವಾಡ.
* ಆಜೀವ ಸದಸ್ಯೆ, ಉತ್ತರ ಕರ್ನಾಟಕ ಲೇಖಕಿಯರ ಸಂಘ (ಹುಬ್ಬಳ್ಳಿ-ಧಾರವಾಡ
* ಆಜೀವ ಸದಸ್ಯೆ, ಅಖಿಲ ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು.
* ಸಂಸ್ಥಾಪಕಿ, ಪ್ರಸಾದ ಪ್ರಕಾಶನ, ಧಾರವಾಡ
* ೧೯೯೨ರಲ್ಲಿ ದಾನಚಿಂತಾಮಣಿ ಅತಿಮಬ್ಬೆ ಆಯ್ಕೆ ಸಮಿತಿ ಸದಸ್ಯೆ (ಸರಕಾರದ ನೇಮಕಾತಿ)
* ೧೯೮೦ರಲ್ಲಿ ಒಂಬತ್ತನೆಯ ತರಗತಿಯ ಇಂಗ್ಲಿಷ ಪಠ್ಯಪುಸ್ತಕ ನಿರ್ಮಾಣ ಸಮಿತಿಯ ಸದಸ್ಯೆ (ಶಿಕ್ಷಣ ಇಲಾಖೆಯಿಂದ)
* ದಿಲ್ಲಿಯಲ್ಲಿ ೧೯೯೪ರಲ್ಲಿ ನಡೆದ ದೆಹಲಿ 'ಕನ್ನಡಿಗ' ಪತ್ರಿಕೆಯವರು ನಡೆಸುತ್ತಿರುವ ರಾಷ್ಟ್ರೀಯ ಕನ್ನಡ ಸಮ್ಮೇಳನದ ಮಹಿಳಾ ಗೋಷ್ಠಿಯ ಅಧ್ಯಕ್ಷೆ.
* ಹುಬ್ಬಳ್ಳಿಯ ಮೂರು ಸಾವಿರ ಮಠದಲ್ಲಿ ನಡೆದ ಉ.ಕ. ಮಹಿಳಾ ಸಾಹಿತ್ಯ ಸಮ್ಮೇಳನ: (ಮೊದಲನೆಯದು) ಮಹಿಳಾ ಗೋಷ್ಠಿಯ ಅಧ್ಯಕ್ಷತೆ – ೧೯೮೫ರಲ್ಲಿ
* ಬಳ್ಳಾರಿಯಲ್ಲಿ ನಡೆದ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ಮಹಿಳಾ ಗೋಷ್ಠಿಯಲ್ಲಿ ಭಾಷಣ.
* ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾ॥ ಅಯ್ಯನ ಹಳ್ಳಿಯಲ್ಲಿ ನಡೆದ ಶರಣ ಸಾಹಿತ್ಯ ಸಮ್ಮೇಳನದಲ್ಲಿ ಸಾಂಸ್ಕೃತಿಕ ಚಟುವಟಿಕೆಗಳ ಉದ್ಘಾಟನೆ.

* ಬೆಂಗಳೂರಿನ ಜಂಗಮ ಮಠ ನಡೆಸಿದ ಶರಣ ಸಮ್ಮೇಳನದ ಶರಣೆಯರ ಗೋಷ್ಠಿಯ ಅಧ್ಯಕ್ಷತೆ.

* ಧಾರವಾಡದ 'ಅಚನಿರಸಿಕರಂಗ'ದ ಪ್ರಥಮ ವಾರ್ಷಿಕೋತ್ಸವ ಸಂದರ್ಭದಲ್ಲಿ ನಡೆದ ಮಹಿಳೆಯ ಸಾಹಿತ್ಯ-ಸಾಧನೆಗಳ ಗೋಷ್ಠಿಯ ಅಧ್ಯಕ್ಷೆ – ೨೦೦೧.

* ಬೆಳಗಾಂವಿಯಲ್ಲಿ ನಡೆದ 'ಕದಳಿ' ಮಹಿಳಾ ಸಮಾವೇಶದಲ್ಲಿ 'ಗೋಷ್ಠಿ' ಅಧ್ಯಕ್ಷತೆ. (೮-೧೨-೨೦೦೩)

ದಾನ – ದತ್ತಿ – ಕೊಡುಗೆ :

* ಅಖಿಲ ಕರ್ನಾಟಕ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೨೫,೦೦೦/-ರೂ. ದಂಪತಿಗಳದತ್ತಿ (ಪ್ರತಿ ವರ್ಷ ಕನ್ನಡ ಸಾಹಿತ್ಯದಲ್ಲಿ ವಿಶೇಷ ಸಾಧನೆ ಮಾಡಿರುವ "ದಂಪತಿ"ಗಳಿಗೆ "ಸಾಹಿತ್ಯ ದಂಪತಿ" ಪುರಸ್ಕಾರ ನೀಡಿ ಗೌರವಿಸುವುದಕ್ಕಾಗಿ ದತ್ತಿ).

* ಉತ್ತರ ಕರ್ನಾಟಕ ಲೇಖಕಿಯರ ಸಂಘ, ಧಾರವಾಡ ಇವರಲ್ಲಿ ೫೦೦೦/-ರೂಗಳ ದತ್ತಿ. (ಪ್ರತಿವರ್ಷ ಶ್ರೇಷ್ಠ ಮಹಿಳಾ ಸಾಹಿತ್ಯ ಕೃತಿಗಳಿಗೆ ಪುರಸ್ಕಾರ ನೀಡುವ ಉದ್ದೇಶಕ್ಕಾಗಿ)

* ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಬೆಂಗಳೂರು ಇವರಲ್ಲಿ ದಂಪತಿಗಳ ರೂ.೧೦,೦೦೦/- ದತ್ತಿ. (ಧಾರವಾಡ – ಬಳ್ಳಾರಿ – ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಶರಣ ಸಾಹಿತ್ಯ ಚಿಂತನ ಕುರಿತು ಭಾಷಣ ಕಾರ್ಯಕ್ರಮ ವ್ಯವಸ್ಥೆಗಾಗಿ)

* ಎಚ್.ಎಫ್. ಕಟ್ಟೀಮನಿ ಸ್ಮಾರಕ ಮಕ್ಕಳ ಪುಸ್ತಕ ಸಹಾಯ ನಿಧಿಗೆ ಕಾಣಿಕೆ ರೂ.೧೦,೦೦೦/-

* ಕರ್ನಾಟಕ ವಿಧ್ಯಾವರ್ಧಕ ಸಂಘ ಧಾರವಾಡ, ದತ್ತಿನಿಧಿ – ಮಕ್ಕಳ ಪ್ರತಿಭಾ ಪುರಸ್ಕಾರ ಕಾರ್ಯಕ್ರಮಕ್ಕಾಗಿ.

* ಧಾರವಾಡದ ವಿವೇಕಾನಂದ ರಾಮಕೃಷ್ಣಾಶ್ರಮದ ಕಟ್ಟಡದ ನಿಧಿಗೆ ರೂ.೬,೦೦೦/-

* ಕಲ್ಯಾಣ ನಗರದ "ಸಮುದಾಯ ಭವನ"ಕ್ಕೆ ರೂ.೫,೦೦೦/- ದೇಣಿಗೆ

* ಬೀರೂರು ವೀರಭದ್ರಸ್ವಾಮಿ ದೇವಸ್ಥಾನಕ್ಕೆ ಭಕ್ತಿದಾನ ರೂ. ೧೦,೦೦೦/-

* ಧಾರವಾಡ ಗಣಪತಿ ದೇವಸ್ಥಾನಕ್ಕೆ ಕಾಣಿಕೆ ರೂ.೧೦,೦೦೦/- ಧಾರವಾಡ ಜಂಗಮನ ಕಟ್ಟಡ ನಿಧಿಗೆ ರೂ.೧೦,೦೦೦/-

* ಶ್ರೀ ಜಗದ್ಗುರು ಕೊಟ್ಟೂರು ಸ್ವಾಮಿ ಸಂಸ್ಥಾನ ಮಠ ಹೊಸಪೇಟೆ-ಬಳ್ಳಾರಿ ಶರಣ ಸಾಹಿತ್ಯ ಪ್ರಸಾರ - ಪ್ರಸಾರಕ್ಕಾಗಿ ರೂ.೧೦,೦೦೦/- ದಂಪತಿಗಳ ದತ್ತಿ.

* ಶ್ರೀ ಸುತ್ತೂರು ಸಂಸ್ಥಾನ, ಮೈಸೂರು ಇವರ ಬಡಮಕ್ಕಳ ವಿದ್ಯಾಸೇವೆಗಾಗಿ ರೂ. ೧,೦೦,೦೦೦-೦೦/- ದತ್ತಿ.

ಲೇಖನಗಳ ಕೊಡುಗೆ :

* ಮೊದಲನೆಯ ಮಹಿಳಾ ವರ್ಷದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದಿಂದ ಪ್ರಕಟವಾದ 'ಮಹಿಳೆ ಸಮಸ್ಯೆಗಳು - ಸಾಧನೆಗಳು' ಎಂಬ ಪುಸ್ತಕಕ್ಕೆ ಮರೆಯಲಾರದ ಮಹಿಳೆಯರು ಎಂಬ ಲೇಖನ. ೧೯೭೬

* ಮೈಸೂರಲ್ಲಿ ನಡೆದ ವಿಶ್ವ ಸಾಹಿತ್ಯ ಸಮ್ಮೇಳನ ಸಂದರ್ಭದಲ್ಲಿ ಪ್ರಕಟವಾದ 'ಮಹಿಳೆಯರ ಸಣ್ಣ ಕಥೆಗಳು' ಪುಸ್ತಕದಲ್ಲಿ -'ಹಸಿರು ಸೀರೆ' ಎಂಬ ಕಥೆ ಪ್ರಕಟ.

* ರಾಯಚೂರಿನ ಎಂ.ಪಿ.ಜಾಲಿಯವರ ಸ್ಮರಣ ಸಂಚಿಕೆಗೆ ಲೇಖನ.

* ಬಸವರಾಜ ಕಟ್ಟೀಮನಿಯವರ ಸ್ಮರಣ ಸಂಪುಟಕ್ಕೆ ಲೇಖನ.

* ವಿ.ವಿ. ಶಿಕ್ಷಣ ಮಹಾವಿದ್ಯಾಲಯದಿಂದ ಪ್ರಕಟವಾಗಿತ್ತಿದ್ದ ಬುಲೆಟಿನ್‌ಗೆ ಅನೇಕ ಶೈಕ್ಷಣಿಕ ಲೇಖನಗಳು.

* ಪ್ರಜಾಮತ ವಿಶೇಷ ಸಂಚಿಕೆಗೆ ವೀರಶೈವ ಸಂಪ್ರದಾಯ ವಿವಾಹ ವೈಶಿಷ್ಟ್ಯ ಮತ್ತು ಸಮಾಜ ಎಂಬ ಲೇಖನಗಳು.

* ವಿ.ವಿ ಶಿಕ್ಷಣ ಮಹಾವಿದ್ಯಾಲಯದಿಂದ ಪ್ರಕಟವಾದ Western Educators & Eastern Educators ಎಂಬ ಪುಸ್ತಕಕ್ಕೆ ಲೇಖನಗಳು.

* ಬಾದಾಮಿಯ ವೀರ ಪುಲಕೇಶಿ ಕಾಲೇಜಿನ ವಜ್ರಮಹೋತ್ಸವ ಗ್ರಂಥಕ್ಕೆ ಲೇಖನ.

* ಶ್ರೀಮಾಮನಿಯವರ "ಗುಡದೂರ ಶಿವಚೇತನ" (ಸಜ್ಜಲ ಗುಡ್ಡದ ಶರಣಮ್ಮನವರ ಜೀವನ ಚರಿತ್ರೆ) ಗ್ರಂಥಕ್ಕೆ ಮುನ್ನುಡಿ.

* ಬೆಳಗಾವಿಯ ಶರಣೆಯರ ರವಿದೇವಿ-ಸುಗ್ಗಲಾದೇವಿಯರ ಅಮೃತ ಮಹೋತ್ಸವ ಗ್ರಂಥಕ್ಕೆ ಲೇಖನ.
* ಅಕ್ಕನ ಬಳಗ ಬೆಳಗಾವಿ 'ಶಿವಶರಣೆಯರ ಚರಿತಾಮೃತ'ಕ್ಕೆ ಲೇಖನ.
* ಬೀರೂರಿನಲ್ಲಿ ನಡೆದ ರಂಭಾಪುರಿ ಜಗದ್ಗುರುಗಳ ಒಂಬತ್ತನೆಯ ದಸರಾ ಮಹೋತ್ಸವ ಮತ್ತು ಭಾವೈಕ್ಯ ಧರ್ಮ ಸಮ್ಮೇಳನದಲ್ಲಿ ಪ್ರಕಟವಾದ "ಧರ್ಮ ಸೌರಭ" ಸಂಚಿಕೆಗೆ ಲೇಖನ.
* ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಟವಾದ "ಸಂವೇದನೆಗೆ" ಲೇಖನ.
* ಬೆಂಗಳೂರಿನ ಜಿ.ನಾರಾಯಣ ಅವರ "ವಿನೋದ" ಪತ್ರಿಕೆಗೆ ಲೇಖನಗಳು

**ಪತ್ರಿಕೆಗಳ ಲೇಖನಗಳು :**

ಸುಧಾ, ತುಷಾರ, ವನಿತಾ, ಕರ್ಮವೀರ, ಮಯೂರ, ಲೇಖಕಿ, ಮಂಜುವಾಣಿ, ಪ್ರಜಾಜ್ಯೋತಿ, ಪರಂಜ್ಯೋತಿ, ಸಂಯುಕ್ತ ಕರ್ನಾಟಕ, ಕನ್ನಡಮ್ಮ, ಹೇಮಕೂಟ, ಮಹಾಮನೆ, ವಿವೇಕ ಹಂಸ, ವಿಶಾಲ ಕರ್ನಾಟಕ, ದೀಪಾವಳಿ ಸಂಚಿಕೆಗಳು, ಗೋಕಾಕ್ ಪತ್ರಿಕೆ, ಕ.ವಿ. ವಿದ್ಯಾಲಯದಿಂದ ಪ್ರಕಟವಾಗಿತ್ತಿದ್ದ ಮಾನವಿಕ ವಿಜ್ಞಾನ, ಬೆಂಗಳೂರಿನ ವಿನೋದ ಮುಂತಾದ ಪತ್ರಿಕೆಗಳಲ್ಲಿ ಲೇಖನಗಳು ಪ್ರಕಟವಾಗಿವೆ.

**ಆಕಾಶವಾಣಿ :**

ಈಗ ೩೫ ವರ್ಷಗಳಿಂದ ಧಾರವಾಡದ ಆಕಾಶವಾಣಿಯಲ್ಲಿ ಚಿಂತನೆ-ಚರ್ಚೆ-ಭಾಷಣ-ಸಣ್ಣ ಕಥೆಗಳು, ರೂಪಕಗಳು ಬಿತ್ತರಿಸಲ್ಪಟ್ಟಿವೆ. ಹೊಸಪೇಟೆ ಆಕಾಶವಾಣಿಯವರು ೧೯೯೫ ನಡೆದ, ಜಿಲ್ಲಾ ಸಾಹಿತ್ಯ ಸಮ್ಮೇಳನ ಸಂದರ್ಭದಲ್ಲಿ ವಿಶೇಷ ಸಂದರ್ಭದಲ್ಲಿ ವಿಶೇಷ ಸಂದರ್ಶನ ಬಿತ್ತರಿಸಿದ್ದರು. ಮಡಿಕೇರಿ ಆಕಾಶವಾಣಿ ವಚನಾಂಜಲಿ ಗ್ರಂಥದ ಕೆಲವು ವಚನಗಳನ್ನು ಪ್ರತಿದಿನ ಬೆಳಗಿನ ಸುಪ್ರಭಾತ ಚಿಂತನವಾಗಿ ಪ್ರಸಾರ ಮಾಡಿದೆ.

**ಭಾಷಣಗಳು :**

ಉತ್ತರ ಕರ್ನಾಟಕದ ಅನೇಕ ಶಾಲೆ-ಕಾಲೇಜುಗಳಲ್ಲಿ ಮಠಗಳಲ್ಲಿ ಸಾರ್ವಜನಿಕ ಸಂಘ ಸಂಸ್ಥೆಗಳಲ್ಲಿ, ರೋಟರಿ, ಲಯನ್ಸ್ ಇನ್ನರ್ ವ್ಹೀಲ್‌ಗಳಲ್ಲಿ, ಅಕ್ಕನ ಬಳಗಗಳಲ್ಲಿ, ಧರ್ಮ, ಶಿಕ್ಷಣ, ಮಹಿಳೆ, ಸಮಾಜ ಮುಂತಾದ ವಿಶೇಯಗಳ ಬಗೆಗೆ ಹಲವಾರು ಭಾಷಣಗಳು.

ಪ್ರಕಟಿತ ಗ್ರಂಥಗಳು :

* ಸಜ್ಜಲ ಗುಡ್ಡದ ಶರಣಮ್ಮನವರು – (ಜೀವನ ಚರಿತ್ರೆ)
* ಪತ್ರೆ ಚನ್ನವೀರಪ್ಪಯ್ಯನವರು – ಸಾಧನೆ – ಕೊಡುಗೆ (ಪುಸ್ತಿಕೆ) ಗದಗಿನ ಮಠದ ಪ್ರಕಟಣೆ
* ಮನದ ಮಲ್ಲಿಗೆ – (ವೈಚಾರಿಕ ಲೇಖನಗಳು)
* ವಚನಾಂಜಲಿ – ಆಯ್ದ ಶಿವಶರಣ ವಚನಗಳ ವಿಶ್ಲೇಣೆ (ಕಾವ್ಯಾನಂದ ಪ್ರಶಸ್ತಿ ಬಂದಿದೆ).
* ಮುನಿದೆ ಏಕಮ್ಮ ನೆಲದಾಯಿ (ಕವನ ಸಂಗ್ರಹ)
* ಮಕ್ಕಳ ಶಿಕ್ಷಣ – ಚಿಂತನೆಗಳು – (ಪ್ರಬಂಧಗಳು) (ಮಾ॥ ಶ್ರೀ॥ ರತ್ನಮ್ಮ ಹೆಗ್ಗಡೆಯವರ ಬಹುಮಾನ ವಿಜೇತ ಕೃತಿ)
* ಪುಟ್ಟನಿಗೆ ಹಿತೈಷಿಯ ಪತ್ರಗಳು – ಮಕ್ಕಳಿಗೆ ಜೀವನ ಮೌಲ್ಯಗಳನ್ನು ಪರಿಚಯಿಸುವ ಕೃತಿ.
* ಶಿವಶರಣೆಯರು – ಜೀವನ, ಸಾಧನೆ, ವಚನ (ಸಂಶೋಧನಾತ್ಮಕ ಗ್ರಂಥ)
* ರಚನಾತ್ಮಕ ಚಿಂತನೆಗಳು – (ಪ್ರಸ್ತುತ ಸಮಾಜಕ್ಕೆ ಸಂಬಂಧಿಸಿದ ವೈಚಾರಿಕ ಲೇಖನಗಳು.)
* ಬೇರೊಂದು ಮರವೆರಡು – (ಸಣ್ಣ ಕಥೆಗಳು)
* ಕಿವಿಗೊಟ್ಟುಕೇಳಿ – ಮನವಿಟ್ಟು ಮಾಡು ಮಗುವೇ (೭೫ನೇ ವಯಸ್ಸಿನ ನೆನಪಿನ ಗ್ರಂಥ – ಮಕ್ಕಳಿಗೆ ಉಚಿತ ಸರಬರಾಜು)

ಪ್ರಕಟಿಸಲು ಸಿದ್ದವಿರುವ ಕೃತಿಗಳು :

* ಉದಾತ್ತ ಮಹಿಳೆಯರ ಬಗ್ಗೆ ಲೇಖನಗಳು
* ಧಾರ್ಮಿಕ ವಿಷಯ ಕುರಿತಾದ ಲೇಖನಗಳು
* ವೈಚಾರಿಕ ಪ್ರಬಂಧಗಳು
* ಸಣ್ಣಕಥೆಗಳು
* ಕವನ ಸಂಗ್ರಹ

* ಮೌಲ್ಯ ಬೋಧಿಸುವ ಮಕ್ಕಳ ಕಥೆಗಳು (ಕಥೆಗಳ ಮೂಲಕ ಮಕ್ಕಳಿಗೆ ಮೌಲ್ಯ ಬೋಧನೆ)
* ಶಿಕ್ಷಣಕ್ಕೆ ಸಂಬಂಧಿಸಿದ ಲೇಖನಗಳು
* ರೂಪಕಗಳು
* ಶರಣರ ವೈಶಿಷ್ಟ್ಯ ಚಿಂತನೆಗಳು
* ಸಮಾಜದ ಸಮಸ್ಯೆಗಳಿಗೆ ಸಂಬಂಧಿಸಿದ ಲೇಖನಗಳು (ಸ್ತ್ರೀಪರವಾದ / ಶಿಕ್ಷಣ ಮಾಧ್ಯಮ / ಮಿಸಲಾತಿ / ರಾಷ್ಟ್ರಭಾಷೆ ಇ. ಇ....)
* ಆದರ್ಶ ದಂಪತಿಯ ಪ್ರೇಮಪತ್ರಗಳು
* ಪ್ರೊ. ಲಲಿತಾಂಬ "ಸಮಗ್ರ ಕೃತಿ ಸಂಪುಟ – ೧,೨,೩"

ಪ್ರಶಸ್ತಿ ಗೌರವಗಳು :

* ಕಾವ್ಯಾನಂದ ಪ್ರಶಸ್ತಿ
* ರತ್ನಮ್ಮ ಹೆಗ್ಗಡೆಯವರ ಬಹುಮಾನ
* ಮಕ್ಕಳ ಸಾಹಿತ್ಯ ಸಮ್ಮೇಳನ (ಧಾರವಾಡದಲ್ಲಿ_ ಸನ್ಮಾನ)
* ಉತ್ತರ ಕರ್ನಾಟಕ ಲೇಖಕಿಯರ ಸಂಘದಿಂದ ಸನ್ಮಾನ
* ಕದಳಿ ಮಹಿಳಾ ವೇದಿಕೆ ಮೈಸೂರು – ಇವರಿಂದ ಕದಳಿ ಶ್ರೀ ಪ್ರಶಸ್ತಿ



ಆದರ್ಶ ಮಹಿಳಾ ಸಾಹಿತಿ, ಶಿಕ್ಷಣ ತಜ್ಞೆ

ದಿ॥ ಪ್ರೊ. ಲಲಿತಾಂಬ ವೃಷಭೇಂದ್ರಸ್ವಾಮಿ (ಕ.ವಿ.ವಿ. ಧಾರವಾಡ)

ಸಮಗ್ರ ಸಾಹಿತ್ಯದ ೩ ಬೃಹತ್ ಸಂಪುಟಗಳು

## "ಶಿಕ್ಷಣ – ಸಾಹಿತ್ಯ – ಸಮಾಜ – ಚಿಂತನೆಗಳ ಹೊಸದೃಷ್ಟಿ"

### ಸಂಪುಟ – ೧ ವಚನಾಂಜಲಿ – ಕಾವ್ಯಾಂಜಲಿ

ಪುಟ ೭೦೪, ಬೆಲೆ ರೂ. ೪೦೦.೦೦

ಶಿವಶರಣರ ಆಯ್ದ ೧೭೪ ವಚನಗಳ ಸರಳ ವ್ಯಾಖ್ಯಾನ, ಕಾವ್ಯಾನಂದ ಪ್ರಶಸ್ತಿ ಪಡೆದ ಕೃತಿ. ಮತ್ತು ಪ್ರೊ. ಲಲಿತಾಂಬ ಅವರ ಸೃಜನ ಶೀಲ ಕವನ – ಚುಟುಕುಗಳ ಸಂಗ್ರಹ. ಬಹು ಜನಪ್ರಿಯ ಕೃತಿ.

–ಡಾ. ಎಸ್. ವಿದ್ಯಾಶಂಕರ, ಶ್ರೀ ಸಿದ್ಧಯ್ಯ ಪುರಾಣಿಕ

### ಸಂಪುಟ – ೨ ಜೀವನ ಚರಿತ್ರೆ – ಶಿಕ್ಷಣಾಂಜಲಿ

ಪುಟ ೫೧೬, ಬೆಲೆ ರೂ. ೩೦೦.೦೦

ಶಿವಶರಣೆಯರ ಚರಿತ್ರೆ ಮತ್ತು ಶಿಕ್ಷಣದ ಬಹುಮುಖಿ ಸಮಸ್ಯೆಗಳ ವಿಶ್ಲೇಷಣೆ – ಸಂಸ್ಕೃತಿ ಚಿಂತನೆಗಳ ಪ್ರಬಂಧಗಳು. ಎಲ್ಲ ಭಾರತೀಯ ಭಾಷೆಗಳಿಗೆ ಭಾಷಾಂತರವಾಗ ಬಹುದಾದ ಕೃತಿ

–ನ್ಯಾ. ಶ್ರೀ ವಿ.ಎಸ್.ಮಳಿಮಠ, ಡಾ. ಹಾ.ಮಾ.ನಾಯಕ

### ಸಂಪುಟ – ೩. ಕಥಾಂಜಲಿ – ಚಿಂತನಾಂಜಲಿ – ಸ್ಮರಣಾಂಜಲಿ

ಪುಟ ೫೫೦, ಬೆಲೆ. ರೂ. ೩೦೦.೦೦

ಪ್ರೊ. ಲಲಿತಾಂಬ ಅವರ ಸ್ವತಂತ್ರ ಕಥೆ, ಸಾಹಿತ್ಯ ಪ್ರಬಂಧ – ಚಿಂತನೆಗಳು ಸಂಗ್ರಹ ಮನದ ಮಲ್ಲಿಗೆ ಇ.ಇ. ಮತ್ತು ಸ್ಮರಣಾಂಜಲಿ – ಶ್ರದ್ಧಾಂಜಲಿಗಳ ಸಂಗ್ರಹ – ಜೀವನ ಸಾಧನೆಗಳ ಸಮೀಕ್ಷೆ.

–ಡಾ. ಶಾಂತಾ ಇಮ್ರಾಪುರ

೩ ಸಂಪುಟಗಳ ಒಟ್ಟು ಬೆಲೆ–ರೂ.೧೦೦೦.೦೦

ಶಿಕ್ಷಣ ಸಂಸ್ಥೆಗಳಿಗೆ ರಿಯಾಯತಿ ಬೆಲೆ ರೂ.೭೫೦.೦೦

ಪ್ರಸಾದ ಪ್ರಕಾಶನ
ಕಲ್ಯಾಣ ನಗರ, ಆನೇ ಅಡ್ಡರಸ್ತೆ,
ಧಾರವಾಡ – ೫೮೦ ೦೦
ದೂರವಾಣಿ : ೦೮೩೬ – ೨೪೪ ೮೫೭೦